# ಸದ್ಧರ್ಮ ದೀಪಿಕೆ.

ಸಂಚಿಕೆ. ೧.

ಪ್ರಕಾಶಕ:---ಶ್ರೀ ಚೆನ್ನಮಲ್ಲಿಕಾರ್ಜುನ

ಶಿವಲಿಂಗ ವಿಜಯ ಮುದ್ರಾಲಯ,

ಹಾವೇರಿ.

1932.

ಇದನ್ನು ಪ್ರಕಾಶಕರು ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರ ಹುಕ್ಕೇರಿಮಠ ಹಾವೇರಿಯಲ್ಲಿ ಪ್ರಕಟಿಸಿದರು.



## ಇದರಲ್ಲಿರುವ ವಿಷಯಗಳು.





### ಈ ಪತ್ರಿಕೆಯ ವರ್ಗಣಿ.

| | |
|---|---|
| ಸ್ಥಳದವರಿಗೆ | ೨—೦—೦ |
| ಪರಸ್ಥಳದವರಿಗೆ | ೨—೪—೦ |
| ಆಶ್ರಯದಾತರಿಗೆ | ೫—೦—೦ |
| ಪೋಷಕರಿಗೆ | ೧೦—೦—೦ |

ಆಶ್ರಯದಾತರ ಮತ್ತು ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸುವದಲ್ಲದೆ ವರ್ಷದೊಳಗಾಗಿ ಆಶ್ರಯದಾತರಿಗೆ ಒಂದು ಪುಸ್ತಕವನ್ನು ಪೋಷಕರಿಗೆ ಎರಡು ಪುಸ್ತಕಗಳನ್ನು ಕಾಣಿಕೆಯಾಗಿ ಅರ್ಪಿಸುತ್ತೇವೆ.

ಟಿಪ್ಪಣಿ:— ಈ ಮಾಸಪತ್ರಿಕೆಯ ಮೇಲುಹಾಳೆಯ (ರಟ್ಟಿನ) ೩ ನೇ ಪುಟವನ್ನು ಅವಶ್ಯಕವಾಗಿ ನೋ[illegible]

ಶ್ರೀ ಗುರು ಬಸವಲಿಂಗಾಯನಮಃ

# ಸದ್ಧರ್ಮ ದೀಪಿಕೆ.

ವರ್ಷ ೧] ಆಂಗಿರಸ ಸಂವತ್ಸರ ಚೈತ್ರಮಾಸ ಶಕೆ ೧೮೫೪ [ಸಂ. ೧

## ವಾಚಕ ಮಹನೀಯರಲ್ಲಿ ಪ್ರಕಾಶಕನ ವಿಜ್ಞಾಪನೆಗಳು.

———

ಸಮಾಜ ಸೇವೆಯನ್ನು ಮಾಡಬೇಕೆಂಬ ಅಪೇಕ್ಷೆಯು ಬಹಳ ದಿವ ವಸಗಳಿಂದಲೂ ಉಂಟಾಗಿದ್ದಿತು. ಆದರೆ ಯಾವ ವಿಧದಲ್ಲಿ ಮಾಡಬೇಕೆಂಬುದನ್ನು ನಿರ್ಧರ ಮಾಡುವದಕ್ಕೆ ಲೌಕಿಕವೃತ್ತಿಯು ತೊಂದರೆಯನ್ನು ಉಂಟುಮಾಡುತ್ತಾ ಇದ್ದಿತು. ಆಮೇಲೆ ಮೂರು ವರ್ಷಗಳ ಹಿಂದೆ ಅದರಲ್ಲಿ ವಿಶ್ರಾಂತಿಸುಖವು ದೊರಕಿತು. ಶಿವಯೋಗ ಮಂದಿರವನ್ನು ಸ್ಥಾಪಿಸಿದವರೂ ಸಮಾಜೋದ್ಧಾರದ ವಿಷಯದಲ್ಲಿ ತನು ಮನ ಧನಗಳನ್ನು ಧಾರೆ ಎರೆದವರೂ ಪರಮಪೂಜ್ಯರೂ ಆದ ಹಾನಗಲ್ "ಸದಾಶಿವ ಮಹಾ ಸ್ವಾಮಿಗಳವರು" ಆಗಿಂದಾಗ್ಯೆ ಗ್ರಂಥಗಳನ್ನು ಉದ್ಧರಿಸುವ ಕೆಲಸವು ಬಹಳ ಹಿಂದೆ ಬಿದ್ದಿರುವದಾಗಿ ಎಚ್ಚರಿಸುತ್ತಾ ಇದ್ದುದಕ್ಕೆ ಸಕಾಲವು ಪ್ರಾಪ್ತವಾಯಿತೆಂದು ಭಾವಿಸಿದೆನು. ಜನರ ನೀತಿಗೆ ಅನುಕೂಲವಾದ ಕಥೆಗಳನ್ನು ಬರೆಯಬೇಕೆಂದು ಕೆಲವರು ಸೂಚಿಸಿದರು. ಕಥೆಗಳೂ ನಾಟಕಗಳೂ ಕಾದಂಬರಿಗಳೂ ಸಾಹಿತ್ಯ ಗ್ರಂಥಗಳೂ ಈಗಿನ ನಾಗರಿಕತೆಯ ಕೌಶಲಗಳೂ ಅನೇಕ ವಿಧದಲ್ಲಿ ಅನೇಕ ಕಡೆಗಳಲ್ಲಿ ಹೊರಬೀಳುತ್ತಲಿವೆ ಎಂಬುದನ್ನು ನೋಡಿದೆನು. ಹಿಂದೂ ದೇಶದ ಪೌರ್ವಿಕರ ಧರ್ಮವು ಎಂದರೆ ಮಹಾದೇವನ ಸಂಬಂಧವಾದ ವಿಷಯಗಳನ್ನು ಹೇಳುವ ವಿಚಾರವು ಹೆಚ್ಚು ಪ್ರಚಾರಕ್ಕೆ ಬಾರದೆ ಒಳಗೇನೇ ಇರುತ್ತದೆ ಎಂಬುದು ತಿಳಿಯಿತು. ಕರ್ನಾಟಕ ಕವಿಚರಿತ್ರಕಾರರ ಅಭಿಪ್ರಾಯದಿಂದಲೂ, ಜಯಕರ್ನಾಟಕದಲ್ಲಿನ ಲೇಖನಗಳಿಂದಲೂ, ಕರ್ನಾಟಕ ಸಾಹಿತ್ಯಪರಿಷತ್ತಿನವರ ಉದ್ಗಾರಗಳಿಂದಲೂ ಹಳೆಯ ಪದ್ಯಗಳು ಹಾಡುಗಳು ಕಥೆಗಳು ಧಾರ್ಮಿಕ ಗ್ರಂಥಗಳು ಬಹಳ ಇರುವವೆಂಬುದೂ ಮುದ್ರಣಕ್ಕೆ ಪ್ರಯತ್ನಿಸಬೇಕೆಂಬುದೂ ಬೋ

ಧೆಯಾಯಿತು. ಕಡೆಗೆ ಧರ್ಮಗ್ರಂಥಗಳಲ್ಲಿ ಪ್ರವೇಶಿಸಲು ನಿಶ್ಚಯಿಸಿದೆನು.

ಒಂದು ವರ್ಷಕಾಲವು ೧೧೮ ಉಪನಿಷತ್ತುಗಳು, ದೊರಕುವ ಕೆಲವು ಆಗಮಗಳು, [ಮುದ್ರಣ ಮತ್ತು ಕೈಬರಹ ಪ್ರತಿಗಳು ಸಹ] ಭಗವದ್ಗೀತೆ, ಜರ್ಮನಿದೇಶದವನಾದ ಮ್ಯಾಕ್ಸ್‌ಮುಲ್ಲರ ಹಿಂದೂ ವೇದಾಂತ, ಮೊದಲಾದವುಗಳನ್ನು ಓದಿ ನೋಡಿ ಪೂರ್ವಿಕರ ಧರ್ಮದ ಸಾರವು ಏನಿತ್ತೆಂಬುದನ್ನು ಸಾಧ್ಯವಾದಷ್ಟು ತಿಳಿವುದರಲ್ಲಿ ಕಳೆಯಿತು. ಹೀಗೆ ನೋಡಿದ ಮೇಲೆ ಒಂದು ಕೈಬರಹದ ಗ್ರಂಥವನ್ನು ಹೊರಗಿಟ್ಟೆನು. ಶ್ರೀಮನ್ ನಿರಂಜನ ವರ್‍ಯ ಸದಾಶಿವ ಮಹಾ ಸ್ವಾಮಿಗಳವರೂ ಅದನ್ನು ಪರಾಂಬರಿಸಿ ಸಂತೋಷಿಸಿದರು. ಹಾವೇರಿಯಲ್ಲಿರುವ ಶಿವಲಿಂಗವಿಜಯ ಮುದ್ರಾಲಯವನ್ನು ಪುಸ್ತಕ ಪ್ರಕಟನೆಗಾಗಿ ಸ್ವಾಧೀನಪಡಿಸುತ್ತೇವೆ ಎಂದರು. ಇನ್ನೂ ಗ್ರಂಥಗಳನ್ನು ನೋಡುವ ಆತ್ಯಾಶೆಯಲ್ಲಿ ಅದಕ್ಕೆ ಗಮನ ಕೊಡಲಿಲ್ಲ.

ಎರಡನೆಯವರ್ಷ ಅಲ್ಲಲ್ಲಿ ಓಲೆಯಗರಿಯ ಪ್ರತಿಗಳಲ್ಲಿ ಏನು ಇರುವವೆಂದು ನೋಡಿದೆನು. ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾ ಸ್ವಾಮಿಗಳವರ ಬೃಹನ್ಮಠ ಚಿತ್ರದುರ್ಗ ಮೊದಲಾಗಿ ಅನೇಕ ಮಠಗಳು, ಶಿವಯೋಗಮಂದಿರ, ದಾವಣಗೆರೆಯ ಸದ್ಗೃಹಸ್ಥರು, ಇನ್ನೂ ಅನೇಕ ಊರುಗಳಲ್ಲಿರುವ ಸದ್ಗೃಹಸ್ಥರು, ಇವರಲ್ಲಿರುವ ಓಲೆಯಗರಿಯ ಪ್ರತಿ ಮತ್ತು ಕಾಗದದ ಪ್ರತಿಗಳನ್ನು ನೋಡಿದೆನು. ಕೆಲವರು ಧರ್ಮಬುದ್ಧಿಯಿಂದ ತಮಗೆ ಪ್ರಯೋಜನವಿಲ್ಲವೆಂದು ತೋರಿದ ಕೆಲವುಗ್ರಂಥಗಳನ್ನು ನನಗೆ ಕೊಟ್ಟು ಇವುಗಳಲ್ಲಿನ ಪ್ರಯೋಜನಕರವಾದವಿಷಯಗಳನ್ನು ಹೊರಗೆ ಹಾಕಬೇಕೆಂದು ಅಪೇಕ್ಷಿಸಿದರು. ಅಂತು ಸುಮಾರು ೨೦೦೦ ಪ್ರತಿಗಳನ್ನು ನೋಡಿರಬಹುದು. ಹಾಗೆ ನೋಡಿದ್ದರಲ್ಲಿ ಇನ್ನೂ ಅಚ್ಚಾಗದೆ ಇದ್ದ ಉಪನಿಷತ್ತುಗಳು ಹೊರಟವು. ಸಂಸ್ಕೃತ ಕನ್ನಡ ಗ್ರಂಥಗಳು ಹೊರಟವು. ಅನೇಕ ರಗಳೆಗಳೂ ತ್ರಿವಿಧಿಗಳೂ ಹಾಡುಗಳೂ ಶತಕಗಳೂ ಗದ್ಯಗಳೇ ಮೊದಲಾದವುಗಳೂ ಹೊರಟವು. ಆನಂದವೇ ಆನಂದ!!! ಕೆಲವನ್ನು ಎತ್ತಿ ಬರೆದೆನು. ೧೧೮ ಉಪನಿಷತ್ತುಗಳು ಮುದ್ರಣವಾಗದಿರುವವುಗಳನ್ನು ಎತ್ತಿ ಬರೆದುದಾಯಿತು. ೨೬ ಉಪನಿಷತ್ತುಗಳು ಮುದ್ರಣವಾದವುಗಳೊಡನೆ ಹೋಲಿಸಿ ಹೆಚ್ಚುಕಡಿಮೆಗಳನ್ನು ಗುರ್ತಿಸಿದುದಾಯಿತು. ಚಿಕ್ಕ ದೊಡ್ಡ ಗದ್ಯ ಪದ್ಯ ಗ್ರಂಥಗಳನ್ನು ಎತ್ತಿ ಬರೆದುದಾಯಿತು. ಇವೇ ಸುಮ್ಮಾರು ಮೂವತ್ತಾರು ಆದವು. ಇವೆಲ್ಲವುಗಳ ವಿವರವು ಮುಂದೆ ವಾಚ

ಕೆ ಮಹಾಶಯರ ಪರಾಂಬರಿಕೆಗೆ ಬರುವಂತೆ ಪ್ರಕಟಿಸಲ್ಪಡುವದು. ಇವು ಗಳನ್ನು ಹೇಗೆ ಹೊರಗೆ ತರಬೇಕೆಂಬ ಬಲವಾದ ಯೋಚನೆ ಉಂಟಾಯಿತು.

ಶಿವಯೋಗ ಮಂದಿರದ ವಿಶ್ವಾಸಿಕ ಸಂಘ [ಟ್ರಸ್ಟ್‌ಕಮೀಟಿ]ದ ಅಧ್ಯ ಕ್ಷರೂ ಮೇಲೆ ಕಂಡ ಹಾನಗಲ್ ಸ್ವಾಮಿಗಳವರ ಕಾರ್ಯದಲ್ಲಿ ಮೊದಲಿ ನಿಂದಲೂ ಬಹಳ ಸಹಾಯಕರಾಗಿದ್ದವರೂ ಸಮಾಜೋದ್ಧಾರ, ಶಿವಾನುಭಾ ವ ಮುಂತಾದ್ದರಲ್ಲಿ ಉತ್ಸಾಹವುಳ್ಳವರೂ ಆದ ಶ್ರೀಮನ್ ನಿರಂಜನ ವರ್ಯ ಶಿವಬಸವ ಮಹಾ ಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ ಈ ಮ ಹ ನೀ ಯ ರು ಅರಸೀಕೆರೆ ತಾಲ್ಲೂಕು ಹಾರನಹಳ್ಳಿಗೆ ಅಲ್ಲಿನ ಸ್ವಾಮಿಗಳಿಗೆ ಅಧಿಕಾರವನ್ನು ವಹಿಸುವದಕ್ಕಾಗಿ ದಯಮಾಡಿಸಿದಾಗ ಅ ಲ್ಲಿಗೆ ನಾನೂ ಹೋಗಿರಲು ನನ್ನ ಪ್ರಯತ್ನಗಳನ್ನು ನೋಡಿ ಕನಿಕರಪಟ್ಟು ಹಾವೇರಿಯಲ್ಲಿರುವ ಶಿವಲಿಂಗವಿಜಯ ಮುದ್ರಾಲಯವನ್ನು ಗ್ರಂಥಗಳ ಪ್ರ ಚಾರಕ್ಕಾಗಿ ನನಗೆ ಒಪ್ಪಿಸುವ ಏರ್ಪಾಡು ಮಾಡುತ್ತೇವೆ ಎಂದು ಅಪ್ಪಣೆ ಕೊಡಿಸಿ ಅದರಂತೆ ಮಾಡಿದರು. ಕಳೆದ ವರ್ಷ ಯುಗಾದಿಯ ಹಬ್ಬದಲ್ಲಿ ಆ ಮುದ್ರಾಲಯವು ನನ್ನ ಸ್ವಾಧೀನಕ್ಕೆ ಬಂದಿತು. ಈ ವರ್ಷದ ಯುಗಾ ದಿಯ ಹೊತ್ತಿಗೆ ಎಂದರೆ ನನ್ನ ಸೇವೆಯ ಮೂರನೆಯ ವರ್ಷದಲ್ಲಿ ಬಸವ ಲಿಂಗ ನಾಮಾವಳಿ, ಬಸವೇಶ್ವರ ಸ್ತೋತ್ರ ಪದ್ಯಗಳು, ಕೋಳೂರುಕೊಡ ಗೂಸಿನ ರಗಳೆ, ಗುರುಕರುಣ ತ್ರಿವಿಧಿ, ಎಂಬದಾಗಿ ಸದ್ಧರ್ಮಗ್ರಂಥಮಾ ಲೆಯ ನಾಲ್ಕು ಪುಸ್ತಕಗಳು ಆಶ್ರಯದಾತರು ಸಿಕ್ಕಿದ್ದರಿಂದ ಹೊರಬಿದ್ದವು. ಗ್ರಂಥ ಬರೆಯುವ ಕೆಲಸವೂ ನಡೆದೇ ಇದ್ದಿತು.

ಈ ವರ್ಷದ ಯುಗಾದಿಯಲ್ಲಿ ಎಂದರೆ ಸಮಾಜ ಸೇವೆಯ ನಾಲ್ಕನೆಯ ವ ರ್ಷದ ಆರಂಭದಲ್ಲಿ ಶ್ರೀಮನ್ ನಿರಂಜನ ಜಗದ್ಗುರು ಮಹಾಸ್ವಾಮಿ ಗಳವರು ಮೂರುಸಾವಿರಮಠ ಸಂಸ್ಥಾನ ಹುಬ್ಬಳ್ಳಿ ಇವರ ಉದಾರಾ ಶ್ರಯದಿಂದ ಸಿದ್ಧೇಶ್ವರ ವಚನ ಎಂಬುದೂ ಶ್ರೀಮನ್ ನಿರಂಜನಜಗದ್ಗು ರು ಮಹಾಸ್ವಾಮಿಗಳವರು ಸಂಸ್ಥಾನಮಠ ಅರಭಾವಿ ಇವರ ಉದಾ ರಾಶ್ರಯದಿಂದ ಪ್ರಭುದೇವರು ನಿರೂಪಿಸಿದ ಪರಮಯೋಗಮಂತ್ರಗೋಪ್ಯ ಎಂ ಬುದೂ ಅಚ್ಚಾಗುತ್ತಾ ಇರುವದಲ್ಲದೆ ಮೇಲೆಕಂಡ ಉದ್ದೇಶವನ್ನು ಸಾಧಿಸು ವದಕ್ಕಾಗಿ ಸದ್ಧರ್ಮ ದೀಪಿಕೆ ಎಂಬ ಈ ಮಾಸಪತ್ರಿಕೆಯ ಆರಂಭೋತ್ಸ ವವು ನಡೆದಿರುವದು. ಇಂಥಾ ಕೆಲಸಗಳು ಸಮಾಜದವರು ಮಾಡಬೇ ಕಾದ ಕಾರ್ಯವೇ ಹೊರತು ಒಂದು ವ್ಯಕ್ತಿಯ ಕಾರ್ಯವಲ್ಲ. ಸಮಾಜದವರಿಗೆ ಬಹುತರವಾಗಿ ಬೇಕಾಗುವ ಧಾರ್ಮಿಕ ವಿಷಯಗಳೇ ಇದರಲ್ಲಿ ಬರೆಯಲ್ಪ ಡುವವು. ನೈತಿಕ ಸಾಮಾಜಿಕ ವಿಷಯಗಳೂ ಸೇರುವವು. ಈ ವಿಷಯಗಳಲ್ಲಿ

ಯಾವ ಮಹನೀಯರು ಏನು ಅಭಿಪ್ರಾಯವನ್ನು ಸೂಚಿಸಿದಾಗ್ಯೂ ವಿನಯದಿಂದ ತಿಳಿದು ಪರ್ಯಾಲೋಚನೆ ಮಾಡಲ್ಪಡುವದು. ಈ ವಿಷಯಗಳ ಪ್ರಚಾರಕ್ಕಾಗಿ ಯಾವ ವಿಧವಾದ ಸೂಚನೆಗಳು ಬಂದಾಗ್ಯೂ ಅನುಕೂಲಗಳು ದೊರೆದೊಡನೆಯೇ ಅವು ಕಾರ್ಯದಲ್ಲಿ ತರಲಿಕ್ಕೆ ಪ್ರಯತ್ನ ಮಾಡಲ್ಪಡುವವು. ಮಹನೀಯರು ಈ ವಿಷಯಗಳ ಲೇಖನಗಳನ್ನು ಬರೆದು ಕಳುಹಿಸಿದರೆ ಪ್ರಕಟಿಸ್ಸುವದಕ್ಕೆ ಗಮನವು ಕೊಡಲ್ಪಡುವದು. ಮತ್ತು ಮೇಲೆ ತಿಳಿಸಿದಂತೆ ಇದುವರೆವಿಗೆ ಓಲೆಗರಿಯಿಂದ ಎತ್ತಲ್ಪಟ್ಟ ಮತ್ತು ಮುಂದೆ ಉದ್ಧರಿಸುವ ಗ್ರಂಥಗಳೂ ಪ್ರಕಟಿಸಲ್ಪಡುವವು.

ಮಹಾದೇವನಲ್ಲಿ ಭಕ್ತಿ ಇಡುವದು ಅವಶ್ಯಕವೆಂದು ಯೋಚಿಸುವ ಮಹನೀಯರೆಲ್ಲರೂ ಆ ಮಹಾದೇವನ ಭಕ್ತಿಯನ್ನು ಅಭಿವೃದ್ಧಿ ಮಾಡುವ ವಿಷಯಗಳ ಬರೆವಣಿಗೆಯುಳ್ಳ ಪುಸ್ತಕವಿದು. ತೊದಲು ನುಡಿಗಳಿಂದ ಸ್ಮರಿಸಿದಾಗ್ಯೂ ಶಿವನು ಹೇಗೆ ಒಲಿಯುವನೋ ಹಾಗೆ ವಿಚಾರಗಳು ಸಂಪೂರ್ಣಾನುಭವವಿಲ್ಲದವುಗಳಾಗಿದ್ದಾಗ್ಯೂ ಸ್ವಲ್ಪವಾದರೂ ಆ ಮಹಾದೇವನ ಸ್ಮರಣೆಯನ್ನು ಮಾಡುವದಿದು ಎಂದು ಅಷ್ಟಕ್ಕೇ ಸಂತೋಷಪಟ್ಟು ಕೊಂಡು, ತಂದೆತಾಯಿಗಳು ತಮ್ಮ ಮಗನೆಂತಿದ್ದರೂ ಸಂತೋಷಿಸುವಂತೆ ಶಿವಭಕ್ತಿಯ ತೊದಲು ನುಡಿಗಳು ಎಂತಿದ್ದರೂ ಸಂತೋಷಿಸಿ, ಹಾಗೆ ಕಾಪಾಡಿದ ಬಾಲಕನನ್ನು ಶಾಲೆಗೆ ಹಾಕಿ ತಿದ್ದುವಂತೆ, ತಮ್ಮ ಸೂಚನೆಗಳೆಂಬ ಅಭ್ಯಾಸದಲ್ಲಿ ಪ್ರಕಾಶಕನನ್ನು ಸೇರಿಸಿ, ವಿದ್ಯಾವಂತನಾಗಿ ಮಾಡಿ ಎಂದರೆ ಕೊಟ್ಟರೆ ಹೆಚ್ಚಾಗುವಂಥಾ ವಿದ್ಯಾಧನವನ್ನು ಪ್ರಕಾಶಕನಿಗೂ ಕೊಟ್ಟು ತಾವೂ ಹೆಚ್ಚುಮಾಡಿಕೊಳ್ಳಬೇಕೆಂದೂ ತಮ್ಮ ಆಪ್ತರುಗಳಿಗೂ ಮಿತ್ರರೇ ಮೊದಲಾದವರಿಗೂ ಈ ವಿಧವಾದ ಪ್ರಯತ್ನದಲ್ಲಿ ಸೇರುವಂತೆ ಪ್ರೋತ್ಸಾಹಿಸಿ ಕೃತಾರ್ಥರಾಗಬೇಕೆಂದೂ ಪ್ರಾರ್ಥಿಸುವೆನು.

ಈ ಪತ್ರಿಕೆಯು ಕನ್ನಡ ಪದ್ಯ ಗ್ರಂಥಗಳನ್ನು ಹೊರಗೆ ತರುವದು ಸಂಸ್ಕೃತದ ಭಾಗಗಳನ್ನು ಎಂದರೆ ಆಗಮ ಉಪನಿಷತ್ತು ಮೊದಲಾದವುಗಳನ್ನು ಕನ್ನಡ ತಾತ್ಪರ್ಯದೊಡನೆ ಬರೆವುದು. ಪೂರ್ವಿಕರ ಅಭಿಪ್ರಾಯಗಳನ್ನು ಈಗಿನವರ ಅಭಿಪ್ರಾಯದೊಡನೆ ಹೋಲಿಸಿ ವಿಮರ್ಶೆ ಮಾಡುವದು ಮುಂತಾದ ವಿಷಯಗಳಿಗೆ ವಿಶೇಷವಾಗಿ ಅವಕಾಶ ಕೊಡುವದು. ಆದ್ದರಿಂದ ವಾಚಕ ಮಂಡಳಿಯು ಇದಕ್ಕೆ ಅಭಿಮಾನವನ್ನು ತೋರಿಸುವರೆಂದು ನಂಬುತ್ತೇನೆ. ಇದನ್ನು ಬಹುಕಾಲ ನಡಿಸಿಕೊಂಡು ಹೋಗುವದು ವಾಚಕರ ಕೈಯಲ್ಲಿಯೇ ಇರುತ್ತದೆ. ಸಮಸ್ತರೂ ಸುಖಿಗಳಾಗಲಿ.

ಶ್ರೀ ಗುರು ಬಸವಲಿಂಗಾಯನಮಃ



# ಪೂರ್ವಿಕರ ಬರೆವಣಿಗೆಗಳು.

ಈ ಭೂ ಮಿ ಯ ಮೇಲೆ ಇರತಕ್ಕ ಮ ನು ಷ್ಯ ಜಾ ತಿ ಯು ಹೇಗೆ ಉತ್ಪನ್ನವಾಯಿತು ? ಯಾವ ಕಾಲಕ್ಕೆ ಉತ್ಪನ್ನವಾಯಿತು? ಎಂಬುದನ್ನು ತಿಳಿಯುವುದು ಬಹಳ ಕಷ್ಟವಾದ ವಿಷಯವಾಗಿದೆ. ಮೊದಲು ಭೂಮಿಯ ಮೇಲೆ ಸಣ್ಣ ಸಣ್ಣ ಸಸಿಗಳು ಉತ್ಪನ್ನವಾಗಿ ಅಲ್ಲಿಂದ ಮುಂದೆ ಸಣ್ಣ ಸಣ್ಣ ಕ್ರಿಮಿಗಳು ಹುಟ್ಟಿ ಬರಬರುತ್ತಾ ಪಶುವರ್ಗವಾಗಿ, ಮಂಗನ ಜಾತಿಯಾಗಿ ಅಲ್ಲಿಂದ ಮನುಷ್ಯನಾದನೆಂದು ಕೆಲವರು ಹೇಳುತ್ತಾರೆ. ಸೂಕ್ಷ್ಮ ರೂಪರಾದ ದೇವತೆಗಳು ಮೊದಲು ಹುಟ್ಟಿ ಆ ದೇವತೆಗಳ ತರುವಾಯ ಗಂಧರ್ವ ಯಕ್ಷ ಕಿನ್ನರ ಕಿಂಪುರುಷ ಮುಂತಾದ ಜಾತಿಗಳೂ ಅಲ್ಲಿಂದ ಮುಂದೆ ಮನುಷ್ಯ ಜಾತಿಯೂ ನಂತರ ಪ್ರಾಣಿ ವರ್ಗ ಮೊದಲಾದವುಗಳೂ ಹುಟ್ಟಿದವೆಂದು ಕೆಲವರು ಹೇಳುತ್ತಾರೆ. ಈ ಎರಡು ವಿಧವಾದ ಅಭಿಪ್ರಾಯಗಳಲ್ಲಿಯೂ ಭೂಮಿಯ ಮೇಲೆ ಇರತಕ್ಕ ಪ್ರಾಣಿಗಳಲ್ಲಿ ಮನುಷ್ಯನೇ ಹೆಚ್ಚಿನವನು ಎಂಬುದು ಈಗ ಒಪ್ಪಲ್ಪಟ್ಟ ಸಂಗತಿಯಾಗಿದೆ. ಮನುಷ್ಯನು ಇತರ ಪ್ರಾಣಿಗಳಲ್ಲಿ ರೂಢಿಯಲ್ಲಿ ಇಲ್ಲದ ಒಲೆ, ಒರಳು ಅವರ ಗುಂಡು ಕಲ್ಲು ಅಥವಾ ಒನಕೆ, ಕಸವನ್ನು ಗುಡಿಸುವ ಪೊರಕೆ, ಬೀಸುವ ಕಲ್ಲು, ನೀರು ತುಂಬುವ ಗಡಿಗೆ, (ಇವಕ್ಕೆ ಪಂಚ ಸೂನಾ ಎನ್ನುವರು.) ಇವುಗಳ ಉಪಯೋಗವನ್ನು ಬಲ್ಲವನಾದ್ದರಿಂದ ಹೆಚ್ಚಿನವನು ಎಂದು ಪೂರ್ವದವರು ಹೇಳಿರುವದನ್ನು ನೋಡಿದರೆ ಇತರ ಪ್ರಾಣಿಗಳಿಗಿಂತ ತನ್ನ ಅನುಕೂಲಗಳನ್ನು ಕಲ್ಪಿಸಿಕೊಳ್ಳುವದರಲ್ಲಿ ಮನುಷ್ಯನ ಬುದ್ಧಿಯು ಮಿಗಿಲಾದುದು ಆದ್ದರಿಂದ ಹಾಗೆ ಹೇಳಿದರು ಎಂಬುದು ವ್ಯಕ್ತವಾಗುತ್ತದೆ. ಇದು ಹಾಗಿರಲಿ. ಈ ಕಾಲದಲ್ಲಿ ಮನುಷ್ಯನು ಬಳಕೆಗೆ ತಂದಿರುವ ರೇಡಿಯೋಧಾತು, ಮನುಷ್ಯನಂತೆ ಮಾತನಾಡುವ ಯಂತ್ರ, ಉಗಿಯಿಂದ ನಡೆಯುವ ಯಂತ್ರ, ವಿದ್ಯುಚ್ಛಕ್ತಿ, ಕಲ್ಪಿತ ಮನುಷ್ಯ, ಇವುಗಳನ್ನು ನೋಡಿದರೆ ಇವು ಈಗಿನ ಕಾಲದ ಪಂಚ ಸೂನಾ ಎನ್ನಿಸಿಕೊಳ್ಳಲಿಕ್ಕೆ ಅರ್ಹವಾಗಿರುವವೆಂದು

ತೋರುವವಲ್ಲದೆ ಮನುಷ್ಯನ ಅತ್ಯದ್ಭುತ ಬುದ್ಧಿ ಶಕ್ತಿಯು ಪ್ರಮಾಣದ ಪ್ರದರ್ಶಕಗಳೂ ಆಗಿರುವವೆಂದು ತಿಳಿದುಬರುತ್ತದೆ. ಇದಲ್ಲದೆ ಇನ್ನೊಂದು ವಿಧದಲ್ಲಿಯೂ ಮನುಷ್ಯನ ಬುದ್ಧಿ ಶಕ್ತಿಯು ಉಪಯೋಗಕ್ಕೆ ಬಂದಿರುತ್ತದೆ. ಅದು ಯಾವದೆಂದರೆ ಕಣ್ಣಿಗೆ ಕಾಣುವ ಭೂಮಿಯೇ ಮೊದಲಾದ ಗ್ರಹಗಳೂ ಸೂರ್ಯ ನಕ್ಷತ್ರ ಮೊದಲಾದ ಪ್ರಕಾಶ ವಸ್ತುಗಳೂ, ವಾಯು ಆಕಾಶ ಮೊದಲಾದ ಪಂಚ ಭೂತಗಳೂ ಉದ್ಭಿಜ ಅಂಡಜ ಮೊದಲಾದ ಜನ್ಮರಾಶಿಗಳೂ ಇವೇ ಮೊದಲಾದವುಗಳು ಹೇಗೆ ಉತ್ಪತ್ತಿಯಾದವು? ಎಲ್ಲಿಂದ ಬಂದುವು? ಇವುಗಳೆಲ್ಲಕ್ಕೂ ಮೂಲ ಕಾರಣವಾದ ವಸ್ತುವು ಯಾವುದು? ಎಂಬುವರ ವಿಚಾರವನ್ನು ಮಾಡಿ ಅಂಥಾ ಮೂಲ ವಸ್ತುವಿನ ಸ್ಥಿತಿಗತಿಗಳನ್ನು ಗೊತ್ತು ಮಾಡಿ ಇದರಿಂದ ಮನುಷ್ಯನಿಗೆ ಎಷ್ಟು ಮಟ್ಟಿಗೆ ಪ್ರಯೋಜನವಿದೆ ಎಂದು ನಿರ್ಧರಿಸುವದು. ಇದು ಬಹಳ ಗಹನವಾದ ವಿಷಯ. ಆದರೂ ಮನುಷ್ಯನ ಬುದ್ಧಿಗೆ ಈ ಕೆಲಸವು ಸಾಧ್ಯವಾದದ್ದೆಂದು ತೋರುವದು. ಆದ್ದರಿಂದಲೇ ಪೂರ್ವದಲ್ಲಿ ಅನೇಕರು ರಾಜರು, ಋಷಿಗಳು, ಮುನಿಗಳು, ಮೊದಲಾದವರು ಈ ವಿಷಯದಲ್ಲಿ ತಮ್ಮ ಬುದ್ಧಿ ಶಕ್ತಿಯನ್ನು ಹೆಚ್ಚಾಗಿ ಉಪಯೋಗಿಸಿದ ಉದಾಹರಣೆಗಳು ಪೂರ್ವದವರ ಕೆಲವು ಬರೆವಣಿಗೆಗಳಿಂದ ನಮಗೆ ಕಂಡು ಬರುತ್ತವೆ. ಮನುಷ್ಯರಿಗಿಂತ ಹೆಚ್ಚಿನ ಜನ್ಮದವರಾದ ದೇವತೆಗಳು ಹೇಳಿದರೆಂಬ ಬರೆವಣಿಗೆಗಳೂ ಅನೇಕವಾಗಿ ದೊರೆಯುತ್ತವೆ.

ಈ ಬರೆವಣಿಗೆಗಳು ಈ ಭೂಮಿಯ ಪೂರ್ವಾರ್ಧಗೋಳದಲ್ಲಿ ಪೂರ್ವದಿಕ್ಕಿನಲ್ಲಿ ಇದ್ದವರು ವಿಚಾರ ಮಾಡಿ ಬರೆದವುಗಳೆಂದು ತಿಳಿದು ಬಂದಿರುವದರಿಂದ ಪೌರ್ವಾತ್ಯ ವಿಚಾರಗಳೆನಿಸಿಕೊಂಡಿರುತ್ತವೆ. ಅದರಲ್ಲಿಯೂ ಹಿಂದೂ ದೇಶದಲ್ಲಿ ಸಾವಿರಾರು ವರ್ಷಗಳಿಂದಲೂ ಈ ವಿಚಾರ ವಿಮರ್ಶೆಯು ನಡೆಯುತ್ತಾ ಇರುವದರಿಂದ ಈ ಬಗ್ಗೆ ಹಿಂದೂ ದೇಶವೇ ಪ್ರಖ್ಯಾತಿಯನ್ನು ಹೊಂದಿದ್ದಾಗಿರುತ್ತದೆ. ಈಗಿನ ಕೌಶಲದ ಶಾಸ್ತ್ರ ಪರಿಶೋಧನೆ ( Science research ) ಯಲ್ಲಿ ಪೌರ್ವಿಕರ ವಿಚಾರಗಳನ್ನು ತಿಳಿದುಕೊಂಡು ಈಗಿನ ಕಾಲಕ್ಕೆ ದೊರಕುವ ಅನುಕೂಲಗಳ ನಿಯೋಜನೆ ಮಾಡಿ ಈ ವಿಷಯ ವಿಮರ್ಶೆ ಮಾಡಿದರೆ ಹೆಚ್ಚಿನ ಪ್ರಯೋಜನಗಳು ಉಂಟಾಗಬಹುದು. ಉದಾಹರಣೆಗಾಗಿ ಒಂದು ವಿಷಯ:— ಮೇ

ಲೆ ಕಂಡ ಗಹನ ವಿಚಾರವನ್ನು ಮಾಡುವದರಲ್ಲಿ ಪೌರ್ವಿಕರು ಮನುಷ್ಯನ ದೇಹವನ್ನೇ ಆಧಾರವಾಗಿಟ್ಟುಕೊಂಡು ತಾವು ಕಂಡುಹಿಡಿದ ಅಂಶಗಳಿಂದ ಬಾಹ್ಯ ಪ್ರಪಂಚದಲ್ಲಿ ತಮ್ಮ ಕಣ್ಣಿನಿಂದ ನೋಡಲಾರದ ಕೆಲವು ಅಂಶಗಳನ್ನು ನಿಶ್ಚಯಿಸುತ್ತಿದ್ದರೆಂದು ತಿಳಿದಿದೆ. ಪಿಂಡಾಂಡ ( ದೇಹ ) ದಲ್ಲಿರುವದೆಲ್ಲವೂ ಬ್ರಹ್ಮಾಂಡ ( ಪ್ರಪಂಚ ) ದಲ್ಲಿಯೂ ಬ್ರಹ್ಮಾಂಡದಲ್ಲಿರುವದೆಲ್ಲವೂ ಪಿಂಡಾಂಡದಲ್ಲಿಯೂ ಇರುವದೆಂಬುದೇ ಅವರ ನಿರ್ಧರ. ಈಗಿನವರಾದರೂ ಮನುಷ್ಯದೇಹದಲ್ಲಿ ಇರುವ ಅತ್ಯದ್ಭುತ ವಿಷಯಗಳನ್ನು ತಿಳಿಯುವವದಕ್ಕೆ ತಕ್ಕ ಯಂತ್ರೋಪಕರಣಗಳನ್ನು ರಚಿಸಿಕೊಂಡು ಹಾಗೆ ತಿಳಿಯಲು ಯತ್ನಿಸಿದ್ದಾದರೆ ಮನುಷ್ಯವರ್ಗಕ್ಕೆ ಬಹಳ ಪ್ರಯೋಜನವಾಗಬಹುದೆಂದು ನಂಬಲಿಕ್ಕೆ ಬರುವಂತೆ ಇದೆ.

ಈಗ ನಮಗೆ ದೊರಕಿರುವ ಪೂರ್ವದವರ ಬರೆವಣಿಗೆಗಳೆಂದರೆ ಶೃತಿ ಸ್ಮೃತಿ ಆಗಮ ದರ್ಶನ ಪುರಾಣ ಇತಿಹಾಸ ಮುಂತಾದವುಗಳು. ಶೃತಿ ಎಂದರೆ ವೇದಗಳು ನಾಲ್ಕು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಎಂದು. ಇವು ಮುಖ್ಯವಾಗಿ ಸಂಹಿತೆ, ಬ್ರಾಹ್ಮಣ, ಉಪನಿಷತ್ತು ಎಂದು ಮೂರು ಭಾಗವುಳ್ಳವುಗಳಾಗಿವೆ. ಸಂಹಿತೆ ಎಂಬ ಭಾಗದಲ್ಲಿ ದೇವತೆಗಳನ್ನು ಪೂಜಿಸುವ, ಸ್ತುತಿಸುವ, ಮಂತ್ರಗಳ ವಿವರವೂ ಬ್ರಾಹ್ಮಣ ಎಂಬ ಭಾಗದಲ್ಲಿ ಯಜ್ಞಯಾಗಾದಿ ಕರ್ಮಗಳ ವಿವರವೂ ಹೇಳಲ್ಪಟ್ಟಿರುವವು. ಮೂರನೆಯ ಭಾಗವಾದ ಉಪನಿಷತ್ತುಗಳಲ್ಲಿ ಬಾಹ್ಯಪ್ರಪಂಚಕ್ಕೆ ಮತ್ತು ಪ್ರಾಣಿಗಳ ಪ್ರಾಣಕ್ಕೆ ಕಾರಣವಾದ ಮೂಲ ವಸ್ತುವಿಗೆ ಆತ್ಮ, ಬ್ರಹ್ಮ, ಶಿವ ಮುಂತಾದ ಸಾಂಕೇತಿಕ ನಾಮುಗಳನ್ನಿಟ್ಟುಕೊಂಡು ಇವುಗಳ ವಿಷಯವಾಗಿ ವಿಚಾರ ಮಾಡಿದ ಅಂಶವೇ ಬಹಳವಾಗಿರುತ್ತದೆ. ಇವು ದೇವತೆಗಳು ಮತ್ತು ಋಷಿಗಳು ಮಾತನಾಡಿದಂತೆ ಅಥವಾ ಸಂವಾದ ಮಾಡಿದಂತೆ ಪ್ರಕಟವಾಗಿರುತ್ತವೆ. ಈ ಉಪನಿಷತ್ತುಗಳು ವೇದದ ಒಂದೊಂದು ಭಾಗಕ್ಕೆ ಒಂದೊಂದರಂತೆ ಇರುವವೆಂದು ಮುಕ್ತಿಕೋಪನಿಷತ್ತಿನಲ್ಲಿ ಬರೆದಿದೆ. ವೇದದ ಭಾಗಗಳನ್ನು ಅದರಲ್ಲಿ ಹೇಳಿರುವಂತೆ ಲೆಕ್ಕಿಸಿದರೆ ೧೧೮೦ ಆಗುತ್ತವೆ. ಇವುಗಳಲ್ಲಿ ಶ್ರೀರಾಮಚಂದ್ರನು ಹನುಮಂತನಿಗೆ ಮೋಕ್ಷ ಮಾರ್ಗವನ್ನು ತಿಳಿಯುವದಕ್ಕಾಗಿ ಓದಬೇಕೆಂದು ಗುರ್ತಿಸಿದ ೧೦೮ ಉಪನಿಷತ್ತುಗಳು "ಅಷ್ಟೋ

ತ್ತರ ಶತೋಪನಿಷದಃ" ಎಂಬ ಹೆಸರಿನಿಂದ ಮುದ್ರಣವಾಗಿ ಹೆಚ್ಚು ಪ್ರಚಾರದಲ್ಲಿ ಇವೆ. ಈ ವೇದಗಳಲ್ಲದೆ ಉಪವೇದಗಳೂ ಉಂಟು:— ಆಯುರ್ವೇದ, ಧನುರ್ವೇದ, ಗಂಧರ್ವ, ಅರ್ಥಶಾಸ್ತ್ರ, ಇವೇ ನಾಲ್ಕು.

ಸ್ಮೃತಿಗಳು ಮುಖ್ಯವಾಗಿ ೧೮. ಮನು, ಬೃಹಸ್ಪತಿ, ದಕ್ಷ, ಗೌತಮ, ಯಮ, ಅಂಗಿರಸ, ಯೋಗೀಶ್ವರ, ಪ್ರಚೇತ, ಶಾತಾತಪ, ಪರಾಶರ, ಸಂವರ್ತ, ಉಶನಸ್, ಶಂಖ, ಲಿಖಿತ, ಅತ್ರಿ, ವಿಷ್ಣು, ಆಪಸ್ತಂಬ, ಹಾರೀತ, ಈ ಹೆಸರಿನ ಋಷಿಗಳು ಸ್ಮೃತಿಗಳನ್ನು ಬರೆದಿದ್ದಾರೆ. ರಚಿಸಿದವರ ಹೆಸರಿನಿಂದಲೇ ಈ ಸ್ಮೃತಿಗಳು ಕರೆಯಲ್ಪಡುತ್ತವೆ. ಇವುಗಳಲ್ಲಿ ಮನುಷ್ಯರ ಜಾತಿಭೇದಗಳೂ ಅವರ ಕರ್ಮಗಳೂ, ಆಯಾ ಕರ್ಮಗಳನ್ನು ಮಾಡದಿದ್ದರೆ ಹೊಂದತಕ್ಕ ಪ್ರಾಯಶ್ಚಿತ್ತಗಳೂ ಇವೇ ಮೊದಲಾದವುಗಳು ವಿವರಿಸಲ್ಪಟ್ಟಿರುತ್ತವೆ. ಇವೆಲ್ಲವೂ ಮುದ್ರಣವಾಗಿರುತ್ತವೆ. ಇವುಗಳಲ್ಲದೆ ಉಪಸ್ಮೃತಿಗಳೂ ಇವೆ.

ಕೈಲಾಸದಲ್ಲಿ ಶಿವನು ಬೋಧಿಸಿದನು ಎಂಬ ಆಗಮಗಳು ಇಪ್ಪತ್ತೆಂಟು. ಕಾಮಿಕ ಯೋಗಜ ಚಿಂತ್ಯ ಕಾರಣ ಅಜಿತ ದೀಪ್ತ ಸೂಕ್ಷ್ಮ ಸಹಸ್ರ ಅಂಶುಮತ್ ಸುಪ್ರಭೇದ ಇವು ಶಿವಾಗಮಗಳೆಂದೂ ವಿಜಯ ನಿಶ್ವಾಸ ಸ್ವಾಯಂಭುವ ಅನಲ ವೀರ ರೌರವ ಮಕುಟ ವಿಮಲ ಚಂದ್ರಜ್ಞಾನ ಬಿಂಬ ಅಥವಾ ಮುಖಬಿಂಬ ಪ್ರೋದ್ಗೀತ ಲಲಿತ ಸಿದ್ಧ ಸಂತಾನ ಸರ್ವೋತ್ತಮ ಪಾರಮೇಶ್ವರ ಕಿರಣ ವಾತುಲ ಇವು ರುದ್ರಾಗಮಗಳೆಂದೂ ಹೆಸರು ಹೊಂದಿವೆ. ಇವುಗಳಲ್ಲದೆ ಉಪಾಗಮಗಳೂ ಇರುತ್ತವೆ. ಈ ಆಗಮಗಳಲ್ಲಿ ಆತ್ಮತತ್ವ ವಿದ್ಯಾತತ್ವ ಶಿವತತ್ವ ಮುಂತಾದ ವಿಷಯಗಳು ವಿವರವಾಗಿ ಹೇಳಲ್ಪಟ್ಟಿರುವವು. ಇವಲ್ಲದೆ ಪಾಂಚರಾತ್ರಾಗಮ ವೈಖಾನಸಾಗಮ ಮೊದಲಾದವುಗಳೂ ತಂತ್ರವೆಂಬಿವುಗಳೂ ಉಂಟು. ಇವು ಕರ್ಮ ವಿಷಯವನ್ನು ಹೆಚ್ಚಾಗಿ ಬೋಧಿಸುತ್ತವೆ. ಈ ಬೋಧೆಯಲ್ಲದೆ ವೈದ್ಯ, ಜ್ಯೋತಿಷ, ಗಣಿತ, ಶಿಲ್ಪ, ವ್ಯವಸಾಯ ಮೊದಲಾದ ಕೈಗಾರಿಕೆಯ ವಿಷಯಗಳ ಬೋಧೆಯು ಈ ಆಗಮ ಉಪಾಗಮ ತಂತ್ರಗಳಲ್ಲಿ ದೊರಕುತ್ತದೆ. ಈ ವಿದ್ಯೆಗಳು ಪ್ರತ್ಯೇಕಿಸಲ್ಪಡುವದಕ್ಕೆ ಮುಂಚೆ ಆಗಮಗಳೆಂಬವೇ ಸಕಲ ವಿಷಯಗಳ ಆಶ್ರಯಸ್ಥಾನವಾಗಿದ್ದವೆಂದು ಹೇಳಲಿಕ್ಕೆ ಬರುವಂತಿದೆ. (ಆಗಮಗಳಿಗೂ ತಂತ್ರವೆಂತ ಕರೆಯುವದೂ ಉಂಟು.)

ಆಜ್ಞಾ ವಸ್ತು ಸಮಂತಾಚ್ಚ ಗಮ್ಯತೇ ಇತ್ಯಾಗಮೋಮತಃ॥
[ಅರ್ಪಣೆ ಮಾಡಿದ ವಸ್ತುವು ಸಂಪೂರ್ಣವಾಗಿ ತಿಳಿಯಲ್ಪಡುವದರಿಂದ ಆಗಮವೆಂದು ಹೆಸರು.] ಈ ಶ್ಲೋಕವೂ ಇದೇ ಅಭಿಪ್ರಾಯವನ್ನೇ ಕೊಡುತ್ತದೆ.

ಆದರೆ ಇವುಗಳ ಬಹು ಸ್ವಲ್ಪ ಭಾಗ ಮಾತ್ರ ಎಂದರೆ ಕಾಮಿಕ, ಕಾರಣ, ಸುಪ್ರಭೇದ, ವಾತುಲ, ಸೂಕ್ಷ್ಮ, ಪಾರಮೇಶ್ವರ, ದೇವೀಕಾಲೋತ್ತರ, ಇವುಗಳ ಕೆಲವು ಭಾಗಗಳು ಮಾತ್ರ ಬೇರೆ ಬೇರೆ ಲಿಪಿಗಳಲ್ಲಿ ಮುದ್ರಣವಾಗಿ ಪ್ರಚಾರದಲ್ಲಿವೆ. ಕನ್ನಡ ಲಿಪಿಯಲ್ಲಿ ಶ್ರೀಮನ್ನಿರಂಜನ ಜಗದ್ಗುರು **ಗಂಗಾಧರ ಮಹಾಸ್ವಾಮಿಗಳವರು** ಮೂರು ಸಾವಿರಮಠ ಹುಬ್ಬಳ್ಳಿ, ಇವರ ಆಶ್ರಯದಿಂದ ಪ್ರಕಟವಾದ ತಂತ್ರ ಸಂಗ್ರಹ ಒಂದು, ಸುಪ್ರಭೇದಾಗಮ ಒಂದು. ಈ ಎರಡು ಮಾತ್ರ ಪ್ರಚಾರದಲ್ಲಿ ಇವೆ. ಉಳಿದವುಗಳ ಹೆಸರೂ ಅವುಗಳಲ್ಲಿರುವ ಕೋಟ್ಯವಧಿ ಶ್ಲೋಕಗಳ ಸಂಖ್ಯೆಯೂ ಮಾತ್ರ ದೊರಕಿರುವದರಿಂದ ಇವುಗಳನ್ನು ಸಂಪೂರ್ಣವಾಗಿ ದೊರಕಿಸಿ ಪ್ರಕಟನ ಮಾಡಬೇಕೆಂಬ ಪ್ರಬಲ ಪ್ರಯತ್ನವು ಇದೂವರೆವಿಗೆ ನಡೆಯದೆ ಇರುವದು ವಿಷಾದವನ್ನು ಹುಟ್ಟಿಸುವ ಸಂಗತಿಯಾಗಿದೆ.

ದರ್ಶನಗಳು ಆರು. ಕಪಿಲಋಷಿಯ ಸಾಂಖ್ಯ, ಪತಂಜಲಿ ಋಷಿಯು ರಚಿಸಿದ ಯೋಗ, ಗೌತಮ ಋಷಿಯು ರಚಿಸಿದ ನ್ಯಾಯ, ಕಣಾದ ಋಷಿಯು ರಚಿಸಿದ ವೈಶೇಷಿಕ, ಜೈಮಿನಿ ಋಷಿಯು ರಚಿಸಿದ ಪೂರ್ವಮೀಮಾಂಸ, ವ್ಯಾಸ ಋಷಿಯು ರಚಿಸಿದ ಉತ್ತರಮೀಮಾಂಸ ಎಂಬಿವುಗಳು. ಸಾಂಖ್ಯವು ತತ್ವಗಳ ಸಂಖ್ಯೆ ಮುತ್ತ ವಿಷಯಗಳನ್ನೂ, ಯೋಗವು ಈಶ್ವರನೊಡನೆ ಕೂಡುವ ಬಗೆಯನ್ನೂ, ನ್ಯಾಯ ವೈಶೇಷಿಕಗಳು ಈಶ್ವರನಿದ್ದಾನೆ ಎಂಬ ವಿಷಯದ ವಾದದ ನಿರ್ಣಯವನ್ನೂ, ಪೂರ್ವಮೀಮಾಂಸವು ಯಜ್ಞಯಾಗಾದಿಗಳಿಂದ ದೇವತೆಗಳ ಪ್ರೀತಿಯನ್ನು ಪಡೆಯುವದನ್ನೂ, ಉತ್ತರ ಮೀಮಾಂಸವು ಬ್ರಹ್ಮ ವಿಷಯಕವಾದ ಜ್ಞಾನವನ್ನೂ ಬೋಧಿಸುತ್ತವೆ. ಇವೆಲ್ಲವೂ ಮುದ್ರಣವಾಗಿರುತ್ತವೆ.

ಪುರಾಣಗಳು ಹದಿನೆಂಟು. ಬ್ರಾಹ್ಮ ಪಾದ್ಮ ವೈಷ್ಣವ ಶೈವ ಭಾಗವತ ಭವಿಷ್ಯ ನಾರದೀಯ ಮಾರ್ಕಂಡೇಯ ಆಗ್ನೇಯ ಬ್ರಹ್ಮಕೈವರ್ತ್ಯ ಲೈಂಗ್ಯ ವಾರಾಹ ಕೌರ್ಮ ಮಾತ್ಸ್ಯ ಗಾರುಡ ಬ್ರಹ್ಮಾಂಡ ಇವು

ಗಳನ್ನು ವ್ಯಾಸಋಷಿಯು ಲೋಕಹಿತಾರ್ಥವಾಗಿ ರಚಿಸಿ ಪ್ರಕಟಿಸಿದನು. ಇವುಗಳಲ್ಲಿ ದೇವತೆಗಳ ಮತ್ತು ಪೂರ್ವಿಕರ ಕಥೆಗಳೂ ಲೌಕಿಕ ವಿಷಯಗಳೇ ಮೊದಲಾದವುಗಳೂ ವಿವರಿಸಲ್ಪಟ್ಟಿರುತ್ತವೆ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಮಹಾದೇವನ ವಿಷಯವೂ ಅಲ್ಲಲ್ಲಿ ಬೋಧಿಸಲ್ಪಟ್ಟಿರುತ್ತದೆ. ಇವೆಲ್ಲವೂ ಮುದ್ರಣವಾಗಿರುತ್ತವೆ. ಇವುಗಳಲ್ಲದೆ ಉಪಪುರಾಣಗಳೂ ಇರುತ್ತವೆ. ಇವುಗಳಿಗೆ ಅಷ್ಟಾದಶ ಮಹಾವಿದ್ಯೆ ಎಂದುಕರೆಯುತ್ತಾರೆ. ಸನತ್ಕುಮಾರ ನರಸಿಂಹ ಸ್ಕಾಂದ ನಂದಿ ದೂರ್ವಾಸ ನಾರದ ಕಪಿಲ ಮನು ಉಶನಸ್ ಪುಣ್ಯ ವರುಣ ಕಾಲಕಂಠ ವಸಿಷ್ಠ ಮಹೇಶ್ವರ ಸಾಂಬ ಪರಾಶರ ಮಾರೀಚ ಭಾರ್ಗವ ಎಂಬವರು ಇವುಗಳನ್ನು ರಚಿಸಿರುತ್ತಾರೆ. ನಂದಿಯು ರಚಿಸಿದುದಕ್ಕೆ ಶಿವಧರ್ಮಪುರಾಣ ಎಂತಲೂ ಕಾಲಕಂಠನು ರಚಿಸಿದುದಕ್ಕೆ ಕಾಲೀಪುರಾಣ ಎಂತಲೂ ಮಹೇಶ್ವರನು ರಚಿಸಿದ್ದಕ್ಕೆ ಲಿಂಗಪುರಾಣ ಎಂತಲೂ ಉಶನಸ್ ಎಂಬುವವನು ರಚಿಸಿದ್ದಕ್ಕೆ ಬ್ರಹ್ಮಾಂಡ ಪುರಾಣವೆಂತಲೂ ಕರೆಯುತ್ತಾರೆ. ಉಳಿದವುಗಳು ಆಯಾಯಾ ಕರ್ತರ ಹೆಸರಿನಲ್ಲಿಯೇ ಕರೆಯಲ್ಪಡುತ್ತವೆ. ಇವುಗಳೂ ಬ್ರಹ್ಮಜ್ಞಾನವನ್ನು ಬೋಧಿಸುತ್ತವೆ. ಈ ವಿಷಯದಲ್ಲಿ ಈ ಶ್ಲೋಕಗಳಿವೆ.

ಸರ್ವಾಣ್ಯುಪಪುರಾಣಾನಿ ಬ್ರಹ್ಮಜ್ಞಾನ ಪರಾಣಿವೈ ।
ಯಥಾರ್ಥಾನುಗತಾ ಏವಂ ವಿದ್ಯಾ ಹ್ಯಷ್ಟಾದಶೇರಿತಾಃ ॥
ಅಷ್ಟಾದಶಾನಾಮೇತಾನಾಂ ವಿದ್ಯಾನಾಂ ಭಿನ್ನವರ್ತ್ಮನಾಂ ।
ಆದಿಕರ್ತಾ ಕವಿಃ ಸಾಕ್ಷಾಚ್ಛೂಲಪಾಣಿ ರಿತಿಶ್ರುತಿಃ ॥

ಇದರಿಂದ ಈ ಉಪ ಪುರಾಣಗಳ ಆದಿಕರ್ತನು ಶಿವನೆಂದೂ ನಂತರ ಈ ಋಷಿಗಳು ವಿವರಿಸಿದರೆಂದೂ ತಿಳಿಯುವದರಿಂದ ಶಿವನ ಬೋಧೆಯು ಈ ಋಷಿಗಳಿಗಿಂತ ಪೂರ್ವದ್ದೆಂದು ವ್ಯಕ್ತವಾಗುತ್ತದೆ.

ರಾಮಾಯಣ ಮಹಾಭಾರತ ಮೊದಲಾದ ಇತಿಹಾಸಗಳು ಜೀವನ ಚರಿತ್ರೆಗಳನ್ನು ವಿವರಿಸುತ್ತವಾದರೂ ಅಲ್ಲಲ್ಲಿ ಮಹಾದೇವನ ವಿಷಯಕವಾದ ವಿಚಾರಗಳನ್ನು ಒಳಗೊಂಡಿವೆ. ಇವೂ ಮುದ್ರಣವಾಗಿವೆ.

ವೇದಗಳು ನಾಲ್ಕು ವೇದದ ಉಪಾಂಗಗಳಾದ ಮೀಮಾಂಸ ನ್ಯಾಯ ಪುರಾಣ ಧರ್ಮಶಾಸ್ತ್ರ [ ಸ್ಮೃತಿ ] ಈ ನಾಲ್ಕು ಮತ್ತು ಶಿಕ್ಷಾ ವ್ಯಾಕರಣ ಛಂದಸ್ಸು ನಿರುಕ್ತ ಜ್ಯೋತಿಷ ಕಲ್ಪ ಎಂಬೀ ವೇದದ ಅಂಗಗಳು ಆರು ಇವೆಲ್ಲಾ ಸೇರಿ ಹದಿನಾಲ್ಕು ವಿದ್ಯೆಗಳೆನಿಸಿಕೊಂಡಿರುತ್ತವೆ.

ಉಪವೇದಗಳಾದ ಆಯುರ್ವೇದ ಧನುರ್ವೇದವೆಂಬಿವು ಪ್ರೋದ್ಗೀತಾಗಮಕ್ಕೆ ಸಂಬಂಧಪಟ್ಟ ಉಪಾಗಮಗಳ ಹೆಸರಿನಲ್ಲಿ ಸೇರಿರುವದರಿಂದಲೂ ಉಪಪುರಾಣಗಳಲ್ಲಿ ಸೇರಿದ ವರುಣ ವಸಿಷ್ಠ ಶಿವಧರ್ಮ ನಾರಸಿಂಹ ಸ್ಕಾಂದ [ ಕೌಮಾರ ] ಈ ಹೆಸರುಗಳೂ ಉಪಾಗಮಗಳಲ್ಲಿ ಸೇರಿರುವದರಿಂದಲೂ ಮೇಲೆ ಶ್ಲೋಕದಲ್ಲಿ ವಿವರಿಸಿದಂತೆ ಉಪಪುರಾಣಗಳ ಆಧಾರವಾಗಿಯೂ ಉಪವೇದಗಳಾಗಿಯೂ ಆಗಮಗಳಸ್ಸಿಟ್ಟುಕೊಂಡಿದ್ದರೆಂದೇ ತಿಳಿಯಬೇಕಾಗುತ್ತದೆ.

ಇವೇ ಹಿಂದೂ ದೇಶದ ಪೂರ್ವಜರು ತಮ್ಮ ಮುಂದಿನವರ ಉಪಕಾರಕ್ಕಾಗಿ ಬರೆದಿಟ್ಟಿರುವ ಮುಖ್ಯಬರೆವಣಿಗೆಗಳು. ಇವುಗಳಲ್ಲಿ ಮನುಷ್ಯನ ಈ ಲೋಕದ ಸುಖದ ವಿಷಯಗಳು ಬರೆಯಲ್ಪಟ್ಟಿದ್ದಾಗ್ಯೂ ಮನುಷ್ಯನು ಎಲ್ಲಿಂದ ಉದಯನಾದನೋ ಆ ಮೂಲ ವಸ್ತುವಿನ ವಿಷಯದ ವಿಚಾರ ವಿಮರ್ಶೆಯು ಬಹಳ ಚನ್ನಾಗಿ ವಿವರಿಸಲ್ಪಟ್ಟಿದೆ. ಈ ಮೂಲಗಳ ಅಭಿಪ್ರಾಯವನ್ನೇ ಕೂಡಿಟ್ಟು ಸಂಗ್ರಹ ಗ್ರಂಥಗಳು ಅನೇಕ ಹುಟ್ಟಿರುವವಾದರೂ ಈ ಕಾಲಕ್ಕೆ ತಕ್ಕಂತೆ ಇವುಗಳ ಸಾರವನ್ನು ಗ್ರಹಿಸುವ ಗ್ರಂಥಗಳು ಬರೆಯಲ್ಪಡಬೇಕಾಗಿವೆ.

ಇವನ್ನೆಲ್ಲಾ ನೋಡಿದರೆ ವ್ಯಾಸರ ಪುರಾಣಗಳೂ ಅವಕ್ಕೆ ಅನುಸಾರವಾದ ಗ್ರಂಥಗಳೂ ಸಂಪೂರ್ಣವಾಗಿ ಮುದ್ರಣವಾಗಿರುವವೆಂದು ಗೊತ್ತಾಗುತ್ತದೆ. ಆದರೆ ಆಗಮಗಳೂ ಉಪನಿಷತ್ತುಗಳೂ ಉಪಪುರಾಣಗಳೂ ಸಂಪೂರ್ಣವಾಗಿ ಮುದ್ರಣವಾಗಿಲ್ಲ. ಇವುಗಳಲ್ಲಿ ಅನೇಕ ಈಗ ದೊರಕುವಂತಿಲ್ಲವಾದರೂ ದೊರಕುವವುಗಳಲ್ಲಿ ಕೆಲವು ಈಚೆಗೆ ಮಾಡಿದವುಗಳೆಂದು ತೋರುತ್ತಿದ್ದರೂ ವ್ಯಾಸರಿಗಿಂತ ಪೂರ್ವದಲ್ಲಿ ರಚಿಸಲ್ಪಟ್ಟವುಗಳು ಅನೇಕ ಉಂಟೆಂದೂ ಅವು ಓಲೆಯಗರಿಗಳಿಗೂ ಕೂಡಾ ಅಪರೂಪವಾಗಿ ದೊರಕಿರಬಹುದೆಂದೂ ತೋರುತ್ತದೆ. ಹಾಗಿಲ್ಲದೆ ನಾಶವಾಗಿರುವವೆಂದು ಹೇಳುವುದಾದರೆ ಅಂಥಾ ಪ್ರಬಲವಾದ ಕಾರಣವು ಇದುವರೆವಿಗೆ ತೋರಪಟ್ಟಿಲ್ಲ. ವ್ಯಾಸಋಷಿಗಳು ಶಿವಧರ್ಮಸಂಬಂಧವಾದ ೨೮ ಆಗಮಗಳುಂಟೆಂದು ತಮ್ಮ ಪುರಾಣಗಳಲ್ಲಿ ಹೇಳಿರುವದರಿಂದ ಆಗಮಗಳು ಪೂರ್ವದಲ್ಲಿದ್ದವೆಂದು ಧಾರಾಳವಾಗಿ ಹೇಳಬಹುದು.

ಮದರಾಸಿನ ಅದ್ಯಾರ ಲೈಬ್ರರಿಯಲ್ಲಿ ಇನ್ನೂ ಮುದ್ರಣವಾಗದಿರುವ ಉಪನಿಷತ್ತುಗಳು ಸುಮಾರು ಒಂದು ನೂರಕ್ಕಿಂತಲೂ ಹೆಚ್ಚಾಗಿರುವವೆಂ

ದೂ ಕಾಶ್ಮೀರದೇಶ ಮತ್ತು ತಿರುವಾಂಕೂರುದೇಶ ಇವುಗಳಲ್ಲಿ ಅನೇಕ ಆಗಮುಗಳಿರುವವೆಂದೂ ಮೈಸೂರು ಮತ್ತು ಮದರಾಸಿನ ಪ್ರಾಚ್ಯಕೋಶಾಲಯಗಳಲ್ಲಿ ಕೆಲವು ಆಗಮುಗಳಿರುವವೆಂದೂ ತಿಳಿಯಬಂದಿದೆ. ಮುದ್ರಣಯಂತ್ರಗಳು ಪ್ರಚಾರಕ್ಕೆ ಬಂದು ಸುಮಾರು ೧೦೦ ವರ್ಷಗಳಾಗಿದ್ದಾಗ್ಯೂ ಈಗ ದೊರಕುತ್ತಿರುವ ಭಾಗಗಳಾದರೂ ಇನ್ನೂ ಮುದ್ರಣವಾಗದೆ ಇರುವದು ವಿಷಾದವನ್ನು ಹುಟ್ಟಿಸುವ ಸಂಗತಿಯಾಗಿದೆ.

ಇವುಗಳಲ್ಲಿ ಎಲ್ಲಾ ಭಾಗವೂ ಪಾರಮಾರ್ಥಿಕ ವಿಷಯವಿಲ್ಲ. ಅಷ್ಟು ಖರ್ಚುಮಾಡಿ ಮುದ್ರಿಸುವದರಲ್ಲಿ ಪ್ರಯೋಜನವಿಲ್ಲನೆಂದು ಕೆಲವರು ಶಂಕಿಸಬಹುದು. ಅನರ್ಘ್ಯವಾದ ರತ್ನವು ಸಮುದ್ರದಲ್ಲಿ ಅಪರೂಪವಾಗಿ ದೊರಕುವಂತೆಯೂ ಸಂಜೀವನದ ಮೂಲಿಕೆಯು ಪರ್ವತದಲ್ಲಿ ಎಲ್ಲಿಯೋ ಒಂದೆಡೆಯಲ್ಲಿ ಇರುವಂತೆಯೂ ಈ ಗ್ರಂಥಗಳಲ್ಲಿ ಪಾರಮಾರ್ಥಿಕ ವಿಚಾರವು ಅಪರೂಪವಾಗಿ ದೊರಕುವದು ನಿಶ್ಚಯವಾದ್ದರಿಂದಲೂ ನಮ್ಮ ಹಿರಿಯರ ಜ್ಞಾನ ಭಾಂಡಾಗಾರವು ಹೇಗಿದೆ ಎಂಬುದನ್ನು ನಾವು ನೋಡುವದು ಅವಶ್ಯಕವಾದ್ದರಿಂದಲೂ ಈಗ ಬೇಕಾದಷ್ಟು ಪ್ರಯತ್ನಮಾಡಿ ಸಾಕಾದಷ್ಟು ಖರ್ಚುಮಾಡಿ ಓಲೆಯಗರಿಯಲ್ಲಿನ ಈ ಭಾಗಗಳನ್ನು ಉದ್ಧರಿಸಿ ಮುದ್ರಣಕ್ಕೆ ಸಿದ್ಧಪಡಿಸಲೇ ಬೇಕು. ಅಲ್ಲಿಂದ ಮುಂದೆ ಪಾರಮಾರ್ಥಿಕಸಾರವನ್ನೇ ಪ್ರತ್ಯೇಕಿಸಿ ತೆಗೆಯುವದಕ್ಕೆ ಅನುಕೂಲವು ಹೆಚ್ಚಾಗುತ್ತದೆ. ಈಚೆಗೆ ರಚಿಸಲ್ಪಟ್ಟ ಪಾರಮಾರ್ಥಿಕ ವಿಷಯ ಸಂಗ್ರಹದ ಗ್ರಂಥಗಳೂ ಓಲೆಗರಿಯಲ್ಲಿ ಬಹಳವಾಗಿವೆ. ಅವುಗಳನ್ನೂ ಮುದ್ರಿಸಿ ಅವುಗಳಲ್ಲಿರುವ ಸಾರವನ್ನು ಎತ್ತಬೇಕು.

ಪೂರ್ವಕಾಲದಲ್ಲಿ ಚಕ್ರವರ್ತಿಗಳು, ರಾಜರು, ಸಾಮಂತರು, ಪಾಳೆಯಗಾರರು, ಗೌಡರು, ಶ್ರೀಮಂತರು, ಕರ್ಷಕರು ಮೊದಲಾಗಿ ಅನೇಕರು ಇಂಥಾ ಗ್ರಂಥಗಳ ರಚನೆ ಮತ್ತು ಉದ್ಧಾರದ ಕಡೆಗೆ ವಿಶೇಷವಾಗಿ ಲಕ್ಷ್ಯಕೊಡುತ್ತಾ ಇದ್ದದ್ದರಿಂದ ಆಗ ಬರೆಯುವದಕ್ಕೆ ಅನೇಕ ತೊಂದರೆಗಳಿದ್ದಾಗ್ಯೂ —

ಒಂದು ಓಲೆಗರಿಯ ಪ್ರತಿಯಲ್ಲಿ ಆಗಿನಕಾಲದ ಬರೆಯುವದರ ಕಷ್ಟವನ್ನು ಹೀಗೆ ವಿವರಿಸಿರುವರು:—

ಭಗ್ನ ಪೃಷ್ಠಃ ಕಟಿಗ್ರೀವಾ ಬದ್ಧ ದೃಷ್ಟಿರಧೋಮುಖಃ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯ॥

ತಾತ್ಪರ್ಯ:—ಬೆನ್ನು ಮುರಿದುಕೊಂಡು ಸೊಂಟವನ್ನು ಬಗ್ಗಿಸಿಕೊಂಡು ಕಣ್ಣು ದೃಢವಾಗಿ ಸಿಲ್ಲಿಸಿ ಕೆಳಗೆ ಮುಖವಾಡಿಕೊಂಡು ಕಷ್ಟದಿಂದ ಶಾಸ್ತ್ರವು ಬರೆಯಲ್ಪಟ್ಟಿರುವದು. ಯತ್ನದಿಂದ ರಕ್ಷಿಸಿರಿ.

ಇಷ್ಟು ಕಷ್ಟದಿಂದ ಓಲೆಯ ಗರಿಗಳ ಮೇಲೆ ಕಬ್ಬಿಣದ ಕಂಠದಿಂದ ಬರೆಯಲ್ಪಟ್ಟು ಅನೇಕ ಗ್ರಂಥಗಳು [ಸಾವಿರಾರು] ರಚಿತವಾಗಿ ಇರುವದನ್ನು ನೋಡಿದರೆ ಆಗಿನವರಿಗೆ ಜ್ಞಾನ ಪ್ರಸಾರಣೆ ಮಾಡಬೇಕು ಎಂಬ ಪರೋಪಕಾರ ಬುದ್ಧಿಯು ಎಷ್ಟು ಉತ್ಸಾಹದಲ್ಲಿತ್ತೆಂಬುದು ತಿಳಿಯುತ್ತದೆ. ಈಗ ಯಂತ್ರಸಾಧನಗಳಿದ್ದಾಗ್ಯೂ ಇವುಗಳ ಕಡೆಗೆ ಲಕ್ಷ್ಯಕೊಡದೆ ಇರತಕ್ಕದ್ದು ವ್ಯಸನಪಡತಕ್ಕ ಸಂಗತಿಯಲ್ಲವೇ?

ಹಿರಿಯರ ಗ್ರಂಥಗಳನ್ನು ಉದ್ಧರಿಸುವದರಲ್ಲಿ ಪಾಶ್ಚಿಮಾತ್ಯರು ಬೇಕಾದಷ್ಟು ಧನವನ್ನು ವೆಚ್ಚಮಾಡುತ್ತಿರುವಲ್ಲಿ ಹಿಂದೂದೇಶದಲ್ಲಿ ಪೂರ್ವದಿಂದಲೂ ಸಹಜವಾಗಿದ್ದ ಈ ಅಭ್ಯಾಸವನ್ನು ಮರೆತು ಇರುವರಲ್ಲಾ! ಇದೇನು ಅನ್ಯಾಯ!

ಲೌಕಿಕ ವಿಷಯುಗಳನ್ನು ತಿಳಿಸುವ ವಿದ್ಯೆಯನ್ನು ಪಾಶ್ಚಿಮಾತ್ಯರಿಂದ ಹೊಂದಿ ಅದನ್ನು ಹರಡುತ್ತಿರುವೆವೆಂದು ಅನೇಕರು ಹೇಳಬಹುದಾದರೂ ಅವರಲ್ಲಿ ಈಗಲೂ ಕಡಿಮೆಯಾಗಿರುವ ಪಾರಮಾರ್ಥಿಕ ವಿದ್ಯೆಯನ್ನು ನಮ್ಮ ಪೂರ್ವಜರು ಸಂಪಾದಿಸಿದ್ದನ್ನು ಹೊರಗೆಡಹುವದಕ್ಕಾದರೂ ಅಂಥವರು ಏಕೆ ಪ್ರಯತ್ನಿಸಬಾರದು? ಕೆಲವರು ಈ ಕರ್ತವ್ಯವನ್ನು ಮಾಡಿ ಅಥವಾ ಮಾಡುತ್ತಾ ಇರುವದು ಆನಂದಪಡತಕ್ಕ ವಿಷಯುವಾದರೂ ಈ ಕೆಲಸವು ಇನ್ನೂ ಸಂಪೂರ್ಣವಾಗದೆ ಇರುವದರಿಂದ ಸಾಕಾದಷ್ಟು ಉತ್ತೇಜನವಿಲ್ಲವೆಂಬುದು ವ್ಯಕ್ತವಾಗುತ್ತದೆ.

ಮಹಾದೇವನ ಸಂಬಂಧವನ್ನು ಇಟ್ಟುಕೊಂಡು ಮಾಡುವ ಕಾರ್ಯಗಳಿಗೆ ಧರ್ಮಕಾರ್ಯವೆಂದು ಕರೆಯುವದು ವಾಡಿಕೆಯಲ್ಲಿದೆ. ಅದರಂತೆ ಆ ಸಂಬಂಧವಾದ ಗ್ರಂಥಗಳಿಗೆ ಧರ್ಮಗ್ರಂಥಗಳು ಎಂದೂ ಕರೆಯುತ್ತಾರೆ. ಹಿಂದೂ ದೇಶದ ಅನೇಕ ಮತಗಳ ಧರ್ಮಗುರುಗಳೆಲ್ಲರೂ ಇದು ತಮ್ಮ ಮುಖ್ಯವಾದ ಕಾರ್ಯವೆಂದು ಭಾವಿಸಿ ಮಾಡಿದ್ದರೆ ಇಷ್ಟರೊಳಗೆ ಅನೇಕ ಗ್ರಂಥಗಳು ಅಚ್ಚಾಗುತ್ತಿದ್ದವು.

ದೂ ಕಾಶ್ಮೀರದೇಶ ಮತ್ತು ತಿರುವಾಂಕೂರುದೇಶ ಇವುಗಳಲ್ಲಿ ಅನೇಕ ಆಗಮಗಳಿರುವವೆಂದೂ ಮೈಸೂರು ಮತ್ತು ಮದರಾಸಿನ ಪ್ರಾಚ್ಯಕೋಶಾಲಯಗಳಲ್ಲಿ ಕೆಲವು ಆಗಮಗಳಿರುವವೆಂದೂ ತಿಳಿಯಬಂದಿದೆ. ಮುದ್ರಣಯಂತ್ರಗಳು ಪ್ರಚಾರಕ್ಕೆ ಬಂದು ಸುಮಾರು ೧೦೦ ವರ್ಷಗಳಾಗಿದ್ದಾಗ್ಯೂ ಈಗ ದೊರಕುತ್ತಿರುವ ಭಾಗಗಳಾದರೂ ಇನ್ನೂ ಮುದ್ರಣವಾಗದೆ ಇರುವದು ವಿಷಾದವನ್ನು ಹುಟ್ಟಿಸುವ ಸಂಗತಿಯಾಗಿದೆ.

ಇವುಗಳಲ್ಲಿ ಎಲ್ಲಾ ಭಾಗವೂ ಪಾರಮಾರ್ಥಿಕ ವಿಷಯವಿಲ್ಲ. ಆಷ್ಟು ಖರ್ಚುಮಾಡಿ ಮುದ್ರಿಸುವದರಲ್ಲಿ ಪ್ರಯೋಜನವಿಲ್ಲನೆಂದು ಕೆಲವರು ಶಂಕಿಸಬಹುದು. ಅನರ್ಘ್ಯವಾದ ರತ್ನವು ಸಮುದ್ರದಲ್ಲಿ ಅಪರೂಪವಾಗಿ ದೊರಕುವಂತೆಯೂ ಸಂಜೀವನದ ಮೂಲಿಕೆಯು ಪರ್ವತದಲ್ಲಿ ಎಲ್ಲಿಯೋ ಒಂದೆಡೆಯಲ್ಲಿ ಇರುವಂತೆಯೂ ಈ ಗ್ರಂಥಗಳಲ್ಲಿ ಪಾರಮಾರ್ಥಿಕ ವಿಚಾರವು ಅಪರೂಪವಾಗಿ ದೊರಕುವದು ನಿಶ್ಚಯವಾದ್ದರಿಂದಲೂ ನಮ್ಮ ಹಿರಿಯರ ಜ್ಞಾನ ಭಾಂಡಾಗಾರವು ಹೇಗಿದೆ ಎಂಬುದನ್ನು ನಾವು ನೋಡುವದು ಅವಶ್ಯಕವಾದ್ದರಿಂದಲೂ ಈಗ ಬೇಕಾದಷ್ಟು ಪ್ರಯತ್ನಮಾಡಿ ಸಾಕಾದಷ್ಟು ಖರ್ಚುಮಾಡಿ ಓಲೆಯಗರಿಯಲ್ಲಿನ ಈ ಭಾಗಗಳನ್ನು ಉದ್ಧರಿಸಿ ಮುದ್ರಣಕ್ಕೆ ಸಿದ್ಧಪಡಿಸಲೇ ಬೇಕು. ಅಲ್ಲಿಂದ ಮುಂದೆ ಪಾರಮಾರ್ಥಿಕಸಾರವನ್ನೇ ಪ್ರತ್ಯೇಕಿಸಿ ತೆಗೆಯುವದಕ್ಕೆ ಅನುಕೂಲವು ಹೆಚ್ಚಾಗುತ್ತದೆ. ಈಚೆಗೆ ರಚಿಸಲ್ಪಟ್ಟ ಪಾರಮಾರ್ಥಿಕ ವಿಷಯ ಸಂಗ್ರಹದ ಗ್ರಂಥಗಳೂ ಓಲೆಗರಿಯಲ್ಲಿ ಬಹಳವಾಗಿವೆ. ಅವುಗಳನ್ನೂ ಮುದ್ರಿಸಿ ಅವುಗಳಲ್ಲಿರುವ ಸಾರವನ್ನು ಎತ್ತಬೇಕು.

ಪೂರ್ವಕಾಲದಲ್ಲಿ ಚಕ್ರವರ್ತಿಗಳು, ರಾಜರು, ಸಾಮಂತರು, ಪಾಳೆಯಗಾರರು, ಗೌಡರು, ಶ್ರೀಮಂತರು, ಕರ್ಷಕರು ಮೊದಲಾಗಿ ಅನೇಕರು ಇಂಥಾ ಗ್ರಂಥಗಳ ರಚನೆ ಮತ್ತು ಉದ್ಧಾರದ ಕಡೆಗೆ ವಿಶೇಷವಾಗಿ ಲಕ್ಷ್ಯಕೊಡುತ್ತಾ ಇದ್ದದ್ದರಿಂದ ಆಗ ಬರೆಯುವದಕ್ಕೆ ಅನೇಕ ತೊಂದರೆಗಳಿದ್ದಾಗ್ಯೂ —

ಒಂದು ಓಲೆಗರಿಯ ಪ್ರತಿಯಲ್ಲಿ ಆಗಿನಕಾಲದ ಬರೆಯುವದರ ಕಷ್ಟವನ್ನು ಹೀಗೆ ವಿವರಿಸಿರುವರು:—

ಭಗ್ನ ಪೃಷ್ಠಃ ಕಟಿಗ್ರೀವಾ ಬದ್ಧ ದೃಷ್ಟಿರಧೋಮುಖಃ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯ॥

ತಾತ್ಪರ್ಯ:— ಬೆನ್ನು ಮುರಿದುಕೊಂಡು ಸೊಂಟವನ್ನು ಬಗ್ಗಿಸಿಕೊಂಡು ಕಣ್ಣು ದೃಢವಾಗಿ ಸಿಲ್ಲಿಸಿ ಕೆಳಗೆ ಮುಖಮಾಡಿಕೊಂಡು ಕಷ್ಟದಿಂದ ಶಾಸ್ತ್ರವು ಬರೆಯಲ್ಪಟ್ಟಿರುವದು. ಯತ್ನದಿಂದ ರಕ್ಷಿಸಿರಿ.

ಇಷ್ಟು ಕಷ್ಟದಿಂದ ಓಲೆಯ ಗರಿಗಳ ಮೇಲೆ ಕಬ್ಬಿಣದ ಕಂಠದಿಂದ ಬರೆಯಲ್ಪಟ್ಟ ಅನೇಕ ಗ್ರಂಥಗಳು [ಸಾವಿರಾರು]ರಚಿತವಾಗಿ ಇರುವದನ್ನು ನೋಡಿದರೆ ಆಗಿನವರಿಗೆ ಜ್ಞಾನ ಪ್ರಸಾರಣೆ ಮಾಡಬೇಕು ಎಂಬ ಪರೋಪಕಾರ ಬುದ್ಧಿಯು ಎಷ್ಟು ಉತ್ಸಾಹದಲ್ಲಿತ್ತೆಂಬುದು ತಿಳಿಯುತ್ತದೆ. ಈಗ ಯಂತ್ರಸಾಧನಗಳಿದ್ದಾಗ್ಯೂ ಇವುಗಳ ಕಡೆಗೆ ಲಕ್ಷ್ಯಕೊಡದೆ ಇರತಕ್ಕದ್ದು ವ್ಯಸನಪಡತಕ್ಕ ಸಂಗತಿಯಲ್ಲವೇ?

ಹಿರಿಯರ ಗ್ರಂಥಗಳನ್ನು ಉದ್ಧರಿಸುವದರಲ್ಲಿ ಪಾಶ್ಚಿಮಾತ್ಯರು ಬೇಕಾದಷ್ಟು ಧನವನ್ನು ವೆಚ್ಚಮಾಡುತ್ತಿರುವಲ್ಲಿ ಹಿಂದೂದೇಶದಲ್ಲಿ ಪೂರ್ವದಿಂದಲೂ ಸಹಜವಾಗಿದ್ದ ಈ ಅಭ್ಯಾಸವನ್ನು ಮರೆತು ಇರುವರಲ್ಲಾ! ಇದೇನು ಅನ್ಯಾಯ!

ಲೌಕಿಕ ವಿಷಯಗಳನ್ನು ತಿಳಿಸುವ ವಿದ್ಯೆಯನ್ನು ಪಾಶ್ಚಿಮಾತ್ಯರಿಂದ ಹೊಂದಿ ಅದನ್ನು ಹರಡುತ್ತಿರುವೆನೆಂದು ಅನೇಕರು ಹೇಳಬಹುದಾದರೂ ಅವರಲ್ಲಿ ಈಗಲೂ ಕಡಿಮೆಯಾಗಿರುವ ಪಾರಮಾರ್ಥಿಕ ವಿದ್ಯೆಯನ್ನು ನಮ್ಮ ಪೂರ್ವಜರು ಸಂಪಾದಿಸಿದ್ದನ್ನು ಹೊರಗೆಡಹುವದಕ್ಕಾದರೂ ಅಂಥವರು ಏಕೆ ಪ್ರಯತ್ನಿಸಬಾರದು? ಕೆಲವರು ಈ ಕರ್ತವ್ಯವನ್ನು ಮಾಡಿ ಅಥವಾ ಮಾಡುತ್ತಾ ಇರುವದು ಆನಂದಪಡತಕ್ಕ ವಿಷಯವಾದರೂ ಈ ಕೆಲಸವು ಇನ್ನೂ ಸಂಪೂರ್ಣವಾಗದೆ ಇರುವದರಿಂದ ಸಾಕಾದಷ್ಟು ಉತ್ತೇಜನವಿಲ್ಲವೆಂಬುದು ವ್ಯಕ್ತವಾಗುತ್ತದೆ.

ಮಹಾದೇವನ ಸಂಬಂಧವನ್ನು ಇಟ್ಟುಕೊಂಡು ಮಾಡುವ ಕಾರ್ಯಗಳಿಗೆ ಧರ್ಮಕಾರ್ಯವೆಂದು ಕರೆಯುವದು ವಾಡಿಕೆಯಲ್ಲಿದೆ. ಅದರಂತೆ ಆ ಸಂಬಂಧವಾದ ಗ್ರಂಥಗಳಿಗೆ ಧರ್ಮಗ್ರಂಥಗಳು ಎಂದೂ ಕರೆಯುತ್ತಾರೆ. ಹಿಂದೂ ದೇಶದ ಅನೇಕ ಮಠಗಳ ಧರ್ಮಗುರುಗಳೆಲ್ಲರೂ ಇದು ತಮ್ಮ ಮುಖ್ಯವಾದ ಕಾರ್ಯವೆಂದು ಭಾವಿಸಿ ಮಾಡಿದ್ದರೆ ಇಷ್ಟರೊಳಗೆ ಅನೇಕ ಗ್ರಂಥಗಳು ಅಚ್ಚಾಗುತ್ತಿದ್ದವು.

ದೇಶವು ದಾರಿದ್ರ್ಯಾವಸ್ಥೆಯಲ್ಲಿರುವ ಈ ಕಾಲದಲ್ಲಿ ಧರ್ಮಜ್ಞಾನ ಪ್ರಸಾರಣೆಯನ್ನು ಏಕೆ ಮಾಡಬೇಕೆಂದು ಕೆಲವರು ಆಕ್ಷೇಪಿಸಬಹುದು. ಒಬ್ಬ ಬಡವನೂ ತನ್ನ ಬಡತನವನ್ನು ನೀಗಿಸುವದಕ್ಕೆ ಮಹಾದೇವನಿಗೆ ಮೊರೆ ಇಡುವದಿಲ್ಲವೆ? ಶ್ರೀಮಂತನೂ ತನಗೆ ಬೇಕಾದ ಅನುಕೂಲಗಳನ್ನು ಕಲ್ಪಿಸೆಂದು ಮಹಾದೇವನಿಗೆ ಬೇಡುವದಿಲ್ಲವೇ? ಆದ್ದರಿಂದ ಎಲ್ಲಾ ಕಾರ್ಯಗಳಲ್ಲಿಯೂ ಕಾಲಗಳಲ್ಲಿಯೂ ಮಹಾದೇವನ ಕೃಪೆಯಿಂದಲೇ ಬೇಕಾದ ಅನುಕೂಲಗಳನ್ನು ಪಡೆಯಲು ಪ್ರಯತ್ನಿಸಬೇಕಾಗುವದು.

ಆ ಮಹಾದೇವನ ಕೃಪೆ ಇಲ್ಲದಿದ್ದರೆ ಮನುಷ್ಯನ ಎಂಥಾ ದೊಡ್ಡ ಪ್ರಯತ್ನವಾದರೂ ಕೆಡುತ್ತದೆ. ಆದ್ದರಿಂದ ಧರ್ಮವನ್ನು ಬಿಟ್ಟು ಲೌಕಿಕವನ್ನು ಮಾತ್ರ ಮಾಡಲಿಕ್ಕೆ ಹೋಧರೆ ಅದು ಉತ್ತಮವಾಗಲಾರ್ಧದು.

ಕೆಲವರು ಬಡವರು ತಮ್ಮ ಅತ್ಯಂತ ಕಡಿಮೆಯಾದ ಆದಾಯದಲ್ಲಿಯೂ ಕೂಡಾ ದೇವನಲ್ಲಿ ಭಕ್ತಿಯನ್ನು ತೋರಿಸುವದಕ್ಕಾಗಿ ಕರ್ಪೂರ, ಧೂಪ, ದೀಪ, ವಿಗ್ರಹಗಳಿಗೆ ಒಡವೆಯನ್ನು ಮಾಡಿಸೋಣ ಮುಂತಾದ ಕಾರ್ಯಗಳಿಗಾಗಿ ದ್ರವ್ಯವಿನಿಯೋಗ ಮಾಡಿ ದೇವನ ಕೃಪೆಯನ್ನು ಪಡೆಯಲು ಯತ್ನಿಸುತ್ತಾರೆ. ದೇವನ ಭಕ್ತಿಯನ್ನು ವೃದ್ಧಿಪಡಿಸುವ ಧರ್ಮಜ್ಞಾನ ಪ್ರಸಾರಣೆಗಾಗಿ ದ್ರವ್ಯವಿನಿಯೋಗ ಮಾಡುವದು ಹೆಚ್ಚಾದ ಫಲವನ್ನು ಕೊಡುವ ಭಕ್ತಿಯುಕಾರ್ಯವಾಗಿದೆ. ಜ್ಞಾನಕ್ಕೆ ಸಮಾನವಾದ ವಸ್ತುವಿಲ್ಲವೆಂದು ಶಾಸ್ತ್ರಗಳು ಹೇಳುತ್ತವೆ. ಧರ್ಮ ಗ್ರಂಥಗಳ ಪ್ರಸಾರವಾದರೂ ಇದೇ ಉದ್ದೇಶವನ್ನೇ ಸಾಧಿಸುತ್ತದೆ. ಆದ್ದರಿಂದ ಈಗಿನ ಉತ್ಪತ್ತಿಗೆ ತಕ್ಕಂತೆ ಕಡಿಮೆಯ ಪ್ರಮಾಣದಿಂದಲಾದರೂ ಈ ಕಾರ್ಯವನ್ನು ಮಾಡುತ್ತಾಹೋಗುವದು ಮೇಲು.

ಇಂಥಾ ಧಾರ್ಮಿಕಜ್ಞಾನಪ್ರಸಾರಣೆಯ ಕಾರ್ಯವನ್ನು ಧರ್ಮಗುರುಗಳೂ ಅನರಲ್ಲಧಿದ್ದರೆ ಜನರೂ ತಾವಾಗಿಯೇ ಮಾಡಿಕೊಳ್ಳಬೇಕಾಗಿರುವದರಿಂದ ಈ ಬಗ್ಗೆ ಇನ್ನುಮೇಲಾದರೂ ಪ್ರಬಲವಾದ ಪ್ರಯತ್ನವು ಮಾಡಲ್ಪಡುವಂತೆ ಆಗಲಿ. ಮತ್ತು ಚಿಕ್ಕ ಚಿಕ್ಕ ಪ್ರಯತ್ನಗಳೂ ನಡೆಯುವಂತಾಗಲಿ. ಹೇಗೆಂದರೆ ಸಾರ್ವಜನಿಕವಾಗಿ ದೊಡ್ಡ ನಿಧಿಯನ್ನು ಏರ್ಪಡಿಸಿ ಅವರ ಬಡ್ಡಿಯಹಣದ ಉಪಯೋಗದಿಂದ ಗ್ರಂಥಗಳು ನಿರಂತರವಾಗಿ ಹೊರಬೀಳುವಂತೆ ಏರ್ಪಡಿಸುವ ವಿಧಾನವು ಪ್ರಬಲ ಪ್ರಯತ್ನದಲ್ಲಿ ಸೇರುವ

ದು. ರಾಜರು ಶ್ರೀಮಂತರು ಮಠಾಧಿಕಾರಿಗಳು ಮುಂತಾದವರು ಅನೇಕ ಗ್ರಂಥಗಳನ್ನು ಮುದ್ರಿಸಲು ಏರ್ಪಡಿಸುವದೂ ದೊಡ್ಡ ಕಾರ್ಯವೇ. ಇದಲ್ಲದೆ ಒಬ್ಬೊಬ್ಬರೇ ತಮಗೆ ಸಾಧ್ಯವಿರುವಷ್ಟು ರೀತಿಯಲ್ಲಿ ಎಂದರೆ ಐದು ರೂಪಾಯಿ ಮಾತ್ರವಾದರೂ ಜ್ಞಾನಪ್ರಸಾರಣೆಗೆ ಕೊಡಬೇಕೆಂಬ ಧರ್ಮದ ಉದ್ದೇಶವನ್ನು ಇಟ್ಟುಕೊಂಡು ಅಷ್ಟರಲ್ಲಿಯೇ ಆಗಬಹುದಾದಷ್ಟು ಪ್ರತಿಗಳನ್ನು ನೀತಿಸಂಬಂಧ, ಧರ್ಮಸಂಬಂಧ, ಮತ ಸಂಬಂಧ, ಸುಜ್ಞಾನ ಸಂಬಂಧ, ದುರ್ನಡತೆಗಳನ್ನು ಬಿಡಿಸುವ ಸಂಬಂಧ, ಇಂಥವುಗಳಲ್ಲಿ ಯಾವುದಾದರೂ ಪರೋಪಕಾರದ ವಿಷಯವುಳ್ಳವುಗಳನ್ನು ಮುದ್ರಿಸಿ ಉಚಿತವಾಗಿ ಹಂಚುವದು ಅಥವಾ ಪೈ ಎರಡುಪೈ ಕ್ರಯಕ್ಕೆ ಮಾರುವದು ಈ ರೀತಿಯಲ್ಲಿ ಮಾಡುತ್ತಾ ಬಂದರೆ ಜನರು ಜಾಗ್ರತೆಗೊಂಡು ಸುಧಾರಣೆಯ ಸ್ಥಿತಿಗೆ ಬರಲಿಕ್ಕೆ ಅನುಕೂಲವಾಗುವದು. ಇವೇ ಮೊದಲಾದವುಗಳು ಚಿಕ್ಕ ಚಿಕ್ಕ ಪ್ರಯತ್ನದಲ್ಲಿ ಸೇರುವವು.

ಒಟ್ಟನಲ್ಲಿ ಜನರು ಮಾಡುವ ಧರ್ಮ ಕಾರ್ಯಗಳಾದ ಸಮಾರಾಧನೆ, ಉದ್ಯಾನಗಳನ್ನು ಏರ್ಪಡಿಸುವದು, ಕಟ್ಟಡ ಕಟ್ಟಿಸುವದು, ಶಾಂತಿ ಮಾಡಿಸುವದು, ಮುಂತಾದವುಗಳಂತೆ ಇದೂ ಒಂದು ಮುಖ್ಯವಾದ ಧರ್ಮಕಾರ್ಯವೆಂದು ಒಬ್ಬ ಬಡವನಿಗೂ ದೊಡ್ಡನಿಗೂ ಕೂಡಾ ತಿಳಿದು ಈ ಕಾರ್ಯಕ್ಕೆ ಅವನು ತನ್ನ ಮನಸ್ಸನ್ನು ಕೊಡಬೇಕು. ಹೀಗಾದಲ್ಲಿ ಧರ್ಮ, ನೀತಿ, ಮೊದಲಾದವುಗಳ ಜಾಗ್ರತೆಯು ದೇಶದಲ್ಲೆಲ್ಲಾ ವ್ಯಾಪಿಸಿ ಪ್ರತಿಯೊಬ್ಬನಿಗೂ ತನ್ನ ಕರ್ತವ್ಯದ ಪರಿಮಾಣವು ಚನ್ನಾಗಿ ತಿಳಿಯಲು ಅವಕಾಶವಾಗುವದು. ಹಾಗಲ್ಲದೆ ಈಗ ಯಾರು ಏನು ಹೇಳಿದರೂ ನಿಜಸ್ಥಿತಿಯ ವಿಚಾರ ಮಾಡುವ ಶಕ್ತಿ ಸಾಲದೆ ಎಲ್ಲದಕ್ಕೆ ಅಹುದೆಂದು ತಲೆ ಹಾಕುವ ಸ್ಥಿತಿಯು ಹಿಂದೂ ದೇಶದಲ್ಲಿ ಎಲ್ಲಿನವರೆಗೆ ವ್ಯಾಪಿಸಿರುವದೋ ಅಲ್ಲಿನವರೆಗೆ ಹಿಂದೂ ದೇಶವು ತನ್ನ ಪೂರ್ವದ ಪ್ರಖ್ಯಾತಿಯನ್ನು ಉಳಿಸಿಕೊಳ್ಳಲಾರದು.

ಈಗ ದೊರಕುವ ಕಾಗದದ ಮತ್ತು ಓಲೆಯ ಗರಿಯ ಕೈಬರಹದ ಪ್ರತಿಗಳಲ್ಲಿ ಕೋರಾವಾರದ ಬಸಪ್ಪನವರು ಖರ್ಚುಕೊಟ್ಟು ಬರೆಸಿದರು. ಕೋಡಿಹಳ್ಳಿ ಸಣ್ಣಪ್ಪಗೌಡರು ಖರ್ಚುಕೊಟ್ಟು ಬರೆಸಿದ್ದು ಹೀಗೆ ಬರೆದ ಮತ್ತು ಬರೆಯಿಸಿದವರ ಹೆಸರನ್ನು ತೋರಿಸುವಪ್ರತಿಗಳನ್ನು

ಅನೇಕವಾಗಿ ನೋಡಬಹುದು. ವಿಜಯನಗರದಲ್ಲಿ ಜಕ್ಕಣಾರ್ಯನೆಂಬ ಒಬ್ಬ ದಂಡನಾಯಕನು ಸುಮಾರು ೧೪೩೦ ರಲ್ಲಿ ಇದ್ದನೆಂದೂ ಈತನು ಗ್ರಂಥಗಳ ರಚನೆಗಾಗಿ ಅಪರಿಮಿತವಾದ ದ್ರವ್ಯವನ್ನು ವೆಚ್ಚಮಾಡಿದಂತೆ ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತ ಪುರಾಣ [ಸುಮಾರು ೧೫೩೦ರಲ್ಲಿ ರಚನೆ]ದಲ್ಲಿ ಬರೆದಿರುವದಾಗಿಯೂ ಕವಿಚರಿತ್ರಕಾರರು ಬರೆದಿರುತ್ತಾರೆ. [ದ್ವಿತೀಯ ಸಂಪುಟ ಪುಟ ೫೭ ನೋಡಿರಿ.] ಇತ್ತೀಚಿಗೆ ಶ್ರೀಮಂತ ರಾವ್‌ಸಾಹೇಬ್ ವಾರದ ಮಲ್ಲಪ್ಪನವರು ಮಹಾರಾಷ್ಟ್ರ ಭಾಷೆಯಲ್ಲಿ ಗ್ರಂಥಗಳನ್ನು ಮುದ್ರಿಸುವದಕ್ಕೆ ವಿಶೇಷ ಶ್ರದ್ಧೆಯನ್ನು ತೆಗೆದುಕೊಂಡು ಹಣವನ್ನು ಖರ್ಚುಮಾಡಿ ತಮ್ಮ ಕೀರ್ತಿಯನ್ನು ಉಳಿಸಿಕೊಳ್ಳಲಿಲ್ಲವೇ! ಆ ಗ್ರಂಥಗಳ ಉಪಯೋಗವಿರುವವರೆವಿಗೂ ಅವರ ಹೆಸರು [ಕೀರ್ತಿಯು] ಇರುವದಲ್ಲವೇ! ರಾ. ಸಾ. ಪಿ. ಜಿ. ಹಳಕಟ್ಟಿಯವರು ಮಾಡುವ ಕಾರ್ಯವೂ ಇಂಥಾದ್ದೇ ಅಲ್ಲವೇ! ಇಂಥಾ ಮಹನೀಯರ ಅನುಕರಣವನ್ನು ಸಮಾಜದವರು ಬೇಗನೆ ಏಕೆ ಮಾಡಬಾರದು? ಕನ್ನಡದ ಶ್ರೀಮಂತರು ಏಕೆ ಮುಂದೆ ಬರಬಾರದು? ಆಲಸ್ಯ ಮಾಡುವದರಲ್ಲಿ ಯಾವ ಪ್ರಯೋಜನವಿದೆ ಎಂದು ಅವರು ಯೋಚಿಸುವರು? ಧರ್ಮಗ್ರಂಥಗಳ ಉದ್ಧಾರವು ಕಾಲಕಾಲಕ್ಕೆ ತಕ್ಕ ಹಾಗೆ ನಡೆದಲ್ಲಿ ಸದ್ಧರ್ಮವು ಶಾಶ್ವತವಾಗಿ ನಡೆಯಲು ಅವಕಾಶವಾಗುತ್ತದೆ. ಈಗ ಎಷ್ಟೋಜನರು ಧರ್ಮದ ನವೀನತ್ವದಲ್ಲಿ ಪ್ರವೇಶಮಾಡಬೇಕೆಂದು ಇಷ್ಟ ಪಡುತ್ತಾರೆ ಆದರೆ ಪೂರ್ವದ ಧರ್ಮದ ತಳಹದಿಯು ಯಾವ ರೀತಿ ಇರುವದೆಂಬುದನ್ನು ಯೋಚಿಸದೆ ಮನಕ್ಕೆ ಬಂದರೀತಿಯಲ್ಲಿ ವರ್ತಿಸುತ್ತಾರೆ. ಪೂರ್ವವಿಷಯಗಳನ್ನು ಈಗ ಅವಶ್ಯಕವಾದವುಗಳೊಡನೆ ಹೋಲಿಸಿ ಸದ್ಧರ್ಮವನ್ನು ಅನುಸರಿಸಲಿಕ್ಕೆ ಯತ್ನ ಮಾಡಿದರೆ ಜನರಿಗೆ ಕಲ್ಯಾಣವಾಗುತ್ತದೆ. ಆದ್ದರಿಂದ ಮೇಲೆ ಕಂಡಂತೆ ಜ್ಞಾನ ಪ್ರಸಾರಕರಾದಂಥವರ ಅನುಕರಣವನ್ನು ಮಾಡುವ ಪ್ರಯತ್ನ ನಡೆಸುವ ಬಗ್ಗೆ ಮಹಾದೇವನು ಜನರಲ್ಲಿ ಪ್ರೇರಣೆಯನ್ನೂ ಮತ್ತು ಈ ಸಂಬಂಧದಲ್ಲಿ ಮಾಡುವ ಕಾರ್ಯಗಳಿಗೆ ಅನುಕೂಲವಾದ ಸಹಾಯವನ್ನು ಒದಗಿಸುವ ಕೃಪೆಯನ್ನೂ ಮಾಡಲಿ.



ಶ್ರೀ ಗುರು ಬಸವಲಿಂಗಾಯನಮಃ

# ಅಷ್ಟಾವರಣ ವಾರ್ಧಿಕ.



## ಮೈಲಾರದ ಬಸವಲಿಂಗ ಶರಣರು ರಚಿಸಿದ್ದು.



ಪರತತ್ವ ಮೂರ್ತಿಯಷ್ಟಾವರಣ ರೂಪದಿಂ ।
ಧರೆಯೊಳಗೆ ಭಕ್ತರಿಷ್ಟಾರ್ಥಕೋಸುಗ ಬಂದು ।
ಸ್ಮರಣೆ ನೋಟವೀಳನಯುಜನಕತಿಮೆಚ್ಚಿ ಪೊರೆವುದೆಂತೆನೆ ಕೇಳು ಪೇಳ್ವೆ ॥ಪ॥

ಭವಿತನವ ಕಳೆದು ಭಕ್ತನಮಾಡಿ ತನುತ್ರಯಕೆ ।
ತ್ರಿವಿಧದೀಕ್ಷೆಯನಿತ್ತು ತ್ರಿವಿಧ ಗುಣಗಳ ಕಳೆದು ।
ತ್ರಿವಿಧತನುವಿಗೆ ತ್ರಿವಿಧಲಿಂಗವುಂ ನೆಲೆಗೊಳಿಸಿ ತ್ರಿವಿಧವಾಚಾರವರುಪಿ ॥
ತ್ರಿವಿಧ ಪೂಜೆಯ ಪೇಳಿ ತ್ರಿವಿಧಾರ್ಪಣವ ತಿಳುಹಿ ।
ತ್ರಿವಿಧ ಶೇಷವನುಂಬ ತ್ರಿವಿಧ ಸುಖಸಮರತಿಯು ।
ನವಿರತಂ ದಯೆಗೆಯ್ದು ಭವಗೇಡಿ ಎನಿಸಿದ್ದೈ ಅವಿರಳನೆ ಗುರುನಮಸ್ತೇ ॥೧॥

ಆದಿಯೊಳು ಶೂನ್ಯ ಬ್ರಹ್ಮವು ತನ್ನಲೀಲೆಯೊಳು ।
ಮೇದಿನಿಯ ಸೃಜಿಸಲೋಸುಗವಾಗಿ ಮಂತ್ರಮುಂ ।
ಆದರದಿ ನೆನೆಯಲ್ಕೆ ಆಮಂತ್ರಗರ್ಭದಿಂದಾದ ಮಹಲಿಂಗ ನಿಮ್ಮ ॥
ಪಾದದಿಂದಖಿಳ ಭುವನಂಗಳಾದುವದರೊಳ ।
ಗಾದ ಪ್ರಾಣಿಗಳೊಳಗೆ ನಿಮ್ಮ ಜಾನಿಸಿದರ್ಗೆ ।
ವೇದಪದಗೊಡುವೆ ಮರೆದರ್ಗೆ ನೀನತಿದೂರವಾದಲಿಂಗವೆ ಪಾಹಿಮಾಂ ॥೨॥

ಪರತತ್ವ ಜಂಗಮವೆ ಪರಿಪೂರ್ಣ ಜಂಗಮವೆ ।
ಸ್ಥಿರವಪ್ಪ ಜಂಗಮವೆ ಪರಮಕಳೆ ಜಂಗಮವೆ ।
ಗುರುಲಿಂಗವೆರಡಕ್ಕೆ ಹರಣ ಜಂಗಮರಾಯ ಧರೆಯೊಳಗೆ ಭೂರುದ್ರನೇ ॥
ನರಸುರಾದಿಗಳರಸಿ ಕಾಣದಿಹ ಜಂಗಮವೆ ।
ಅರಿವುಳ್ಳ ಭಕ್ತರಂತರಸಾಕ್ಷಿ ಜಂಗಮವೆ ।
ಶರಣಗಣತಿಂಥಿಣಿಯ ಹರುಷದಿಂದನವರತ ಪೊರೆವಜಂಗಮ ಪಾಹಿಮಾಂ

ಗುರುದೇವನಂಘ್ರಿಜಲ ಪರಮಲಿಂಗೋದಕಂ ।
ಚರಮೂರ್ತಿ ಚರಣದಿಂದುದಿಪ ತೀರ್ಥಂಬಳಿಕ ।
ಸ್ಪರಿಶನೋದಕವು ವರಧಾರೆಜಲವಾಪ್ಯಾಯನೋದಕಂ ಹಸ್ತೋದಕಂ ॥
ಪರಿಣಾಮ ಜಲವು ನಿರ್ನಾಮ ಸತ್ಯೋದಕಂ ।
ನಿರುತದಿಂ ಪರಶಿವಾನಂದವೇ ಧರೆಗುದಿಸಿ ।
ಮೆರೆವಂಗದೊಳುಮೋಕ್ಷದಿರವಾಗಿ ಭಕ್ತರಂಪೊರೆವ ತೀರ್ಥವೆಪಾಹಿಮಾಂ

ಗುರುವಿನಿಂದುದಿಸಿ ಶುದ್ಧಪ್ರಸಾಧವೆಯಾದೆ ।
ಚರಲಿಂಗದಿಂದೊಗೆದು ಸಿದ್ಧಶೇಷವೆಯಾದೆ ।
ಚರಮೂರ್ತಿಯಿಂದ ಪ್ರಸಿದ್ಧ ಪ್ರಸಾದವೆಂದಿರದೆ ನಾಮವತಾಳಿದೆ ।
ಪರಿಯಾಯ ನಾಮಂಗಳೇಕಾದಶವನಾಂತೆ ।
ಹರುಷದಿಂ ಸವಿದರ್ಗೆ ಪರಮ ಮೋಕ್ಷವನಿತ್ತೆ ।
ಜರಿದರ್ಗೆಹಿರಿದುಪಾತಕವಿತ್ತೆ ಶ್ರೀಮಹಾಗುರು ಹಸಾದವೆಪಾಹಿಮಾಂ॥೫

ಶಿಪಿವಿಷ್ಟನಂಗಭವಿ ಭಸಿತವಾಗಿಯೆ ತಾನು ।
ಗುಪಿತದಿಂದಿರೆ ಪಂಚಋಷಿಗಳಾಭರ್ಗನಿಂ ।
ದುಪದೇಶವಡೆವಾಗ ಪಂಚಧೇನುವ ಪಡೆದು ಪಂಚ ಭಸಿತವ ನಿರ್ಮಿಸಿ ॥
ಸುಪವಿತ್ರರೆನಿಸಿದರು ನಿಚ್ಚ ಧಾರಣದಿಂದ ।
ಜಪತಪವ ಮಾಡೆ ಯಜ್ಞಕ್ಕೆ ಕಾರಣವಾದೆ ।
ಅಪಸ್ಮಾರಮುಂತಾದ ಗ್ರಹಪಾತಕಂನಾಸ್ತಿವಿಪುಳಭಸಿತವೆಪಾಹಿಮಾಂ॥೬

ಆದಿಯೊಳು ಪರಮೇಶನಂಶವೇ ರುದ್ರಾಕ್ಷಿ।
ಯಾದುದೆಂದುಪನಿಷದ್ವಾಕ್ಯಾರ್ಥಮುಂಟದುವೆ ।
ಆದಯಾಮೂರ್ತಿತ್ರಿಪುರವನುರುಪುವಾಗ ನೇತ್ರೋದಕದಿಪುಟ್ಟರುತಿರೆ ॥
ಆದಿಯುಜ ಮುಂತಾದ ದೇವ ದಾನವ ಋಷಿಗ।
ಳಾದರಿಸಿ ನೆನೆದು ಈಕ್ಷಿಸಿ ಜಪಿಸಿ ಧರಿಸಲ್ಕೆ ।
ಆದುದಿಷ್ಟಾರ್ಥ ರುದ್ರಾಕ್ಷಿ ನಿಮ್ಮಿಂದಲಾನೋದಿ ನಮಿಸುವೆ ಸಂತತಂ ॥೭।

ಹರನಾಮವೆನಿಪ ಪರತರ ಷಡಕ್ಷರ ನಿಮ್ಮ ।
ಸ್ಮರಣೆಯನು ನಂಬಿ ಹಾಡಿದ ಶರಣ ಸಂತತಿಯು ।
ಹರನ ಸನ್ನಿಧಿಯೊಳಗೆ ಪರಮಮೋಕ್ಷವನಿತ್ತು ಪೊರೆವೆ ಎಂದವು ಶೃತಿಗಳು
ಹರುಷದಿಂ ಶಿವಭಕ್ತ ಋಷಿ ಸಮೂಹಗಳೆಲ್ಲ ।
ಅರಿದು ಜಪಿಸಲು ಬೇಡಿದಿಷ್ಟಾರ್ಥ ಸಿದ್ಧಿಗಳ ।
ದೊರೆಕೊಳಿಸಿಜನನಮರಣಗಳಳಿದುಪಾಲಿಸುವೆಕರುಣಿಮಂತ್ರವೆಪಾಹಿ
ಮಾಂ॥೮॥

ಗುರುವರ್ಯನಂ ಲಿಂಗದೇವನಂ ಚರಮೂರ್ತಿ ।
ಚರಣಜಲ ವರ ಸುಪ್ರಸಾದ ಪರತರ ಭಸಿತ ।
ಚಿರದ ರುದ್ರಾಕ್ಷಿ ಮಂತ್ರಂಗಳೆಂಬೆಂಟನಾದರದಿಂದಲಂಗವಾಗಿ ॥
ಧರಿಸಿರ್ಪ ಚನ್ನವೀರೇಶ ನಂಘ್ರಿಗಳೆನ್ನ ।
ಕರ ಮನ ಸುಭಾವ ನೇತ್ರದೊಳು ಪೂರಿತವಾಗಿ ।
ಸರಸಿಜಾಪ್ತನಕೋಟಿ ತೇಜದಿಂದೊಳಹೊರಗೆ ಮಿನುಗುತಿರ್ಪುವು ಸಂತತಂ

ಇಂತು — ಅಷ್ಟಾವರಣ ವಾರ್ಧಿಕಂ

— — —

ಪಲ್ಲವಿ. ಈಳನ — ಸ್ತೋತ್ರ. ಯಜನ — ಪೂಜೆ.
ಪದ್ಯ. ೧. ತ್ರಿವಿಧಾರ್ಪಣ — ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ.
,, ೨. ಶೂನ್ಯಬ್ರಹ್ಮ — ಶೂನ್ಯಲಿಂಗ. ಜಾನಿಸಿದರ್ಗೆ — ಧ್ಯಾನಮಾಡಿದವರಿಗೆ. ಪಾಹಿ—ರಕ್ಷಿಸು. ವೇದಪದ—ಸಾಲೋಕ್ಯಮೊದಲಾದ ನಾಲ್ಕುಪದವಿಗಳು.
೩. ಹರಣ — ಪ್ರಾಣ. ಅಂತರಸಾಕ್ಷಿ — ಮನಸ್ಸಿನಲ್ಲಿ ನೆಲೆಗೊಂಡಿರುವವನು. ತಿಂಥಿಣಿ — ಸಮೂಹ.
೪ ಇಲ್ಲಿ ಹತ್ತು ವಿಧದ ಪಾದೋದಕದ ಹೆಸರುಗಳು ಹೇಳಲ್ಪಟ್ಟಿವೆ.
೫. ಪರಿಯಾಯನಾಮಂಗಳು — ಒಂದೇ ತೆರದ ಹೆಸರುಗಳು. ಹಸಾದ — ಪ್ರಸಾದ
೬. ಶಿಪಿವಿಷ್ಟ — ಶಿವ. ಅಂಗಛವಿ — ದೇಹದಕಾಂತಿ. ಪಂಚಋಷಿಗಳು— ಕೌಶಿಕ, ಕಶ್ಯಪ, ಭರದ್ವಾಜ, ಅತ್ರಿ, ಗೌತಮ. ಭರ್ಗ—ಶಿವ.
೭. ಉಪನಿಷತ್ತು — ವೇದದ ಒಂದುಭಾಗ.
೮. ಶೃತಿ — ವೇದ.
೯. ಸರಸಿಜಾಪ್ತ — ಸೂರ್ಯ.

ಶ್ರೀ ಗುರು ಬಸವಲಿಂಗಾಯನಮಃ

# ಅಷ್ಟಾವರಣ ವಾರ್ಧಿಕ

---

ಶ್ರೀ ಗುರುವೆ ಚಿನ್ನಾದ ಚಿದ್ಬಿಂದು ಚಿತ್ಕಳೆಯು ।
ಶ್ರೀ ಗುರುವೆ ನಾಲ್ಕು ವೇದಕತೀತನೆನಿಸುವನು ।
ಶ್ರೀಗುರುವೆ ಸರ್ವಸೂತ್ರಾಧಾರಿ ತ್ರೈಜಗಕೆ ಶ್ರೀಗುರುವೆಯಧಿಕ ನೋಡಾ।
ಶ್ರೀ ಗುರುವ, ಮೂರ್ತಿಯಾ ದರುಶನಂ।
ಸ್ಪರುಶನಂ ಶ್ರೀಗುರುವಿನಾಧ್ಯಾನ ಸರ್ವ ಕಂಟಕ ಹರಂ ।
ಶ್ರೀಗುರುವಿನಾ ವಚನ ಸರ್ವ ಕಾರಣಸಿದ್ಧಿ ಶ್ರೀಗುರುವೆಲಿಂಗಸಂಗಾ ॥೧॥

ಗುರು ದರುಶನವ ಬಿಡುತಲನ್ಯ ಭವಿ ಸಂಗದಿಂ ।
ಗುರುಧ್ಯಾನಮುಂ ಮರೆದನ್ಯ ಸಹವಾಸದಿಂ ।
ಗುರು ವಚನವನು ಮೀರಿ ಗರ್ವದಿಂ ತಿರುಗುವರು ಪರಮದ್ರೋಹಿಗಳಪ್ಪರು
ಗುರುಪಾದ ನಂಬಿದನು ಗುರುಭಕ್ತಿಯಾಂಡಾರ್‍ಯ ।
ಗುರುಪಾದ ನಂಬಿದನು ಗೊಗ್ಗಭಕ್ತನು ತಾನು ।
ಗುರುವಾಕ್ಯ ನಡೆಸಿದನು ಉರಿಲಿಂಗಪೆದ್ದಯ್ಯ ಗುರುವಾಳು ನನ್ನಯ್ಯನು ॥೨॥

ಲಿಂಗವನು ಮರೆದು ಕುಲ ಛಲಕಾಗಿ ತಿರುಗುತಲಿ।
ಲಿಂಗ ಪೂಜೆಯ ಬಿಡುತಲನ್ಯ ದೇವರ ಬೇಡಿ ।
ಲಿಂಗಕ್ಕೆ ಕೊಡದೆತನ್ನಂಗದಿಚ್ಛೆಯಿಂತಿಂಬಾಮುಂಗನೇಂ ಬಲ್ಲನು ॥
ಲಿಂಗವನು ನಂಬಿದನು ಕಲಿಗಣರ ನಾಥ ತಾಂ।
ಲಿಂಗವನು ನಂಬಿದನು ಶರಣ ನುಲಿಚಂದಯ್ಯ ।
ಲಿಂಗವನು ನಂಬಿದೆನೆಲೇಶ್ವರದ ಕೇತಯ್ಯ ಲಿಂಗಿ ಗೊಲ್ಲಳ ದೇವನು

ಜಂಗಮವ ಜರಿದನ್ಯ ತಿಥಿವಾರ ನೇಮದಿಂ ।
ಜಂಗಮವು ಜಂಗಿಟ್ಟು ಬಂದೊಡಂ ನೀಡದಲೆ ।
ಜಂಗುಳಿಯ ದನದಂತೆ ಹಲವುದೇಗುಲಪೊಕ್ಕು ನೆಲೆಯಗಾಣದೆ ಪೋದರು॥
ಜಂಗಮಕೆ ನೀಡಿದನು ಸಿಂಧುಬಲ್ಲಳರಾಯ ।
ಜಂಗಮಕೆ ಮಾಡಿದನು ಮೋಳಿಗೆಯ ಮಾರಯ್ಯ ।
ಜಂಗಮಕೆನೀಡಿದರು ಸಿರಿಯಾಳ ಚಂಗಳರು ಜಂಗಮವೆ ಶಿವನೆನುತಲಿ॥೪॥

ವೀಭೂತಿಯನು ಮರೆದು ಕರ್ಮದೊಳು ತೊಳಲುವರು।
ವೀಭೂತಿಯನು ಧರಿಸಲೊಲ್ಲದೆಯೆ ಪಾಪಿಗಳು।
ವಿಭೂತಿಯ ಬಿಟ್ಟಿಚ್ಚರಿಲ್ಲದಲೆ ತಿರುಗುವರು ಹಿರಿಯಭೂತಗಳಪ್ಪರು ॥
ವೀಭೂತಿಯಂ ನಂಬಿ ಧರಿಸಿದನು ಗುಂಡಯ್ಯ ।
ವೀಭೂತಿಯಿಂ ಗಟ್ಟಿವಾಳಯ್ಯ ತಾಂ ಶರಣ ।
ವೀಭೂತಿಯಂ ನಿತ್ಯ ಸರ್ವಾಂಗದೊಳು ಧರಿಸೆ ಭೂತರಾಕ್ಷಸ ನಿಲ್ಲವು ॥೫॥

ರುದ್ರಾಕ್ಷಿಯಂ ಜರಿದು ಛಾಯದುಡಿಗೆಯ ತೊಟ್ಟು ।
ರುದ್ರಾಕ್ಷಿಯಂ ಮರೆದು ಚಿನ್ನಚಿಕುರವನಿಟ್ಟು ।
ರುದ್ರಾಕ್ಷಿಯಂ ಧರಿಸಲೊಲ್ಲದಾ ಭ್ರಷ್ಟ ಮನುಜಗೆ ರುದ್ರಸಿದ್ಧಿಯಹುದೇ ॥
ರುದ್ರಾಕ್ಷಿ ನಂಬಿ ಧರಿಸಿದನು ಚಾರಮರಾಯ ।
ರುದ್ರಾಕ್ಷಿಯಿಂದೆ ಗಾರ್ದಭ ಶುನಿಗೆ ಕೈಲಾಸ ।
ರುದ್ರಾಕ್ಷಿಯಂ ನಂಬಿ ಧರಿಸಿದನು ಮಾನಂದಿ ಶಿವನೊಡನೆ ಬೆರಸಿರ್ದನು ।೬॥

ಮಂತ್ರವನು ಬಿಡುತಲಾ ಯಂತ್ರವನೆ ಕಟ್ಟುವರು ।
ಮಂತ್ರವನು ಜಪಿಸುತಂ ಸಿದ್ಧಿಸದೆ ಹಲವರಿಂ ।
ಮಂತ್ರಿಸುತ, ಮುಖದಮೇಲುಗುಳಿಸಿಕೊಳುತಿಹರೇಂ ಶಿವಭಕ್ತರೇ ॥
ಮಂತ್ರವನೆ ನಂಬಿದರು ಮಂತ್ರಜಾತಯ್ಯಗಳು ।
ಮಂತ್ರವನು ನಂಬಿದರು ಅಜಗಣ್ಣ ತಂದೆಗಳು ।
ಮಂತ್ರದಿಂ ಯಮನ ಪುರದೊಳಗಿದ್ದ ಜೀವಿಗಳು ಶಿವನ ಬಳಿ ಸಾರ್ದರಲ್ತೆ॥೭॥

ಪಾದತೀರ್ಥವನು ಜರಿದನ್ಯ ತೀರ್ಥಕೆ ಪೋಗಿ ।
ಬಾಧೆಯಮಗೊಂಡದೊಳು ಮುಳುಮುಳುಗಿ ಏಳುವರು ।
ಪೋದುದೆಮ್ಮಯಪಾಪ ಕರ್ಮಫಲವೆಂದುತಿಳಿದೊಡೆಯಾತ್ಮಶುದ್ಧಿಯಹುದೇ
ಪಾದುದಕದಿಂದ ಶೇಷಗೆ ಮುಕ್ತಿ ಯಾಯಿತ್ತು ।
ಪಾದುದಕದಿಂದ ಚೋರಗೆ ಮುಕ್ತಿ ದೊರಕಿತ್ತು ।
ಪಾದತೀರ್ಥವೆ ಸರ್ವತೀರ್ಥಕ್ಕೆ ಮಿಗಿಲೆನಿಪುದಾತ್ಮತೀರ್ಥವೆ ಸತ್ಯವು॥೮॥

ಪ್ರಸಾದವೆ ಮದ್ದು ಶಾಂಭವದ ರೋಗಂಗಳಿಗೆ ।
ಪ್ರಸಾದವೆ ಸಿದ್ಧಿಶಾಂ ಪಲವು ಮೂಲಿಕೆಗಳಿಗೆ ।
ಪ್ರಸಾದವ ಬಿಡುತಲನ್ನಾದಿಯನು ತಿಂಬಕುಲಗೇಡಿಗೆಲ್ಲಿಯದು ಮುಕುತಿ।
ಪ್ರಸಾದವ ನಂಬಿದನು ಬಸವದಂಡಾಧೀಶ ।
ಪ್ರಸಾದವ ನಂಬಿದನು ಮರುಳು ಶಂಕರದೇವ ।
ಪ್ರಸಾದವನಂಬಿದಪು ಬಿಬ್ಬಿಬಾಚಯ್ಯಗಳು ಪ್ರಸಾದವೆ ಪ್ರಮಥಪದವು॥೯॥

ಅಷ್ಟಾವರಣ ವಾರ್ಧಿಕವಸೋದಿ ಕೇಳಿದ।
ಗ್ರಿಷ್ಟಾರ್ಥ ದೊರೆಕೊಂಬುದೈಶ್ವರ್ಯ ।
ಸಿಷ್ಠೆ ಶಿವಭಕ್ತರಿಗೆ ಯುಕ್ತರಿಗೆ ಶ್ರೇಷ್ಠರಿಗೆ ಸಾಧಕರಿಗೆ ॥
ಇಷ್ಟ ಲಿಂಗದೊಳು ಸಕಲ ನಿಷ್ಕಲಗಳನರಿತು ।
ಶ್ರೇಷ್ಠರೆನಿಸುವದು ಷಟ್‌ಸ್ಥಲದ ಮಾರ್ಗದಿಸಿಂದು ।
ಕಷ್ಟತನುವಂ ಕಳೆದು ಗುರುದೀಕ್ಷೆಯಂ ಪಡೆದು ವೀರಶೈವವ ತಿಳಿವರು ।೧೦॥

ಪದ್ಯ. ೧. ಚಿನ್ನಾದ ಚಿದ್ಬಿಂದು ಚಿತ್ಕಳೆ – ಈ ಹೆಸರುಳ್ಳ ಮಂತ್ರದಸ್ವರೂಪನು. ನಾಲ್ಕುವೇದ – ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ. ದರುಶನ – ನೋಡುವದು. ಸ್ಪರುಶನ – ಮುಟ್ಟುವದು. ಕಂಟಕ – ದೋಷ.
„ ೩. ಗುರುವ – ಗುರುವಿನ. ಆಳು – ಸೇವಕ.
೩. ಅಂಗದಿಚ್ಛೆ– ದೇಹದ ಅಪೇಕ್ಷೆ. ಛಲ – ಹಟ.
೪. ಅನ್ಯತಿಥಿವಾರನೇಮ – ಮಂಗಳವಾರ ಹುಣ್ಣಿವೆ ಅಮಾವಾಸ್ಯೆ ಮೊದಲಾದ ನೇಮಗಳು. ಜಂಗುಳಿಯ.ದನ — ಊರ ದನದ ಹಿಂಡು. ಜಂಗಿಟ್ಟು — ಪಾದದಲ್ಲಿ ಜಂಗು ಧರಿಸಿ. ದೇಗುಲ — ದೇವಸ್ಥಾನ.
೬. ಜರಿದು — ತಿರಸ್ಕಾರಮಾಡಿ. ಛಾಯಿಪುಡಿಗೆ — ಬಣ್ಣದ ವಸ್ತ್ರ. ಚಿಕುರ — ಒಡವೆ, ಅಲಂಕಾರ. ರುದ್ರಸಿದ್ಧಿ — ಶಿವನ ಸ್ವರೂಪವನ್ನು ಪಡೆಯುವದು. ಮಾನಂದಿ ಎಂಬಲ್ಲಿ ಮಾನಂಬಿ ಎಂದೂ ಇದೆ.
೭. ಯಂತ್ರ — ತಾಯಿತಮೊದಲಾದವು.
೮. ಪಾದತೀರ್ಥ — ಪಾದೋದಕ. ಅನ್ಯತೀರ್ಥ — ಹೆಸರಾದ ಕ್ಷೇತ್ರದಲ್ಲಿರ'ವ ನೀರು. ಗಂಗಾನದಿ ಮೊದಲಾದದ್ದು ಪಾದುದಕ — ಪಾದೋದಕ. ಶೇಷಗೆ—ಸರ್ಪನಿಗೆ. ಆತ್ಮತೀರ್ಥ — ಪಾದೋದಕ.
೯. ಮದ್ದು — ಔಷಧಿ. ಪ್ರಸಾದದಿಂದ ಸುಜ್ಞಾನವೂ ಹುಟ್ಟುತ್ತದೆ.
೧೦. ಇಷ್ಟಾರ್ಥ—ಬೇಡಿದ್ದು ನಿಷ್ಠೆ – ಭಕ್ತಿಯನ್ನು ಬಲವಾಗಿ ಇರಿಸುವದು ಕಷ್ಟತನು — ತಿರುಗಿ ಹುಟ್ಟಿಬರುವ ದೇಹ

ವೀರಶೈವರಿಗೆ ಅಷ್ಟಾವರಣವು ಬಹಳ ಮುಖ್ಯವಾದದ್ದು. ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ, ಈ ಎಂಟು (ಅಷ್ಟ) ಆವರಣಗಳಾಗಿವೆ. ಆವರಣಗಳು ಎಂದರೆ ಸುತ್ತಿರುವವುಗಳು ಎಂಬರ್ಥ. ವೀರಶೈವನನ್ನು ಇವು ಸುತ್ತಿಕೊಂಡು (ಆವರಿಸಿಕೊಂಡು=ವ್ಯಾಪಿಸಿಕೊಂಡು) ಇರುವದರಿಂದ ಇವಕ್ಕೆ ಅಷ್ಟಾವರಣ ಎಂಬ ಹೆಸರು ಬಂದಿದೆ. ಈ ಎಂಟನ್ನು ವೀರಶೈವನು ನಿತ್ಯವೂ ಬಿಡದೆ ಇರಬೇಕು. ಎಲ್ಲರಿಗೂ ಒಬ್ಬದೇವನು ಉಂಟು. ವೀರಶೈವರಿಗೆ ಎಂಟು ಉಂಟೇನು? ಮತ್ತು ಶಿವಾದ್ವೈತ ಎಂದರೆ ಒಬ್ಬ ಶಿವನ ಹೊರತು ಇನ್ನಾವದೂ ಇಲ್ಲ ಎಂಬ ಮೂಲ ತತ್ವವನ್ನು ಉಳ್ಳ ವೀರಶೈವರಿಗೆ ನಾನಾ ವಸ್ತುಗಳಾದ ಈ ಎಂಟು ಹೇಗೆ ಪೂಜ್ಯವಸ್ತುಗಳು? ಎಂಬುದಾಗಿ ಅನೇಕರು ಯೋಚಿಸಬಹುದು. ಈ ಅಷ್ಟಾವರಣ ಪದ್ಯಗಳನ್ನು ಓದುವವರಿಗೆ ಆ ಯೋಚನೆಯು ದೂರವಾಗುತ್ತದೆ. ಚನ್ನವೀರೇಶ ಎಂಬ ಅಂಕಿತವಿರುವದರ ದೆಸೆಯಿಂದ ಲಿಂಗನಾಯಕನ ಹಳ್ಳಿಯಲ್ಲಿ ಇದ್ದ ಚನ್ನವೀರಸ್ವಾಮಿಗಳವರ ಶಿಷ್ಯರಾದ ಮೈಲಾರದ ಬಸವಲಿಂಗ ಶರಣರವರು ರಚಿಸಿದ್ದೆಂದು ಸ್ಪಷ್ಟವಾಗಿ ತೋರುವ ಅಷ್ಟಾವರಣ ಪದ್ಯಗಳಲ್ಲಿ ಪರತತ್ವಮೂರ್ತಿಯೇ ಅಷ್ಟಾವರಣ ರೂಪಿನಿಂದ ಬಂದಿದ್ದಾನೆ ಎಂದು ಹೇಳಿರುವದರಿಂದ ಒಬ್ಬ ಮೂರ್ತಿಯೇ ಎಂಟು ಆಕಾರವಾಗಿ ಈ ಅಷ್ಟಾವರಣಗಳಾಗಿವೆ ಎಂದು ತಿಳಿಯಬೇಕು. ಕೈಲಾಸದಲ್ಲಿ ಪಾರ್ವತಿ ಸಮೇತನಾಗಿ ಪರಮೇಶ್ವರನು ಇದ್ದನೆಂದೂ ಆತನೇ ಈ ಅಷ್ಟಾವರಣವನ್ನು ಬೋಧಿಸಿದನೆಂದೂ ನಮಗೆ ಆಗಮಗಳು ಘಂಟೆಯ ಕೂಗನ್ನು ಮಾಡಿ ಹೇಳಿರುವದರಿಂದ ಆ ಶಿವನಿಂದ ಈ ಆಚಾರವು ಬಂದು ಶಿವಾಚಾರ ಎನಿಸಿಕೊಂಡಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಶಿವನು ಹೇಮಕೂಟ=ಹೇಮವಾಲಯ (ಕನಕಗಿರಿ = ಈಗಿನ ಹೆಸರು ಹಿಮಾಲಯ)ದಲ್ಲಿ ಇದ್ದವನು. ಆತನ ದೇಹವು ಬೆಳ್ಳಗೆ ಇತ್ತಾದ್ದರಿಂದ "ಸ್ಫಟಿಕಮಣಿ (ಚಂದ್ರಕಾಂತಶಿಲೆ = **Marble**) ನಿಭಂ" ಎಂದು ಆಗಮಗಳಲ್ಲಿ ಹೇಳಿರುವದರಿಂದ ಆತನ ಅಂಗದ ಕಾಂತಿಯೇ ಭಸ್ಮ ರೂಪವಾಗಿ ಬಂದಿದೆ. ಆದ್ದರಿಂದಲೇ ಶಿವನು ಭಸ್ಮವನ್ನು ಧರಿಸಿದವನೆಂದು ತಿಳಿಯಬಹುದು. ಆ ಪರಮೇಶ್ವರನ ಅಂಶವೇ ರುದ್ರಾಕ್ಷಿ ಎಂದೂ ಆ ಪರಮೇಶ್ವರನ ಹೆಸರೇ ಷಡಕ್ಷರ ಮಂತ್ರವೆಂದೂ ಆ ಪದ್ಯಗಳಲ್ಲಿಯೇ ಹೇಳಿರುವದರಿಂದ ಈ ಮೂರೂ ಶಿವನೆಂಬ ಒಬ್ಬ ಸಾಕಾರ ಮೂರ್ತಿಯಸಂಬಂಧವವುಗಳೆಂದು ತಿಳಿಯುತ್ತದೆ.

ಕೈಲಾಸದಲ್ಲಿ ಮಂಗಗಳೂ ಮೃಗಗಳೂ ಪಕ್ಷಿಗಳೇ ಮೊದಲಾದವುಗಳೂ ಇದ್ದವೆಂದು ಆಗಮಗಳಲ್ಲಿ ಹೇಳಿರುವದರಿಂದ ಅಲ್ಲಿ ಸಹಜವಾಗಿ ಬೆಳೆದ ರುದ್ರಾಕ್ಷಿಯನ್ನು ಶಿವನು ತನ್ನ ಅಂಶವಾಗಿ ಕಂಡು ಧರಿಸಿದನೆಂಬೂ ತಿಳಿಯಬಹುದು.

ಆ ಶಿವನ ಸಾಕಾರ ಮೂರ್ತಿ ಎಂದರೆ ಸಕಲ ರೂಪವೇ ಗುರುವೆಂಬ ಹೆಸರುಳ್ಳದ್ದು ಎಂಬೂ ಆ ಶಿವನ ಸಕಲನಿಷ್ಕಲ ಮೂರ್ತಿಯೇ ಲಿಂಗವೆಂಬ ಹೆಸರುಳ್ಳದ್ದು ಎಂದೂ ಆ ಶಿವನ ನಿಷ್ಕಲಮೂರ್ತಿಯೇ ಜಂಗಮವೆಂಬ ಹೆಸರುಳ್ಳದ್ದು ಎಂದೂ ಶಾಸ್ತ್ರದಲ್ಲಿ ಹೇಳಿರುವದರಿಂದ ಈ ಮೂರೂ ಶಿವನ ಸಂಬಂಧವುಳ್ಳವುಗಳೇ ಆಗಿರುತ್ತವೆ.

ಇನ್ನು ಶಿವನ ಆನಂದವೇ ಪಾದೋದಕವಾಗಿ ಇರುವದೆಂದೂ ಶಿವನ ಕರುಣವೇ ಪ್ರಸಾದವಾಗಿ ಇರುವದೆಂದೂ ಶಾಸ್ತ್ರಗಳು ಹೇಳುತ್ತಾ ಇರುವದರಿಂದ ಇವೆರಡೂ ಶಿವನ ಸಂಬಂಧದವುಗಳೇ ಆಗಿವೆ.

ಆದ್ದರಿಂದ ಈ ಎಂಟೂ ಶಿವನೆಂಬ ಒಬ್ಬ ಮೂರ್ತಿಯ ಸಂಬಂಧದವುಗಳೇ ಹೊರತು ಬೇರೆ ಏನೂ ಅಲ್ಲ. ಇವೆಂಟನ್ನೂ ವೀರಶೈವನು ನಿತ್ಯವೂ ಹೊಂದಿದರೆ ಶಿವ ಸ್ವರೂಪನಾಗುವದಕ್ಕೆ ತಕ್ಕ ಕೆಲಸವನ್ನು ಮಾಡಿದಂತೆ ಆಗುತ್ತದೆ. ಶಿವನ ಧರ್ಮವು ಹೇಗಿದ್ದಿತೋ ಶಿವಭಕ್ತನ ಧರ್ಮವೂ ಹಾಗೆಯೇ ಇರಬೇಕಲ್ಲವೇ! ಇವುಗಳಲ್ಲಿ ಒಂದನ್ನು ಬಿಟ್ಟರೂ ಶಿವನ ಧರ್ಮವನ್ನು ಪೂರ್ಣವಾಗಿ ನಡೆಸಿದಂತೆ ಆಗುವದಿಲ್ಲ.

ಶಿವನ ಒಂದು ರೂಪವೇ ಗುರು ಲಿಂಗ ಜಂಗಮ ಎಂದು ಮೂರಾಗಿರುವದರಿಂದ ಶಿವನನ್ನು ಪೂಜಿಸುವವರು ಈ ಮೂರು ರೂಪಗಳಲ್ಲಿ ಪೂಜಿಸಬೇಕು. ಆದ್ದರಿಂದ ಎಂಟು ಆವರಣಗಳಲ್ಲಿ ಈ ಮೂರು ಪೂಜ್ಯ ವಸ್ತುಗಳಾಗಿವೆ. ಇವರನ್ನು ಪೂಜೆ ಮಾಡಲಿಕ್ಕೆ ಭಸ್ಮ ರುದ್ರಾಕ್ಷಿ ಮಂತ್ರ ಎಂಬೀ ಮೂರು ಸಾಧನ ವಸ್ತುಗಳಾಗಿವೆ. ಈ ಸಾಧನ ವಸ್ತುಗಳನ್ನು ಮೊದಲು ಸಂಪಾದಿಸಿದರೆ ಶಿವನ ಆಚಾರ (ಶಿವಾಚಾರ) ವು ಪ್ರಾಪ್ತವಾದಂತಾಗುತ್ತದೆ. ಈ ಸಾಧನವಸ್ತುಗಳಿಂದ ಪೂಜಿಸಿ ಪಡೆಯುವ ಫಲವು ಪಾದೋದಕ, ಪ್ರಸಾದ. ಈ ಎರಡನ್ನು ಹೊಂದಿದರೆ ಶಿವನ ಕರುಣೆಯೂ ಪರಮಾನಂದವೂ ಈ ಲೋಕದಲ್ಲಿಯೇ ದೊರಕಿದಂತೆ ಆಗಿ ಭಕ್ತನು ಜೀವನ್ಮುಕ್ತನಾಗುತ್ತಾನೆ. ಈ ಪಾದೋದಕ ಪ್ರಸಾದಗಳಿಂದ ಮನುಷ್ಯನಿಗೆ ಸುಜ್ಞಾನವೂ ಲಭ್ಯವಾಗುತ್ತದೆ. ಆದ್ದರಿಂದ ಅಷ್ಟಾವರಣದಲ್ಲಿ ನಿಷ್ಠೆಯಿಡುವದು ಪಾರಮಾರ್ಥಿಕ ಪ್ರಯೋಜನವನ್ನು ಸಾಧಿಸುತ್ತದೆ.

ಶ್ರೀ ಗುರು ಬಸವಲಿಂಗಾಯ ನಮಃ

# ದೇಹದ ಹಸುಗೆ.

ಆ ಪರಮೇಶ್ವರನು (ಶಿವನು) ತನ್ನ ಲೀಲಾವಿನೋದದಿಂದ "ಏಕಮೇವಾಹಂ ನದ್ವಿತೀಯಃ" ಎಂಬ ತೆರದಿ ಪರಬ್ರಹ್ಮಸ್ವರೂಪನಾಗಿ ಮುಗುಳು ನಗೆಯಂ ನಕ್ಕು ಆ ಮುಗುಳು ನಗೆಯಿಂದ ಪರಾಂಬಾ (ಪರಾಶಕ್ತಿ) ದೇವಿಯಂ ಕಲ್ಪಿಸೆ, ಆ ಪರಾಂಬಾ ದೇವಿಯು ಬ್ರಹ್ಮಾಂಡವಂ ನಿರ್ಮಿಸಿದಳು. ಆ ಬ್ರಹ್ಮಾಂಡದಲ್ಲಿ ಇರುವ ಸೃಷ್ಟಿಯನ್ನು ತೋರಬೇಕೆಂದು ಪಾರ್ವತಿಯು ಪರಮೇಶ್ವರನಿಗೆ ಬಿನ್ನಹ ಮಾಡಲಾಗಿ ಆ ಪರಮೇಶ್ವರನು ಎಲೆ ಪಾರ್ವತಿಯೇ ಕೇಳೆಂದು ಈ ಪಿಂಡಾಂಡ ಸ್ವರೂಪವಾಗಿದ್ದ ದೇಹದಲ್ಲಿ ಬ್ರಹ್ಮಾಂಡದಲ್ಲಿ ಇದ್ದ ಸ್ಥಿತಿಗಳನ್ನು ತೋರುತ್ತಾ ಇದ್ದಾನು.

ಕಾಯಪುರಿ ಎಂಬ ದುರ್ಗದಲ್ಲಿ ಚತುರ್ದಶಭುವನವೆಂಬ ಹದಿನಾಲ್ಕು ಲೋಕವಿಹುದು. ಅಷ್ಟ ದಿಕ್ಕುಗಳೆಂಬ ಎಂಟು ಪಟ್ಟಣಗಳು. ಅಸ್ಥಿರವಾದ ಅಂಗರಾಜ್ಯವೆಂಬ ಸೀಮೆ. ಇದಕ್ಕೆ ಕರ್ತರಾರು ಎಂದೊಡೆ ಮೂರ್ಖಜೀವಿ ಎಂಬ ರಾಯನು. ಮಾಯಾಂಗನೆ ಎಂಬ ಸ್ವತಂತ್ರಗಾರ ಸ್ತ್ರೀಯು. ಪಂಚ ಮಹಾ ಭೂತಂಗಳ ಉತ್ಪತ್ತಿ ಸ್ಥಿತಿಗಳಿಗೆ ಆಧಾರ ಮಾತೃಸ್ಥಾನ ಪರಾಂಬಾ ಶಕ್ತಿ. ಆ ಶಕ್ತಿಗೆ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮ ಈ ಅಷ್ಟಮೂರ್ತಿಗಳೆಂಬ ಎಂಟು ಮಂದಿ ಕುಮಾರರು. ತ್ವಕ್, ರಕ್ತ, ಮಾಂಸ, ಮೇಧಾ, ಅಸ್ಥಿ, ಮಜ್ಜಾ, ಶುಕ್ಲ ಎಂಬ ಸಪ್ತ ಧಾತುಗಳೇ ಕೋಟೆಗಳು. ಬಾಹ್ಯ, ಅಂತರ, ಅಭ್ಯಂತರ, ಗತಾಗತ, ಪ್ರಕಾಶ, ಪ್ರಶೂನ್ಯ, ಪ್ರವಾಹ ಈ ಸಪ್ತಾವರಣಗಳೇ ಆಳ್ವೇರಿಗಳು. ತನು ವ್ಯಸನ, ಮನೋವ್ಯಸನ, ಧನ ವ್ಯಸನ, ರಾಜ್ಯವ್ಯಸನ, ವಿಷಯವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನ ಈ ಸಪ್ತ ವ್ಯಸನಂಗಳೇ ಅಗಳುಗಳು. ನವದ್ವಾರವೇ ಒಂಬತ್ತು ಬಾಗಿಲುಗಳು. ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ, ಈ ನವ ವಾಯುವೆಂಬ ಒಂಬತ್ತು ಕದಗಳು. ಈ ಒಂಬತ್ತು ಕದಗಳಿಗೂ ಪ್ರಾಣವಾಯುವೆಂಬುದೊಂದು ಅಗಳು. ರೇಚಕ ಪೂರಕವೆಂಬ ಸೂರ್ಯವೀಧಿ ಸೋಮವೀಧಿಗಳು(ಎರಡು ಕೇರಿಗಳು). ಮೂಲಾಧಾರ, ಸ್ವಾಧಿಷ್ಠಾನ ಮಣಿಪೂರಕ, ವಿಶುದ್ಧಿ, ಆಜ್ಞಾಮಂಟಪಗಳೆಂಬ ಆರು ಅರಮನೆಗಳು. ಈಡಾ, ಪಿಂಗಳಾ, ಸುಷುಮ್ನಾ, ಗಾಂಧಾರಿ, ಹಸ್ತಿಜಿಹ್ವಾ, ಯಶಸ್ವಿನಿ, (ಪಯಸ್ವಿನಿ=ಶಾರದಾ), ಅಲಂಬು, ಪೂಷಾ, ಕುಹೂ (ಲಕುಹ), ಶಂಖಿನಿ

ಈ ದಶನಾಡಿಗಳೆಂಬ ಅರಸುಗಳು. ಆದಿಶಕ್ತಿ ಮಾಯಾಶಕ್ತಿ ಮಂತ್ರಶಕ್ತಿ ಇಚ್ಛಾಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿ ಈ ಷಟ್‌ಶಕ್ತಿಗಳೆಂಬ ಊಳಿಗದ ಕಾಂತೆಯರು. ವಾತ ಪಿತ್ಥ ಶ್ಲೇಷ್ಮ ಈ ತ್ರಿದೋಷಂಗಳೆಂಬ ಬಾಗಿಲ ಪಾರುಪತ್ಯಗಾರರು. ಸಾತ್ವಿಕ ರಾಜಸ ತಾಮಸ ಈ ಮೂರು ಗುಣಂಗಳೆಂಬ ಬಾಗಿಲ ಕಾವ ಗೊಲ್ಲರು. ಮನ ಬುದ್ಧಿ ಚಿತ್ತ ಅಹಂಕಾರ ಈ ಅಂತಃಕರಣ ಚತುಷ್ಟಯಗಳೆಂಬ ಪ್ರಧಾನಿಗಳು. ಮೂಲಪ್ರಕೃತಿ ಎಂಬ ದುರ್ಮಂತ್ರಿಯು. ಅವಿದ್ಯಾ ಎಂಬ ದಳವಾಯಿಯು, ಮಾಯಾ ಪ್ರಪಂಚುಗಳೆಂಬ ಅನ್ಯನಾಯಕರು. ವಿತ್ತೇಷಣ ಪುತ್ರೇಷಣ ದಾರೇಷಣ ಈ ಈ ಷಣತ್ರಯಂಗಳೆಂದೆಂಬ ಹಡಪಿಗರು. ವಿಧಿವಶಾ ನಾಸ್ತಿಜಾಗ್ರ ರಾಗ ದ್ವೇಷ ಆತ್ಯಂತಮೋಹ ಈ ಪಂಚ ಮೃತ್ಯುಗಳೆಂಬ ಸ್ಥಾನಾಪತ್ತಿಗಳು. (ಸ್ಥಾನದ ಆಳುಗಳು) ಎಪ್ಪತ್ತೆರಡು ಸಾವಿರ ನಾಡಿಗಳೆಂಬ ಉಪಪ್ರಜೆಗಳು. ಇಪ್ಪತ್ತೊಂದು ಸಾವಿರದ ಆರುನೂರು ಉಛ್ವಾಸನಿಶ್ವಾಸಗಳೆಂಬ ಹೊಕ್ಕು ಹೊರಡುವ ಅಧಿಕಾರಿಗಳು. ಅಸ್ತಿತೆ ಜಾಯತೆ ವರ್ಧತೆ ಪರಿಣಮತೆ ಕ್ಷೀಯತೆ ವಿನಶ್ಯತೆ ಈ ಷಡ್ಭಾವ ವಿಕಾರಂಗಳೆಂಬ ಮಣಿಹಗಾರರು. ಸ್ಥೂಲತನು ಸೂಕ್ಷ್ಮತನು ಕಾರಣತನು ಮಾಯಾತನು ಚಿನ್ಮಯತನು ಚಿದ್ರೂಪತನು ಆನಂದತನು ಶೂನ್ಯತನು ಈ ಅಷ್ಟತನುಗಳೆಂಬ ವರ್ಣಾಶ್ರಮ ಧರ್ಮಗಳು. ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯ ಈ ಪಂಚಕೋಶಂಗಳೆಂಬ ಸ್ಥಳದ ಪ್ರಭುಗಳು. ಆತ್ಮ ಅಂತರಾತ್ಮ ಪರಮಾತ್ಮ ಜ್ಞಾನಾತ್ಮ ಭಾವಾತ್ಮ ನಿರ್ಮಲಾತ್ಮ ಶುದ್ಧಾತ್ಮ ಮಹಾತ್ಮ ಈ ಅಷ್ಟಾತ್ಮರೆಂಬ ಜ್ಞಾನಿಗಳು. ಮುನ್ನೂರರವತ್ತು ವ್ಯಾಧಿಗಳೆಂಬ ಹಗೆಗಳು. ಭೂತ ಭವಿಷ್ಯದ್ ವರ್ತಮಾನ ಈ ಕಾಲತ್ರಯಂಗಳೆಂಬ ತಳವಾರರು. ಕುಲ ಛಲ ಧನ ರೂಪ ಯೌವನ ವಿದ್ಯಾ ರಾಜ್ಯತಪಸ್ಸು ಈ ಅಷ್ಟಮದಂಗಳೆಂಬ ಬಹಿರಂಗದ ಆನೆಗಳು. ಜಾಗ್ರತ್ ಸ್ವಪ್ನ ಸುಷುಪ್ತಿ ಈ ಅವಸ್ಥಾತ್ರಯಂಗಳೆಂಬ ಕುದುರೆಗಳು ಸಂಸ್ಥಿತೆ (ಅಸ್ಥಿರ) ತೃಣೀಕೃತೆ, ವರ್ತಿನಿ ಕ್ರೋಧಿನಿ ಮೋಹಿನಿ (ಅತಿವೇಷ್ಟಿಣಿ) ಅತಿಚಾರಿಣಿ ಗಾಂಧಾರಿಣಿ (ಗಂಧಚಾರಿಣಿ) ವಾಸಿನಿ ಈ ಅಂತಃ ಸೂಕ್ಷ್ಮವಾದ ಅಂತರಂಗದ ಅಷ್ಟಮದಂಗಳೆಂಬ ಅಂತರಂಗದ ಆನೆಗಳು. ಆಣವ ಮಾಯಕ ಕಾರ್ಮಿಕ ಈ ಮಲತ್ರಯಂಗಳೆಂಬ ಕರಣಿಕರು. ತಾಪತ್ರಯ ಪ್ರಾರಬ್ಧ ಭೋಗ ಜಾತಿ ವರ್ಣ ಕುಲ ಗೋತ್ರ ವರ್ಣಾಶ್ರಮ ಧರ್ಮಗಳೆಂಬ ಇಂದ್ರಜಾಲ ಮಹೇಂ

ದ್ರ ಜಾಲವನಾಡುವ ಆಟಗಾರರು. ಮನಸ್ಸು ವಾಕ್ಕು ಕಾಯ ಈ ತ್ರಿಕರಣವೆಂಬ ಕನ್ನಗಾರರು. ಜೀವವೆಂಬ(........?)ಜ್ಞಾನದೀಕ್ಷಿತರು. ಆರಿಷಡ್ವರ್ಗಗಳೆಂಬ ಸುಂಕಗಾರರು. ಹಸಿವು ತೃಷಾ ಶೋಕ ಮೋಹ ಜರಾ ಮರಣ ಈ ಷಡೂರ್ಮಿಗಳೆಂಬ ಪಹರೆಯವರು. ಜ್ಞಾನ ಜ್ಞಾತೃ ಜ್ಞೇಯ ಈ ತ್ರಿಪುಟಿ ಎಂಬ ಆತ್ಮಾನುಬಂಧಿಗಳು. ಆತ್ಮಕ್ಲೇಶ ಧನಕ್ಲೇಶ ರಾಜ್ಯಕ್ಲೇಶ ಪುತ್ರಕ್ಲೇಶ ಬಾಂಧವಕ್ಲೇಶ ಈ ಕ್ಲೇಶ ಪಂಚಕಗಳೆಂಬ ವ್ಯವಹಾರಿಗಳು. ಬಾಲ್ಯ ಯೌವನ ವಾರ್ಧಿಕಗಳೆಂಬ ಬಹು ರೂಪಿನವರು. ಪ್ರಕಾಶಕಸ್ಥಾನ ಪ್ರವರ್ತಕಸ್ಥಾನ ಮೋಹನಸ್ಥಾನ ಈ ಸ್ಥಾನತ್ರಯಂಗಳೆಂಬ ಕುಂಚದವರು. ಶುದ್ಧ ಅಶುದ್ಧ ಜ್ಞಾನ ತ್ರಯಂಗಳೆಂಬ ಕಟ್ಟಿಗೆಯವರು. ಸುವಾಕ್ಯವೆಂಬ ಉತ್ತಮ ಪುರುಷರು. ದುರ್ವಾಕ್ಯವೆಂಬ ಚಾಡಿಕಾರರು. ಉತ್ತಾರ(?)ಎಂಬ ಸಮುದ್ರ. ಆಶೆ ಎಂಬ ಪಿಶಾಚಿ. ನಿರಾಶೆ ಎಂಬ ಮಂತ್ರವಾದಿ. ಲಜ್ಜೆ ನಿರ್ಲಜ್ಜೆ ಎಂಬ ಸ್ನೇಹಿತರು. ಅರುಹು ಮರಹುಗಳೆಂಬ ದಿವಾರಾತ್ರಿಗಳು. ಕ್ಷಮೆ ದಮೆ ಸನ್ಮತಿಗಳೆಂಬ ಕಾಮಧೇನುಗಳು. ಕೋಪವೆಂಬ ಕಾಡುಕಿಚ್ಚು. ಸತಿ ಎಂಬ ಮೋಡ. ಸುತರೆಂಬ ಇಂದ್ರಚಾಪ. ಕ್ಷುಧೆ ಎಂಬ ಸಿಡಿಲು. ವಹಮಾನವೆಂಬ ಭಂಡಾರ. ಸ್ತೋತ್ರವೆಂಬ ಜ್ಞಾನಭೂಮಿ. ಪಾದವೆಂಬರಥ. ಹಸ್ತಗಳೆಂಬ ಸೇವಕರು. ಪಾಯುವೆಂಬ ಸೂನೆ. ಗುಹ್ಯವೆಂಬ ಪತಂಗದ ಗುಣಿ. ವಾಕ್ಯವೆಂಬ ಗುಡುಗು. ನೇತ್ರಂಗಳೆಂಬ ಪಂಜಿನವರು. ದಂತಂಗಳೆಂಬ ಆಯುಧಂಗಳು.

ಇಂದ್ರದಿಕ್ ಅಮರಾವತಿ ಪಟ್ಟಣ. ಅಗ್ನಿದಿಕ್ ತೇಜೋವತಿ ಪಟ್ಟಣ. ಯಮದಿಕ್ ಶಮನಾವತಿಪಟ್ಟಣ. ನೈರುತ್ಯದಿಕ್ ಲಕ್ಷ್ಮಾವತಿಪಟ್ಟಣ. ವರುಣದಿಕ್ ಸಿದ್ಧಾವತೀಪಟ್ಟಣ. ವಾಯವ್ಯದಿಕ್ ಅಂಜನಾವತಿಪಟ್ಟಣ ಕುಬೇರದಿಕ್ ಅಲಕಾಪುರೀಪಟ್ಟಣ. ಈಶಾನ್ಯದಿಕ್ ಕಾಂಚೀಪುರೀ ಪಟ್ಟಣ. ಭ್ರೂಮಧ್ಯೆ ಕಾಶೀಸ್ಥಾನ. ಅಲ್ಲಿ ಗಂಗಾ ಯಮುನಾ ಸರಸ್ವತೀಸಂಗಮ.

ಈಡಾ ಭಾಗೀರಥೀ ಸಾಕ್ಷಾತ್ ಪಿಂಗಳಾ ಯಮುನಾ ತಥಾ ।
ತಯೋರ್ಮಧ್ಯಗತಾನಾಡೀ ಸುಷುಮ್ನಾ ಚ ಸರಸ್ವತೀ

ಈಡಾ ನಾಡಿಯೇ ಗಂಗಾ, ಪಿಂಗಳಾ ನಾಡಿಯೇ ಯಮುನಾ, ಸುಷುಮ್ನಾ ನಾಡಿಯೇ ಸರಸ್ವತಿ. ಹೃದಯಸ್ಥಾನ ರಾಮೇಶ್ವರ ಎನಿಸುವುದು. ಈ ಬ್ರಹ್ಮಾಂಡದಲ್ಲಿ ಉಂಟಾದುದೆಲ್ಲವೂ ಈ ದೇಹದಲ್ಲಿ ಉಂಟು. ಚಂದ್ರನು. ಸೂರ್ಯನು ನಕ್ಷತ್ರಂಗಳು ತ್ರಯಸ್ತ್ರಿಂಶತ್‌ಕೋಟಿ ದೇವತೆಗಳು ಉಂಟು. ಪಾದದ ಕೆಳಗೆ ಅತಳಲೋಕ. ಮೇಗಾಲು ವಿತಳಲೋಕ. ಹರಡು ಸುತಲ

ಲೋಕ, ಜಂಘೆ ತಳಾತಳ ಲೋಕ. ಜಾನು ರಸಾತಲ ಲೋಕ. ತೊಡೆ ಮಹಾತಲ ಲೋಕ. ಕಟಿ ಬ್ರಹ್ಮಾಂಡತಲಲೋಕ. ನಾಭಿ ಭೂಲೋಕ. ಅದರ ಮೇಲೆ ಕುಕ್ಷಿಯಲ್ಲಿ ಭುವರ್ಲೋಕ. ವಕ್ಷಸ್ಥಲದಲ್ಲಿ ಮಹಲ್ಲೋಕ. ಕಂಠದಲ್ಲಿ ಜನಲೋಕ. ಭ್ರೂಮಧ್ಯದಲ್ಲಿ ತಪೋಲೋಕ. ಮೂರ್ಧ್ನಿಯಲ್ಲಿ ಸತ್ಯಲೋಕ. ಈ ಹದಿನಾಲ್ಕು ಲೋಕದೊಳಗೆ ಜನರು ಹುಟ್ಟದ ಯೋನಿಗಳಿಲ್ಲ. ಮುಟ್ಟದ ಭೂಮಿಯಿಲ್ಲ. ಕಾಣದ ದುಃಖವಿಲ್ಲ. ಈ ಪ್ರಾರಬ್ಧಭೋಗಗಳನು ಅನುಭವ ಮಾಡಿಕೊಂಡು ಸ್ವರ್ಗಲೋಕಕ್ಕೂ ನರಲೋಕಕ್ಕೂ

"ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ"

ಎಂಬ ವಾಕ್ಯಕ್ಕೆ ಅನುಸಾರವಾಗಿ ತಿರುಗುತ್ತಾ ಇದ್ದಾರೆ.

ಆಸೆಎಂಬ ಭೂಮಿಯೊಳಗೆ ಮನವೆಂಬ ಬೀಜವ ಬಿತ್ತಿ ಅನ್ನವೆಂಬ ಗೊಬ್ಬರವ ಹಾಕಿ ಪಾನಾದಿಗಳೆಂಬ ಉದಕವ ಹೊಯಿದು ಅಷ್ಟೈಶ್ವರ್ಯವೆಂಬ ಅಗತೆಯನಗಿದು ಜನನ ಮರಣವೆಂಬ ಪೈರಮಾಡಿ ಪಾಪಪುಣ್ಯಂಗಳೆಂಬ ಫಲಗಳನು ಬೆಳೆದು ಕಾಲಕರ್ಮ ಸಂಯೋಗಗಳಿಂದ ಆ ಫಲವನು ಊಟಮಾಡಿಕೊಂಡು ಈ ಪ್ರಕಾರದಲ್ಲಿ ನಂಬಿಗೆಯಿಲ್ಲದ ಕರ್ಮ ಶರೀರವ ಧರಿಸಿ ಈ ಅಂಗರಾಜ್ಯವೆಂಬ ರಾಯನು ತಾನು ತನ್ನ ಮಂತ್ರಿಗಳ ಸಹವಾಗಿ ಚತುರಂಗಬಲ ಸಹ ಅನ್ಯೋನ್ಯವಾಗಿ ಆರನೂ ಲೆಕ್ಕಿಸದೆ ಒಬ್ಬರಿಗೊಬ್ಬರು ಕೂಡದೆ ಒಬ್ಬರ ಮಾತೊಬ್ಬರು ಕೇಳದೆ ಪ್ರತ್ಯೇಕ ಸಮರ್ಥರಾಗಿ ಇರಲಾಗಿ ಜನನಮರಣವಿಲ್ಲದ ಹಾಗೆ ಮಾಡುವಂಥಾ ವಸ್ತು ಪರಬ್ರಹ್ಮ ಒಂದಲ್ಲದೆ ಮತ್ತೊಂದಿಲ್ಲವೆಂದು ಗುರು ಕೃಪೆಯಿಂದ ಆ ಪರಬ್ರಹ್ಮವನು ಜ್ಞಾನವೆಂಬ ಪಾಶದಲ್ಲಿ ಕಟ್ಟಿ ಕಾಯಪುರಿದುರ್ಗದ

ಶಿಖಾಗ್ರ ವಾಲಾಗ್ರ ಶತಸಹಸ್ರಸ್ಯ ಭಾಗಸ್ಯ ಭಾಗಾರ್ಧಂತು

ಎಂಬ ಒಂದು ಭಾಗ ಪರಬ್ರಹ್ಮ ಗವಿಯಲ್ಲಿ ತುಂಬಿ ಮಾಯಾ ಶಕ್ತಿಯನ್ನು ಕಾವಲಿರಿಸಿ ದೇಹದ ಅಂತರಂಗದಲ್ಲಿ ಇದ್ದ ಅಷ್ಟ ಮದಗಳೆಂಬ ಆನೆಗಳಿಂದ ಬಾಗಿಲ ಮುಚ್ಚಲು ಆ ಪರಬ್ರಹ್ಮವು ಗವಿಯಲ್ಲಿ ಇರಲು ಜನರು ಮಹಾಂಧರಾಗಿ ತಥ್ಯ ಮಿಥ್ಯ ಎಂಬ ಎರಡರೊಳು ಮಿಥ್ಯಾ ಪಾದವ ಹಿಡಿದುಕೊಂಡು ಆರು ದರ್ಶನವೆಂಬ ಕತ್ತಲೆಯನಿಕ್ಕಿಕೊಂಡು ವರ್ಣಾಶ್ರಮ ಧರ್ಮಂಗಳೆಂಬ ಅಹಂಕಾರ ಭ್ರಮೆಯಲ್ಲಿ ತಥ್ಯವನೆ ಮರೆದು (ಮಿಥ್ಯವನೆ ಹಿಡಿದು) ವ್ಯರ್ಥವಾಗಿ ಕೆಟ್ಟರು ಈ ಜನರು. ಅದು ನಿಮಿತ್ತವಾಗಿ ಗುರುಕಾರುಣ್ಯದಿಂದ ಉದ್ಧರಿಸಬೇಕೆಂದು ಪರಮೇಶ್ವರನು ಪಾರ್ವತಿಗೆ ಹೇಳಿದನು.

ಹೀಗೆ ದೇಹಸ್ಥಿತಿ ಮುಗಿದುದು.

ಕಲ್ಯಾಣದಲ್ಲಿ ಮಹಿಮೆಗಳನ್ನು ತೋರಿಸಿದ ಜಂಗಮವರ್ಯರಾದ ಶ್ರೀ ಪ್ರಭುದೇವರ ಕಾಲಕ್ಕಿಂತಲೂ ಮುಂಚೆ ವೀರಶೈವ ಮತವಿದ್ದಿತೆಂಬುದಕ್ಕೆ ಕೆಲವು ಉದಾಹರಣೆಗಳು.

ವೀರಶೈವ ಮತವು ಎಂದರೆ ಇಷ್ಟಲಿಂಗ ಧಾರಣ ಮಾಡಿಕೊಳ್ಳುವ ರೂಢಿಯುಳ್ಳ ಮತವು ಬಸವೇಶ್ವರನಿಗಿಂತ ಪೂರ್ವದಲ್ಲಿ ಇರಲಿಲ್ಲವೆಂದೂ ಪೂರ್ವದಲ್ಲಿ ಲಿಂಗ ಧಾರಣ ಮಾಡಿಕೊಳ್ಳುವ ಪದ್ಧತಿ ಇದ್ದದ್ದಕ್ಕೆ ತಕ್ಕ ಶಿಲಾಶಾಸನಗಳು ದೊರಕಿಲ್ಲವೆಂದೂ ಕೆಲವರ ಅಭಿಪ್ರಾಯಗಳು ಈಗ ಹೊರಬೀಳುತ್ತಲಿವೆ. ಈ ಬಗ್ಯೆ ಕೆಲವು ಮಟ್ಟಿಗೆ ಶೋಧಿಸೋಣ.

ಅಮರಕೋಶವು ಸುಮಾರು ೨೦೦೦ ವರ್ಷಗಳ ಪೂರ್ವದಲ್ಲಿ ಹುಟ್ಟಿದ್ದೆಂದೂ ಇದರಲ್ಲಿ ವೀರಶೈವ ಅಥವಾ ಲಿಂಗಿ ಎಂಬ ಪದವು ಇಲ್ಲವೆಂದೂ ಒಂದು ಕಾರಣವನ್ನು ಕೆಲವರು ತೋರಿಸುತ್ತಾರೆ. ಆದರೆ ಅಮರಕೋಶ ದ್ವಿತೀಯಕಾಂಡ ಬ್ರಹ್ಮವರ್ಗ ೪೪೩ ನೆಯ ಶ್ಲೋಕದಲ್ಲಿ "ಪಾಷಂಡಾಸ್ಸರ್ವಲಿಂಗಿನಃ" ಎಂಬದಾಗಿ ಇರುತ್ತದೆ. ಇದಕ್ಕೆ ಮಿ. ಎಲ್. ರೈಸ್ ಸಾಹೇಬರು ಆರಾಧ್ಯ, ಕ್ಷಪಣಕ ಮುಂತಾದವರು ಎಂತ ಅರ್ಥ ಬರೆದಿರುತ್ತಾರೆ. ಆದರೆ ಇಲ್ಲಿರುವ ಅರ್ಥವು ಸರ್ವಲಿಂಗಿಗಳು ಪಾಷಂಡರೆಂದು ಆಗುತ್ತದೆ. ಲಿಂಗಿಯಲ್ಲದವನಾದ ಈ ಗ್ರಂಥಕರ್ತನು ಪಾಷಂಡರೆಂದು ಕರೆದಮಾತ್ರಕ್ಕೆ- ಲಿಂಗಿಗಳ ನಿಜಸ್ಥಿತಿಗೆ ಕೊರತೆ ಏನೂ ಇಲ್ಲ. ಇದಲ್ಲದೆ ಕೈಲಾಸದಲ್ಲಿ ಶಿವನಿದ್ದನೆಂದೂ ಅವನ ಆಶ್ರಯದಲ್ಲಿ ಪ್ರಮಥಗಣರಿದ್ದರೆಂದೂ ವ್ಯಾಸಋಷಿಗಳು ಪುರಾಣದಲ್ಲಿ ಹೇಳಿರುವದನ್ನೂ ವೀರಶೈವರು ಅದರಂತೆ ನಂಬಿರುವದನ್ನೂ ಪೂರ್ವದ ಗ್ರಂಥಗಳಲ್ಲಿ ಅನೇಕ ಕಡೆಗಳಲ್ಲಿ ನೋಡಬಹುದು. ಅಮರಕೋಶದ ತೃತೀಯ ಕಾಂಡದಲ್ಲಿ ನಾನಾರ್ಥವರ್ಗ ಣಾಂತ ೨೦೩ನೆಯ ಶ್ಲೋಕದಲ್ಲಿ "ಸಂಘಾತೇ ಪ್ರಮಥೇ ಗಣಃ" ಎಂದು ಇದೆ. ಇದರ ಅರ್ಥವು ಗಣಶಬ್ದವು ಸಮೂಹದಲ್ಲಿಯೂ ಪ್ರಮಥರಲ್ಲಿಯೂ ವರ್ತಿಸುತ್ತದೆ ಎಂದಾಗುತ್ತದೆ. ಈ ಕೋಶವನ್ನು ರಚಿಸಿದ ಅಮರಸಿಂಹನು ಪ್ರಮಥರು ಉಂಟೆಂದು ತಿಳಿದಿದ್ದನೆಂಬುದಕ್ಕೆ ಇದು ಮುಖ್ಯ ಪ್ರಮಾಣವಾಗಿದೆ. ಈ ಪ್ರಮಥರು ಲಿಂಗಧಾರಿಗಳು.

ಹೀಗಿದ್ದಾಗ್ಯೂ ಸುಮಾರು ೧೨೦೦ ವರ್ಷಗಳ ಹಿಂದೆ ಲಿಂಗಾಯತ, ಲಿಂಗವಂತ ಎಂಬ ಪದಗಳು ಹೆಚ್ಚು ಬಳಕೆಯಲ್ಲಿ ಇದ್ದಂತೆ ತೋರುವದಿಲ್ಲ. ಲಿಂಗಸಂಬಂಧವುಳ್ಳವನಾದ್ದರಿಂದ ಲಿಂಗಾಯತ ಎಂದು ರೂಢಿಯಾಗಿ ಕರೆವುದು ಈಚೆಗೆ ಹೆಚ್ಚು ಬಳಕೆಯಲ್ಲಿ ಬಂದಿರುತ್ತದೆ ಎಂದು ತೋರುತ್ತದೆ. ಋಷಿಗಳು ಲಿಂಗಕ್ಕೆ ಅಕ್ಷರ, ಬ್ರಹ್ಮ, ಸೂತ್ರ, ದೇವ ಈ ಪದಗಳನ್ನೂ ಇನ್ನೂ ಕೆಲವು ಪದಗಳನ್ನೂ ಉಪಯೋಗಿಸುತ್ತಿದ್ದದ್ದು ವ್ಯಕ್ತಪಟ್ಟಿರುತ್ತದೆ. ಶಿವಾಗಮಗಳಲ್ಲಿಯೂ "ಲಿಂಗಂ ಬ್ರಹ್ಮ ಸನಾತನಃ" ಎಂಬ ಅಭಿಪ್ರಾಯವನ್ನು ಅನೇಕ ಕಡೆಗಳಲ್ಲಿ ನೋಡಬಹುದು. ಬ್ರಹ್ಮಧಾರಣ ಎಂಬ ಪದವು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ದೊರೆಯುತ್ತದೆ. ಬ್ರಹ್ಮ ಎಂಬ ಶಬ್ದವು ಬರೀ ಜ್ಞಾನಮಾತ್ರಕ್ಕೆ ಅಥವಾ ನಿರಾಕಾರ ವಸ್ತು ಮಾತ್ರಕ್ಕೆ ಆಗಿದ್ದರೆ ಅದರ ಧಾರಣ ಪದವು ರೂಢಿಯ ಅರ್ಥದಲ್ಲಿ ಕೊರತೆಯನ್ನು ಹೊಂದುತ್ತದೆ. ವ್ಯಾಖ್ಯಾನರೂಪವಾಗಿ ಅನೇಕ ವಿಧವಾದ ಅರ್ಥ ಮಾಡಬಹುದಾದರೂ ವೀರಶೈವ ಮತ ತತ್ವಗಳಿಗೆ ಸರಿಬರುವ ಅಭಿಪ್ರಾಯಗಳು ಉಪನಿಷತ್ತುಗಳಲ್ಲಿಯೂ ವ್ಯಾಸರ ಪುರಾಣಗಳಲ್ಲಿಯೂ ಹೊರಬೀಳುವದರಿಂದ ಲಿಂಗ ಶಬ್ದಕ್ಕೆ ಬೇರೆ ಪದಗಳ ಬಳಕೆಯುಳ್ಳ ಈ ಅಭಿಪ್ರಾಯವೂ ಲಿಂಗ ಧಾರಣವೂ ಬಹಳ ಪೂರ್ವದಿಂದಲೂ ಇದ್ದಿತೆಂದು ನಂಬಲಿಕ್ಕೆ ಬರುವಂತೆ ಇದೆ. ಲೈಂಗ್ಯ ಪುರಾಣದಲ್ಲಿ ವ್ಯಾಸರು ಪಾಶುಪತ ಮತವನ್ನು ಚನ್ನಾಗಿ ವಿವರಿಸುತ್ತಾರೆ. ಪಶು, ಪಾಶ, ಪತಿ ಇವುಗಳ ಅರ್ಥವನ್ನು ಹೇಳುವಲ್ಲಿ ಪತಿ ಎಂದರೆ ಲಿಂಗ ಎಂತ ಹೇಳಿರುತ್ತಾರೆ. ಇವು ಕೃತಕವೆಂದು ಯಾರಾದರೂ ಸಂಶಯ ತೆಗೆದುಕೊಳ್ಳುವದಾದರೆ ಕೆಲವು ಶ್ಲೋಕಗಳಾಗಿದ್ದರೆ ಈಗ ಆಗ ರಚಿತವಾದವುಗಳೆನ್ನಬಹುದು. ಒಂದು ಪುರಾಣದ ಬಹು ಭಾಗವೇ ಕೃತಕವಲ್ಲ. ಇದನ್ನು ವ್ಯಾಸ ಋಷಿಗಳು ರಚಿಸಿದರೆಂದು ಎಲ್ಲರೂ ಒಪ್ಪುತ್ತಾರೆ. ಪಾಶುಪತರು ಲಿಂಗಧಾರಿಗಳೆಂದೂ ಇವರು ಜ್ಞಾನಪ್ರವರೆಂದೂ ಶಿವಾಗಮಗಳು ಹೇಳುತ್ತವೆ.

ಬಸವೇಶ್ವರನಿಗೆ ಷಟ್‌ಸಮಯ ಚಕ್ರವರ್ತಿ ಎಂಬ ಬಿರುದು ಇದ್ದಂತೆ ಶೂನ್ಯ ಸಂಪಾದನೆಯಿಂದ ತಿಳಿದುಬರುತ್ತದೆ. ಹೀಗೆ ಹೆಸರು ಬರಲಿಕ್ಕೆ ಆರು ಸಮಯಗಳನ್ನು ಮುರಿದು ಹಾಕಿ ಅವುಗಳಿಗೆಲ್ಲಾ ವೀರಶೈವವು ಶ್ರೇಷ್ಠ ಎಂಬುದನ್ನು ಬಸವೇಶ್ವರನು ತೋರಿಸಿಕೊಟ್ಟದ್ದೇ ಕಾರಣವಾ

ಗಿರುತ್ತದೆ. ಈ ಆರು ಸಮಯದಲ್ಲಿ ಪಾಶುಪತರು ಕಾಳಾಮುಖರೆಂಬುವವರು ಸೇರಿರುತ್ತಾರೆ. ಕಾಳಾಮುಖರು ಲಿಂಗಧಾರಿಗಳೆಂಬುದಕ್ಕೆ ಅನುಮಾನವೇನೂ ಇಲ್ಲ. ಈಚೆಗೆ ಪ್ರಕಟವಾದ ಕೆಲವು ಶಾಸನಗಳಲ್ಲಿಯೂ ಈ ವಿಷಯವು ವ್ಯಕ್ತಪಟ್ಟಿರುತ್ತದೆ.

ಆದರೂ ಪಾಶುಪತರು ಕಾಳಾಮುಖರು ಮೊದಲು ಇರಬಹುದು ವೀರಶೈವರು ಇರಲಿಲ್ಲ ಎಂದು ಶಂಕಿಸಲಿಕ್ಕೆ ಬರುವಂತಿಲ್ಲ. ಲಿಂಗಧಾರಣವು ವೀರಶೈವರ ಮುಖ್ಯ ಲಕ್ಷಣ. ಆದ್ದರಿಂದ ಇವರೆಲ್ಲರೂ ಬೇರೆ ಬೇರೆ ಹೆಸನ್ನು ಹೊಂದಿದ್ದಾಗ್ಯೂ ವೀರಶೈವರಲ್ಲಿ ಸೇರತಕ್ಕವರೇ ಹೊರತು ಬೇರೆ ಅಲ್ಲವೆಂಬುವನ್ನೂ ಈ ಒಳಭೇದಗಳನ್ನು ಬಸವೇಶ್ವರನು ಮಾರಿದನೆಂಬುದನ್ನೂ ಈ ಹೆಸರುಗಳು ಈಗ ನಿರ್ನಾಮವಾಗಿರುವವೆಂಬುದನ್ನೂ ಸರ್ವರೂ ಚನ್ನಾಗಿ ಜ್ಞಾಪಕದಲ್ಲಿ ಇಡಬೇಕು. ಆಗಮಗಳಲ್ಲಿ ಈ ಒಳಭೇದಗಳು ವೀರಶೈವಕ್ಕೆ ಸೇರಿವವುಗಳೆಂದು ಸ್ಪಷ್ಟವಾಗಿ ಹೇಳಿದೆ. ಶಿವಭಕ್ತಿಯನ್ನು ಉಳ್ಳವರಲ್ಲಿ ಎರಡು ಮುಖ್ಯ ಭೇದಗಳು ಪೂರ್ವದಿಂದಲೂ ನಡೆದು ಬಂದಂತೆ ತೋರುತ್ತದೆ. ಲಿಂಗಧಾರಣವಿಲ್ಲದೆ ಶಿವಭಕ್ತಿಯನ್ನು ಉಂಟಾಗಿರುವವರೆಲ್ಲರೂ ಶೈವರು. ಲಿಂಗಧಾರಣದಿಂದ ಶಿವಭಕ್ತಿಯನ್ನು ತೋರಿಸುವವರೆಲ್ಲರೂ ವೀರಶೈವರು. ಈ ಕಾರಣಗಳಿಂದ ಲಿಂಗಧಾರಣ ಪದ್ಧತಿಯು ವ್ಯಾಸರಿಗಿಂತ ಪೂರ್ವದಲ್ಲಿಯೇ ಇದ್ದಿದ್ದೆಂದು ಹೇಳಬಹುದು.

ಶ್ರೀ ಪ್ರಭುದೇವರು ಸಿದ್ಧರಾಮೇಶ್ವರನಿಗೆ ಬೋಧಿಸಿರುವ ಪರಮಯೋಗ ಮಂತ್ರಗೋಪ್ಯದಲ್ಲಿ ಶಿವಶರಣರ ನಿಜ ತತ್ವವು ಚನ್ನಾಗಿ ಹೊರಬೀಳುತ್ತದೆ. ಅದು ಹಾವೇರಿಯಲ್ಲಿರುವ ಈ ಶಿವಲಿಂಗ ವಿಜಯ ಮುದ್ರಾಲಯದಲ್ಲಿ ಅಚ್ಚಾಗಿರುತ್ತದೆ. ಇದಕ್ಕೆ ಮುನ್ನುಡಿಯನ್ನು ಬರೆದಿರುವವರಲ್ಲಿ ವೀರಶೈವ ಮತದ ತಾತ್ವಿಕ ವಿಷಯವು ಮುಂಚೆ ಇದ್ದಿತ್ತೆಂಬುದಕ್ಕೆ ಕೆಲವು ಉದಾಹರಣೆಗಳು ಕೊಡಲ್ಪಟ್ಟಿರುತ್ತವೆ. ಆ ಮುನ್ನುಡಿಯನ್ನೇ ಮುಂದಿನ ಪುಟದಲ್ಲಿ ಯಥಾಸ್ಥಿತವಾಗಿ ಕೊಟ್ಟಿರುತ್ತದೆ.

---

# ಪ್ರಭುದೇವರು ನಿರೂಪಿಸಿದ ಪರಮಯೋಗ ಮಂತ್ರಗೋಪ್ಯ.

## ಈ ಪುಸ್ತಕವನ್ನು ತೆರೆದ ಒಡನೆಯೇ ಓದತಕ್ಕ ಸಂಗತಿ

೨೭ ಪದ್ಯಗಳುಳ್ಳ ಈ ಮಂತ್ರಗೋಪ್ಯದ ಮೂಲವು ಓಲೆಯ ಪ್ರತಿಯಲ್ಲಿ ಶಿವಮೊಗ್ಗಾ ಡಿ॥ ಶಿರಾಳಕೊಪ್ಪದಲ್ಲಿ ಇದ್ದಾಗ ವೇ॥ ಶೀಲವಂತಸ್ವಾಮಿಗಳ ಮಹಾಲಿಂಗಯ್ಯನವರಲ್ಲಿ ದೊರಕಿತ್ತು. ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರ ಚಿತ್ರದುರ್ಗದ ಬೃಹನ್ಮಠದಲ್ಲಿ ಈ ಮೂಲಕ್ಕೆ ಕಲ್ಮಠದ ಪ್ರಭುದೇವರು (ವಿದ್ಯಾನಗರದಲ್ಲಿ ಕ್ರಿ. ಶ. ೧೪೩೦ ರಲ್ಲಿ ಇದ್ದವರು ಮತ್ತು ಲಿಂಗಲೀಲಾ ವಿಲಾಸ ಚಾರಿತ್ರವನ್ನು ಬರೆದವರು) ಟೀಕಾ ತಾತ್ಪರ್ಯವನ್ನು ಬರೆದ ಪ್ರತಿಯು ದೊರೆಯಿತು. ಶ್ರೀಮನ್ ನಿರಂಜನಪ್ರಣವಸ್ವರೂಪಿ ಶಿವಬಸವ ಮಹಾಸ್ವಾಮಿಗಳವರು ಇವರ ಹಾವೇರಿ ಹುಕ್ಕೇರಿಮಠದಲ್ಲಿ ಇದಕ್ಕೆ ಇನ್ನೊಂದು ವಿಧವಾದ ಟೀಕೆಯುಳ್ಳ ಪ್ರತಿ ದೊರಕಿತು. ಈ ಟೀಕೆಯು ಯಾರಿಂದ ಆದದ್ದೆಂಬುದು ಆ ಪ್ರತಿಯಲ್ಲಿ ಕಾಣುವದಿಲ್ಲ. ಈ ಮೂರು ಪ್ರತಿಗಳ ಸಹಾಯದಿಂದ ಈ ಪುಸ್ತಕವು ಮುದ್ರಣವಾಯಿತು. ಈ ಮೂರು ಪ್ರತಿಗಳನ್ನು ಒದಗಿಸಿಕೊಟ್ಟಿದ್ದಕ್ಕಾಗಿ ಅವರ ಉಪಕಾರ ಸ್ಮರಣೆಯನ್ನು ಮಾಡುತ್ತೇನೆ.

ಇದರಲ್ಲಿರುವ ಪದ್ಯಗಳು ಮೊದಲನೆಯ ಪಾದ ಮೂರನೆಯಪಾದ ೨೦ ಮಾತ್ರೆ ಎರಡನೆಯಪಾದ ನಾಲ್ಕನೆಯಪಾದ ೧೬ ಮಾತ್ರೆ ಇರುವಂತೆ ರಚಿಸಲ್ಪಟ್ಟಿವೆ. ಈ ನಮೂನೆಯ ಪದ್ಯದ ಹೆಸರೇನೆಂಬುದನ್ನು ತಿಳಿಯುವದು ಕಷ್ಟವಾಗಿದೆ.

ಪದ್ಯಗಳು ಸುಲಭವಾದ ಕನ್ನಡ ಪದಗಳಿಂದ ಕೂಡಿವೆ. ಆದರೆ ಅರ್ಥವು ಬಹಳ ಗಾಂಭೀರ್ಯವಾಗಿದೆ. ಸಂಸ್ಕೃತದಲ್ಲಿ ಸೂತ್ರಗಳಿಗೆ ಹೆಚ್ಚು ವಿವರಣದ ವೃತ್ತಿಗಳು ವ್ಯಾಖ್ಯಾನಗಳು ಹೇಗೆ ಬೇಕೋ ಹಾಗೆ ಇವುಗಳಿಗೂ ವಿವರಣವಿಲ್ಲದೆ ಅಭಿಪ್ರಾಯ ತಿಳಿವುದು ಕಷ್ಟವಾದ್ದರಿಂದ ಇವನ್ನು ಕನ್ನಡದ ಸೂತ್ರಗಳೆಂದು ತಿಳಿಯಬೇಕಾಗಿದೆ. ಕಲ್ಮಠದ

ಪ್ರಭುದೇವರ ಟೀಕೆಯನ್ನು ೧ನೆಯ ಟೀಕೆ ಎಂದೂ ಇನ್ನೊಂದನ್ನು ಎರಡನೆಯ ಟೀಕೆ ಎಂದೂ ನಿವಾಸಿ ಆ ಕಲ್‌ಮಠದ ಪ್ರಭುದೇವರು ಬರೆದ ತಾತ್ಪರ್ಯವನ್ನೇ ಕಡೆಯಲ್ಲಿ ಕೊಟ್ಟಿರುತ್ತದೆ. ಮೂಲದ ಕೆಲವು ಭಾಗವನ್ನು ತಗೆದುಕೊಂಡು ಅದರ ಪ್ರತಿಪದದ ಅರ್ಥವನ್ನು ಬರೆದು ಮತ್ತೆ 'ಹೀಗೆಂಬುದು ಈ ಶಬ್ದಾರ್ಥ' ಎಂತ ಹಿಂದಿನವರು ಬರೆದಿರುವ ಟೀಕೆಗಳಲ್ಲಿ ಎರಡು ಮೂರು ಸಾರಿ ಮೂಲದ ಪದಗಳು ಬರುವದಲ್ಲದೆ "ಎಂಬ ಶಬ್ದಾರ್ಥ" ಎಂಬ ವಾಕ್ಯಗಳ ಗುಂಪು ಬಹಳ ಇರುತ್ತವೆ. ಹೀಗಾದರೆ ಒಟ್ಟಿನ ಅರ್ಥವನ್ನು ಹುಡುಕಿಕೊಂಡು ತಿಳಿದುಕೊಳ್ಳಲಿಕ್ಕೆ ಶ್ರಮಪಡಬೇಕಾಗುವದೆಂದು ಯೋಚಿಸಿ ಅರ್ಥದ ಪದಗಳನ್ನೇ ಒಟ್ಟುಗೂಡಿಸಿ ಟೀಕೆ ಎಂದು ಬರೆದಿರುತ್ತದೆ. ಈ ಎರಡು ಟೀಕೆಗಳನ್ನು ನೋಡಿದರೆ ಮೂಲ ಪದ್ಯಗಳಲ್ಲಿರುವ ಪ್ರತಿ ಪದದ ಅರ್ಥವು ದೊರಕುತ್ತದೆ. ಒಂದು ಟೀಕೆಯಲ್ಲಿ ಯಾವದಾದರೂ ಪದದ ಅರ್ಥವು ತಿಳಿಯದೆ ಇದ್ದರೆ ಇನ್ನೊಂದು ಟೀಕೆಯಲ್ಲಿ ತಿಳಿಯಬಹುದು. ಇವುಗಳ ಜೊತೆಗೆ ತಾತ್ಪರ್ಯವೂ ಸೇರಿದರೆ ರಚಿಸಿದವರ ಅಭಿಪ್ರಾಯವು ಚನ್ನಾಗಿ ತಿಳಿಯುತ್ತದೆ. ಕೆಲವುಕಡೆ ಹಳೆಗನ್ನಡ ಪದಗಳಿದ್ದು ಅರ್ಥವು ಕಷ್ಟವೆಂದು ತೋರಿದ್ದರಿಂದ ಸುಲಭವಾಗಿ ತಿಳಿಯುವಂತೆ ಸಂಧಿ ಬಿಡಿಸಿ ಅಥವಾ ಕೆಲಪದಗಳನ್ನು ಬೇರೆಯಾಗಿ ಜೋಡಿಸಿ ಬರೆದಿರುವದೇ ವಿನಹಾ ಮೂಲಕರ್ತರ ಅಭಿಪ್ರಾಯಕ್ಕೆ ಭಿನ್ನವಾಗಿ ಬರೆದಿಲ್ಲ. ಆವರಣದಲ್ಲಿ ಬರೆದ ಪದಗಳು ಈಗ ಹಾಕಿದವುಗಳಾಗಿವೆ.

ಕಲ್‌ಮಠದ ಪ್ರಭುದೇವರು ಬರೆದ ಪೀಠಿಕಾಸೂತ್ರದಲ್ಲಿ ಈ ಗ್ರಂಥದ ಅರ್ಥವು ಯೋಗಮಾರ್ಗಿಗಳು ಮೊದಲಾದವರಿಗೆ ತಪ್ಪೆಂದು ತಿಳಿಯುತ್ತದೆ ಎಂದು ಹೇಳಿದ್ದಾರೆ. ಪ್ರಭುದೇವರು ಸಹ ಶರಣನಿಗೆ ಆ ಪರವಸ್ತುವು ಗೋಚರಿಸುವದೆಂದೂ ವಾಚಾಳಕರು ಎಂದರೆ ವೇದಾಂತಿ(ಶುದ್ಧಾದ್ವೈತಿ)ಗಳಿಗೆ ಇದು ಗೋಚರಿಸುವದಿಲ್ಲ ಎಂದೂ ಬರೆದಿದ್ದಾರೆ. ಆ ಪರವಸ್ತುವು ಅದೃಶ್ಯ ಮಾನಸಗೋಚರನಲ್ಲದವನು ಅಕ್ಷರಸ್ವರೂಪನು ಲಿಂಗಸ್ವರೂಪನು ಎಂದೂ ಹೀಗೆ ತಿಳಿವುದೇ ಶರಣಮಾರ್ಗವೆಂದೂ ಹೇಳಿದ್ದಾರೆ. ಇವುಗಳಿಂದ ಶರಣಮಾರ್ಗವು ಇತರರು ಒಪ್ಪದಿರುವಂಥಾ ಒಂದು ಮಾರ್ಗವೆಂದು ತೋರುವಂತೆ ಆಗಿದೆ.

ಈಗಿನ ಕೆಲವರೂ ಹೀಗೆಯೇ ಹೇಳುತ್ತಾರೆ. ಎಂದರೆ ಲಿಂಗಾಂಗ ಸಾಮರಸ್ಯದ ಅಭಿಪ್ರಾಯವು ಬಸವೇಶನ ಕಾಲದಿಂದೀಚೆಗೆ ಗೊತ್ತಾದದ್ದೆಂದು ಹೇಳುತ್ತಾರೆ. ಆದರೆ ನಿಜಸ್ಥಿತಿಯನ್ನು ಹುಡುಕಿದರೆ ಈ ಮಾರ್ಗವು ಋಷಿಗಳ ಕಾಲದಲ್ಲಿಯೂ ಒಪ್ಪಲ್ಪಟ್ಟದ್ದೇ ಎಂದು ತಿಳಿಯುತ್ತದೆ.

೧೦೮ ಉಪನಿಷತ್ತುಗಳು ಮುದ್ರಣವಾಗಿರತಕ್ಕವುಗಳಲ್ಲಿ ಮೊದಲಿನ ಹತ್ತು ಬಹಳ ಪೂರ್ವದವುಗಳೆಂದು ತಿಳಿದಿರುವದು ಸರಿಯಷ್ಟೆ. ಇವುಗಳಲ್ಲಿ ಒಂದಾದ ಮುಂಡಕೋಪನಿಷತ್ತಿಗೆ ಶ್ರೀ ಶಂಕರಾಚಾರ್ಯರ ಗುರುಗಳಾದ ಶ್ರೀ ಭಟ್ಟಪಾದಾಚಾರ್ಯರವರು ವ್ಯಾಖ್ಯಾನವಾಗಿ ಕೆಲವು ಶ್ಲೋಕಗಳನ್ನು ರಚಿಸಿರುತ್ತಾರೆ. ಇವರು ಕಲ್ಯಾಣದಲ್ಲಿ ಇದ್ದ ಪ್ರಭುದೇವರಿಗಿಂತ ಹಿಂದಿನವರೆಂಬುದು ನಿರ್ವಿವಾದದ ವಿಷಯವಾಗಿದೆ. ಆದ್ದರಿಂದ ಈ ಉಪನಿಷತ್ತು ಅವರಿಗಿಂತಲೂ ಪೂರ್ವದ್ದು ಎಂದು ದೃಢಪಡುತ್ತದೆ. ಇದರಲ್ಲಿ ಪ್ರಥಮ ಮುಂಡಕ ಪ್ರಥಮ ಖಂಡದಲ್ಲಿ

ಅಥ ಪರಾಯಯಾ ತದಕ್ಷರಮಧಿಗಮ್ಯತೇ, ಯತ್ತದದ್ರೇ
ಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ
ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂ
ಕ್ಷ್ಮಂ ತದವ್ಯಯಂ ತದ್ಭೂತಯೋನಿಂ ಪರಿಪಶ್ಯಂತಿ
ಧೀರಾಃ............ ....

........ತಥಾಕ್ಷರಾತ್ ಸಂಭವತೀಹ ವಿಶ್ವಂ

ತಾತ್ಪರ್ಯ

ಧೀರರಾದವರು ಪರಾವಿದ್ಯೆಯಿಂದ ಕಣ್ಣು ಮೊದಲಾದವುಗಳಿಗೆ ಕಾಣಬಾರದ ಅಕ್ಷರ ಎಂದರೆ ನಿರಾಕಾರ ಪರವಸ್ತುವನ್ನು ನೋಡುತ್ತಾರೆ.. ಅಕ್ಷರದಿಂದ ಈ ಜಗತ್ತು ಉಂಟಾಗಿದೆ.

ತೃತೀಯ ಮುಂಡಕ ಪ್ರಥಮ ಖಂಡದಲ್ಲಿ

ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇ

ವೈರಾಗ್ಯಪಸಾ ಕರ್ಪುಣಾ ವಾ
ಜ್ಞಾನಪ್ರಸಾದೇನ ವಿಶುದ್ಧ ಸತ್ವಸ್ತತಸ್ತು ತಂ ಪಶ್ಯ
ತೇ ನಿಷ್ಕಲಂ ಧ್ಯಾಯಮಾನಃ

ತಾತ್ಪರ್ಯ.

ನಿಷ್ಕಲನಾದ ಪರವಸ್ತುವನ್ನು ಜ್ಞಾನಪ್ರಸಾದದಿಂದ ವಿಶುದ್ಧ ಸತ್ವನಾದವನು ಧ್ಯಾನಿಸಿ ಕಾಣುತ್ತಾನೆ.

ಇವುಗಳಲ್ಲಿ ಅಕ್ಷರ, ನಿಷ್ಕಲ ಈ ಪದಗಳು ನಿರಾಕಾರನಾದ ಪರವಸ್ತುವಿಗೆ ಉಪಯೋಗಿಸಲ್ಪಟ್ಟಿವೆ. ಇವನನ್ನು ಪರಾವಿದ್ಯೆಯಿಂದ ತಿಳಿಯಬಹುದು ಎಂದು ಹೇಳಿದ್ದಾರೆ. ವ್ಯಾಸಋುಷಿಗಳೂ ಸಹ ಶಿವಪುರಾಣ ವಾಯುವೀಯಸಂಹಿತೆಯಲ್ಲಿ ಪರಮವಿದ್ಯೆ ಅಪರಮವಿದ್ಯೆ ಎಂದು ಎರಡು ವಿದ್ಯೆಗಳಿವೆ. ಪರಮವಿದ್ಯೆಯೇ ಕಾಮಿಕಾದಿ ವಾತುಲಾಂತಗಳಾದ ೨೮ ಶಿವಾಗಮಗಳಲ್ಲಿ ಹೇಳಿದ್ದು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಶರಣನಾದರೂ ಈ ೨೮ ಶಿವಾಗಮಗಳಲ್ಲಿ ಹೇಳಲ್ಪಟ್ಟಂತೆ ನಿರಾಕಾರ ಪರವಸ್ತುವಿನ ಸೇವಾರೂಪವಾದ ನಡತೆಯನ್ನು ಅಂಗೀಕರಿಸತಕ್ಕವನೇ ಆಗಿದ್ದಾನೆ.

ಇನ್ನು ಅಕ್ಷರವೆಂದರೆ ಯಾವದು? ಎಬುದನ್ನು ವಿಚಾರ ಮಾಡೋಣ. ಹೀಗೆ ವಿಚಾರಕ್ಕೆ ಬಂದ ಅಂಶಗಳನ್ನು ಇದೇ ಸಂಬಂಧವಾಗಿ ಹೇಳಲ್ಪಟ್ಟ ಇತರ ಉಪನಿಷತ್ತುಗಳು ಮೊದಲಾದ ಪ್ರಮಾಣಗಳಿಂದ ಗ್ರಹಿಸಬೇಕು. ಹೀಗೆ ಗ್ರಹಿಸಿದ ಪ್ರಮಾಣಗಳಿಗೆ ಉಪಬೃಂಹಣ ವಾಕ್ಯಗಳು ಎಂದು ಕರೆಯುತ್ತಾರೆ. ಈ ಉಪಬೃಂಹಣ ವಾಕ್ಯಗಳಿಲ್ಲದೆ ಮಾಡಿದ ಅರ್ಥವನ್ನು ಸಾಧುವೆಂದು ಒಪ್ಪುವದಿಲ್ಲ. ಆದ್ದರಿಂದ ಹಾಗೆ ಹುಡುಕಿದ್ದಾದರೆ ಮಾಂಡೂಕ್ಯೋಪನಿಷತ್ತಿನಲ್ಲಿ (ಇದೂ ಹತ್ತರಲ್ಲಿ ಒಂದು= ಹಳೆಯದು.)

ಓಮಿತ್ಯೇತದಕ್ಷರಂ ಇದಂ ಸರ್ವಂ

ಎಂದು ಹೇಳಿರುವದರಿಂದ ಇದರಿಂದ ಅಕ್ಷರವು ಮೂಲ ಪ್ರಣವವೆಂದು ಅಭಿಪ್ರಾಯವಾಗುತ್ತದೆ. ಇಲ್ಲಿ ಅಕ್ಷರನು ಜಗತ್ಕಾರಣನೆಂದು ಹೇಳಿರುವದರಿಂದಲೂ ಲಿಂಗ ಶಬ್ದದ ಉತ್ಪತ್ತಿಯನ್ನು ಇದೇ ರೀತಿ

ಹೇಳಿರುವದರಿಂದಲೂ ಅಕ್ಷರವೆಂದರೆ ಲಿಂಗ ಎಂಬ ಅಭಿಪ್ರಾಯವಾಗು ತ್ತದೆ.

ಪ್ರಭುದೇವರಾದರೂ ೧೮ನೆಯ ಪದ್ಯದಲ್ಲಿ ಮೂಲ ಪ್ರಣವ ಅದ ರಲ್ಲಿ ವ್ಯಾಪಿಸಿರುವ ಐದು ಅಕ್ಷರಗಳು ಸೇರಿ ಆರು ಅಕ್ಷರ ಮಂತ್ರ ಅದೇ ರೀತಿ ಆಗಿರುವ ಲಿಂಗ ಎಂದು ಹೇಳಿರುತ್ತಾರೆ. ವ್ಯಾಸಋಷಿಗಳೂ ಸಹ ಅಕ್ಷರ ಎಂದರೆ ಲಿಂಗ ಎಂಬ ತಮ್ಮ ಪುರಾಣಗಳಲ್ಲಿ ಅನೇಕ ಕಡೆ ಹೇಳಿರುತ್ತಾರೆ. ಸೂಕ್ಷ್ಮತಂತ್ರ ೬ನೆಯ ಪಟಲದಲ್ಲಿ

ಪರಾತ್ಪರತರಂ ತತ್ವ ಮಕ್ಷರಂ......ಯದ್ರೂಪಂ ತಲ್ಲಿಂಗಮಿತಿ ಕೀರ್ತಿತಂ. ತಾತ್ಪರ್ಯ:—ಅಕ್ಷರವು ಲಿಂಗವೆಂದು ಹೇಳಲ್ಪಡುತ್ತದೆ.

ಪಾರಮೇಶ್ವರಾಗಮ ೧೧ನೆಯ ಪಟಲದಲ್ಲಿ

ತಸ್ಮಾದೇಕಾಕ್ಷರಂ ದೇವಮಾಹುರಾಗಮವಾದಿನಃ ತಾತ್ಪರ್ಯ:— ಆಗಮವಾದಿಗಳು ಏಕಾಕ್ಷರನನ್ನು ದೇವನೆಂದು ಹೇಳುತ್ತಾರೆ.

ಆದ್ದರಿಂದ ಅಕ್ಷರ ಎಂದರೆ ಲಿಂಗವು.

ನಿಷ್ಕಲ ಎಂಬ ಪದವಂತೂ ವೀರಶೈವರ ಬಳಕೆಯಲ್ಲಿ ಇದ್ದದ್ದೂ ಟೀ ಕಾಕಾರರ ಪೀಠಿಕಾಸೂತ್ರದಲ್ಲಿ ಬರೆಯಲ್ಪಟ್ಟದ್ದೂ ಆಗಿದೆ. ಪ್ರಣವಸ್ವ ರೂಪಿಗಳಾದ ತೋಂಟದ ಸಿದ್ಧಲಿಂಗ ಸ್ವಾಮಿಗಳು ಸಿದ್ಧೇಶ್ವರ ವಚನ ೨೩೩ರಲ್ಲಿ ನಿಷ್ಕಲವು ಲಿಂಗವೆಂದು ಹೇಳಿರುತ್ತಾರೆ. ಆದ್ದರಿಂದ ನಿಷ್ಕಲ ವೆಂದರೆ ಲಿಂಗವೆನ್ನುವದಕ್ಕೆ ಬೇರೆ ಹುಡುಕಿಕೊಂಡು ಹೋಗಬೇಕಾಗಿ ಯೇ ಇಲ್ಲ.

ಧೀರಾಃ ಎಂಬ ಪದವು ವೀರಶೈವರಿಗೆ ಹೇಳಲ್ಪಟ್ಟದ್ದೆಂದು ಈಚಿ ಗಿನ ವೀರಶೈವ ಧರ್ಮದ ಸಂಗ್ರಹ ಗ್ರಂಥಕರ್ತರು ಬರೆದಿರುತ್ತಾರೆ.

ಈ ಕಾರಣಗಳಿಂದ ನಿರಾಕಾರ ವಸ್ತುವೇ ಲಿಂಗವೆಂಬೂ ಈ ಪುಸ್ತ ಕದಲ್ಲಿ ಹೇಳಿರುವ ವಿಷಯವೂ ಉಳಿದ ವಿಷಯಗಳೂ ಮೇಲೆ ಕಂಡಂ ತೆ ವ್ಯಾಸಋಷಿಗಳು ಮೊದಲಾದವರಿಗೆ ಒಪ್ಪಿಗೆಯಾದವುಗಳೇ ಹೊರತು ಭಿನ್ನವಾದವುಗಳಲ್ಲವೆಂದೂ ಚನ್ನಾಗಿ ತಿಳಿಯುತ್ತದೆ. ಮತ್ತು ಕೆಲವು ಉಪಮಾನಗಳೂ ಕೂಡಾ ಉಪನಿಷತ್ತುಗಳಲ್ಲಿ ಬಂದವುಗಳೇ ಆಗಿವೆ.

ಮುಂಡಕ:—ತೃತೀಯ ಖಂಡದಲ್ಲಿ

ಯಥಾನದ್ಯಃ ಸ್ಯಂದಮಾನಾಃ ಸಮುದ್ರೇಸ್ತ್ತಂಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ ನಾಮರೂಪಾದ್ ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ

...ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವಭವತಿ.

ತಾತ್ಪರ್ಯ:—ನದಿಗಳು ಸಮುದ್ರದಲ್ಲಿ ಸೇರಿ ತಮ್ಮ ಹೆಸರು ಮತ್ತು ರೂಪಗಳನ್ನು ಹೇಗೆ ಬಿಡುವವೋ ಹಾಗೆ ಬುದ್ಧಿವಂತನು ನಾಮರೂಪಗಳನ್ನು ಬಿಟ್ಟು ದಿವ್ಯ ಪರಾತ್ಪರ ವಸ್ತುವನ್ನು ಹೊಂದುವನು.

ಪರಬ್ರಹ್ಮನನ್ನು ತಿಳಿದವನು ಪರಬ್ರಹ್ಮನೇ ಆಗುತ್ತಾನೆ.

ಇಷ್ಟು ದೀರ್ಘವಾಗಿ ವಿವರಿಸಿರುವ ಅರ್ಥವನ್ನೇ "ನದಿಯೊಳಗೆ ನದಿ ಬೆರದಂತೆ ಸಾಕಾರವಡಗಿದಾ ಪರಮಯೋಗಿ" ಇಷ್ಟು ಸಂಕ್ಷಿಪ್ತ ಪದಗಳಲ್ಲಿ ೧೭ನೆಯ ಪದ್ಯದಲ್ಲಿ ನೋಡಬಹುದು.

ಇದಲ್ಲದೆ ವೇದಾಂತ ಸಿದ್ಧಾಂತ ಯೋಗ ಮಾರ್ಗಗಳಿಗೆ ಈ ಶರಣಮಾರ್ಗವು ನಿಲುಕುವದಿಲ್ಲ ಎಂಬ ಇದರಲ್ಲಿರುವ ಅಭಿಪ್ರಾಯವು ಒಂದು ಮತದ ಹೆಚ್ಚುಗಾರಿಕೆಗಾಗಿ ಬರೆದುದಲ್ಲ. ಮಂಡಲ ಬ್ರಾಹ್ಮಣೋಪನಿಷತ್ತಿನಲ್ಲಿ ಎರಡನೆಯ ಬ್ರಾಹ್ಮಣದಲ್ಲಿ ಜೀವನ ಪಂಚಾವಸ್ಥೆಗಳನ್ನು ವಿವರಿಸುವಾಗ ತುರ್ಯಾವಸ್ಥೆಯು ಬ್ರಹ್ಮಾಹಂ ಎಂಬ ಶುದ್ಧಾದ್ವೈತವನ್ನು ತೋರಿಸುವದೆಂದು ಹೇಳಿರುತ್ತಾರೆ. ಮತ್ತು ತುರ್ಯಾತೀತಾವಸ್ಥೆಯಲ್ಲಿ—

ನ ಹಿ ಮದನ್ಯದಿತಿ ಜಾತ ವಿವೇಕಃ ಶುದ್ಧಾದ್ವೈತ ಬ್ರಹ್ಮಾಹಮಿತಿ ಭಿದಾಗಂಧಂ ನಿರಸ್ಯ...ಸರ್ವ ಪರಿಪೂರ್ಣ ತುರೀಯಾತೀತ ಬ್ರಹ್ಮಭೂತೋಯೋಗೀ ಭವತಿ ತಂ ಬ್ರಹ್ಮೇತಿ ಸ್ತುವಂತಿ ಸರ್ವಲೋಕ ಸ್ತುತಿ ಪಾತ್ರಃ ಸರ್ವ ದೇಶ ಸಂಚಾರ ಶೀಲಃ ಪರಮಾತ್ಮ ಗಗನೇ ಬಿಂದುಂ ನಿಕ್ಷಿಪ್ಯ ಶುದ್ಧಾದ್ವೈತಾಜಾಡ್ಯ ಸಹಜಾಮನಸ್ಕ ಯೋಗ ನಿದ್ರಾಖಂಡಾನಂದ ಪದಾನುವೃತ್ಯಾ ಜೀವನ್ಮುಕ್ತೋಭವತಿ ತಚ್ಚಾನಂದ ಸಮುದ್ರಮಗ್ನಾ ಯೋಗಿನೋ ಭವಂತಿ ತದಪೇಕ್ಷ

ಯಾ ಇಂದ್ರಾದಯಃ ಸ್ವಲ್ಪಾನಂದಾಃ ಏವಂ ಪ್ರಾಪ್ತಾನಂದಃ ಪರಮಯೋಗೀ ಭವತಿ

ತಾತ್ಪರ್ಯ:—ಸರ್ವ ಪರಿಪೂರ್ಣನಾಗಿ ತುರ್ಯಾತೀತಾವಸ್ಥೆಯನ್ನೈದಿದವನು ಬ್ರಹ್ಮನಾಗಿ ಯೋಗಿಯಾಗುತ್ತಾನೆ. ಇವನು ಶುದ್ಧಾದ್ವೈತಜಾಡ್ಯವಿಲ್ಲದ ಸಹಜ(ಅಮನಸ್ಕ)ಯೋಗವನ್ನು ಅನುಸರಿಸಿ ಪರಮಯೋಗಿಯಾಗುತ್ತಾನೆ. ಇವನಿಗಿಂತ ಇಂದ್ರಾದಿಗಳು ಕಡಿಮೆಯಾದ ಆನಂದವುಳ್ಳವರು.

ಈ ಗ್ರಂಥದ ೨೦ ಮತ್ತು ೨೨ನೆಯಪದ್ಯಗಳು ಇದೇ ತಾತ್ಪರ್ಯವನ್ನೇ ಬೋಧಿಸುತ್ತವೆ.

ಶುದ್ಧಾದ್ವೈತವನ್ನೇ ವೇದಾಂತ ಎಂದು ಈ ಗ್ರಂಥದಲ್ಲಿ ಕರೆದಿರುತ್ತಾರೆ. ಸಿದ್ಧಾಂತವೆಂಬುದು ಜೀವ ಪರಮರ ಭೇದವನ್ನು ಹೇಳುವಂಥಾದ್ದು. ಯೋಗಮಾರ್ಗವೆಂದರೆ ಪರವಸ್ತುವನ್ನು ಭಿನ್ನವಾಗಿ ತಿಳಿದು ಆಚರಿಸುವ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಮೊದಲಾದ ಭಾಗಗಳುಳ್ಳದ್ದು. ಈ ವೇದಾಂತ ಸಿದ್ಧಾಂತ ಯೋಗಮಾರ್ಗಗಳಿಗೆ ಸಿಲುಕದೆ ಇದರಲ್ಲಿ ಹೇಳಲ್ಪಟ್ಟ ಶಿವಶರಣಮಾರ್ಗವಾದ ಪರಮಯೋಗವು ಬೇರೆಯಾಗಿ ಇರುತ್ತದೆ. ಆದ್ದರಿಂದ ಪ್ರಭುದೇವರು ಬೋಧಿಸಿದುದು ಪೂರ್ವಿಕ ಋಷಿಗಳ ಅಭಿಪ್ರಾಯಕ್ಕೆ ಭಿನ್ನವಾದುದಲ್ಲ ಮತ್ತು ವಿಲಕ್ಷಣವಾದುದಲ್ಲ ಎಂಬುದನ್ನೂ, ಇದು ಶಿವಾದ್ವೈತ ಮಾರ್ಗವು ಎಂಬುದನ್ನೂ ಸರ್ವರೂ ಗ್ರಹಿಸಿ ಶ್ರದ್ಧೆ ಇಡಬೇಕೆಂದು ವಿಜ್ಞಾಪನೆ.

ಶ್ರೀಮನ್ ನಿರಂಜನ ಜಗದ್ಗುರು ದುರುದುಂಡೀಶ್ವರ ಮಹಾಸ್ವಾಮಿಗಳವರು ಸಂಸ್ಥಾನಮಠ ಅರಭಾವಿ ಬೆಳಗಾಂವ ಡಿಸ್ಟ್ರಿಕ್ಟ ಇವರು ಉದಾರಾಶ್ರಯವನ್ನು ಕೊಟ್ಟ ಈ ಗ್ರಂಥ ಮುದ್ರಣಕ್ಕೆ ಕಾರಣರಾಗಿರುತ್ತಾರೆ. ಇವರ ಈ ತೆರದ ಕಾರ್ಯವು ಅತ್ಯಂತ ಶ್ರೇಷ್ಠವಾದುದು. ಶಿವಯೋಗದ ಸಾರಭೂತವಾದ ಅಷ್ಟಾವರಣಗಳಲ್ಲಿ ಫಲರೂಪವಾಗಿರುವ ಪಾದೋದಕ ಪ್ರಸಾದಗಳನ್ನು ತಾವು ಅಧಿಕಾರಕ್ಕೆ ಬಂದಂದಿನಿಂದ ನಿತ್ಯವೂ ಸಹಜವಾಗಿ ಪಡೆಯುತ್ತಾ ಅದನ್ನೇ ನಿತ್ಯ ವ್ರತವಾಗಿ

ಆಚರಿಸಿ ಸಹಜ ಶಿವಯೋಗಿಗಳೆನಿಸಿಕೊಂಡ ಈ ಮಹಿಮರ ಭಾವಚಿತ್ರವು ಈ ಗ್ರಂಥದ ಪ್ರಾರಂಭದಲ್ಲಿ ಕೊಡಲ್ಪಟ್ಟಿರುತ್ತದೆ. ಇವರಿಗೆ ನಿರಂಜನ ಜಂಗಮ ಮೂರ್ತಿಯು ಶುಭವನೀಯಲೆಂದು ಪ್ರಾರ್ಥಿಸುತ್ತೇನೆ.

ಈ ಮಹಾ ಸ್ವಾಮಿಗಳವರ ಪಾದ ಸೇವಕರ

ದಾಸರ ದಾಸನಾದ

ಪ್ರಕಾಶಕ.

---

ಇದನ್ನೆಲ್ಲಾ ನೋಡಿದರೆ ವೀರಶೈವರು ಪರಬ್ರಹ್ಮನನ್ನು ತಿಳಿದು ಸಾಧಿಸುವದಕ್ಕಾಗಿ ಅನುಸರಿಸುತ್ತಿರುವ ತತ್ವ (ಮತಧರ್ಮ)ಗಳು ಆಧುನಿಕ (ಈಗಿನ ಕಾಲದವುಗಳು) ಅಥವಾ ೭೦೦--೮೦೦ ವರ್ಷಗಳ ಈಚೆಗೆ ಹುಟ್ಟಿದವುಗಳಾಗಿ ತೋರುವದಿಲ್ಲ. ಅರುವತ್ತುಮೂರು ಪುರಾತನರಲ್ಲಿ ಅನೇಕರಿಗೆ ಲಿಂಗಧಾರಣೆ ಇತ್ತೆಂದು ದ್ರಾವಿಡ ಭಾಷೆಯಲ್ಲಿರುವ ಪೆರಿಯ ಪುರಾಣದಿಂದ ತಿಳಿಯಬರುತ್ತದೆ. (ಪುರಾತನ ಭಕ್ತವಿಲಾಸ ಎಂಬ ಗ್ರಂಥವನ್ನು ನೋಡಿರಿ) ದ್ರಾವಿಡ ದೇಶದಲ್ಲಿ ಅನೇಕ ಶೈವ ವೀರಶೈವರಾಜರುಗಳಾಗಿ ಹೋದರು. ಕಲಿಗಣನಾಥನೆಂಬ ಒಬ್ಬ ರಾಜನು ತನ್ನ ಬಳಿಗೆ ಬರುವವರು ಲಿಂಗಧಾರಿಗಳಾಗಿರಬೇಕೆಂದು ಕಟ್ಟು ಮಾಡಿದ್ದನು. ಒಬ್ಬ ಭಿಕ್ಷುಕನು ಲಿಂಗಧಾರಣವಿಲ್ಲದೆ ಭಿಕ್ಷೆಗಾಗಿ ತನ್ನ ಬಳಿಗೆ ಬರಲು ಆದನ್ನು ಕೂಡಾ ಸಹಿಸದೆ ಆವನಿಗೆ ಲಿಂಗಧಾರಣೆ ಮಾಡಿಸಿದನು. (ಶಿವನೇ ಪರೀಕ್ಷೆಗಾಗಿ ಹೀಗೆ ಬಂದಿದ್ದನೆಂದು ಪೂರ್ವದ ಲೇಖನಗಳು ದೊರೆಯುತ್ತವೆ.) ಈತನೂ ಪುರಾತನರಲ್ಲಿ ಒಬ್ಬನು. ಈ ಪುರಾತನರು ಕ್ರಿ. ಶ. ೬ನೆಯ ಶತಮಾನದಲ್ಲಿದ್ದರೆಂದು ಕೆಲವರೂ ೮-೯ ನೆಯ ಶತಮಾನದವರೆಂದು ಕೆಲವರೂ ಹೇಳುತ್ತಾರೆ. ಏನೇ ಆಗಲಿ ಇವರು ಕಲ್ಯಾಣದ ಪ್ರಭುದೇವರಿಗಿಂತ ಹಿಂದಿನವರು. ಶಿವನಲ್ಲಿ ಭಕ್ತಿ ಇಡುವುದಾದ ಶೈವ ಎಂಬುದು ೨೦೦೦ ವರ್ಷಗಳಿಗಿಂತಲೂ ಹಿಂದೆಯೇ ರೂಢಿಯಲ್ಲಿ ಇದ್ದದ್ದು. ಶಿವಮೊಗ್ಗಾ ಡಿಸ್ಟ್ರಿಕ್ಟ ಶಿಕಾರಿಪುರ ತಾಲ್ಲೂಕು ಮಳವಳ್ಳಿ ಎಂಬ ಗ್ರಾಮದಲ್ಲಿ ಇರುವ ಒಂದು ಶಿವಾಲಯವು ಸುಮಾರು ಕ್ರಿ-ಶ. ಎರಡನೆಯ ಶತಮಾನದಲ್ಲಿ ಕಟ್ಟಲ್ಪಟ್ಟಿದ್ದೆಂದು ಶಾಸನಗಳಿಂದ ತಿಳಿದುಬಂದಿರುತ್ತದೆ.

ಆಗಮಗಳಲ್ಲಿ ಹೇಳಿದ ಪ್ರಕಾರ ಶೈವವೆಂಬುದು ಉದಿಸಿದಾಗಲೇ ವೀರಶೈವವೆಂಬುದೂ ಉದಯವಾದಂತೆ ತಿಳಿಯುವದರಿಂದ ವೀರಶೈವವು ಪೂರ್ವದ್ದೇ ಹೊರತು ಒಂದೇ ಸಾವಿರ ವರುಷದ್ದಲ್ಲ.

ಈಗಿನದಾಗಲೀ ಹಳೆಯದಾಗಲೀ ತತ್ವವು ಉತ್ತಮವಾದದ್ದೇ ಹೇಗೆ? ಎಂಬುದನ್ನು ವಿಚಾರ ಮಾಡಿ ತಿಳಿಯಬೇಕಾದದ್ದು ಮುಖ್ಯಾಂಶ. ಈಗಿನವರು ಯೋಚಿಸಿದರೂ ಈ ಲೋಕದಲ್ಲಿ ಮನುಷ್ಯ ಪ್ರಾಣಿಯೇ ಹೆಚ್ಚಿನವನೆಂದು ತಿಳಿದಿದ್ದಾರೆ. ಆದ್ದರಿಂದ ಕಲ್ಲು ಮೊದಲಾದ ಮೂರ್ತಿಗಳಲ್ಲಿ ಸ್ಥಾಪಿಸಿದ ದೇವಕಲೆಗಿಂತಲೂ ಮನುಷ್ಯನಲ್ಲಿಯೇ ದೇವಕಲೆಯನ್ನು ಸ್ಥಾಪಿಸುವದು ಉತ್ತಮವೆಂಬುದನ್ನು ಈಗಿನವರು ಹೆಚ್ಚು ಯೋಚನೆ ಮಾಡಿ ನಿರ್ಧರಿಸಬಹುದು. ಪೂರ್ವದವರಾದರೂ ಹಾಗೆಯೇ ತಿಳಿದುಕೊಂಡು "ತನ್ನ ಬಿಟ್ಟು ಶಿವನಿಲ್ಲ" ಎನ್ನುತ್ತಿದ್ದರು. ಇದೇ ವಿವೇಕವನ್ನೇ ಹಿಂದೂ ಧರ್ಮದ ಸಾರವು ಬೋಧಿಸುವದೆಂಬುದನ್ನು ಮೇಲೆ ಕಂಡ ಉಪನಿಷತ್ತಿನ ಉದಾಹರಣೆಗಳಲ್ಲಿ ನೋಡಬಹುದು. "ನ ಹಿ ಮದನ್ಯದಿತಿ ಜಾತ ವಿವೇಕಃ'' ಎಂಬುದು ಈ ಅರ್ಥವನ್ನೇ ತೋರಿಸುತ್ತದೆ. ತನ್ನ ರೂಪು ಶಿವನೆಂಬ ಜ್ಞಾನವಾದ ಮೇಲೆ ಜ್ಞಾನಕ್ಕೆ ತಕ್ಕ ಕ್ರಿಯೆ ಇರಬೇಕಾದುದು ಅವಶ್ಯಕವಾದದ್ದರಿಂದ ಅಂಗಕ್ಕೆ ಶಿವಭಾವವನ್ನು ಹೊಂದಿಸುವವಕ್ಕಾಗಿ ಲಿಂಗಧಾರಣೆ ಎಂಬ ಕ್ರಿಯೆ ಇರಬೇಕೆಂದು ಶಿವಶರಣರು ನಂಬಿರುತ್ತಾರೆ. ಆದ್ದರಿಂದ ಈ ಶರಣಮಾರ್ಗವು ಈಗ್ಯೂ ಉತ್ತಮವೇ ಆಗಿರುತ್ತದಲ್ಲದೆ ಆಗ್ಯೂ ಉತ್ತಮವೇ ಆಗಿದ್ದಿತೆಂಬುದನ್ನೂ ಮುಂದೂ ಮನುಷ್ಯಜಾತಿಯು ಶ್ರೇಷ್ಠವೆನಿಸಿಕೊಂಡು ಈ ಭೂಮಿಯ ಮೇಲೆ ಇರುವವರೆವಿಗೂ ಉತ್ತಮವಾಗಿರುವದೆಂಬುದನ್ನೂ ಮರೆಯದಿರಬೇಕು.

ಲಿಂಗಧಾರಣೆಯು ಬಹಳ ಪೂರ್ವದಿಂದಲೂ ಬಂದದ್ದೆಂಬುದು ಶೋಧಿಸುತ್ತಾ ಹೋದ ಹಾಗೆಲ್ಲಾ ನಿದರ್ಶನಕ್ಕೆ ಬರಬಹುದು. ಪರಂತು ಶ್ರದ್ಧಾ ದೃಷ್ಟಿಯಿಂದ ಶೋಧಿಸಿ ಪ್ರಕಟಿಸುವವರು ಇನ್ನೂ ಬೇಕೆಂದು ಯೋಚನೆಗೆ ಬರುತ್ತಾ ಇದೆ.



## ಲಿಂಗಧಾರಣ ಸಂಬಂಧದ ಕೆಲವು ಶಿಲಾ ಲೇಖಗಳು ಮತ್ತು ಬರೆವಣಿಗೆಗಳು.



ಕಳೆದ ೩ ನೆಯ ಸಂಚಿಕೆಯಲ್ಲಿ ಕಲ್ಯಾಣದ ಪ್ರಭುದೇವರಿಗಿಂತ ಮುಂಚೆ ವೀರಶೈವ ಮತವಿದ್ದಿತೆಂಬುದಕ್ಕೆ ಕೆಲವು ಉದಾಹರಣೆಗಳು ಎಂಬ ಶಿರೋ ಲೇಖದಲ್ಲಿ ಬರೆದಿರುವ ವಿಷಯಗಳನ್ನು ನೋಡಿ ಬೆಂಗಳೂರಿನಲ್ಲಿರುವ ರಿಟೈರ್ಡ ಚೀಫ್‌ಕೋರ್ಟಿ ಹೆಡ್‌ಟ್ರಾನ್‌ಸ್ಲೇಟರವರಾದ ಮ॥ ರಾ॥ ಜೀರಿಗೆ ಬಸವಲಿಂಗಪ್ಪನವರು ಕಾಳಾಮುಖರಿಗೆ ಲಿಂಗಧಾರಣವಿದ್ದ ಶಾಸನವನ್ನು ಬರೆದು ಕಳುಹಿಸಬೇಕೆಂದು ಕೇಳಿದ್ದಾರೆ. ಲಿಂಗಧಾರಣೆಯು ಬಹಳ ಪೂರ್ವದಲ್ಲಿ ಇತ್ತೆಂಬುದು ಸಮಾಜಕ್ಕೆ ತಿಳಿಯಬೇಕಾದ ವಿಷಯವಾದ್ದರಿಂದ ಇಲ್ಲಿ ಪ್ರಕಟಿಸಿ ಇರುತ್ತದೆ.

ಈಗ ಶಿಕಾರಿಪುರ ತಾಲ್ಲೂಕ್ ಕೊ-ಆಪರೇಟಿವ್ ಸೊಸೈಟಿಗಳ ಇನ್‌ಸ್ಪೆಕ್ಟರಾಗಿರುವ ವೇ॥ Y. M. ಶ್ರೀಕಂಠಯ್ಯನವರು ಬಿ. ಎ. ಇವರು ಪಟ್ಟಪದವಿಗಾಗಿ ಓದುತ್ತಿದ್ದಾಗ ಬರೆದ ಒಂದು ಲೇಖನವು ಈ ವಿಷಯದ ಕೆಲವು ಅಂಶಗಳನ್ನು ತಿಳಿಸುತ್ತದೆ. ಅದು ಹೀಗೆ ಇದೆ:—

( ಆವರಣದೊಳಗಿನ ಅಂಶಗಳು ಪ್ರಕಾಶಕರು ಬರೆದವು. )

ರಾಣೇಬೆನ್ನೂರು
೨೭-೧೧-೨೮.

ಶ್ರೀ ಗುರುಗಳಲ್ಲಿ ವಂದನೆಗಳು........................

ನಮ್ಮ ಕನ್ನಡ ನುಡಿಯಲ್ಲಿ ಪತ್ರ ಬರೆಯಲು ಪ್ರಾರಂಭಿಸಿದ್ದಕ್ಕೆ ಕ್ಷಮೆಯಿರಲಿ. ( ಇಂಗ್ಲಿಷ್ ವಿದ್ಯಾರ್ಥಿದೆಸೆಯಲ್ಲಿ ಕನ್ನಡವು ಕ್ಷಮೆ ಕೇಳಿಕೊಂಡಿತಲ್ಲವೆ ! ) ನಮ್ಮ ಬಳ್ಳಿಗಾವೆಯ ವಿಶ್ವವಿದ್ಯಾಪೀಠ ಅಲ್ಲಿಯ ಜನತೆ ಇವುಗಳ ವಿಷಯವಾಗಿ ದಿನೇ ದಿನೇ ಶೋಧಗಳು ಹೆಚ್ಚುತ್ತಿವೆ. ಈ ಕೆಳಗಿನ ಪದ್ಯಗಳನ್ನು ನೀವು ನೋಡಿರಬಹುದು.

( ಬಳ್ಳಿಗಾವೆ ಎಂಬುದು ಪ್ರಭುದೇವರು ಬನವಸೆಯಿಂದ ಬಂದು ಇದ್ದಂಥಾ ಊರು. ಮೈಸೂರು ದೇಶದ ಶಿವಮೊಗ್ಗಾ ಡಿಸ್ಟ್ರಿಕ್ಟ ಶಿಕಾರಿಪುರ ತಾಲ್ಲೂಕಿನಲ್ಲಿ ಇದೆ. ಇಲ್ಲಿ ದೇವಾಲಯಗಳೂ ಶಿಲಾಶಾಸನಗಳೂ

ಬಹಳವಾಗಿ ಇರುತ್ತವೆ. ಬಲಿಪುರ, ಎಂದು ಸಂಸ್ಕೃತ ಪದವೂ ಬೆಳ ಗಾವಿ, ಬಳಗಾವೆ ಎಂಬ ಕನ್ನಡ ಪದಗಳೂ ಇದರ ಬೇರೆ ಹೆಸ ುಗಳು).

ವೃತ್ತ

ಜನಪದ ಕೋಟಿಯೊಳ್ ನೆಗರ್ದ(ಳ್ದ?) ಕುಂತಳ ದೇಶಮೇ ಸಾರವಲ್ಲಿ ತಾಂ।
ಬನವಸೆನಾಡು ಸಾರವದರೊಳ್ ಪರಿಭಾವಿಸೆ **ಬಳ್ಳಿಗಾವೆ** ಸ।
ಜ್ಜನ ಸಿಧಿ ಪಟ್ಟಣಂಗಳ ತವರ್ಮನೆ ಸಾರಮೆನಿಪ್ಪ ಕೀರ್ತಿ ತಪ್।
ವನನಿಧಿ ಮೇರೆಯಾಗೆ ಸಲೆ ಶರ್ವಿದುರ್ವಿ ಧಾತ್ರಿಯೊಳ್॥

ಅದು ವಿಬುಧೈಕ ವಾಸಮುಮರಾವತಿಯಂತತಿ ಭೋಗಿ ಸೇವ್ಯಮುಂ।
ತದು ಪೆಸರ್ವೆತ್ತು ರಂಜಿಸುವ ಭೋಗವತಿ ಪುರದಂತೆ ಭಾವಿಸ।
ಲ್ಕದು ಧನದ ಪ್ರಸೇವ್ಯವಳಕಾ ಪುರದಂತೆನೆ ಬಳ್ಳಿಗಾವೆ ಗಾ।
ವುದೋ ಪೊಡಿ ಪಟ್ಟಣಂ ನೆಗರ್ದ ವಾರ್ಧಿಪರೀತ ಸಮಸ್ತ ಧಾತ್ರಿಯೊಳ್॥

ಅಲ್ಲಿಯ ನಗರ ಜನಂಗಳ ಗುಣಂಗಳಂ ಪೇಳ್ವಡೆ :—

ಪರ ಹಿತರೇಕವಾಕ್ಯರರಿವಿಂಗೆ ತವರ್ಮನೆ ಧರ್ಮದಾಗರಂ।
ಸರಸ ಕವೀಶ್ವರಾವಳಿಗೆ ಕೇಳೀಗೃಹಂ ಕಣಿ ಪೆರ್ಮೆ ಹೊರ್ಮೆಯುಂ।
ಹರಿ ಹರ ಪಂಕಜಾನನ ಜಿನಾದಿ ವಿನಿರ್ಮಣ ಧರ್ಮರೆಂದೊಡಾರ್।
ದೊರೆಯರೋ! ಬಳ್ಳಿಗಾವಿಯ ಮಹಾ ನಗರಂಗಳೊಳೇ ಧರಿತ್ರಿಯೊಳ್॥

ಮತ್ತಮಲ್ಲಿ :—

ಹರಿಹರ ಕಮಲಾಸನ ವೀ।
ತರಾಗ ಬೌದ್ಧಾಲಯಂಗಳಿಂದಿಂತು ವಸುಂ।
ಧರೆಗೆಸೆವ ಪಂಚಸರದಂ।
ತಿರೆ ಪಂಚ ಮಠಗಳೆಸೆವುವಾ ಪಟ್ಟಣದೊಳ್॥

ಈ ಪಂಚ ಮಠಗಳು ವೀರಶೈವರವು. ಕಾಲಮುಖರು ಜೈನ ಬೌದ್ಧರು ವಿದ್ಯೆಯ ಉತ್ತೇಜಕರು. ಅವರಿಂದ ಅಲ್ಲಿ ದಕ್ಷಿಣ ದೇಶದಲ್ಲಿ ಪ್ರಸಿದ್ಧಿಯಾದ ವಿಶ್ವವಿದ್ಯಾಪೀಠವು ಸ್ಥಾಪಿಸಲ್ಪಟ್ಟಿತು. ಇದು ೯—೧೦

ನೆಯ ಶತಮಾನಗಳ ಕಾಲ.

## ಲಿಪಿಯ ತರ್ಜುಮೆ.

............

ಈ ಪಂಚ ಮಠಗಳಲ್ಲಿ ಮೂಳಿಗ ಮಧುಕೇಶ್ವರ ಪಂಡಿತ, ಸರ್ವೇಶ್ವರ ಪಂಡಿತದೇವ ಜ್ಞಾನಶಕ್ತಿದೇವ ಮಠಾಧಿಕಾರಿಗಳು. ಈ ಪಟ್ಟಣದಲ್ಲಿಯ ಮಹಾವೀರ ಬಣಜಿಗರು ಮಹದೇವಸೆಟ್ಟಿ, ಮಾಣಿಕಸೆಟ್ಟಿ, ಮಾಚಿಸೆಟ್ಟಿ ಪ್ರಮುಖರು. ಈ ಸೆಟ್ಟರು ನೇಪಾಳ ಕಾಂಭೋಜ (Combodia-China) ಬರ್ಬರ (Egypt) ಕುರುಂಬ ಗೊಲ್ಲಲಾಳ ಮೊದಲಾದ ದೇಶಗಳಿಗೆ ಜಲಮಾರ್ಗಗಳಿಂದ ವ್ಯಾಪಾರಕ್ಕೆ ಹೋಗುತ್ತಿದ್ದರು. ಇವರು ಲಿಂಗವನ್ನು ಮಸ್ತಕದಲ್ಲಿ ಧರಿಸುತ್ತಿದ್ದರು. ಕೈಲಾಸ ನಿಶಾನೆ, ಶ್ವೇತಛತ್ರಿ, ಇವುಗಳನ್ನು ಉಪಯೋಗಿಸುತ್ತಿದ್ದರು. ಈ ವೀರಬಣಜಿಗರು ವೀರಶೈವರಲ್ಲಿ ಒಂದು ಒಳಪಂಗಡ.

ಇವನ್ನೆಲ್ಲಾ ನೋಡಿದರೆ ನಮ್ಮ ಬೆಳಗಾವಿಯ ವಿಷಯವಾಗಿಯೂ ಮತ್ತು ಇನ್ನೂ ಇತರೇ ಮಹತ್ವದ ವಿಷಯಗಳೂ ಹೊರಬೀಳಲಿಕ್ಕೆ ಹತ್ತಿವೆ.

............

## ಇತಿ ವಿನಂತಿ.

( ಈ ಬೆಳಗಾವಿಯು ಇವರ ಸ್ಥಳವಾದ ಶಿರಾಳಕೊಪ್ಪಕ್ಕೆ ಒಂದು ಮೈಲು ದೂರದಲ್ಲಿ ಇರುವದರಿಂದಲೂ, ಬಸವೇಶ್ವರನ ಪ್ರಧಾನಿತ್ವಕ್ಕೆ ಒಳಪಟ್ಟ ದಂಡನಾಯಕನಾದ ಕೊಂಡುಗೂಳಿ ಕೇಶಿರಾಜನೆಂಬ ವೀರಶೈವನ ಆಧಿಪತ್ಯಕ್ಕೊಳಪಟ್ಟದ್ದು ಕಲ್ಯಾಣಪಟ್ಟಣದಲ್ಲಿ ಇದ್ದಂತೆ ತ್ರಿಪುರಾಂತಕ ಕೆರೆ, ತ್ರಿಪುರಾಂತಕ ಗುಡಿ ಮುಂತಾದ ಕೆಲವು ಗುರುತುಗಳು ಉಳ್ಳದಾಗಿ ಪ್ರತಿವರ್ಷ ಫಾಲ್ಗುಣ ಬ॥ ೩ ಯಲ್ಲಿ ನಡೆಯುವ ಕೇದಾರೇಶ್ವರ ಮತ್ತು ಬಸವೇಶ್ವರ ರಥೋತ್ಸವ ಕಾಲದಲ್ಲಿ ಪದ್ಧತಿಯ ಪ್ರಕಾರ ಹೊಗಳಿಸಿಕೊಳ್ಳುವ ಬಿರುದುಗಳಲ್ಲಿ ದ್ವಿತೀಯ ಕಲ್ಯಾಣವೆಂದು ಉಗ್ಗಡಿಸಿಕೊಳ್ಳುವಂಥಾದ್ದಾಗಿ ಇರುವದರಿಂದಲೂ ಕಲ್ಯಾಣದ ಬಸವಣ್ಣನವರು ಆಗಾಗ ಇಲ್ಲಿಗೆ ಬರುತ್ತಿದ್ದು ಅವರು ಕೂಡುತ್ತಿದ್ದ ಕಟ್ಟೆ= ಎತ್ತರವಾದ ಸ್ಥಳ ಒಂದು ಇರುವದೆಂದು ಪ್ರಸಿದ್ಧವಾಗಿ ಇರುವದ

ರಿಂದಲೂ 'ನಮ್ಮ ಬೆಳಗಾವಿ' ಎಂಬ ಅಭಿಮಾನವು ಇವರಿಗೆ ಬಂದಿರಬಹುದು. )

ಮತ್ತು ಧಾರವಾಡದ 'ಜಯಕರ್ನಾಟಕ' ಪತ್ರಿಕೆಯ ೧೯೩೦ ನೆಯ ನವಂಬರು ಸಂಚಿಕೆಯಲ್ಲಿ ಮ॥ ರಾ॥ ಗಲಗಲಿ ಎಂಬುವವರು ಕಾಳಾಮುಖರ ವಿಷಯವಾಗಿ ಬರೆದಿರುವ ಲೇಖನದಲ್ಲಿ ಈ ಕೆಳಗೆ ಕಂಡ ವಿಷಯಗಳಿರುತ್ತವೆ.

ಮೇಲೆ ಕಂಡ ಬೆಳಗಾವಿಯ ೯೪ನೆಯ ಶಾಸನ (೧೦೭೪ನೆಯ ಇಸವಿ)

........'ಲಿಂಗಿಯಪ್ಪವರಂ ಕೊಂದವಂ ಸ್ವಗೋತ್ರ ಸಹಿತಂ ಬೀಳ್ಗುಂ
ಮಹಾ ಘೋರದೊಳ್'

ಇದೇ ಬೆಳಗಾವಿಯ ೯೯ ನೆಯ ಶಾಸನ (ಇಸವಿ ೧೧೧೩)

........'ಲಿಂಗಿಗಳುಂ ಬೆರಸಳಿದಂ ಲಿಂಗಮನೀ ಧರ್ಮಮಂ
ಕರುತ್ತಳಿದಧಮಂ'

ಹಾಸನ ೭೧ ನೆಯ ಶಾಸನ

........'ಶಿವಧರ್ಮ ಪ್ರತಿಪಾಲಕರ್'

ಅರಸೀಕೆರೆ ೧೦೮ ನೆಯ ಶಾಸನ

........'ಅಸಂಖ್ಯಾತ ಮಹಾ ಗಣಂಗಳ್'

ಶಿಕಾರಿಪುರ ೩೩೭ ನೆಯ ಶಾಸನ

........'ಮಾಹೇಶ್ವರರ್'

ಈ ರೀತಿ ಬರೆದಿರುವದರಿಂದ ಕಾಳಾಮುಖರು ಲಿಂಗಿಗಳೆನ್ನಲಿಕ್ಕೆ ಯಾವ ಅಭ್ಯಂತರವೂ ಇರುವದಿಲ್ಲ. ಮತ್ತು ಗಣಂಗಳ್ ಮಾಹೇಶ್ವರರ್ ಎಂಬ ಪದಗಳೂ ಸಹಾ ಲಿಂಗಧಾರಿಗಳೆಂಬುದನ್ನು ತೋರಿಸುತ್ತವೆ ಎಂಬುದು ಇವುಗಳಿಂದ ಗೊತ್ತಾಗುತ್ತದೆ.

ಇದೇಕೆ? ಗ್ರಂಥಗಳಲ್ಲಿ ಈ ವಿಷಯವು ಬರೆಯಲ್ಪಟ್ಟು ನಮಗೆ ಸಾಧಾರಣವಾಗಿ ಕಾಲನಿರ್ಣಯಕ್ಕೆ ಅವಕಾಶ ಸಿಕ್ಕದಿದ್ದರೆ ಶಾಸನಗಳ

ನ್ನು ಹುಡುಕಿಕೊಂಡು ಹೋಗಬೇಕು. ಹಾಗೆ ಗ್ರಂಥಗಳಲ್ಲಿ ಏನೂ ದೊರಕದಿದ್ದರೆ ಶಾಸನಗಳು ಮುಖ್ಯಗಳಾಗುವವು. ಎಲ್ಲಾ ವಿಷಯಗಳೂ ಶಾಸನಗಳಲ್ಲಿಯೇ ಎಲ್ಲಿ ದೊರಕುತ್ತವೆ? ಜನಕರಾಜನು ಮಿಥಿಲೆಯಲ್ಲಿ ಇದ್ದನೆಂಬುದು ಎಲ್ಲರೂ ಒಪ್ಪತಕ್ಕ ವಿಷಯ. ಯಾವ ಶಿಲಾಶಾಸನದಲ್ಲಿ ಉಲ್ಲೇಖವಿದೆ? ಇಲ್ಲದ ಮಾತ್ರಕ್ಕೆ ಜನಕರಾಜನೇ ಇಲ್ಲವೇನು? ದ್ವಾರಕೆಯಲ್ಲಿ ಶ್ರೀಕೃಷ್ಣನಿದ್ದನೆಂಬುದು ನಿಜವಾದ ವಿಷಯ. ಆದರೆ ಶಿಲಾಲೇಖವೆಲ್ಲಿದೆ? ಇವುಗಳನ್ನು ಹೇಗೆ ನಂಬಲಿಕ್ಕೆ ಸಾಧ್ಯವೋ ಹಾಗೆ ನಂಬಿಗೆಗೆ ಅರ್ಹವಾದ ಇತರ ವಿಷಯಗಳಿಂದಲೂ ಲಿಂಗಧಾರಣ ವಿಷಯವನ್ನು ನಿರ್ಧರಿಸಬಹುದಲ್ಲವೇ! ಇಂಥಾ ವಿಷಯಗಳನ್ನು ಹುಡುಕಿಕೊಂಡು ಹೋದರೆ ಅನೇಕ ಉದಾಹರಣೆಗಳು ತೋರಿಬರುತ್ತವೆ.

ನಾರದ ಪರಿವ್ರಾಜಕೋಪನಿಷತ್ತಿನಲ್ಲಿ—

ಸನ್ಯಾಸಾಧಿಕಾರಕ್ಕೆ ಯಾರು ಯೋಗ್ಯರು ಎಂಬ ಪ್ರಶ್ನೆಗೆ ಉತ್ತರ ಕೊಡುವ ಕಾಲದಲ್ಲಿ ಚಕ್ರೀ ಲಿಂಗೀ ಮುಂತಾದ ಹೆಸರುಗಳು ಬಂದಿವೆ.

ಭಸ್ಮ ಜಾಬಾಲೋಪನಿಷತ್ತಿನಲ್ಲಿ—

........ತತ್ರ (ಕಾಶ್ಯಾಂ) ಋಷಯಃ ಶಾಂಭವಾಃ ಪಾಶುಪತಾಃ ಮಹಾಶೈವಾಃ ದೇವಾವತಂಸಂ ಶೈವಂ ಪಂಚಾಕ್ಷರಂ ಜಪಂತಸ್ತಾರಕಂ

ತಾತ್ಪರ್ಯ:— ಕಾಶಿಯಲ್ಲಿ ಋಷಿಗಳು ಶಾಂಭವರು ಪಾಶುಪತರು ಮಹಾಶೈವರು ಶಿವಪಂಚಾಕ್ಷರಿಯನ್ನು ಜಪಿಸುತ್ತಿದ್ದರು.

ಇದರಲ್ಲಿ ಕಂಡ ಪಾಶುಪತರು ಲಿಂಗಧಾರಿಗಳು. ಹೇಗೆಂದರೆ:—

ಪಾರಮೇಶ್ವರಾಗಮ ೧೦ ನೆಯ ಪಟಲದಲ್ಲಿ—

ಅವಧೂತಶ್ಚ ಸನ್ಯಾಸೀ ಯೋಗೀ ಪಾಶುಪತಃ ಶಿವಃ
ಲಿಂಗೀ ವೀರೋ ವೀರಶೈವೋ ಮಹಾ ಮಾಹೇಶ್ವರೋ ಯತಿಃ
ಪರ್ಯಾಯ ನಾಮಾನ್ಯೇತಾನಿ ವೀರಶೈವಸ್ಯ ಯೋಗಿನಃ

ತಾತ್ಪರ್ಯ:— ವೀರಶೈವನಾದ ಯೋಗಿಗೆ ಅವಧೂತ, ಸನ್ಯಾಸಿ, ಯೋಗಿ

ಪಾಶುಪತ, ಶಿವ, ಲಿಂಗಿ, ವೀರ, ವೀರಶೈವ ಮಹ-ಮಹೇಶ್ವರ ಯತಿ ಎಂಬಿವು ಒಂದೇ ಅರ್ಥವುಳ್ಳ ಬೇರೆ ಬೇರೆ ಹೆಸರುಗಳಾಗಿರುತ್ತವೆ.

ಹೀಗಿರುವುದರಿಂದ ಲಿಂಗಾಯತ ಎಂಬ ಹೆಸರು ಬಳಕೆಗೆ ಬರುವದಕ್ಕೆ ಮುಂಚೆ ವೀರಶೈವರಿಗೆ ಈ ಹೆಸರುಗಳಿದ್ದವೆಂದು ತೋರುತ್ತದೆ. ಪಾಶುಪತರೂ ಸಹಾ ಲಿಂಗಧಾರಿಗಳೆಂಬುದಕ್ಕೆ ಅನೇಕ ಪ್ರಮಾಣಗಳಿರುವದರಿಂದ ಮೇಲೆ ಕಂಡ ಜಾಬಾಲೋಪನಿಷತ್ತಿನಲ್ಲಿ ಲಿಂಗಿಗಳ ಉಲ್ಲೇಖವಿದ್ದಂತಾಯಿತು. ಈ ಕಾಲವು ಜಾಬಾಲ ಋಷಿಗಳಿದ್ದ ಕಾಲ.

ಇದಲ್ಲದೆ ಮ॥ ರಾ॥ ಗಲಗಲಿ ಎಂಬುವವರು ಮೇಲೆ ಕಂಡ ಲೇಖನದಲ್ಲಿ ರಾಜಾ ಗುರುದಾಸ ಸ್ಟ್ರೀಟ್ ಭಾರತ ಯಂತ್ರಾಲಯ ಶ್ರೀ ಪ್ರತಾಪ ಚಂದ್ರರಾಯ ಮುದ್ರಿತ ಮಹಾ ಭಾರತ ಅನುಶಾಸನ ಪರ್ವ ೨೨ ನೆಯ ಅಧ್ಯಾಯದಲ್ಲಿ

" ಧರ್ಮರಾಯನು ದಾನಕ್ಕೆ ಅರ್ಹರಾದವರನ್ನು ಕುರಿತು ಭೀಷ್ಮನನ್ನು ವಿಚಾರಿಸುವಲ್ಲಿ—

' ಬ್ರಾಹ್ಮಣಂ ಲಿಂಗಿನಂಚೈವ ಬ್ರಾಹ್ಮಣಂವಾಪ್ಯಲಿಂಗಿನಂ '

ಲಿಂಗಿ ಬ್ರಾಹ್ಮಣನೋ ಅಥವಾ ಅಲಿಂಗಿ ಬ್ರಾಹ್ಮಣನೋ ಎಂದು ಕೇಳಿದನೆಂತಲೂ

ಭೀಷ್ಮನು—

ಸ್ವವೃತ್ತಿಮಭಿಸನ್ನಾಯ ಲಿಂಗಿನೇ ಚೇತರಾಯಚ
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ

ತಾತ್ಪರ್ಯ— ಬ್ರಹ್ಮವೃತ್ತಿಯನ್ನವಲಂಬಿಸಿರುವ ಲಿಂಗಿಗಾಗಲೀ ಅಥವಾ ಅಲಿಂಗಿ ಬ್ರಾಹ್ಮಣನಿಗಾಗಲೀ ಕೊಡಬೇಕು. ಇಬ್ಬರೂ ತಪಸ್ವಿಗಳು. ಎಂದು ಅದಕ್ಕೆ ಉತ್ತರ ಕೊಟ್ಟನು. "

ಈ ಶ್ಲೋಕಗಳು ಇರುವದಾಗಿಯೂ ಮತ್ತು ಕಲಿಕತ್ತೆಯ ವಸಂತ ಕುಮಾರ ಭಟ್ಟಾಚಾರ್ಯ ಸಂಪಾದಿತ ಸ್ವಪ್ನ ಫಲವಿಜ್ಞಾನವೆಂಬ ಪ್ರಾಚೀನ ಗ್ರಂಥದಲ್ಲಿ—

" ದೇವತಾಶ್ಚ ದ್ವಿಜಾಗಾರಃ ಪಿತರೋ ಲಿಂಗಿನಸ್ತಥಾ
ಯದ್ದದಾತಿ ಮಿಥಃ ಸ್ವಪ್ನೇ ತತ್ತಥೈವ ಭವಿಷ್ಯತಿ

ದೇವತೆಗಳೂ ಬ್ರಾಹ್ಮಣರೂ ಗೋವುಗಳೂ ಪಿತೃಗಳೂ ಲಿಂಗಿಗಳೂ ಸ್ವಪ್ನದಲ್ಲಿ ಏನು ಕೊಡುವರೋ ಅದರಂತೆ ಆಗುವದು.

ಕಲಿಕತ್ತೆಯ ವಸುಮತಿ ಸಾಹಿತ್ಯ ಮಂದಿರದಿಂದ ಪ್ರಸಿದ್ಧವಾದ ಕಾಳಿದಾಸ ಗ್ರಂಥಾವಲಿಯ ೩೨ ನೆಯ ಪುಟ್ಟಳಿಯ ಕಥೆ
ಉಕ್ತಂಚ ಸ್ವಪ್ನಾಧ್ಯಾಯೇ

ದೇವೋ ದ್ವಿಜೋ ಗುರುರ್ಗಾವಃ ಪಿತರೋ ಲಿಂಗಿನೋ ನೃಪಾಃ
ಯದ್ವದಂತಿ ವಚಃ ಸ್ವಪ್ನೇ ತತ್ತಥೈವ ವಿನಿರ್ದಿಶೇತ್

ತಾತ್ಪರ್ಯ— ದೇವನು ಬ್ರಾಹ್ಮಣನು ಗುರುವು ಗೋವು ಪಿತೃಗಳು ಲಿಂಗಿಗಳು ರಾಜರು ಸ್ವಪ್ನದಲ್ಲಿ ಯಾವ ಮಾತನ್ನು ಹೇಳುವರೋ ಹಾಗೆಯೇ ಆಗುವವು.

ಹೀಗೆ ಸ್ವಪ್ನಾಧ್ಯಾಯದಲ್ಲಿ ಹೇಳಿರುತ್ತದೆ. ”

ಎಂಬ ಶ್ಲೋಕಗಳಿರುವದಾಗಿಯೂ ವಿವರಿಸಿರುತ್ತಾರೆ.

ಈ ಶ್ಲೋಕಗಳುಳ್ಳ ಪ್ರಾಚೀನ ಗ್ರಂಥಗಳು ಕಲ್ಯಾಣದ ಪ್ರಭು ದೇವರ ಕಾಲಕ್ಕಿಂತ ಮುಂಚೆ ಆದವುಗಳೆಂಬ ಕಾಲನಿರ್ಣಯವನ್ನೂ ತೋರಿಸಿರುತ್ತಾರೆ.

ಇದರ ಮೇಲಿಂದ ಅಮರಕೋಶದ ಬ್ರಹ್ಮವರ್ಗದಲ್ಲಿ ಉಪಯೋಗಿಸಿರುವ ಲಿಂಗಿನಃ ಎಂಬ ಪದವು ಸಾರ್ಥಕವಾದದ್ದೆಂದು ಚನ್ನಾಗಿ ತಿಳಿಯುತ್ತದೆ.

ಇವುಗಳನ್ನೆಲ್ಲಾ ನೋಡಿದರೆ ಈಗ ಲಿಂಗಾಯತ ಎಂಬ ಪದವು ಎಲ್ಲರ ಮಾತಿನ ಬಳಕೆಯಲ್ಲಿಯೂ ವೀರಶೈವ ಎಂಬ ಪದವು ಬರೆವಣಿಗೆಯಲ್ಲಿಯೂ ಇರುವಂತೆ ಸುಮಾರು ೧೦೦೦ ವರ್ಷಗಳಿಗೆ ಪೂರ್ವದಲ್ಲಿ ಲಿಂಗಧಾರಿಗಳಿಗೆ ಯೋಗಿ, ಪಾಶುಪತ, ಕಾಳಾಮುಖ, ಗಣ, ಮಾಹೇಶ್ವರ ಮೊದಲಾದ ಪದಗಳು ಬಳಕೆಯಲ್ಲಿಯೂ ಲಿಂಗಿ ಮೊದಲಾದ ಕೆಲ ಪದಗಳು ಬರೆವಣಿಗೆಯಲ್ಲಿಯೂ ವ್ಯಾಪಿಸಿದ್ದವೆಂದು ತೋರಿಬರುತ್ತದೆ. ಜನಿವಾರವಿದ್ದವರಿಗೆ ಅದನ್ನೇ ಗುರುತಾಗಿ ಹೇಳದೆ ದ್ವಿಜ ಮೊದಲಾದ ಪದಗಳು ಹೇಗೆ ಉಪಯೋಗಕ್ಕೆ ಬಂದವೋ ಹಾಗೆ ಲಿಂಗವುಳ್ಳವರಿಗೆ ಅದನ್ನೇ ಗುರ್ತಿಸದೆ ಬೇರೆ ಹೆಸರುಗಳು ಬಳಕೆಯಲ್ಲಿದ್ದವೆಂದು ನಿರ್ಧರಿಸಬಹುದಾಗಿದೆ.

---

ಕಳೆದ ಸಂಚಿಕೆಯಲ್ಲಿ 'ಮಂತ್ರಗೋಪ್ಯ' ಎಂಬ ಗ್ರಂಥದ ಮೊದಲನೆಯ ಪೀಠಿಕೆಯನ್ನು ಕೊಟ್ಟಿದ್ದರಲ್ಲಿ ಇನ್ನೊಂದು ಪ್ರಕರಣವನ್ನು ಮುದ್ರಿಸುವದನ್ನು ಬಿಟ್ಟಿರುತ್ತದೆ. ಅದನ್ನು ಈ ಕೆಳಗೆ ಕೊಟ್ಟಿರುತ್ತದೆ.

ಈ ಗ್ರಂಥಕ್ಕೆ ಈಗ ಬರೆದಿರುವ ಮೊದಲನೆಯ ಪೀಠಿಕೆಯಲ್ಲಿ ಶ್ರೀ ಶಂಕರಾಚಾರ್ಯರ ಗುರುಗಳಾದ ಶ್ರೀ ಭಟ್ಟ ಪಾದಾಚಾರ್ಯರವರು ಮುಂಡಕೋಪನಿಷತ್ತಿಗೆ ವ್ಯಾಖ್ಯಾನವಾಗಿ ಕೆಲವು ಶ್ಲೋಕಗಳನ್ನು ರಚಿಸಿರುತ್ತಾರೆ ಎಂದಿದೆ. ಇದು ಸರಿಯಲ್ಲ. ಶ್ರೀ ಶಂಕರಾಚಾರ್ಯರವರ ಗುರುಗಳ ಗುರುಗಳಾದ ಶ್ರೀ ಗೌಡಪಾದ (ಆಚಾರ್ಯ) ರವರು ಮಾಂಡೂಕ್ಯೋಪನಿಷತ್ತಿಗೆ ಕಾರಿಕಾ ರೂಪವಾಗಿ ಕೆಲವು ಶ್ಲೋಕಗಳನ್ನು ರಚಿಸಿರುತ್ತಾರೆ.

ಹಳೆಯವೆನಿಸಿಕೊಂಡಿರುವ ಹತ್ತು ಉಪನಿಷತ್ತುಗಳಲ್ಲಿ ಒಂದಾದ ಬೃಹದಾರಣ್ಯಕವು ಜನಕರಾಜನ ಕಾಲದಲ್ಲಿ ನಡೆದ ಸಂವಾದವನ್ನು ಬೋಧಿಸುವದರಿಂದಲೂ ಆತನ ಕಾಲವು ಬುದ್ಧರಿಗಿಂತ ಮುಂಚೆ ಎಂದರೆ ಸುಮಾರು ಕ್ರಿ. ಶಕಕ್ಕೆ ಪೂರ್ವ ೫೦೦ ಎಂದು ಜರ್ಮನೀ ದೇಶದ ಪ್ರಸಿದ್ಧ ಪಂಡಿತರಾದ ಮ್ಯಾಕ್ಸ್‌ಮುಲರ್‌ರವರು ಬರೆದಿರುವದರಿಂದಲೂ ಹಿಂದೂ ಜನರು ಈ ಕಾಲವು ಇನ್ನೂ ಪೂರ್ವವೆಂದು ಹೇಳುವದರಿಂದಲೂ ಇದರಂತೆ ಹಳೆಯ ಉಪನಿಷತ್ತುಗಳಾದ ಮಾಂಡೂಕ್ಯ, ಮುಂಡಕ, ಇವುಗಳೂ ಕೂಡಾ ೨೦೦೦ ವರ್ಷಕ್ಕಿಂತ ಪೂರ್ವದವುಗಳೆನ್ನಲು ಯಾವ ಅಡ್ಡಿಯೂ ಇಲ್ಲ.

ವ್ಯಾಸರು ಶುಕ ಋಷಿಗಳಿಗೆ ಬೋಧಿಸಿದಂತೆ ಹೇಳಲ್ಪಟ್ಟಿರುವ ರುದ್ರ ಹೃದಯೋಪನಿಷತ್ತಿನಲ್ಲಿ ಪರಾವಿದ್ಯೆ ಅಪರಾವಿದ್ಯೆ ಅಕ್ಷರ ಇವರನ್ನು ಮೇಲೆ ಕಂಡ ಮುಂಡಕೋಪನಿಷತ್ತಿನಂತೆಯೇ ವಿವರಿಸಿ—

ಗುಹಾಯಾಂ ನಿಹಿತಂ ಸಾಕ್ಷಾದಕ್ಷರಂ ವೇದಚೇನ್ನರಃ ।
ಛಿತ್ವಾವಿದ್ಯಾ ಮಹಾಗ್ರಂಥಿಂ ಶಿವಂ ಗಚ್ಛೇತ್ ಸನಾತನಂ ॥

ತಾತ್ಪರ್ಯ :— ಮನುಷ್ಯನು ಹೃದಯದಲ್ಲಿ ಇಡಲ್ಪಟ್ಟ ಪ್ರತ್ಯಕ್ಷನಾದ ಅಕ್ಷರನನ್ನು ತಿಳಿಯಬೇಕಾದರೆ ಅವಿದ್ಯಾ ಸಂಬಂಧವಾದ ತೊಡಕನ್ನು ಕತ್ತರಿಸಿ ಶಿವನನ್ನು ಶರಣು ಹೊಗಬೇಕು ಎಂದು ಹೇಳಿರುತ್ತದೆ. ಶಿವನನ್ನು ಲಿಂಗ ರೂಪದಲ್ಲಿ ಪೂಜೆ ಮಾಡುವದು ಉತ್ತಮವೆಂದು ಅನೇಕ ಪ್ರಮಾಣಗಳಿವೆ. ಹೃದಯ ಗುಹೇಶ್ವರನು ಲಿಂಗ ಎಂಬುವದಕ್ಕೆ ಪ್ರಮಾಣಗಳಿವೆ. ಆದ್ದರಿಂದ ಅಕ್ಷರ ಎಂದರೆ ಲಿಂಗ ಎಂಬುದಕ್ಕೆ ಈ ಉಪನಿಷತ್ತು ಉಪಬೃಂಹಣವಾಗಿ ಪರಿಣಮಿಸಿರುತ್ತದೆ.

# ಪ್ರಕಾಶಕನ ವಿಜ್ಞಾಪನೆಗಳು.

ಈ ಪತ್ರಿಕೆಯು ಬಹಳ ಅವಸರದಲ್ಲಿ ಪ್ರಾರಂಭಿಸಲ್ಪಟ್ಟಿರುವದೆಂಬುದು ಓದುಗರಾದ ಮಹನೀಯರಿಗೆ ತಿಳಿಯದೆ ಇರಲಾರದು. ಈ ಮಾಸ ಪತ್ರಿಕೆಯನ್ನು ಪೋಸ್ಟ್ ಮೂಲಕ ಕಳುಹಿಸಲಿಕ್ಕೆ ಬೇಕಾಗುವ ಪತ್ರಿಕಾ ರಿಜಿಸ್ಟರ್ ನಂಬರನ್ನು ಪಡೆಯುವ ಬಗ್ಗೆ ಈ ಸಂವತ್ಸರದ ವೈಶಾಖ ಮಾಸದಲ್ಲಿ ಮೊದಲನೆಯ ಪ್ರಯತ್ನವನ್ನು ಮಾಡಿ ಪ್ರಕಟನವನ್ನು ಮುದ್ರಿಸಲು ಆರಂಭಿಸಿ ಈ ಆಂಗೀರಸ ಸಂವತ್ಸರದ ಮೊದಲಿನಿಂದಲೇ ಸಂಚಿಕೆಗಳನ್ನು ಹೊರಡಿಸುವದಾಗಿ ಪ್ರಕಟಿಸಿದ ಪ್ರಕಾರ ಚೈತ್ರ ಮಾಸದ ಪತ್ರಿಕೆಯನ್ನು ಮೊದಲು ಮುದ್ರಿಸಿದುದಾಯಿತು. ಪತ್ರಿಕೆಯನ್ನು ರಿಜಿಸ್ಟರ್ ಮಾಡಿದ ಅಪ್ಪಣೆಯು ಕೆಲವು ಅನಿವಾರ್ಯಗಳಿಂದ ಬೇಗನೆ ದೊರೆಯದೆ ಆಶ್ವಯುಜ ಮಾಸದ ಕಡೆಯಭಾಗದಲ್ಲಿ ದೊರಕಿತು. ಅಲ್ಲಿನ ವರೆವಿಗೂ ಮುಂದಿನ ನಿರೀಕ್ಷಣೆಯಿಂದ ೩ ಸಂಚಿಕೆಗಳನ್ನು ಮಾತ್ರ ಮುದ್ರಿಸಿದುದಾಗಿತ್ತು. ಆ ಪ್ರಕಾರ ಕಾರ್ತಿಕದಲ್ಲಿ ಆ ಮೂರು ಪ್ರತಿಗಳನ್ನೇ ಒಟ್ಟಿಗೆ ಕಳುಹಿಸಬೇಕಾಯಿತು. ಮಾರ್ಗಶಿರಮಾಸದಲ್ಲಿ ಮುಂದಿನ ೪—೫ ನೆಯ ಸಂಚಿಕೆಗಳನ್ನು ಕೂಡಿಸಿ ಮುದ್ರಿಸಿ ಕಳುಹಿಸಿದುದಾಯಿತು. ಹೀಗಾಗಿ ಸ್ವಲ್ಪ ದಿವಸಗಳಲ್ಲಿಯೇ ೫ ಸಂಚಿಕೆಗಳು ಓದುಗ ಮಹಾಶಯರ ಹಸ್ತಗತವಾದ್ದಾಗಿವೆ. ಆದ್ದರಿಂದ ಈ ಪತ್ರಿಕೆಯ ವಿಷಯದಲ್ಲಿ ಅಭಿಪ್ರಾಯಗಳು ಇನ್ನು ಮೇಲೆ ಹೊರಬೀಳುವವೆಂಬ ನಂಬಿಗೆ ಇದೆ. ಇಷ್ಟರೊಳಗೆ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಘದ ವಾಙ್ಮಯ ಶಾಖೆಯ ಅಧ್ಯಕ್ಷರವರಾದ ಮ. ರಾ. ವೀರಭದ್ರಪ್ಪನವರು ಹಾಲಭಾವಿ B. A. L L. B. ಇವರು

............ ತಾವು ಹೊರಡಿಸಿದ ಮಾಸಪತ್ರವು ಬಹಳ ಚನ್ನಾಗಿದೆ. ಅದಕ್ಕೆ ಪೂರ್ಣ ಶ್ರೇಯಸ್ಸಾಗಲೆಂದು ಇಚ್ಛಿಸುವ

Sd. ವೀ. ಬ. ಹಾಲಭಾವಿ

ಎಂಬುದಾಗಿ ಬರೆಸಿರುತ್ತಾರೆ.

ಕನ್ನಡ ವಾಙ್ಮಯದ ಸೇವೆಯನ್ನು ತಾರುಣ್ಯದಿಂದಲೂ ಮಾಡಿ ವಯೋವೃದ್ಧರಾಗಿ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿರುವ ಪ್ರಾಜ್ಞನ ವಿಮರ್ಶ ವಿಚಕ್ಷಣ ಕರ್ನಾಟಕ ಪ್ರಾಚ್ಯ ವಿದ್ಯಾ ವೈಭವ ಮ

ತ್ತು ರಾವ್ ಬಹದ್ದೂರ್ ಬಿರುದುಗಳನ್ನು ಸಂಪಾದಿಸಿರುವ ಮ. ರಾ. ರಾ. ನರಸಿಂಹಾಚಾರ್ಯ M. A. M. R. A. S. ರವರು ಹೀಗೆ ಬರೆಸಿರುತ್ತಾರೆ:—

ವಿಜ್ಞಾಪನೆಗಳು........ ನೀವು ಪ್ರೀತಿ ಪೂರ್ವಕವಾಗಿ ಕಳುಹಿಸಿ ಕೊಟ್ಟ ಸದ್ಧರ್ಮ ದೀಪಿಕೆಯ ಪ್ರಥಮ ದ್ವಿತೀಯ ತೃತೀಯ ಸಂಚಿಕೆಗಳನ್ನು ಪರಮಾದರದಿಂದ ಸ್ವೀಕರಿಸಿದೆನು. ನಿಮ್ಮ ವಿಶ್ವಾಸಕ್ಕೋಸ್ಕರ ನಾನು ಋಣಿಯಾಗಿದ್ದೇನೆ. ಮಠಾಧಿಪತಿಗಳು ನಿಮಗೆ ಸಹಾಯ ಮಾಡುತ್ತಿರುವದೂ ನೀವು ವೀರಶೈವ ಗ್ರಂಥಗಳನ್ನು ಮುದ್ರಿಸುತ್ತಿರುವುದೂ ಬಹಳ ಶ್ಲಾಘ್ಯವಾಗಿದೆ. ನೀವು ಕೈಕೊಂಡ ಈ ಸ್ತುತ್ಯವಾದ ಕೆಲಸವು ಪರಮಾತ್ಮನ ಅನುಗ್ರಹದಿಂದ ನಿರ್ವಿಘ್ನವಾಗಿ ಈಡೇರಲಿ ಎಂದು ಹಾರೈಸುತ್ತೇನೆ.

ಇಂತೀ ವಿಜ್ಞಾಪನೆ.

ಈ ಮಹನೀಯರು ಕವಿಚರಿತ್ರೆ (೩ ಭಾಗಗಳು) ಮತ್ತು ಕೆಲವು ಗ್ರಂಥಗಳನ್ನು ರಚಿಸಿ ಭಾಷಾ ಸೇವೆಯನ್ನು ಬಹಳವಾಗಿ ಎಂದರೆ ಲೆಕ್ಕಿಸಲಾರದಷ್ಟು ಮಾಡಿರುತ್ತಾರೆ. ಈ ಪತ್ರಿಕೆಯ ಮೂರು ಸಂಚಿಕೆಗಳು ಇವರು ನಡೆಸಿದ ಸೇವೆಯ ಲಕ್ಷದಲ್ಲಿ ಒಂದು ಅಂಶ ಅಥವಾ ಕೋಟಿಯಲ್ಲಿ ಒಂದು ಅಂಶಕ್ಕೂ ಸರಿಯಿಲ್ಲವೆಂದು ಊಹಿಸುತ್ತಿರುವಲ್ಲಿ ಗುಣಗ್ರಾಹಿಗಳಾದ ಈ ಮಹನೀಯರು ಈ ರೀತಿ ಪತ್ರ ಬರೆದಿರುವದನ್ನು ನೋಡಿದರೆ ಇವರಿಗೆ ಕನ್ನಡ ವಾಙ್ಮಯದ ಅಭಿವೃದ್ಧಿಯ ಮತ್ತು ಧರ್ಮ ಪ್ರಸಾರದ ಆದರವು ಇಂಥಾ ವೃದ್ಧಾಪ್ಯ ಕಾಲದಲ್ಲಿಯೂ ಕೂಡಾ ಎಷ್ಟರಮಟ್ಟಿಗೆ ವ್ಯಾಪಿಸಿಕೊಂಡಿರುವದೆಂಬುದನ್ನು ತೋರಿಸುತ್ತದೆ. ಇವರ ಮಾದರಿಯನ್ನು ಅತ್ಯಂತ ಸ್ವಲ್ಪ ಮಟ್ಟಿಗೆ (ಭೂಮಿಯಲ್ಲಿ ಕಸಕಸಿಯ ಕಾಳಿನಷ್ಟು) ಅನುಕರಿಸಬೇಕೆಂಬ ನನ್ನ ಉದ್ದೇಶಕ್ಕೆ ಇವರ ಶುಭೇಚ್ಛೆಯು ಸಹಾಯಕರವಾಗಿ ಪರಿಣಮಿಸಲೆಂದು ಹಾರೈಸುತ್ತೇನೆ.

ಮಹಾದೇವನನ್ನು ಕೂಡಿ ಆತ್ಮಾರಾಮನಾಗಿರುವದಕ್ಕೆ ಅನುಸರಿಸಬೇಕಾದ ಜ್ಞಾನ ಭೂಮಿಯು ಏಳು ವಿಧವಾಗಿರುವದೆಂತಲೂ ಶುಭೇಚ್ಛಾ ವಿಚಾರಣಾ ತನುಮಾನಸೀ ಸತ್ವಾಪತ್ತಿ ಅಸಂಸಕ್ತಿ ಪದಾರ್ಥಭಾವನಾ ತುರ್ಯಗಾ ಎಂಬಿವೇ ಏಳು ಭೂಮಿಕೆಗಳೆಂತಲೂ ಮಹೋಪನಿಷತ್ತಿನಲ್ಲಿ ವಿವರಿಸಿರುವದರಲ್ಲಿ ಶುಭೇಚ್ಛೆಯು ಮೊದಲನೆಯದಾದಂತೆ ಈ ಪತ್ರಿಕೆಯಿಂದ ನಡೆವ ಸೇವೆಯ ಪರಿಣಾಮದ ಆನಂದಕ್ಕೆ ಈ ಉಭಯ ಮಹನೀಯರುಗಳ ಶುಭೇಚ್ಛೆಯು ಪ್ರಥಮ ಭೂಮಿಕೆಯಾಗಿ ಮೆರೆಯಲೆಂದು ಆಶಿಸುತ್ತೇನೆ.

ಸಮಾಜ ಸೇವಕ,

ಶ್ರೀ ಗುರುಸಿದ್ಧ ಲಿಂಗಾಯ ನಮಃ

# ಶಿವಯೋಗ.



## ಪೂರ್ವಿಕ ಮಹನೀಯರು ಬರೆದಿಟ್ಟುದು.

ಉನ್ಮನೀ ಪ್ರಕಾಶವಾದ ಇಷ್ಟಲಿಂಗವನ್ನು ಮರ್ಕಟದೃಷ್ಟಿ, ವ್ಯಾಘ್ರ ದೃಷ್ಟಿ, ಊರ್ಧ್ವ ದೃಷ್ಟಿ, ಅಧೋದೃಷ್ಟಿ, ಎಂಬ ನಾಲ್ಕು ದೃಷ್ಟಿಯೂ ಅಲ್ಲದ ಮಾರ್ಜಾಲದೃಷ್ಟಿ, ಮೋಹಿನಿ, ಬಾಲದೃಷ್ಟಿಗಳ ಹಾಗೆ ನಾಸಿಕಾಗ್ರದಲ್ಲಿ ಎರಡು ದೃಷ್ಟಿಯನೂ ನಿಲಿಸಿ ನೋಡುವ ಸಮ ದೃಷ್ಟಿಯೇ ಅನಿಮಿಷ ದೃಷ್ಟಿ.

ಇಂತಪ್ಪ ಅನಿಮಿಷ ದೃಷ್ಟಿಯಿಂದಲೇ ವಾಯು ನಿಲ್ಲುವುದು. ವಾಯು ನಿಂದರೆ ಮನಸ್ಸು ನಿಲ್ಲುವುದು. ಮನವು ನಿಂದರೆ ಅರಿವು ನಿಲ್ಲುವುದು. ಅರಿವು ನಿಂದರೆ ಬಿಂದು ದರ್ಶನವಾಗಿ ಬಿಂದು ನಿಲುವುದು. ಆ ಬಿಂದು ನಿಂದರೆ ನಾದ ದರುಶನವಾಗಿ ಮಾಯೆ ಹೇಳ ಹೆಸರಿಲ್ಲದೆ ಅಡಗಿ ಹೋಗುವುದು.

ಹೀಗಾದ ಅನಿಮಿಷ ದೃಷ್ಟಿಯಿಂದ ಆ ಇಷ್ಟಲಿಂಗವ ನೋಡಲು ತಾವರೆ ನೂಲಿನ ಹಾಗೆಯೂ ಸೂರ್ಯಬಿಂಬದ ಹಾಗೆಯೂ ಕಾಣಬಹುದು ಚಿತ್ಕಲೆ. ಆ ಚಿತ್ಕಲೆಯಾದುದು ಮನೋ ದೃಷ್ಟಿಗೆ ಗ್ರಹಿಸಲ್ತಕ್ಕು ದಾಗಿ— ಹೃದಯ ಕಮಲದ ಮಧ್ಯದ ನಾಲ್ಕೆಸಳ ಪೀಠ—ಆ ನಾಲ್ಕೆಸಳ ಪೀಠದ ನಡುವೆ ಅದು ( ಚಿತ್ಕಲೆ ) ಪ್ರಣವ ಸ್ವರೂಪವಾದ ಜ್ಯೋತಿರ್ಲಿಂಗವಾಗಿ ಕಾಣಿಸುವದು ( ಪ್ರಕಾಶಿಸುವದು ). ಹೀಗೆ ಪ್ರಣವಲಿಂಗವಾದುದು ಶರಣಂಗೆ.

ಅದು ( ಆ ಲಿಂಗವು ) ಮೂಲಾಧಾರದ ನಾಲ್ಕೆಸಳ ಪೀಠ ಕಮಲದ ನಕಾರ ಪ್ರಣವದ ಕರ್ಣಿಕಾ ಪೀಠದಲ್ಲಿ ಆಚಾರಲಿಂಗವಾಗಿ ಸ್ವಾಧಿಷ್ಠಾನ ಚಕ್ರದ ಆರೆಸಳಿನ ಕಮಲದ ಮಕಾರ ಪ್ರಣವದ ಕರ್ಣಿಕಾ ಪೀಠದಲ್ಲಿ ಗುರುಲಿಂಗವಾಗಿ ಮಣಿಪೂರಕ ಚಕ್ರದ ದಶ ದಳ ಕಮಲದಲ್ಲಿ ಶಿಕಾರ ಪ್ರಣವದ ಕರ್ಣಿಕಾ ಪೀಠದಲ್ಲಿ ಶಿವಲಿಂಗವಾಗಿ ಅನಾಹತ ಚಕ್ರದ ದ್ವಾದಶ ದಳ ಕಮಲದಲ್ಲಿ ವಾಕಾರ ಪ್ರಣವದ ಕರ್ಣಿಕಾ ಪೀಠದಲ್ಲಿ ಜಂಗಮಲಿಂಗವಾಗಿ ವಿಶುದ್ಧಿ ಚಕ್ರದ ಷೋಡಶ ದಳ ಕಮಲದಲ್ಲಿ ಯಕಾರ ಪ್ರಣವದ ಕರ್ಣಿಕಾ ಪೀಠದಲ್ಲಿ ಪ್ರಸಾದಲಿಂಗವಾಗಿ ಆಜ್ಞಾ ಚಕ್ರದ ದ್ವಿದಳ ಕಮಲದಲ್ಲಿ ಓಂಕಾರ ಪ್ರಣವದ ಕರ್ಣಿಕಾ ಪೀಠದಲ್ಲಿ ಮಹಾ ಲಿಂಗವಾಗಿ ಹೀಗೆ ಸಗುಣ ನಿರ್ಗುಣ ರೂಪವಾಗಿ ಪ್ರಕಾಶಿಸುವದು.

ಶಿವ ಜ್ಞಾನ ಸಂಪನ್ನನಾದ ಶರಣನು ನಿರ್ವಿಕಲ್ಪ ಧ್ಯಾನ ದೃಷ್ಟಿಯಿಂದ ನೋಡಿ ಪ್ರಾಣಾಪಾನ ವಾಯುಗಳೆಂಬ ತಾರಕ ಕವಾಟದಿಂದ ಮುಚ್ಚಿದ ಪಶ್ಚಿಮದ್ವಾರವನು ವಿಶಾಲವಾಗಿ ತೆರೆದು ಜ್ಞಾನ ಕ್ರಿಯಾ ಶಕ್ತಿ ರೂಪವಾಗಿರ್ದ ಕದವನಿಕ್ಕಿ ಬ್ರಹ್ಮ ರಂಧ್ರದೊಳಗೆ ಹೊಕ್ಕು ಚಿತ್ತೇ ಅಂಗವಾಗಿ ಚಿಘ್ನನಲಿಂಗವೇ ಪ್ರಾಣವಾಗಿ ಅವಿರಳ ಸಮರಸಾನಂದ ತಾನು ತಾನಾಗಿ ಪ್ರಕಾಶಿಸುವದೇ ಶಿವಯೋಗದ ವ್ಯವಹಾರವು.

ಆ ಶಿವಯೋಗದ ವ್ಯವಹಾರವು ಹೇಗೆಂದೊಡೆ:— ಬ್ರಹ್ಮ ರಂಧ್ರದ ನಡುವೆ ಸಹಸ್ರದಳ ಕಮಲವು. ಆ ಕಮಲದ ನಡುವೆ ಶತದಳ ಕಮಲವು. ಆದರ ನಡುವೆ ಪಂಚದಳಂಗಳು. ಅದರ ನಡುವೆ ಬಿಂದು ರೂಪವಾದ ತ್ರಿದಳಾಕಾರದ ತ್ರಿಕೋಣೆಯು. ಆ ತ್ರಿಕೋಣೆಯಲ್ಲಿ ಆಕಾರ ಉಕಾರ ಮಕಾರ ರೂಪವಾದ ಪ್ರಣವ ಪೀಠವು.

ಆ ಪ್ರಣವ ಪೀಠದಲ್ಲಿ ಚಿಚ್ಛಕ್ತಿ ತೇಜೋ ಮಂಡಲದ ನಡುವೆ ಅತಿ ಸೂಕ್ಷ್ಮ ದ್ವಾರವಾಗಿ ಇಪ್ಪುದು. ಅಲ್ಲಿ ಸಚ್ಚಿದಾನಂದ ಜಲವು ತುಂಬಿ ಚಿತ್ಸ್ವರೂಪವಿಪ್ಪುದು. ಆ ಚಿತ್ಸ್ವರೂಪವೇ ಶುದ್ಧ ಪ್ರಸಾದ ಪ್ರಣವವು. ಆ ಶುದ್ಧ ಪ್ರಸಾದ ಪ್ರಣವವೇ ಹಕಾರವು. ಅರ್ಧಮಾತ್ರೆ, ಶಿವಾಕ್ಷರವೆಂಬ ನಾದವು. ಅದುವೆ (ಅವೇ) ಸುನಾದ ಮಹಾನಾದ ರೂಪವಾಗಿಪ್ಪುದು.

ಬಳಿಕ ಅದುವೆ ಹಕಾರ ಬಿಂದು ಸಕಾರ ರೂಪವಾದ ಆತ್ಮ ಪ್ರಸಾದವಾಗಿ ಪ್ಪುದು. ಅದರ ನಡುವಣ ಬಿಂದುವೇ ಬಿಂದು ಸುಬಿಂದು ರೂಪವಾದ ರ, ಳ, ಎಂಬಿವು. ಇವರೊಳಗೆ ಳಕಾರವೇ ಅರ್ಧಮಾತ್ರೆ ರೂಪವಾದ ಶರೀರ ವಾಗಿ ಸಹಸ್ರಾಕ್ಷರ ರೂಪವಾಗಿ ಸಹಸ್ರದಳಂಗಳಲ್ಲಿ ಪ್ರಕಾಶಿಸುವದು. ಇನ್ನು ರಕಾರವೇ ಅರ್ಧಮಾತ್ರೆಯಾಗಿ ಶತ ದಳಂಗಳಲ್ಲಿಯೂ ಪ್ರಕಾಶಿಸುವದು ಆ ಮಹಾ ಬಿಂದು ರೂಪವಾದ ಸಕಾರದೊಡನೆ ಕೂಡಿದ ಹಕಾರವೇ ಅಗ್ನಿ ಬೀಜ (ರಕಾರ) ದೊಡಗೂಡಿ ಪಂಚ ಪ್ರಸಾದ ರೂಪವಾಗಿ ಪಂಚ ದಳಂಗಳಲ್ಲಿಯೂ ಪ್ರಕಾಶಿಸುವದು. ಹಿಂದೆ ಹೇಳಿದ ತ್ರಿಕೋಣೆಯ ಒಳಗೆ ತ್ರಿಯಕ್ಷರ ರೂಪವಾದ ಪ್ರಣವ ಪೀಠದಲ್ಲಿ ಇಪ್ಪ ಚಿತ್ರೂಪವೇ ಕಡೆಯಿಲ್ಲದ ರೂಪಾನಂದವು. ಅದರೊಳಗೆ ಸಚ್ಚಿದಾನಂದ ಜಲವೇ ಕಡೆಯಿಲ್ಲದ ಪರಮಾನಂದವು.

ಹೀಗೆ ಆದ ಚಿದ್ಘನಾತೀತ ನಿರಂಜನ ಶೂನ್ಯ ರೂಪವಾದ ನೇತ್ರಂಗಳಲ್ಲಿ ಚಿತ್ರೂಪವೇ ಕಡೆಯಿಂಚಿದ್ಬಿಂದು ಪರಬಿಂದು ರೂಪಾಗಿಪ್ಪುದು. ಆ ಪರಬಿಂದು ರೂಪವೇ ಬಿಂದುಗಳಾಗಿ ನಿಂದು ಅವರೊಳಗೆ ಜಗದ್ರಕ್ಷಣಾರ್ಥವಾಗಿ ಒಂದೊಂದು ಬಿಂದುವಿಗೊಂದೊಂದು ಪಾದವಾಗಿ? ಇದರ ಭೇದವು ಮೂವತ್ತೆಂಟು ಪದಗಳಾಗಿ ಉಪಯಿಸಿತೆಂದರಿವುದು.

ಆ ಚಿತ್‌ರೂಪ ಚಿದಾನಂದ ಜಲವೇ ಉಕ್ಕಿ ಮೇಲೆ ಜಾರಿ ಅನುಭೈಕ್ಯ ಸ್ಥಲದಲ್ಲಿ ನಿಂದು ಎಡೆಯುಣವಾದ ಚಿತ್ರ (ಚಿತಾ) ನಾಡಿ ವಜ್ರನಾಡಿಗಳಲ್ಲಿ ಹೊಕ್ಕು ಜ್ಞಾನ ಕ್ರಿಯಾ ಶಕ್ತಿ ರೂಪವಾದ ಅಂಗುಷ್ಠಂಗಳೆರಡರಲ್ಲಿ ಸಾದುರ್ಜ ಉಪಾಸಕರ ನಿಮಿತ್ತವಾಗಿ ಪಾದೋದಕವೆನಿಸಿಕೊಂಡುದು. ಹೀಗೆ ಆ ಪಾದಂಗಳೆರಡು ತಾನೇ ಜ್ಞಾನ ಕ್ರಿಯಾ ಶಕ್ತಿ ರೂಪವಾದ ನಾದ ಬಿಂದು ಸ್ವರೂಪವಾಗಿ ಪ್ರಕಾಶಿಸುವ ಮೂಲ ಚಿತ್ತು. ಆ ಮೂಲ ಚಿತ್ತೇ ಅನಾದಿ ಶರಣನು. ಆ ಮೂಲ ಚಿತ್ತಿನೊಳಗೆ ನಿಂದು ತೋರಿದ ಮಹಾ ಲಿಂಗವೇ ಆದಿಲಿಂಗವಾದ ಕಾರಣ ಅನಾದಿ ಶರಣನ ಪಾದೋದಕವು ಆದಿಲಿಂಗಕ್ಕಾಗುವದೆಂದು ವೇದಾಗಮಂಗಳು ಹೇಳುವುದಲಾ. ಇದರೊಳಗೆ ಉದಕವೇ ಆನಂದ ರೂಪು. ಪಾದವೇ ಜ್ಞಾನ ಜ್ಞೇಯರೂಪವಾದ ಚಿತ್ತು. ಆ ಜಂಗಮವೇ ಸತ್ತು (ಸದ್ರೂಪು). ಹಿಂದೆ ಹೇಳಿದ ಆನಂದವೇ ಸತ್ತುವಿನ ಚಿದ್ವಿಲಾಸವಾದ ಕಾರಣ ಆ ವಿಲಾಸರೂಪವಾದ ಚಿದಾನಂದವ ಚಿತ್ತುವಿನ ಮಾರ್ಗವಾಗಿ

ಇಷ್ಟ ಅಂಗೀಕರಿಸಲಿಕ್ಕೆ ಸತ್ತು ರೂಪವಾದ ಜಂಗಮವು ಚಿತ್ತು ರೂಪವಾದ ಲಿಂಗಕ್ಕೆ ಆನಂದ ರೂಪವಾದ ಪಾದೋದಕವನರ್ಪಿಸಲ್ ತಕ್ಕುದು. ಈ ಪ್ರಕಾರದ ಲಕ್ಷಣವೆಲ್ಲವೂ ಶಿವನ ಲಕ್ಷಣವು. ಈ ಸ್ವರೂಪವ ಗುರು ಮುಖದಿಂದರಿದು ಚಿತ್ತೇ ಅಂಗವಾಗಿ ಚಿದ್ಘನಲಿಂಗವೇ ಪ್ರಾಣವಾಗಿ ತಾನೇ ತಾನಾಗಿ ಪ್ರಕಾಶಿಸುವದೇ ಯೋಗಲಕ್ಷಣವು. ಇದೇ ಶಿವಯೋಗವು.

---

ಪರಮರಹಸ್ಯ, ಅನುಭಾ .... .... .... .... ಕಾಮಿಕೋತ್ತರಾಗಮ ಪ್ರಮಾಣವು. ಇದಕ್ಕೆ ಉದಾಹರಣೆ ಪ್ರಸನ್ನೋಪನಿಷತ್ತು.

ಈ ವಚನವು ಸಕಲಾಗಮ ಶಿಖಾಮಣಿ ಪ್ರಮಾಣ ಕೂಡಲ ಸಂಗಮದೇವರು ಕೃಪೆ ಮಾಡಿದುದು.



ಇದು ಶ್ರೀಮನ್ ನಿರಂಜನ ಜಗದ್ಗುರು ಗುರುಸಿದ್ಧೇಶ್ವರ ಸ್ವಾಮಿಗಳವರ ಮೂರುಸಾವಿರಮಠ ಹುಬ್ಬಳ್ಳಿಯಲ್ಲಿ ದೊರೆದ ಪ್ರತಿಯೊಂದರ ಜೊತೆಗೆ ಶ್ರೀಮನ್ ನಿರಂಜನ ಪ್ರಣವ ಸ್ವರೂಪಿಗಳಾದ ಚನ್ನಬಸವಸ್ವಾಮಿಗಳು ವಿರಕ್ತಮಠ ಬ್ಯಾಡಗಿ ಇವರಲ್ಲಿ ದೊರಕಿದ ಪ್ರತಿಯನ್ನು ಹೋಲಿಸಿ ನೋಡಿ ಮುದ್ರಣ ಮಾಡಿದುದಾಗಿದೆ. ಪೂರ್ವಿಕ ವೀರಶೈವ ಮಹನೀಯರು ಇಷ್ಟಲಿಂಗದ ನೋಟದಲ್ಲಿ ಎಷ್ಟು ಶ್ರದ್ಧೆ ಇಟ್ಟಿದ್ದರೆಂಬುದೂ ಅದರಿಂದ ಎಂತಹ ಫಲವನ್ನು ಅನುಭವಿಸುತ್ತಾ ಇದ್ದರೆಂಬುದೂ ತಿಳಿಯುತ್ತದೆ. ಇವರು ಬರೆದಿರುವಂತೆ ಬ್ರಹ್ಮರಂಧ್ರದಲ್ಲಿರುವ ಸಹಸ್ರದಳ ಶತದಳ ಪಂಚದಳ ತ್ರಿಕೋಣ ಇವುಗಳ ವಿವರವು ಇಷ್ಟು ಸಮಂಜಸವಾಗಿ ಈಗ ಮುದ್ರಣವಾಗಿರುವ ೧೦೮ ಉಪನಿಷತ್ತುಗಳನ್ನು ತಳ ಮೇಲಾಗಿ ಶೋಧಿಸಿದರೂ ದೊರೆಯುವಂತೆ ಇಲ್ಲ.

ಅಂಗದಲ್ಲಿ ಇರತಕ್ಕ ಲಕ್ಷಣಗಳನ್ನು ತಿಳಿವುದಕ್ಕೆ ಪೂರ್ವಿಕ ಮಹನೀಯರು ನಡೆಸಿದ ಪ್ರಯತ್ನವು ಅತ್ಯಂತ ಶ್ರೇಷ್ಠವಾದದ್ದೂ ಮಹತ್ವವುಳ್ಳದ್ದೂ ಆಗಿರುತ್ತದೆ. ಇದರಲ್ಲಿ ಕೊಟ್ಟಿರುವಂತೆ ಪ್ರಮಾಣ

ಗ್ರಂಥವಾದ ಕಾಮಿಕೋತ್ತರಾಗಮ ಎಂಬುದು ಕನ್ನಡಿಗರಿಗೆ ತಿಳಿ ವಂತೆ ಮುದ್ರಣವಾಗಿಲ್ಲ. ಸಂಗ್ರಹ ಗ್ರಂಥಗಳನ್ನೋದಿ ತಿಳಿವುದಕ್ಕಿಂತ ಲೂ ಆಗಮಗಳಂಥ ಮೂಲ ಗ್ರಂಥಗಳನ್ನೇ ಹುಡುಕಿ ಗೊತ್ತುಹಚ್ಚಿ ಮು ದ್ರಿಸಿದರೆ ಅನೇಕ ವಿಷಯಗಳನ್ನು ತಿಳಿಯಲಿಕ್ಕೆ ಮುಂದೆ ಅನುಕೂಲ ವಾಗುತ್ತದೆ. ಪರಂತು ಹಾಗೆ ಮಾಡುವವರು ಯಾರು? ಶಿವನೇ ಮಹನೀಯರಾದವರಲ್ಲಿ ಪ್ರೇರಿಸಿ ಈ ಕಾರ್ಯವನ್ನು ಮುಂದೆ ನಡೆಸಬೇಕಾ ಗಿದೆ. ಸಕಲಾಗಮ ಶಿಖಾಮಣಿ ಎಂಬ ಒಂದು ಗ್ರಂಥವು ಓಲೆಯ ಪ್ರತಿಯಲ್ಲಿ ಇದೆ. ಇದು ವಚನ ರೂಪವಾಗಿದೆ. ಇದನ್ನು ಬಾಲಸಂಗ ಯ್ಯನವರು "ಅಪ್ರಮಾಣ ಕೂಡಲ ಸಂಗಮದೇವಾ" ಎಂಬ ಅಂ ಕಿತದಿಂದ ಹೇಳಿರುತ್ತಾರೆ. ಇನ್ನೂ ಮುದ್ರಣವಾಗಿಲ್ಲ. ಪ್ರಸನ್ನೋ ಪನಿಷತ್ತು ಎಂಬುದು ಈಗ ಮುದ್ರಣವಾದ ೧೦೮ ಉಪನಿಷತ್ತುಗಳಲ್ಲಿ ಇಲ್ಲ. ಇವುಗಳೆಲ್ಲವನ್ನೂ ದೊರಕಿಸಿಕೊಂಡರೆ ಮನುಷ್ಯನ ಶಿರಸ್ಸಿನಲ್ಲಿ ಏ ನೇನಿವೆ ಎಂಬ ವಿಷಯವು ಇನ್ನೂ ಚನ್ನಾಗಿ ತಿಳಿಯಬಹುದಲ್ಲವೇ?

ಇದರಲ್ಲಿ ಹೇಳಿರುವ ಪ್ರಮಾಣ ಗ್ರಂಥಗಳು ಸಿಕ್ಕದೆ ಇದ್ದಾಗ್ಯೂ ಇದರಲ್ಲಿರುವ ವಿಷಯಗಳು ಮಾತ್ರ ಆಧಾರವಿಲ್ಲದೆ ಇರತಕ್ಕವುಗಳೆಂದು ನಂಬುವಂತೆ ಇಲ್ಲ. ಪ್ರಸಿದ್ಧವಾಗಿರುವ ಸಿದ್ಧಾಂತ ಶಿಖಾಮಣಿಯಲ್ಲಿ ಮೊದಲನೆಯ ಶ್ಲೋಕ

ಶ್ರೀನಾಥಸ್ಸೋಮ ಮೂರ್ತಿರ್ಜಯತಿ ಪರಶಿವ ಸ್ತ್ರ್ಯಂಬಕಸ್ತಾರರೂಪಃ ।
ಸ್ವಚ್ಛ ಶ್ರೀ ಬ್ರಹ್ಮರಂಧ್ರಸ್ಥಿತ ಸಿತ ಜಲಜ ಪ್ರೋದ್ಯದಬ್ಜ ತ್ರಿಕೋಣೇ ।
ಇಚ್ಛಾ ಜ್ಞಾನ ಕ್ರಿಯಾಖ್ಯೇ ತ್ರಿವಿಧಲಿಪಿಮಯೇ ಹಕ್ಷಳಾರ್ಣಾಗ್ರಪಾರ್ಶ್ವೇ
ಕೃತ್ಸ್ನಾರ್ಣೋನ್ಮುಖ್ಯ ಬಿಂದೌ ಚಿದಚಿದುದಯಕೃತ್ ದೃಕ್ ಕ್ರಿಯಾಂಘ್ರಿ
ದ್ವಯಾಢ್ಯಃ ॥

ತಾತ್ಪರ್ಯ:— ಬ್ರಹ್ಮರಂಧ್ರದಲ್ಲಿರುವ ಬಿಳಿಯ ಕಮಲದ ತ್ರಿಕೋ ಣೆಯಲ್ಲಿ ಇಚ್ಛಾ ಜ್ಞಾನ ಕ್ರಿಯೆ ಎಂಬ ಹೆಸರುಳ್ಳ ಮೂರು ಅಕ್ಷ ರಗಳಿಂದ ತುಂಬಿದ್ದಾಗಿ ಹ ಕ್ಷ ಳ ಎಂಬ ವರ್ಣಗಳೂ ಇವುಗಳ ಮುಂದಿನ ಪಕ್ಕದಲ್ಲಿ ಇರುವವುಗಳೂ ಕೂಡಿ ಎಲ್ಲಾ ಅಕ್ಷರಗಳು ಹು ಟ್ಟುವದಕ್ಕೆ ಮುಖ್ಯವಾದದ್ದಾಗಿ ಬಿಂದುವಿರುತ್ತಿರಲು ಚಿತ್ತು ಮತ್ತು

ಅಚಿತ್ತು ಎಂಬಿವುಗಳನ್ನು ಹುಟ್ಟಿಸುವ ಜ್ಞಾನ ಕ್ರಿಯೆಗಳೆಂಬ ಎರಡು ಅಂಘ್ರಿಗಳುಳ್ಳ ಸೋಮಮೂರ್ತಿಯು ಎಂದರೆ ಶಕ್ತಿವಿಶಿಷ್ಟನು ಮತ್ತು ಪ್ರಣವರೂಪನು ಆದ ಪರಶಿವನು ಜಯಿಸಲಿ.

ಹೀಗೆ ಇರುವ ಮಂಗಳ ಶ್ಲೋಕದ ಅಭಿಪ್ರಾಯವು ಈ ಶಿವಯೋಗದ ಕೆಲವು ವಿಷಯುಗಳಿಗೆ ಸರಿಹೋಲುತ್ತದೆ. ಮತ್ತೆ ಕೆಲವು ವಿಷಯುಗಳಿಗೆ ಎಂದರೆ ಬ್ರಹ್ಮರಂಧ್ರದಲ್ಲಿ ಸಹಸ್ರದಳ ಕಮಲ ಶತದಳ ಕಮಲ ಉಂಟೆಂಬ ಬಗ್ಗೆ ಉಪನಿಷತ್ತುಗಳಲ್ಲಿ ಪ್ರಮಾಣವು ದೊರಕುತ್ತದೆ. ಆದ್ದರಿಂದ ಇಲ್ಲಿ ಹೇಳಲ್ಪಟ್ಟ ವಿಷಯವು ಪ್ರಮಾಣಗಳನ್ನು ಉಳ್ಳುದೆಂದೂ ಬಹಳ ಮುಖ್ಯವೆಂದೂ ಪರಮರಹಸ್ಯವೆಂದೂ ಭಾವಿಸಬೇಕಾದದು ಅವಶ್ಯಕವಾಗಿದೆ.

---

**ಶಿವಶರಣರು ಅರಿದಾನಂದಿಸಲಿ.**

——o——

ಇಂತು ಪ್ರಕಾಶಕನ ವಿಜ್ಞಾಪನೆಗಳು

( ಟಿಪ್ಪಣಿ )

ಶಿವಯೋಗದ ಒಂದು ವಿಧಾನವು ಇದರಲ್ಲಿ ಹೇಳಲ್ಪಟ್ಟಿದೆ. ಶಿವಯೋಗವನ್ನು ಬೋಧಿಸುವ ಇನ್ನೂ ಒಂದೆರಡು ಗ್ರಂಥಗಳು ದೊರಕಿವೆ. ಅನುಕೂಲವು ಒದಗಿದಹಾಗೆಲ್ಲ ಅವನ್ನು ಮುದ್ರಿಸಲು ಪ್ರಯತ್ನವು ಮಾಡಲ್ಪಡುವುದು.

ಸಮಾಜ ಸೇವಕನಾದ ಪ್ರಕಾಶಕ.



ಹುಬ್ಬಳ್ಳಿಯಲ್ಲಿ ಇರುವ

# ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಮೊದಲನೆಯ ವರ್ಷದ ವರದಿಯ

## ವಿಮರ್ಶೆ.

ಈ ಕಾಲೇಜಿನ ಅಧ್ಯಕ್ಷರು ( Principal ) ವೇ. ಮೂ. ಚಂದ್ರಶೇಖರ ಶಾಸ್ತ್ರಿಗಳು ಹಿರೇಮಠ ಹೊಳಲು, ಇವರು ಕಳುಹಿಸಿದ ಒಂದನೆಯ ವರ್ಷದ ವರದಿಯನ್ನು ಆನಂದದಿಂದ ಸ್ವೀಕರಿಸಲಾಯಿತು.

ವೀರಶೈವರಿಗೆ ಸಂಸ್ಕೃತ ವಿದ್ಯಾಭ್ಯಾಸವು ಅತ್ಯವಶ್ಯಕವಾಗಿ ಬೇಕಾಗಿದೆ. ಪುರಾತನರ ವಚನಗಳಿಗೆ ಮೂಲ ಆಧಾರವಾಗಿರುವ ಶಿವಾಗಮಗಳು ಸಂಸ್ಕೃತ ಭಾಷೆಯಲ್ಲಿ ಇವೆ. ಇವರ ಮತ ತತ್ವವನ್ನು ಬೋಧಿಸುವ ಉಪನಿಷತ್ತುಗಳು ಸಂಸ್ಕೃತದಲ್ಲಿ ಇವೆ. ಸಂಗ್ರಹ ಗ್ರಂಥಗಳೂ ಸಂಸ್ಕೃತದಲ್ಲಿ ಅನೇಕ ಇವೆ. ಧಾರ್ಮಿಕ ವಿದ್ಯೆಯ ಅತ್ಯಂತ ಹೆಚ್ಚಿನ ಪರಿಶ್ರಮವುಳ್ಳ ಹಿಂದೂ ದೇಶವು ತನ್ನ ಪೂರ್ವದ ಆ ಪ್ರಖ್ಯಾತಿಯನ್ನು ಉಳಿಸಿಕೊಳ್ಳಬೇಕಾದುದೂ ಸಂಸ್ಕೃತದಿಂದಲೇ. ಹೀಗೆ ಧರ್ಮವಿದ್ಯೆಯೊಂದೇ ಅಲ್ಲದೆ ದೇಹ ರಕ್ಷಣೆಯನ್ನು ಮಾಡುವ ವೈದ್ಯ ವಿದ್ಯೆಯೂ ಸಂಸ್ಕೃತದಲ್ಲಿಯೇ ಇದೆ. ಯೋಗವಿದ್ಯೆ ಮೊದಲಾದವುಗಳೂ ಸಂಸ್ಕೃತದಲ್ಲಿಯೇ ಇವೆ. ಆದ್ದರಿಂದ ನಮ್ಮ ಪೂರ್ವಿಕರ ಜ್ಞಾನ ಭಾಂಡಾರವನ್ನು ಹೊರಗೆ ತೆಗೆಯಬೇಕಾದರೆ ಸಂಸ್ಕೃತ ಭಾಷೆಯ ಅವಶ್ಯಕತೆ ಇದ್ದೇ ಇರುವುದು. ಇದಕ್ಕಾಗಿ ಸಂಸ್ಕೃತ ಕಾಲೇಜು ಬೇಕೇ ಬೇಕು.

ಸಂಸ್ಕೃತ ಭಾಷೆಯ ಅಭಿಮಾನವಿದ್ದದ್ದರಿಂದಲೇ ಶ್ರೀಮನ್ ನಿರಂಜನ ಜಗದ್ಗುರು **ಗಂಗಾಧರ ಸ್ವಾಮಿಗಳವರು** ಈ ಭಾಷೆಯ ಕಡೆಗೆ ವಿಶೇಷವಾಗಿ ಗಮನ ಕೊಟ್ಟು ತಮ್ಮ ಅನುಯಾಯಿಗಳು ಅದರಂತೆ ಅನುಕರಿಸಲಿ ಎಂದು ತೋರಿಸಿದವರಾಗಿರುತ್ತಾರೆ.

ಶ್ರೀಮನ್ ನಿರಂಜನ ಜಗದ್ಗುರು ಗುರುಸಿದ್ಧ ಮಹಾ ಸ್ವಾಮಿಗಳವರು ಈ ಸಂಸ್ಕೃತ ಕಾಲೇಜನ್ನು ಸ್ಥಾಪಿಸಿರುವದೂ, ಮೊದಲನೆಯ ವರ್ಷದಲ್ಲಿಯೇ ೭೪ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿರುವದೂ, ಇವರ ಅಭ್ಯಾಸದಲ್ಲಿ ಧಾರ್ಮಿಕ ಗ್ರಂಥಗಳನ್ನು ಸೇರಿಸಿರುವದೂ, ಅಭಿನಂದನೀಯವಾದ ಸಂಗತಿಗಳಾಗಿವೆ.

ಇದರ ಉತ್ಪತ್ತಿಯ ಪ್ರಥಮ ವರ್ಷದಲ್ಲಿ ತೋರಿಬರುವ ಉತ್ತೇಜನದ ಪ್ರಮಾಣದಲ್ಲಿ ಇದನ್ನು ಮುಂದುವರಿಸಿದ್ದಾದರೆ ಈ ಕಾಲೇಜು ಕೆಲವು ವರ್ಷಗಳಲ್ಲಿಯೇ ಸಮಸ್ತ ವೀರಶೈವರ ಮುಖ್ಯ ಕಾಲೇಜಾಗಿ ಪರಿಣಮಿಸುವಂತೆ ತೋರುತ್ತದೆ.

ಈ ಕಾಲೇಜಿನಮತಿಯಿಂದ ನಡೆಸುವ ಪುರಾತನ ಗ್ರಂಥಗಳ ಪರಿಶೋಧನೆಯೂ ಅವುಗಳ ಮುದ್ರಣವೂ ಇನ್ನೂ ಹೆಚ್ಚಿನ ಪರಿಮಾಣದಲ್ಲಿ ನಡೆದು ಬಹಳ ವರ್ಷಗಳಿಂದ ಸರಿಯಾದ ಆಶ್ರಯವಿಲ್ಲದೆ ನರಳುತ್ತಿರುವ ಧರ್ಮಜ್ಞಾನವು ಬೇಗನೆ ಪಸರಿಸುವಂತೆ ಮಹಾದೇವನು ಅನುಗ್ರಹಿಸಲಿ.

೧೯೩೨ ನೆಯ ಜನವರಿಯ ಪರೀಕ್ಷೆಯಲ್ಲಿ ಈ ಕಾಲೇಜಿನಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳ ವಿಷಯವು ಈ ವಾರ್ಷಿಕ ವರದಿಯಿಂದ ತಿಳಿಯುತ್ತದೆ. ಕಾಲೇಜಿನ ವರ್ಷವನ್ನು ಪರೀಕ್ಷೆಯ ಫಲಿತಾಂಶವು ಹೊರಗೆ ಬೀಳುವ ವೇಳೆಯ ಸುಮಾರಿಗೆ ಮುಗಿಯುವಂತೆ ಏರ್ಪಡಿಸಿಕೊಂಡರೆ ವರದಿಯನ್ನು ಓದುವವರಿಗೆ ಹೊಸ ವಿಷಯಗಳು ತಿಳಿಯುವಂತೆ ಆಗುತ್ತದೆ. ಮತ್ತು ಕಾಲೇಜಿನ ಅಭ್ಯಾಸವೂ ಸರಿಪಡುತ್ತದೆ.

ಕಾಲೇಜು ಎಂಬ ಇಂಗ್ಲಿಷ್ ನಾಮವನ್ನು ಇಡುವದಕ್ಕಿಂತ ಸಂಸ್ಕೃತ ಶಬ್ದದ ಹೆಸರನ್ನಿಡುವದು ಒಳ್ಳೆಯದಲ್ಲವೇ ?

ಪ್ರಕಾಶಕ.



ಶ್ರೀ ಗುರು ಬಸವ ಲಿಂಗಾಯ ನಮಃ

# ಉಪನಿಷತ್ತುಗಳು



ಮನುಷ್ಯನಾಗಿ ಹುಟ್ಟಿದ ಮೇಲೆ ಪಶು ಪಕ್ಷಿ ಮೃಗಗಳು ಮೊದಲಾದವುಗಳ ಹಾಗೆ ಗಂಡ ಹೆಂಡಿರು ಸಂಸಾರ ಮಾಡಿಕೊಂಡಿದ್ದು ಈ ಲೋಕದ ಯಾತ್ರೆಯನ್ನು ತೀರಿಸಿಬಿಡಬೇಕೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇರುವೆಯೂ ಕೂಡಾ ತನ್ನ ಸುಖವನ್ನು ಬಯಸಿ ಕೆಲಸ ಮಾಡುತ್ತದೆ. ಸಕ್ಕರೆ ಸಿಕ್ಕುವಲ್ಲಿಗೆ ಹೋಗುತ್ತದೆ. ತಿನ್ನುತ್ತದೆ. ಮೊಟ್ಟೆಗಳನ್ನಿಡುತ್ತದೆ. ತನಗೆ ತೊಂದರೆಯನ್ನುಂಟುಮಾಡಿದವರಿಗೆ ಕಡಿಯುತ್ತದೆ. ಇದೆಲ್ಲಾ ಸ್ವಾಭಾವಿಕವಾಗಿ ಪ್ರಾಣಿವರ್ಗದ ಗುಣವೇ ಆಗಿದೆ. ಇಷ್ಟನ್ನೇ ಮನುಷ್ಯನು ನಡೆಸಿಕೊಂಡು ಹೋದರೆ ಆತನು ತನ್ನ ವಿಚಾರ ಶಕ್ತಿಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡಂತೆ ಆಗುವದಿಲ್ಲ. ಮನುಷ್ಯನ ಬುದ್ಧಿಯು ಅತಿ ಸೂಕ್ಷ್ಮವಾದುದು. ಇತರ ಪ್ರಾಣಿಗಳ ಯೋಚನೆಗಿಂತ ಮನುಷ್ಯನ ಯೋಚನೆಯು ಹೆಚ್ಚಿನದು. ಆದ್ದರಿಂದಲೇ ಇತರ ಪ್ರಾಣಿಗಳು ಹೊಂದದಿರುವ ಪ್ರಯೋಜನಗಳನ್ನು ಮನುಷ್ಯನು ಹೊಂದುತ್ತಾನೆ. ಮನುಷ್ಯನು ಹೊಂದುವ ಸುಖ ಸಾಧನೆಯ ವಸ್ತುಗಳು ಕೆಲವನ್ನು ಇತರ ಪ್ರಾಣಿಗಳು ಏನು ಕಷ್ಟಪಟ್ಟರೂ ಹೊಂದಲಾರವು. ಎಷ್ಟು ವರ್ಷಗಳು ತಮ್ಮ ಬುದ್ಧಿಯನ್ನು ಖರ್ಚು ಮಾಡಿದರೂ ಹೊಂದಿಸಿಕೊಳ್ಳಲಾರವು.

ಹೀಗೆ ಈಗಿನ ಪ್ರಪಂಚದ ಪ್ರಾಣಿಗಳಲ್ಲೆಲ್ಲಾ ಶ್ರೇಷ್ಠನಾದ ಮನುಷ್ಯನು ತನ್ನ ಬುದ್ಧಿಯನ್ನು ಈ ಜಗತ್ತನ್ನು ಸೃಷ್ಟಿ ಮಾಡಿದ ಮಹಾದೇವನ ವಿಷಯವಾಗಿ ವಿಚಾರ ಮಾಡುವದಕ್ಕೆ ಪ್ರಯತ್ನಪಟ್ಟು ಅದನ್ನು ಸಾಧಿಸುವದಕ್ಕೆ ಪ್ರಯತ್ನ ಮಾಡುವದು ಅವನ ಅನೇಕ ಕೆಲಸಗಳಲ್ಲಿ ಒಂದು ಮುಖ್ಯವಾದ ಕೆಲಸವಾಗಿರುತ್ತದೆ. ಮಹಾದೇವನ ವಿಷಯವಾಗಿ ಏಕೆ ವಿಚಾರಮಾಡಬೇಕು! ಅದರಿಂದ ನಮಗೇನು ಪ್ರಯೋಜನ? ಅವನು ಕಣ್ಣಿಗೆ ಕಾಣುವದಿಲ್ಲ ಎಂದು ಅನೇಕರು ಶಂಕಿಸಬಹುದು. ಕಾಣದಿರುವ ಎಷ್ಟೋ ವಸ್ತುಗಳನ್ನು ನಾವು ಉಂಟಾಗಿದ್ದೇವೆ. ಅವುಗಳ ವಿಚಾರ ಮಾಡದಿದ್ದರೆ ನಮಗೆ ಸುಖವು ದೊರೆಯುವಂತೆ ಇಲ್ಲ. ಮನಸ್ಸನ್ನು ಹೊರಗಿನ ಕಣ್ಣುಗಳಿಂದ ನೋಡಿದವರು ಯಾರು ಇರುವರು? ಕೋಪವ

ಸ್ನು ನೋಡಿದವರು ಯಾರಿದ್ದಾರೆ? ಅಹಂಕಾರವು ಯಾರ ಕಣ್ಣಿಗೆ ಗೋಚರವಾಗಿದೆ? ಇವುಗಳು ಇಲ್ಲವೆನ್ನಬೇಕೇನು? ಇವುಗಳ ಕೆಲಸದಿಂದ ಇವು ಉಂಟೆಂದು ಹೇಗೆ ತಿಳಿಯಬೇಕೋ ಹಾಗೆ ಕೇವಲ ಬಯಲು (ನಿರಾಕಾರ) ಸ್ವರೂಪವಾಗಿ ಕಾಣುವ ಆಕಾಶವೂ ಕೂಡಾ ಒಂದು ಮೂಲ ವಸ್ತುವಿನಿಂದ ಆಗಿರುವದೆಂದು ತಿಳಿಯಲಿಕ್ಕೆ ಬರುವಂತೆ ಇರುವದರಿಂದ ಎಲ್ಲಕ್ಕೂ ಮೂಲ ವಸ್ತುವು ಯಾವುದೋ ಅದನ್ನೇ ಅವನನ್ನೇ ಮಹಾದೇವನೆಂದು ಭಾವಿಸಿ ಅವನ ವಿಷಯವಾಗಿ ತಿಳಿಯುವುದು ಅವಶ್ಯಕವಾದ ಕೆಲಸವಾಗಿದೆ. ಆಕಾಶವನ್ನು ಹುಟ್ಟಿಸಿದ ಅಥವಾ ಅದರ ಹುಟ್ಟುವಿಕೆಗೆ ಕಾರಣವಾದ ಮಹಾದೇವನಿಂದಲಾದರೂ ನಮಗೇನು ಪ್ರಯೋಜನವೆನ್ನಬಹುದು. ಭೂಮಿ, ನೀರು, ಅಗ್ನಿ, ಗಾಳಿ, ಆಕಾಶ ಎಂಬ ಪಂಚಭೂತಗಳ ಅಂಶಗಳೂ ನಮಗೆ ಸಂಬಂಧಪಟ್ಟು ಹೇಗೆ ಕೆಲಸ ಮಾಡುವವೋ ಎಂದರೆ ಭೂಮಿಯು ಗಟ್ಟಿ ರೂಪವಾದ ಎಲುಬು ಮೊದಲಾದವುಗಳ ರೂಪದಲ್ಲಿಯೂ ನೀರು ಜಲ ರೂಪವಾದ ರಕ್ತ ಮೊದಲಾದವುಗಳ ರೂಪದಲ್ಲಿಯೂ ಬೆಂಕಿಯು ಬಿಸಿ ರೂಪವಾದ ಉದರಾಗ್ನಿ ಮೊದಲಾದವುಗಳ ರೂಪದಲ್ಲಿಯೂ ಗಾಳಿಯು ವಾಯು ರೂಪವಾದ ಪ್ರಾಣ ಅಪಾನ ಮೊದಲಾದವುಗಳ ರೂಪದಲ್ಲಿಯೂ ಆಕಾಶವು ಬಯಲು ರೂಪಾದ ಶಬ್ದ ಧ್ವನಿ ಮೊದಲಾದವುಗಳ ರೂಪದಲ್ಲಿಯೂ ನಮ್ಮ ಶರೀರದಲ್ಲಿ ಹೇಗೆ ವ್ಯಾಪಿಸಿಕೊಂಡಿವೆಯೋ ಹೇಗೆ ಕೋಪತಾಪಗಳು ಕಾಮಾದಿಗಳು ಮುದಿತನ ಮೊದಲಾದ ವಿಕಾರಗಳು ಮನುಷ್ಯನನ್ನು ವ್ಯಾಪಿಸಿಕೊಂಡು ಕೆಲಸ ಮಾಡುವವೋ ಹಾಗೆ ಆಕಾಶದ ಹುಟ್ಟುವಿಕೆಗೆ ಕಾರಣವಾದ ಮೂಲ ವಸ್ತುವೂ ದೇಹವಲ್ಲಿ ವ್ಯಾಪಿಸಿಕೊಂಡು ಕೆಲಸ ಮಾಡುತ್ತಾ ಇರುತ್ತದೆ. ಶಾಂತಿ ಆನಂದ ಮೊದಲಾದವುಗಳ ರೂಪದಲ್ಲಿ ಆ ಮೂಲ ವಸ್ತುವಿನ ಕಾರ್ಯಗಳು ಗೋಚರಿಸುತ್ತವೆ. ಈ ಕಾರಣಗಳಿಂದಲೂ ಮಹಾದೇವನು ಉಂಟೆಂಬುವನ್ನೂ ಅವನ ವಿಷಯಗಳನ್ನು ತಿಳಿಯುವದರಿಂದ ನಮ್ಮ ದೇಹಕ್ಕೆ ನಮ್ಮ ಮನಸ್ಸಿಗೆ ನಮ್ಮ ಜೀವಕ್ಕೆ ಪ್ರಯೋಜನವುಂಟೆಂಬುದನ್ನೂ ನಿರ್ಧರಿಸಿಕೊಂಡು ಹಾಗೆ ತಿಳಿಯುವದಕ್ಕಾಗಿ ಪ್ರಯತ್ನಿಸಬೇಕು.

ನಮ್ಮ ಕಣ್ಣಿಗೆ ಕಾಣದೆ ಇರುವ ಕೋಪವು ಹೇಗೆ ಹುಟ್ಟುತ್ತದೆ? ಹೇಗೆ ಕೆಲಸ ಮಾಡುತ್ತದೆ? ಹೇಗೆ ಕಡೆಯ ಫಲವನ್ನು ಕೊಡುತ್ತದೆ? ಇಂಥಾ ವಿಷಯಗಳನ್ನೆಲ್ಲಾ ಯೋಚಿಸಿ ವಿಚಾರ ಮಾಡಿದರೆ ಆ ಕೋಪ

ವನ್ನು ಹಿಡಿದಿರುವದು ಅಥವಾ ಬಿಡುವದು ಕೆಟ್ಟದ್ದು ಅಥವಾ ಒಳ್ಳೆಯದು ಎಂಬ ಆಲೋಚನೆಗೆ ಅವಕಾಶವಾಗಿ ಬಿಡಬೇಕಾಗಿದ್ದರೆ ಹೇಗೆ ಬಿಡಬೇಕೆಂಬ ವಿಚಾರವು ಹುಟ್ಟಿ ಬಿಡ. ಅದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಿ ಬಳಿಕ ಬಿಟ್ಟು ಬಿಡುವುದು ಹೇಗೆ ಸಾಧ್ಯವೋ ಹಾಗೆಯೇ ಮಹಾದೇವನ ವಿಷಯವನ್ನು ತಿಳಿದು ಆಲೋಚಿಸಿ ವಿವಾದಮಾಡಿ ನಿರ್ಧರಿಸಿ ಆಚರಿಸಿ ಸಾಧಿಸಿ ಅದರ ಫಲವನ್ನು ಪಡೆಯುವದು ನಮಗೆ ಎಂದರೆ ಮನುಷ್ಯವರ್ಗಕ್ಕೆ ಸಾಧ್ಯವಿದೆ.

ನಮ್ಮ ಪೂರ್ವಿಕರು ಈ ವಿಷಯಕ್ಕಾಗಿ ಬಹಳ ಕಷ್ಟಪಟ್ಟಿದ್ದಾರೆ. ಮಹಾದೇವನ ವಿಷಯವನ್ನು ತಿಳಿದಿದ್ದಾರೆ. ಆಲೋಚಿಸಿದ್ದಾರೆ. ವಿವಾದಮಾಡಿ ನೋಡಿದ್ದಾರೆ. ನಿರ್ಧರಿಸಿದ್ದಾರೆ. ಆಚರಿಸಿದ್ದಾರೆ. ಸಾಧಿಸಿದ್ದಾರೆ. ತಾವು ಸಾಧಿಸಿ ಮುಂದಿನವರಿಗೂ ತಿಳಿಯಲೆಂದು ಬರೆದು ಇಟ್ಟಿದ್ದಾರೆ. ಅವರು ಬರೆದು ಇಟ್ಟಿರುವವುಗಳನ್ನು ನಾವು ಓದಿಕೊಂಡರೆ ನಾವು ಮುಂದೆ ಇನ್ನೂ ಏನು ಆಲೋಚಿಸಬಹುದು ನಿರ್ಧರಿಸಬಹುದು ಸಾಧಿಸಬಹುದು ಎಂಬ ಅಂಶಗಳು ನಮಗೆ ಗೋಚರಿಸುತ್ತವೆ.

ಮನುಷ್ಯನು ಬರಬರುತ್ತಾ ಅಜ್ಞಾನ ದೆಸೆಯನ್ನು ಕಳೆದು ಕಳೆದು ಈ ಸ್ಥಿತಿಗೆ ಬಂದಿದ್ದಾನೆಂದು ಈಗ ಯೋಚಿಸುವವರು ಪೂರ್ವಿಕರು ಕಂಡು ಹಿಡಿದ ವಿಷಯಗಳನ್ನು ಈಗಿನವರು ಏಕೆ ನಡೆಸುತ್ತಲಿಲ್ಲ? ಎಂಬುದಕ್ಕೆ ಉತ್ತರವನ್ನು ಕೊಡಬೇಕಾಗಿದೆ. ಉದಾಹರಣೆಗೆ ಪೂರ್ವದವರು ತಮ್ಮ ದೇಹದೊಳಗಿನ ಜೀವವನ್ನೇ ಒತ್ತಟ್ಟಿಗೆ ತೆಗೆದು ಇನ್ನೊಂದು ಜೀವವು ಮರಣ ಹೊಂದಿದ ದೇಹದೊಳಗೆ ಪ್ರವೇಶ ಮಾಡಿಸುತ್ತಿದ್ದರೆಂಬ ಉಲ್ಲೇಖಗಳು ಬೇಕಾದಷ್ಟು ಸಿಕ್ಕುತ್ತವೆ. ಇದು ಈಗ ಯಾಕೆ ತೋರುವದಿಲ್ಲ? ಇದೂ ಇದ್ದು ಇದಕ್ಕಿಂತ ಹೆಚ್ಚಿನ ಕಾರ್ಯವನ್ನು ಈಗಿನವರು ಯೋಚನೆ ಮಾಡುತ್ತ ಇದ್ದಿದ್ದರೆ ಜಗತ್ತು ಹಿಂದಿನಿಂದ ಮುಂಪಕ್ಕೆ ಸುಧಾರಿಸುತ್ತಾ ಹೋಗಿದೆ ಎಂದು ತಿಳಿಯಬಹುದಾಗಿತ್ತು. ಹೀಗಿಲ್ಲದೆ ಹಿಂದಿನವರ ಕಾರ್ಯಗಳೇ ಈಗ ಇಲ್ಲವೆಂದ ಮೇಲೆ ಹಿಂದಿನವರ ಬುದ್ಧಿವಂತಿಕೆಯು ಈಗ ಕಳೆಯುತ್ತಾ ಬಂದ ಉದಾಹರಣೆಯು ನಮಗೆ ಸಿಕ್ಕಿದಂತಾಗಿ ಈಗಣ ಮನುಷ್ಯ ಜಾತಿಗಿಂತಲೂ ಹೆಚ್ಚಿನ ತಿಳಿವಳಿಕೆಯ ಮನುಷ್ಯರು ಅಥವಾ ಬೇರೊಂದು ಜಾತಿಯವರು ಇದ್ದರೆಂದೂ ಅವರಿಂದ ಕೆಲವು ವಿಷಯಗಳು ಈಗಿನ ಮನುಷ್ಯರಿಗೆ ಬಂದವೆಂದೂ ನಿರ್ಧರಿಸಬೇಕಾಗುತ್ತದೆ. ಇಲ್ಲದಿದ್ದರೆ ಆ ವಿದ್ಯೆ ಹಿಂದೆ ಇದ್ದುದ್ದೇ ಸುಳ್ಳೆಂದು ಹೇಳಬೇಕಾಗುತ್ತದೆ.

ಹಾಗೆ ಸುಳ್ಳೆಂದು ಹೇಳುವದಾದರೆ ಇಂಥಾ ಸುಳ್ಳನ್ನು ಮುಂದಿನವರಿಗಾಗಿ ಬರೆದಿಡುವ ಪ್ರಕೃತವಾದರೂ ಪೂರ್ವಿಕರಿಗೆ ಏನಿತ್ತೆಂಬದನ್ನೂ ಯೋಚಿಸಬೇಕಾಗ ತ್ತದೆ.

ಇದು ಹಾಗಿರಲಿ. ಒಂದೊಂದು ಅಕ್ಷರಗಳನ್ನು ಉಚ್ಚಾರಿಸಿದಾಗ ಆ ಉಚ್ಚರಿಸಿದ ಕಾಲದಲ್ಲಿ ಇಂಥಿಂಥಾ ಬಣ್ಣವುಳ್ಳವುಗಳಾಗಿರುತ್ತವೆಂದು ಪೂರ್ವಿಕರು ಹೇಳಿರುತ್ತಾರೆ. ಈ ಕಾಲದಲ್ಲಿ ಯಂತ್ರೋಪಕರಣಗಳನ್ನಿಟ್ಟುಕೊಂಡು ಶಾಸ್ತ್ರ ( Science ) ಪರಿಶೋಧನೆ ಮಾಡುವವರು ವಾಯುವಿನ ಬಣ್ಣವನ್ನು ಕಂಡು ಹಿಡಿದಿರುವರಾದರೂ ಅದಕ್ಕಿಂತ ಸೂಕ್ಷ್ಮವಾದ ಧ್ವನಿಯ ಬಣ್ಣವನ್ನು ಕಂಡುಹಿಡಿದುದನ್ನು ತಿಳಿದಿಲ್ಲ. ಇಂಥಾ ಧ್ವನಿಯ ಬಣ್ಣವನ್ನು ಪೂರ್ವದವರು ಹೇಳಿರುವದನ್ನು ನೋಡಿದರೆ ಈಗಿನವರಿಗಿಂತಲೂ ಅವರ ತಿಳಿವಳಿಕೆಯು ಕೆಲವು ಭಾಗದಲ್ಲಿಯಾದರೂ ಕೆಲವುಮಟ್ಟಿಗಾದರೂ ಮುಂದೆ ಹೋಗಿತ್ತೆಂದು ನಿರ್ಧರಿಸಲಿಕ್ಕೆ ಬರುವಂತಿದೆ.

ಆದ್ದರಿಂದ ಪೂರ್ವಿಕರು ಮಹಾದೇವನ ವಿಷಯವಾಗಿ ಏನು ಹೇಳಿರುವರೆಂದು ನಾವು ನೋಡಲೇ ಬೇಕು. ಹಾಗೆ ನೋಡಬೇಕೆಂಬ ಅಪೇಕ್ಷೆಯು ನಮಗೆ ಹುಟ್ಟಿದರೆ ನಾವು ಪೂರ್ವಿಕರ ಗ್ರಂಥಗಳನ್ನು ಓದಬೇಕಾಗುತ್ತದೆ. ಹೀಗೆ ಮಹಾದೇವನನ್ನು ತಿಳಿಯುವ ವಿದ್ಯೆಗೆ ಪಾರಮಾರ್ಥಿಕ ವಿದ್ಯೆ, ಮಹಾದೇವನಿಗೆ ಬ್ರಹ್ಮ ಎಂತ ಕರೆಯುವದರಿಂದ ಬ್ರಹ್ಮ ವಿದ್ಯೆ, ಮುಂತಾದ ಹೆಸರುಗಳಿವೆ. ಈ ಬ್ರಹ್ಮ ವಿದ್ಯೆಯನ್ನು ಬೋಧಿಸುವ ಗ್ರಂಥಗಳು ಬಹಳವಾಗಿವೆ. ಈ ವಿಷಯದ ಮುಖ್ಯ ಭಾಗಗಳನ್ನೇ ಬಹು ಮಟ್ಟಿಗೆ ಬೋಧಿಸುವವುಗಳು ಉಪನಿಷತ್ತುಗಳಾಗಿವೆ. ಇವು ವೇದದ ಒಂದು ಭಾಗವಾಗಿ ಇರುತ್ತವೆ. ಭಗವದ್ಗೀತೆಯೂ ಈ ವಿಷಯವನ್ನು ಬೋಧಿಸುತ್ತದೆ. ಆದ್ದರಿಂದ ಇದಕ್ಕೆ ಉಪನಿಷತ್ ಎಂಬ ಅಂಕಿತವನ್ನು ಇಟ್ಟಿರುವದು ಅದರ ಅಧ್ಯಾಯದ ಕಡೆಯಲ್ಲಿ ಬರೆದಿರುವ '....... ಗೀತಾಸು ಉಪನಿಷತ್ಸು' ಎಂಬ ಪದಗಳಿಂದ ನಿರ್ಣಯಿಸಬಹುದು.

ಉಪನಿಷತ್ ಎಂಬ ಸಮಸ್ತ ( ಕೂಡಿದ ) ಪದಕ್ಕೆ ಬ್ರಹ್ಮವಿದ್ಯೆ

ಎಂದು ಅರ್ಥವಾಗುತ್ತದೆ. ಹೇಗೆಂದರೆ:— ಉಪ ಎಂದರೆ ಸಮೀಪ. ಗುರುವಿನ ಸಮೀಪಕ್ಕೆ ಹೋಗಿ ಅವರಿಂದ ಪಡೆದು ನಿ ಎಂದರೆ ನಿಷ್ಠೆಯಿಂದ ಅಥವಾ ನಿಷ್ಠೆಯಿಂದ ಪರಿಶೀಲಿಸಿ ಸಮಾಧಾನವನ್ನು ಹೊಂದಿದವರಿಗೆ ಷದ್ ಎಂದರೆ ಸಂಸಾರ ಬೀಜವನ್ನು ನಾಶಮಾಡುವದು. ಅಥವಾ ನಿ ಎಂದರೆ ಗುರು ಬೋಧೆಯಲ್ಲಿ ನಿಷ್ಠೆಯುಳ್ಳ ಮುಮುಕ್ಷುಗಳಿಗೆ ಷದ್‌ಎಂದರೆ ಬ್ರಹ್ಮನನ್ನು ಹೊಂದಿಸುವದು ಅಥವಾ ನಿ ಶರಣ ಗತ್ಯವಸಾದನಾರ್ಥಸ್ಯ ಷದ್ಲೃ ಧಾತು ಎಂದಿರುವದರಿಂದ ನಿ- ನಿಷ್ಠೆಯುಳ್ಳವರಿಗೆ ಷದ್- ಬ್ರಹ್ಮನಲ್ಲಿ ಶರಣು ಹೋಗಿಸುವುದು ಎಂಬದಾಗಿ ಅರ್ಥವನ್ನು ಹೊಂದಿ ಬ್ರಹ್ಮ ವಿದ್ಯೆ ಎನಿಸಿಕೊಂಡಿದೆ.

ಬ್ರಹ್ಮ ಸಂಬಂಧವಾದ ವಿಷಯಗಳನ್ನು ಪ್ರತಿಪಾದನೆ ಮಾಡುವ ಇತರ ಗ್ರಂಥಗಳಿಗೂ ಕೂಡಾ ಗೌಣ ವೃತ್ತಿಯಿಂದ ಉಪನಿಷತ್ ಎಂಬ ಹೆಸರು ಸಲ್ಲುತ್ತದೆ. ಈ ಕಾರಣದಿಂದಲೇ ಭಗವದ್ ಗೀತೆಯು ಉಪನಿಷತ್ ಎನಿಸಿಕೊಂಡಿದೆ. ಈ ಸಂಗತಿಯನ್ನು ಹಿಂದೆ ಹೇಳಿರುತ್ತದೆ. ಈಗ ಒಂದು ವೇಳೆ ಇಂಥಾ ಗ್ರಂಥಗಳು ಹುಟ್ಟುವುದಾದರೆ ಅವೂ ಉಪನಿಷತ್ ಎನಿಸಿಕೊಳ್ಳಲಿಕ್ಕೆ ಯೋಗ್ಯವಾಗುತ್ತವೆ.

ಈ ಉಪನಿಷದ್ ವಿದ್ಯೆಯು ವೇದಗಳನ್ನು ನಂಬುವವರಾದ ಹಿಂದೂಗಳೆಲ್ಲರಿಂದಲೂ ಗೌರವಿಸಲ್ಪಟ್ಟಿರುತ್ತದೆ. ಯೂರೋಪ್ಯರೂ ಇವುಗಳ ವಿಷಯದಲ್ಲಿ ಗಮನ ಕೊಡುತ್ತಿದಾರೆ. ಜರ್ಮನೀ ದೇಶದವನಾದ ಮ್ಯಾಕ್ಸ್ ಮುಲ್ಲರ್ ಎಂಬ ಪ್ರಸಿದ್ಧ ಪಂಡಿತನು ತಾನು ಬರೆದಿರುವ "Six systems of Indian Philosophy" ಎಂಬ ಪುಸ್ತಕದಲ್ಲಿ ಇವುಗಳ ವಿಷಯವಾಗಿ ಹೀಗೆ ಹೇಳಿದ್ದಾನೆ.

As we can feel that there is electricity in the air and that there will be a storm we feel on reading of Upanishad that there is philosophy in the Indian mind and that there will be thunder and lightning to follow soon.

ತಾತ್ಪರ್ಯ. ನಾವು ಗಾಳಿಯಲ್ಲಿ ವಿದ್ಯುಚ್ಛಕ್ತಿ (ಮಿಂಚು) ಇದೆ

ಎಂಬುವನ್ನೂ ಮತ್ತು ಬಿರುಗಾಳಿ ಉಂಟಾಗುವುದೆಂಬುವನ್ನೂ ಅನುಭವದಿಂದ ತಿಳಿವಂತೆ ಹಿಂದೂ ಜನರ ಮನಸ್ಸಿನಲ್ಲಿ ತತ್ವಜ್ಞಾನವು (Tune = air) ಉಂಟೆಂಬುದೂ ಆ ಸಂಬಂಧದ ಮಿಂಚೂ ಗುಡುಗೂ ಜೇಗನೆ ಹಿಂದೆಯೇ ಬರುವವೆಂಬುದೂ ಉಪನಿಷತ್ತುಗಳನ್ನು ಓದಿದಾಗ ಗೊತ್ತಾಗುತ್ತದೆ.

ಮಹಾ ವಾಕ್ಯ ರತ್ನಾವಳಿಯಲ್ಲಿ ಮೂಲ ಉಪನಿಷತ್ತುಗಳು ವೇದದ ಒಂದೊಂದು ಭಾಗಕ್ಕೆ ಒಂದೊಂದರಂತೆ ಇರುವದಾಗಿ ಬರೆದಿದ್ದಾರೆ. ಇವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡ, ಅಥವಾ ಮುಂಡಕ ಮಾಂಡೂಕ್ಯ, ತಿತ್ತಿರಿ ಅಥವಾ ತೈತ್ತಿರೀಯಕ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಇವು ಹತ್ತು ಮುಖ್ಯವಾದವುಗಳಾಗಿವೆ. ಇವು ಬಹು ಪೂರ್ವದಲ್ಲಿ ಎಂದರೆ ಕ್ರಿ. ಪೂ. ೫ನೆಯ ಶತಮಾನಕ್ಕೆ ಮುಂಚೆ ಹುಟ್ಟಿದವುಗಳೆಂದು ಪ್ರಸಿದ್ಧವಾಗಿವೆ. ಈ ದಶೋಪನಿಷತ್ತುಗಳ ಪ್ರಾಮಾಣ್ಯವು ಬಹಳ ಕಡೆಗಳಲ್ಲಿ ಅಂಗೀಕರಿಸಲ್ಪಟ್ಟಿರುತ್ತದೆ. ಇವಲ್ಲದೆ ಶ್ವೇತಾಶ್ವತರ, ಬ್ರಹ್ಮಬಿಂದು, ಅಥವಾ ಅಮೃತ ಬಿಂದು ಕೈವಲ್ಯ, ಜಾಬಾಲ, ಹಂಸ, ಆರುಣಿಕ, ಗರ್ಭ, ನಾರಾಯಣ, ಪರಮಹಂಸ, ಬ್ರಹ್ಮ ಅಮೃತನಾದ, ಅಥರ್ವಶಿರ, ಅಥರ್ವಶಿಖ, ಮೈತ್ರಾಯಣಿ, ಕೌಷೀತಕಿ ಬ್ರಾಹ್ಮಣ, ಬೃಹಜ್ಜಾಬಾಲ, ನೃಸಿಂಹ ತಾಪಿನಿ, ಕಾಲಾಗ್ನಿರುದ್ರ, ಮೈತ್ರೇಯಿ, ಸುಬಾಲ, ಕ್ಷುರಿಕ, ಮಂತ್ರಿಕ, ಸರ್ವಸಾರ, ನಿರಾಲಂಬ, ಶುಕರಹಸ್ಯ, ವಜ್ರಸೂಚಿಕ, ತೇಜೋಬಿಂದು, ನಾದಬಿಂದು, ಧ್ಯಾನಬಿಂದು, ಬ್ರಹ್ಮವಿದ್ಯಾ, ಯೋಗತತ್ವ, ಆತ್ಮಬೋಧ, ನಾರದ ಪರಿವ್ರಾಜಕ, ತ್ರಿಶಿಖಿಬ್ರಾಹ್ಮಣ, ಸೀತಾ, ಯೋಗಚೂಡಾಮಣಿ, ನಿರ್ವಾಣ, ಮಂಡಲಬ್ರಾಹ್ಮಣ, ದಕ್ಷಿಣಾಮೂರ್ತಿ, ಶರಭ, ಸ್ಕಂದ, ತ್ರಿಪಾದ್ವಿಭೂತಿಮಹಾನಾರಾಯಣ, ಅದ್ವಯತಾರಕ, ರಾಮರಹಸ್ಯ, ರಾಮತಾಪಿನೀ, ವಾಸುದೇವ, ಮುದ್ಗಲ, ಶಾಂಡಿಲ್ಯ, ಪೈಂಗಲ, ಭಿಕ್ಷುಕ, ಶಾರೀರಕ, ಯೋಗಶಿಖಾ, ತುರೀಯಾತೀತ, ಸನ್ಯಾಸ, ಅಕ್ಷಮಾಲ, ಅವ್ಯಕ್ತ, ಏಕಾಕ್ಷರ, ಅನ್ನಪೂರ್ಣಾ, ಸೂರ್ಯ, ಅಕ್ಷಿ, ಅಧ್ಯಾತ್ಮ ಕುಂಡಿಕ, ಸಾವಿತ್ರಿ, ಆತ್ಮ, ಪಾಶುಪತಬ್ರಹ್ಮ, ಪರಬ್ರಹ್ಮ, ಅವಧೂತ, ತ್ರಿಪುರತಾಪಿನಿ, ದೇವಿ, ತ್ರಿಪುರ, ಕಠರುದ್ರ, ಭಾವನಾ, ರುದ್ರಹೃದಯ, ಯೋಗಕುಂಡಲಿ, ಭಸ್ಮಜಾಬಾಲ, ರುದ್ರಾಕ್ಷಜಾಬಾಲ, ಗಣಪತಿ, ಜಾಬಾಲದರ್ಶನ, ತಾರಸಾರ, ಮಹಾವಾಕ್ಯ, ಪಂಚ

ಬ್ರಹ್ಮ, ಪ್ರಾಣಾಗ್ನಿಹೋತ್ರ, ಗೋಪಾಲತಾಪಿನಿ, ಕೃಷ್ಣ, ಯಾಜ್ಞವಲ್ಕ್ಯ, ವರಾಹ, ಶಾಠ್ಯಾಯನೀಯ, ಹಯಗ್ರೀವ, ದತ್ತಾತ್ರೇಯ, ಗರುಡ, ಕಲಿಸಂತಾರಣ, ಜಾಬಾಲಿ, ಸೌಭಾಗ್ಯಲಕ್ಷ್ಮಿ, ಸರಸ್ವತೀರಹಸ್ಯ, ಬಹ್ವೃಚ, ಮುಕ್ತಿಕ, ಹೀಗೆ ತೊಂಬತ್ತೆಂಟು ಉಪನಿಷತ್ತುಗಳು ಪ್ರಚಾರದಲ್ಲಿ ಇವೆ. ಇವೆಲ್ಲಾ ಸೇರಿ ೧೦೮ ಉಪನಿಷತ್ತುಗಳೆನಿಸಿಕೊಂಡಿರುವವು. ಇವುಗಳಲ್ಲಿ ನೃಸಿಂಹತಾಪಿನಿ, ರಾಮತಾಪಿನಿ, ಗೋಪಾಲತಾಪಿನಿ, ನಾರಾಯಣ ಈ ನಾಲ್ಕು ಉಪನಿಷತ್ತುಗಳಲ್ಲಿ ಪೂರ್ವ ಉತ್ತರ ಎಂಬ ಎರಡು ಭಾಗಗಳಿರುವದರಿಂದ ಇವುಗಳನ್ನು ಎಂಟಾಗಿ ಗಣನೆ ಮಾಡಿದರೆ ೧೧೨ ಉಪನಿಷತ್ತುಗಳಾಗುವವು. ಇವುಗಳನ್ನು ಅಷ್ಟೋತ್ತರ ಶತೋಪನಿಷದಃ ಎಂಬ ಹೆಸರಿನಿಂದ ಬೊಂಬಾಯಿಯಲ್ಲಿ ದೇವನಾಗರೀ ಲಿಪಿಯಲ್ಲಿ ಮುದ್ರಿಸಿರುವರು. ತೆಲಗು ಲಿಪಿಯಲ್ಲಿಯೂ ಈ ೧೦೮ ಉಪನಿಷತ್ತುಗಳು ಮುದ್ರಣವಾಗಿವೆ. ಮ। ರಾ ವಾವಿಳ್ಳ ರಾಮಸ್ವಾಮಿ ಶಾಸ್ತ್ರಿಗಳು ಅಂಡ್ ಸನ್ಸ ಎಸ್‌ಪ್ಲನೇಡ್ ಚನ್ನಪುರಿ ಮದರಾಸ ಇವರಲ್ಲಿ ಮೂವತ್ತು ಉಪನಿಷತ್ತುಗಳು ಆಂಧ್ರ ತಾತ್ಪರ್ಯ ಸಹಿತವಾಗಿ ಮುದ್ರಣವಾದವುಗಳು ಮಾರಾಟಕ್ಕೆ ದೊರೆಯುತ್ತವೆ. ಕನ್ನಡ ಲಿಪಿಯಲ್ಲಿಯಾದರೋ ?.... ಎಲ್ಲಿವೆ ? ಎಷ್ಟಿವೆ ? ಎಣಿಸಿನೋಡಿದರೆ ಬೆರಳುಗಳ ಎಣಿಕೆಯೊಳಗೆ ಬರುವಷ್ಟು ಇರಬಹುದೆಂದು ತೋರುತ್ತದೆ. ಕನ್ನಡ ತಾತ್ಪರ್ಯ ಸಹಿತವಾಗಿ ಮುದ್ರಣವಾದ ಉಪನಿಷತ್ತುಗಳು ೩-೪ ಇರಬಹುದು. ಮ। ರಾ। ದಿವಾಕರ ಎಂಬುವವರೂ ಕನ್ನಡದಲ್ಲಿ ಕೆಲವು ಬರೆದಿರುವರಾದರೂ ಅವು ಇಂಗ್ಲಿಷ್ ಪುಸ್ತಕದ ಭಾಷಾಂತರಗಳು.

ಕೆಳದಿಯ ಬಸವಪ್ಪನಾಯಕರು ರಚಿಸಿದ್ದೆಂಬ ಶಿವತತ್ವ ರತ್ನಾಕರದಲ್ಲಿ ೧೦೮ ಉಪನಿಷತ್ತುಗಳ ಹೆಸರನ್ನು ಹೇಳಿರುವದಾದರೂ ಕೆಲವು ಹೆಸರುಗಳು ಈಗ ಮುದ್ರಣವಾದ ಹೆಸರುಗಳಿಗೆ ಭಿನ್ನವಾಗಿವೆ. ಈ ವ್ಯತ್ಯಾಸಗಳೇನೇನು ? ಇವಕ್ಕೆ ಕಾರಣವೇನು ? ಎಂಬುದನ್ನು ಈ ವರೆವಿಗೂ ವಿಚಾರ ಮಾಡಿದಂತೆ ತೋರಲಿಲ್ಲ.

ಈ ಉಪನಿಷತ್ತುಗಳು ವೀರಶೈವರಿಗೆ ಮಾನ್ಯಗಳಲ್ಲವೇನು ? ವಿದ್ಯೆಯಲ್ಲಿ ರಮಿಸುವವರು ವೀರರು ಎಂದು ತಮ್ಮ ವೀರ ಪದಕ್ಕೆ ಅರ್ಥ ಮಾಡಿಕೊಳ್ಳುತ್ತಿರುವಾಗ ಬ್ರಹ್ಮವಿದ್ಯಾ ಬೋಧಕವಾದ ಉಪನಿಷತ್ತುಗಳಲ್ಲಿ ಇವರ ರಮಣ ( ವಿನೋದ ) ವು ಇರಲೇಬೇಕಲ್ಲವೇ! ಹಾ

ಗೆ ಪೂರ್ವದವರು ಇವುಗಳಿಗೆ ಗಮನ ಕೊಟ್ಟು ಮಾನ್ಯ ಮಾಡಿರುವರೆಂಬುದಕ್ಕೆ ಅನುಮಾನವೇನೂ ಇಲ್ಲ. ಈಗ್ಯೆ ಸುಮಾರು ೮೦-೮೫ ವರ್ಷಗಳ ಪೂರ್ವದವರಾದ ಮೈಲಾರದ ಬಸವಲಿಂಗ ಶರಣರು ರುದ್ರಾಕ್ಷಿಯಾದುದೆಂದುಪನಿಷದ್ವಾಕ್ಯಾರ್ಥಮುಂಟು. ಎಂದು ಉಪನಿಷತ್ತಿನ ಪ್ರಮಾಣವನ್ನು ತಮ್ಮ ಅಷ್ಟಾವರಣ ವಾರ್ಧಿಕದಲ್ಲಿ ಕೊಟ್ಟಿದ್ದಾರೆ. ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾ ಸ್ವಾಮಿಗಳವರ ಬೃಹನ್ಮಠ ಚಿತ್ರದುರ್ಗ, ಶ್ರೀಮನ್ ಮಹಾ ಕೆಳದಿ ಸಂಸ್ಥಾನ ಹಿರೇಮಠ, ದಾವಣಗೆರೆ ಪುರಾಣಿಕರ ಮಠ, ಆಲೂರಲ್ಲಿ ಒಂದು ಮಠ ಸವದತ್ತಿಯಲ್ಲಿ ಪಟ್ಟದ ದೇವರ ಮಠ ಇವೇ ಮೊದಲಾದ ಅನೇಕ ಮಠಗಳಲ್ಲಿ ಉಪನಿಷತ್ತುಗಳ ಓಲೆಯ ಪ್ರತಿಗಳೂ ಕೈಬರಹದ ಪ್ರತಿಗಳೂ ಇರುತ್ತವೆ. ಇವುಗಳಲ್ಲಿ ಕೆಲವು ಮೇಲೆ ಕಂಡ ೧೦೮ ರ ಒಳಗೆ ಸೇರಿದವುಗಳೂ ಕೆಲವು ಸೇರದಿದ್ದವುಗಳೂ ಇರುತ್ತವೆ. ಇತರರು ಬರೆದದ್ದನ್ನು ಅಥವಾ ಬರೆಯಿಸಿದ್ದನ್ನು ತಂದು ಇಟ್ಟುಕೊಂಡಿದ್ದಾರೆಂದು ಹೇಳುವಂತೆಯೂ ಇಲ್ಲ. ಶ್ರೀ ಸಿದ್ಧಲಿಂಗಾಯನಮಃ ಶ್ರೀ ಚಿದಾತ್ಮ ಚನ್ನಮಲ್ಲಿಕಾರ್ಜುನ ಲಿಂಗಾಯನಮಃ ಎಂದು ಮೊದಲು ಬರೆದು ಮುಂದೆ ಉಪನಿಷತ್ತನ್ನು ಪ್ರಾರಂಭಿಸಿ ಇರುವದರಿಂದ ವೀರಶೈವರು ಬರೆದವರು ವೀರಶೈವರು ಬರೆಸಿದವರು ಎಂಬ ಅಭಿಪ್ರಾಯವು ಸ್ಪಷ್ಟವಾಗುತ್ತದೆ. ಈಗ ಮುದ್ರಣವಾಗಿರತಕ್ಕ ಉಪನಿಷತ್ತುಗಳೊಡನೆ ಈ ಮೇರೆಗೆ ಕೈ ಬರಹ ಪ್ರತಿಯಲ್ಲಿ ಇದ್ದವುಗಳನ್ನು ಹೋಲಿಸಿದರೆ ಸ್ವಲ್ಪ ಹೆಚ್ಚುಕಡಿಮೆಯಾಗಿ ಹೋಲುತ್ತವೆ. ಆದರೆ ಮುದ್ರಣದಲ್ಲಿ ಆಗಿರತಕ್ಕ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ಕಂಡು ಹಿಡಿದು ಅವಕ್ಕೆ ಕಾರಣವೇನೆಂಬುದನ್ನು ಪರ್ಯಾಲೋಚಿಸುವ ಕೆಲಸವು ಮಾತ್ರ ಬಾಕಿ ಉಳಿದಿವೆ.

ಪೂರ್ವದಲ್ಲಿ ಕೆಲವರು ಮೂವತ್ತೆರಡು ಉಪನಿಷತ್ತುಗಳು ಮುಖ್ಯವೆಂದು ತಿಳಿಯುತ್ತಿದ್ದರು. ಚಿತ್ರದುರ್ಗದ ಶ್ರೀಮನ್ ನಿರಂಜನ ಜಗದ್ಗುರು ಮುರುಘಾ ರಾಜೇಂದ್ರ ಮಹಾ ಸ್ವಾಮಿಗಳವರಲ್ಲಿ ಪೂರ್ವದವರಾದ ಮುರುಘಾ ಶಾಂತವೀರ ದೇಶಿಕೇಂದ್ರರವರು ಏಕೋನ ವಿಂಶತಿ ಪ್ರಬಂಧವೆಂಬುದಾಗಿ ೧೯ ಶ್ಲೋಕಗಳುಳ್ಳ ಒಂದು ಗ್ರಂಥವನ್ನು ರಚಿಸಿದ್ದಾರೆ. ಅದರಲ್ಲಿ ಇವರು ೩೨ ಉಪನಿಷತ್ತುಗಳ ಹೆಸರನ್ನು ಒಂದು ಪದ್ಯದಲ್ಲಿ ತೋರಿಸಿರುತ್ತಾರೆ ಇವುಗಳ ಹೆಸರಿನ ಮೂಲ ಅಕ್ಷರಗಳನ್ನೇ ಅದರಲ್ಲಿ ಸಂಕ್ಷೇಪ

ವಾಗಿ ತೋರಿಸಿರುತ್ತಾರೆ. ಈ ಹೆಸರುಗಳನ್ನು ಈ ಗ್ರಂಥದ ಟೀಕಾಕಾರರು ವಿವರವಾಗಿ ಕೊಟ್ಟಿರುತ್ತಾರೆ.

ಶ್ರೀ ಕಾ ಬ್ರ ಜಾ ಬೃ ಹಂ ಪಂ ಪ ತೇ ಪೃ ಚರ್ ಪ ॥
ನಾ ಕಾ ಬ್ರ ವಾ ಶ್ವೇ ಶ್ರ ವಾ ಸಾಂ ಕ ಬಾಷ್ ಶೌ ಶಿ ।
ಮೈ ಕೈ ಮೂ ಲಾ ದ್ವಿ ಬೋ ಮುಂಡಕಾಮೃತಬಿಂದು ದ್ವಾ
ತ್ರಿಂಶದುಪನಿಷತ್ ॥

೧ ಶ್ರೀರುದ್ರ ೨ ಕಾಲಾಗ್ನಿ ೩ ಬ್ರಹ್ಮೋಪನಿಷತ್ ೪ ಜಾಬಾಲೋಪನಿಷತ್ ೫ ಬೃಹದಾರಣ್ಯಕ ೬ ಹಂಸ ೭ ಪಂಚಬ್ರಹ್ಮ ೮ ಪರಮಹಂಸ ೯ ತೇಜೋಬಿಂದು ೧೦ ಪೃಚ್ಛೋಪನಿಷತ್ ೧೧ ಚರ್ಚೋಪನಿಷತ್ ೧೨ ಪರಾಕ್ರಮೋಪನಿಷತ್ ೧೩ ನಾರಾಯಣ ೧೪ ಕಾತ್ಯಾಯಿನ್ಯುಪನಿಷತ್ ೧೫ ಬ್ರಹ್ಮಬಿಂದೂಪನಿಷತ್ ೧೬ ವಾಸುರಾಯಣೀಯ ೧೭ ಶ್ವೇತಾಶ್ವರ ೧೮ ಶ್ರವಣೋಪನಿಷತ್ ೧೯ ವಾಜಸನೇಯೋಪನಿಷತ್ ೨೦ ಸಾಂಖ್ಯಾಯನೀಯೋಪನಿಷತ್ ೨೧ ಕಠವಲ್ಲಿ ೨೨ ಬಾಷ್ಕಳೋಪನಿಷತ್ ೨೩ ಶಾನಕೇಯೋಪನಿಷತ್ ೨೪ ಶಿವಸಂಕಲ್ಪೋಪನಿಷತ್ ೨೫ ಮೈತ್ರಾಯಣಿ ೨೬ ಕೈವಲ್ಯ ೨೭ ಮೂಲ ಉಪನಿಷತ್ ೨೮ ಆಶ್ವಲಾಯನೀಯ ೨೯ ಆರುಣೇಯ. ೩೦ ಬೋಧಾಯನೀಯ ೩೧ ಮುಂಡಕ ೩೨ ಅಮೃತಬಿಂದು

ಇವುಗಳನ್ನು ನೋಡಿದರೆ ಮೇಲೆ ಕಂಡ ೧೦೮ ರಲ್ಲಿ ಇಲ್ಲದ ಕೆಲವು ಉಪನಿಷತ್ತುಗಳು ಇವುಗಳಲ್ಲಿ ಸೇರಿರುವದು ವ್ಯಕ್ತವಾಗುತ್ತದೆ.

ಮೊಗ್ಗೆಯ ಮಾಯಿದೇವರು

ವಿದ್ಯಾ ನು ಶೃತಿರುತ್ಕೃಷ್ಟಾ ರುದ್ರೈಕಾದಶಿನೀ ಶೃತೌ

ತಾತ್ಪರ್ಯ:— ವೇದದಲ್ಲಿ ಶ್ರೀರುದ್ರ ಉಪನಿಷತ್ (ಏಕಾದಶರುದ್ರ) ವಿದ್ಯೆಯು ಶ್ರೇಷ್ಠವು.

ಎಂಬ ಪ್ರಮಾಣವನ್ನು ತೋರಿಸಿದ್ದಾರೆ.

ಈ ಏಕಾದಶ ರುದ್ರಕ್ಕೆ .... ಶ್ರೀ ವೀರಶೈವ ಷಟ್‌ಸ್ಥಲ ಶಿವಯೋಗ ಶಿವಾದ್ವೈತ ಸತ್‌ಪಥ ಪ್ರತಿಷ್ಠಾಪನಾಚಾರ್ಯ ವರ್ಯ ಶ್ರೀ ಸೋಸಲೆ ವೀರಣಾರಾಧ್ಯದೇವ ಶಿವಯೋಗಿ ಸಾರ್ವಭೌಮ ತನೂಭವ ಶ್ರೀ ರೇವಣಸಿದ್ಧ ದೇಶಿಕ ಕುಂಜರಾತ್ಮಜ ರೇವಣಾರಾಧ್ಯ ದೇವರು ರ

ಚಿಸಿವ-ಶಾಂತಿ ಮೂರ್ತಿ ಪ್ರಕಾಶಿಕೆ ಎಂಬ ಟೀಕೆಯು ಇರುತ್ತದೆ. ಇವಲ್ಲದೆ .... ನಾಸಾಪ.ರ (ಮೂಗೂರು) ದಲ್ಲಿರುವ ಗುರುನಂಜ ಎಂಬ ಗುರೂತ್ತಮರು ಭಟ್ಟ ಭಾಸ್ಕರ ವಿರಚಿತ ಶ್ರೀ ರುದ್ರ ಭಾಷ್ಯದ ಕರ್ನಾಟಕ ಟೀಕೆಯನ್ನು ರಚಿಸಿದ್ದಾರೆ. ಇವು ಓಲೆಯ ಪ್ರತಿಗಳಲ್ಲಿವೆ.

ಶ್ರೀ ರುದ್ರ ಪಾರಾಯಣವನ್ನು ವೀರಶೈವರು ಈಗಲೂ ಮಾಡುತ್ತಲೂ ಮಾಡಿಸುತ್ತಲೂ ಇದ್ದಾರೆ.

ವೀರಶೈವರಿಗೆ ವೇದಾಧಿಕಾರವಿಲ್ಲವೆಂಬೂ ಇವರು ವೇದ ಪಾಠಶಾಲಿಗೆ ಸೇರಲು ಅನರ್ಹರೆಂದೂ ಹೇಳತಕ್ಕವರು ಈ ವಿಷಯಗಳನ್ನೆಲ್ಲಾ ಚನ್ನಾಗಿ ಪರ್ಯಾಲೋಚಿಸಬೇಕಾಗಿರುತ್ತದೆ.

ಹೀಗೆ ಪೂರ್ವದ ವೀರಶೈವರು ಮಾನ್ಯ ಮಾಡುತ್ತಿದ್ದ ಉಪನಿಷತ್ತುಗಳನ್ನು ಈಗ ಯಾವ ವೀರಶೈವರು ಮುದ್ರಿಸಿ ಜನರಿಗೆ ಅನುಕೂಲ ಪಡಿಸುತ್ತಿರುವರು? ಶ್ರೀ ಜಗದ್ಗುರು ರಂಭಾಪುರೀ (ಬಾಳೇಹಳ್ಳಿ) ಸಿಂಹಾಸನದ ಶ್ರೀ ಸ್ವಾಮಿಗಳವರು ತಮ್ಮ ಸಂಸ್ಥಾನದಲ್ಲಿ ಸಿಕ್ಕಿತೆಂದು ಸ್ವರೂಪಸಿದ್ಧಾಂತ ಎಂಬ ಒಂದು ಉಪನಿಷತ್ತಿನ ಮೂಲ ಪ್ರತಿಯನ್ನು ಮುದ್ರಿಸಿರುತ್ತಾರೆ. ಇದು ಈಗ ಸಿಕ್ಕ ಪ್ರತಿಯೊಡನೆ ನೋಡಿದ್ದರಲ್ಲಿ ಸರಿಯಾಗಿದೆ.

೨ ವರ್ಷಗಳ ಹಿಂದೆ ಹಿಂದೂ ಧರ್ಮದ ವಿಷಯವನ್ನು ತಿಳಿಯಬೇಕೆಂದು ಮುದ್ರಣವಾದ ೧೦೮ ಉಪನಿಷತ್ತುಗಳನ್ನು ಓದಿ ಸಾಧ್ಯವಾದಷ್ಟು ತಿಳಿದುಕೊಂಡು ಹಳೆಯ ಓಲೆಯ ಪ್ರತಿಗಳನ್ನು ಅದೂವರೆವಿಗೆ ಸಂಗ್ರಹ ಮಾಡಿದವುಗಳನ್ನು ನೋಡಿದ್ದರಲ್ಲಿ ರುದ್ರೋಪನಿಷತ್ ಎಂಬುದು ಕಂಡಿತು. ಮುದ್ರಿಸಿದ ೧೦೮ ರಲ್ಲಿ ಈ ಹೆಸರು ದೊರೆಯಲಿಲ್ಲ. ಮುದ್ರಣದ ಉಪನಿಷತ್ತುಗಳನ್ನು ಓದುವಾಗ ಉಪನಿಷತ್ತುಗಳ ಸಂಖ್ಯೆಯು ಸಾವಿರದ ಮೇಲಿನ ಸಂಖ್ಯೆಯವರೆವಿಗೂ ವ್ಯಾಪಿಸಿ ಇರುವದಾಗಿ ತಿಳಿದಿದ್ದದ್ದರಿಂದ ಇದೊಂದು ಮುದ್ರಣವಾಗದಿರುವ ಉಪನಿಷತ್ತೆಂದು ಭಾವನೆಗೆ ಬಂದಿತು. ಮೈಸೂರು ಓರಿಯಂಟಲ್ ಲೈಬ್ರರಿಗೆ ಬರೆದುದರಲ್ಲಿ ಅಲ್ಲಿಯೂ ೭-೮ ಉಪನಿಷತ್ತುಗಳು ದೊರೆಯುವವೆಂದು ತಿಳಿಯಿತು. ಅವಕ್ಕೆ ಖರ್ಚು ಕೊಟ್ಟು ಬರೆಸುವದಕ್ಕಾಗಿ ಸಹಾಯಕರನ್ನು ಹುಡುಕುತ್ತಿರುವಲ್ಲಿ ಶ್ರೀ ಕೆಳದಿ ಸಂಸ್ಥಾನ ಹಿರೇಮಠದ ಪಟ್ಟಾಧ್ಯಕ್ಷ ಸ್ವಾಮಿಗಳವರು ಖರ್ಚು ಕೊಡುವದಕ್ಕೆ ಒಪ್ಪಿ ಕೊಟ್ಟದ್ದರಿಂದ ಬರೆಯಿಸಿ ತ

ರಿಸಿದುದಾಯಿತು. ದೊರಕಿದ್ದ ಓಲೆಯ ಪ್ರತಿಯ ಗ್ರಂಥಗಳನ್ನು ನೋಡ ಬೇಕೆಂಬ ಅವಶ್ಯಕತೆಯು ತೋರಿಬಂದು ನೋಡಿದ್ದರಲ್ಲಿ ವೇದೋಪನಿಷತ್ ಎಂಬುದೂ ದೊರೆಯಿತು. ಮೈಸೂರಿಂದ ಬರೆದು ತರಿಸಿದವು ಶ್ರೀಮನ್ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾ ಸ್ವಾಮಿಗಳವರ ಬೃಹನ್ಮಠ ಚಿತ್ರದುರ್ಗ ಮತ್ತು ಇತರ ಮಠಗಳಲ್ಲಿ ಗೃಹಸ್ಥರ ಮನೆಗಳಲ್ಲಿ ಸಿಕ್ಕುವುಗಳು ಸೇರಿ ವೇದಾಂತಸಾರ, ಸಿದ್ಧಾಂತಶಿಖಾ ನಿರ್ಲೇಪ, ಪ್ರಣವ ಶರೀರ, ಭಕ್ತಿಯೋಗ, ಚಿದಂಬರ, ಸ್ಮೃತಿ ರಹಸ್ಯ, ಪ್ರಸಾದಜಾಬಾಲ, ಲಿಂಗಧಾರಣ ( ಲಿಂಗ, ) ಪೈಪ್ಪಲಾದ (ಶಾರಭ ), ಋಗ್ವೇದೋಪನಿಷತ್ ( ಸಂಹಿತೋಪನಿಷತ್ ) ಶಿವ ಸಂಕಲ್ಪ, ಶ್ರೀಕೈವಲ್ಯ, ವೀರಶೈವ್ಯ, ಈ ಉಪನಿಷತ್ತುಗಳು ಕೆಲವು ಒಂದೇ ಕಡೆಯಲ್ಲಿಯೂ ಕೆಲವು ೨-೩-೪ ಕಡೆಗಳಲ್ಲಿಯೂ ದೊರಕಿದವುಗಳನ್ನು ಎತ್ತಿ ಬರೆದಾಗಿರುತ್ತದೆ. ಇವುಗಳಲ್ಲದೆ ರುದ್ರಾಕ್ಷಜಾಬಾಲ, ಯೋಗಶಿಖಾ, ಧ್ಯಾನಬಿಂದು, ಅಮೃತನಾದ, ನಾದಬಿಂದು, ಕೈವಲ್ಯ, ಮಾಂಡೂಕ್ಯ, ಬ್ರಹ್ಮ, ಹಂಸ, ನಾರಾಯಣಪೂರ್ವ, ನಾರಾಯಣ ಉತ್ತರ ಕಾಲಾಗ್ನಿರುದ್ರ, ತೈತ್ತಿರೀಯಕ, ಬೃಹಜ್ಜಾಬಾಲ, ಪರಮಹಂಸ, ವಜ್ರಸೂಚಿ, ಅಥರ್ವಣಶಿಖಾ, ಮೈತ್ರಾಯಿಣಿ, ಅಥರ್ವಣಶಿರ, ನಿರಾಲಂಬ, ಗರ್ಭ, ಆರುಣಿ, ಜಾಬಾಲ, ತೇಜೋಬಿಂದು ಮುಂಡಕ, ಕಠವಲ್ಲಿ ಎಂಬ ಉಪನಿಷತ್ತುಗಳ ಬರಹದ ಪ್ರತಿಗಳನ್ನು ನೋಡಿ ಹೆಚ್ಚು ಕಡಿಮೆಗಳನ್ನು ಗುರುತಿಸಿ ಇಟ್ಟಿರುತ್ತದೆ.

## ಇವೆಲ್ಲಾ ಹಾಗಿರಲಿ

ಮದರಾಸಿನ ಅದ್ಯರ ಲೈಬ್ರರಿಯಲ್ಲಿ ಮುಂದೆ ಹೇಳಿರುವಂತೆ ಕೈಬರಹ ಪ್ರತಿಯ ಉಪನಿಷತ್ತುಗಳಿರುವದಾಗಿ ಅವರ ಪಟ್ಟಿಯಿಂದ ಗೊತ್ತಾಗಿದೆ. ಈ ಹೆಸರುಗಳನ್ನು ಓದುವದಕ್ಕೆ ವಾಚಕರು ಬೇಸರಪಡುವದಾದರೆ ಹಾಗೆ ಮಾಡಬಾರದೆಂದು ಪ್ರಾರ್ಥನೆ. ಹಿರಿಯರು ಬರೆದಿಟ್ಟಿರುವವುಗಳನ್ನು ಪೂರ್ಣವಾಗಿ ಓದುವದಕ್ಕಾಗದಿದ್ದರೂ ಹೆಸರು ಓದುವದಕ್ಕಾದರೂ ಬೇಸರ ಪಡುವುದು ಅನ್ಯಾಯವಲ್ಲವೇ ? ಹೆಸರು ತಿಳಿದ ಮೇಲೆ ಕೆಲ ಕೆಲವನ್ನಾದರೂ ಓದಬೇಕೆಂಬ ಲವಲವಿಕೆಯು ಮುಂದೆ ತಮಗೇ ಉಂಟಾಗಬಹುದು. ಇದೂವರೆವಿಗೆ ಮುದ್ರಣವಾಗಿಲ್ಲವೆಂದು ತೋರಿದವುಗಳನ್ನೇ ಈ ಕೆಳಗಿನ ಪಟ್ಟಿಯಲ್ಲಿ ಕೊಟ್ಟಿರುತ್ತದೆ.

ಅದ್ವೈತ
ಅಲ್ಲೋಪನಿಷತ್
ಅಧ್ಯಾತ್ಮ II
ಅವಧೂತ I II III IV
ಆಚಮನೋಪನಿಷತ್
ಆತ್ಮಪೂಜೋಪನಿಷತ್
ಆಥರ್ವಣೋಪನಿಷತ್
ಆದಿತ್ಯೋಪನಿಷತ್
ಆರುಣೇಯೋಪನಿಷತ್
ಆಶ್ರಮೋಪನಿಷತ್
ಉತ್ತರಜಾಬಾಲೋಪನಿಷತ್
ಊರ್ಧ್ವ ಪುಂಡ್ರೋಪನಿಷತ್
ಋಗ್ವೇದ ಜಾಬಾಲೋಪನಿಷತ್
ಕಂಠ ಶ್ರುತ್ಯುಪನಿಷತ್
ಕಾತ್ಯಾಯಿನ್ಯುಪನಿಷತ್
ಕಾಮಕಲೋಪನಿಷತ್
ತ್ರಿಪುರೋಪನಿಷತ್
ಕಾಮರಾಜಕೀಲೋದ್ಧಾರ
ಕಾಲಾಗ್ನಿರುದ್ರ II
ಕಾಲಿಕೋಪನಿಷತ್
ಕಾಲಿಮೇಧಾದೀಕ್ಷಿತೋಪನಿಷತ್
ಕೌಲೋಪನಿಷತ್
ಖಿಲಸಂಹಿತೋಪನಿಷತ್ ರಹಸ್ಯ
ಗಣೇಶಪೂರ್ವತಾಪಿನೀ
ಗಣೇಶೋತ್ತರತಾಪಿನೀ
ಗಾಯತ್ರೀರಹಸ್ಯೋಪನಿಷತ್
ಗಾಯತ್ರ್ಯುಪನಿಷತ್ I II III
ಗರುಡೋಪನಿಷತ್
ಗುಹ್ಯಕಾಲ್ಯುಪನಿಷತ್
ಗುಹ್ಯಷೋಢಾನ್ಯಾಸೋಪನಿಷತ್
ಗೋಪೀಚಂದನೋಪನಿಷತ್
ಚಕ್ರಬ್ರಾಹ್ಮಣಂ
ಚಕ್ರೋಪನಿಷತ್
ಚಕ್ಷುರುಪನಿಷತ್
ಚತುರ್ವೇದೋಪನಿಷತ್
ಚಾಕ್ಷುಷೋಪನಿಷತ್
ಚಿತ್ಯುಪನಿಷತ್
ಚೂಲಿಕೋಪನಿಷತ್
ತುರೀಯೋಪನಿಷತ್
ತುಲಸ್ಯುಪನಿಷತ್
ತ್ರಿಪುರಾಸುಂದರ್ಯುಪನಿಷತ್
ತ್ರಿಪುರೋಪನಿಷತ್
ತ್ರಿಪುರ್ಯುಪನಿಷತ್
ದತ್ತಾತ್ರೇಯೋತ್ತರ ತಾಪಿನಿ
ದರ್ಶನೋಪನಿಷತ್
ದಶಶ್ಲೋಕ್ಯುಪನಿಷತ್
ದ್ವಯೋಪನಿಷತ್
ನಾಮೋಪನಿಷತ್
ನಿರುಕ್ತೋಪನಿಷತ್
ನಿರ್ವಾಣೋಪನಿಷತ್ II
ನೀಲರುದ್ರೋಪನಿಷತ್
ನೇತ್ರೋಪನಿಷತ್
ಪರಬ್ರಹ್ಮೋಪನಿಷತ್ II
ಪರಮತತ್ವರಹಸ್ಯೋಪನಿಷತ್
ಪರಿವ್ರಾಜಕೋಪನಿಷತ್
ಪಾರಾಯಣೋಪನಿಷತ್
ಪಿಂಡೋಪನಿಷತ್
ಪೀತಾಂಬರೋಪನಿಷತ್

ಸ್ಪೈಂಗಲೋಪನಿಷತ್
ಪೈಪ್ಪಲಾದೋಪನಿಷತ್
ಬಟುಕೋಪನಿಷತ್
ಬೃಹನ್ನಾರಾಯಣೋಪನಿಷತ್
ಬ್ರಹ್ಮಜಿಜ್ಞಾಸೋಪನಿಷತ್
ಬ್ರಹ್ಮಬಿಂದೂಪನಿಷತ್
ಬ್ರಹ್ಮಾನಂದೋಪನಿಷತ್
ಭಸ್ಮಜಾಬಾಲ II
ಮತಾಮ್ನಾಯೋಪನಿಷತ್
ಮನೋವಿಶ್ರಾಮೋಪನಿಷತ್
ಮಂತ್ರೋಪನಿಷತ್
ಮಹಾಚಕ್ರಾವರಣೋಪನಿಷತ್
ಮಹಾನಾರಾಯಣೋಪನಿಷತ್ I
" " II
ಮಹಾವಾಕ್ಯವಿವರಣೋಪನಿಷತ್
ಮೃತ್ಯುಲಾಂಗೂಲೋಪನಿಷತ್
ಮೈತ್ರೇಯೋಪನಿಷತ್ I II
ಯಜ್ಞೋಪವೀತೋಪನಿಷತ್
ಯೋಗರಾಜೋಪನಿಷತ್
ರಹಸ್ಯೋಪನಿಷತ್
ರುದ್ರಾಥರ್ವ ಶಿರಸ್
ಲಘುಜಾಬಾಲ
ಲಾಂಗೂಲೋಪನಿಷತ್
ವರಾಹೋಪನಿಷತ್ I II
ವನದುರ್ಗೋಪನಿಷತ್
ವಿಶ್ರಾಮೋಪನಿಷತ್
ವಿಷ್ಣುಬ್ರಾಹ್ಮಣ
ವಿಷ್ಣೂಪನಿಷತ್
ವೃದ್ಧಜಾಬಾಲೋಪನಿಷತ್
ವೇದಾಂತವಿಶ್ರಾಂತೋಪನಿಷತ್

ಶಾಂಖಾಯನೋಪನಿಷತ್
ಶಿವಾಥರ್ವಶೀರ್ಷ
ಶಿವೋಪನಿಷತ್
ಶಿವೋಪನಿಷತ್ ಸ್ತೋತ್ರಂ
ಶ್ಯಾಮೋಪನಿಷತ್
ಶ್ರೀಕೃಷ್ಣಪುರುಷೋತ್ತಮಸಿದ್ಧಾಂತೋಪನಿಷತ್
ಶ್ರೀಜಾಬಾಲದರ್ಶನ
ಶ್ರೀಬಾಲಾತ್ರಿಪುರಸುಂದರ್ಯುಪನಿಷತ್
ಶ್ರೀ ವಿದ್ಯಾತಾರಕೋಪನಿಷತ್
ಶ್ರೀ ವಿದ್ಯಾಮ್ನಾಯೋಪನಿಷತ್
ಶ್ವೇತಮೃತ್ತಿಕೋಪನಿಷತ್
ಷೋಢೋಪನಿಷತ್
ಸಂಹಿತೋಪನಿಷತ್
ಸದಾನಂದೋಪನಿಷತ್
ಸನ್ಯಾಸ II
ಸರ್ವೋಪನಿಷತ್ ಸಾರ II
ಸಿದ್ಧಾಂತಸಾರೋಪನಿಷತ್
ಸುಂದರೀತಾಪಿನ್ಯುಪನಿಷತ್
ಸುಮುಖೀ ಉಪನಿಷತ್
ಸುವರ್ಣಘರ್ಮೋಪನಿಷತ್
ಸೌಭಾಗ್ಯಲಕ್ಷ್ಮ್ಯುಪನಿಷತ್
ಸ್ವರೂಪೋಪನಿಷತ್
ಸ್ವಸಂವೇದ್ಯೋಪನಿಷತ್
ಹಂಸಷೋಢೋಪನಿಷತ್
ಹನುಮದು (ಕ್ತರಾಮೋ) ಪನಿಷತ್
ಹೇರಂಬೋಪನಿಷತ್

ಮತ್ತು ಮೈಸೂರು ಓರಿಯಂಟಲ್ ಲೈಬ್ರರಿಯಿಂದ ಈಗ ಬರೆಸಿ ತರಿಸಿದವುಗಳಲ್ಲದೆ ಸ್ವಪ್ರಕಾಶ, ರಹಸ್ಯ, ಕಾಲ, ಶ್ರೀರಾಮ, ಪಿಪ್ಪಲ, ಎಂಬ ಉಪನಿಷತ್ತುಗಳಿರುವದಾಗಿ ತಿಳಿಯ ಬಂದಿದೆ. ಇಷ್ಟು ಉಪನಿಷತ್ತುಗಳಿದ್ದರೂ ಆ ೧೦೮ ರ ಹೊರತಾಗಿ ಉಳಿದವುಗಳೆಲ್ಲವೂ ಮೂಲೆಯಲ್ಲಿ ಬೀಳಬೇಕಾದ ಕಾರಣವೇನು ? ಇವಲ್ಲದೆ ಭವಸಂತಾರಣೋಪನಿಷತ್ ಎಂಬುದು ಸ್ವಾಮಿ ಶ್ರೀರಾಮ ಪ್ರಸನ್ನ ಜೀ ಕೃತ ಹಿಂದೀ ಭಾಷಾ ಟೀಕಾ ಸಮೇತ ದೇವನಾಗರಿ ಲಿಪಿಯಲ್ಲಿ ಅಚ್ಚಾಗಿದೆ. ಯೋಗೋಪನಿಷತ್ತು (ವ್ಯಾಸ ಶುಕಮುನಿಗಳ ಸಂವಾದ ರೂಪವಾದದ್ದು) ಬಿಲ್ವೋಪನಿಷತ್ತು ಇವೂ ದೇವನಾಗರಿಯಲ್ಲಿ ಅಚ್ಚಾಗಿರುವವೆಂಬುದನ್ನು ನೋಡಿದ್ದಾಗಿದೆ. ಓರಿಯಂಟಲ್ ಬುಕ್ ಏಜನ್ಸಿ ಪೂನಾ ಇವರು ಬಾಷ್ಕಲ, ಛಾಗಲೇಯ, ಆರ್ಷೇಯ, ಶೌನಕ, ಎಂಬವುಗಳು ಮುದ್ರಣವಾಗಿವೆ ಎಂದು ೧೯೩೦ ರಲ್ಲಿ ಪ್ರಕಟಿಸಿರುತ್ತಾರೆ. ಈಚೆಗೆ ಯಾವವಾದರೂ ಅಚ್ಚಾಗಿದ್ದರೆ ತಿಳಿದ ಮಹನೀಯರು ದಯವಿಟ್ಟು ಅವುಗಳ ಹೆಸರನ್ನು ತಿಳಿಸಬೇಕು. ಅವುಗಳ ಸಂಖ್ಯೆಯಾದರೂ ತೀರ ಕಡಿಮೆ ಇರಬಹುದು. ಉಳಿದವುಗಳ ಪಾಡೇನು ? ಇವುಗಳಲ್ಲಿ ಸ್ವಾರಸ್ಯವಾದ ವಿಷಯಗಳಿಲ್ಲವೇ ? ಇವೆಲ್ಲವೂ ಹೊಸದಾಗಿ ಆದವುಗಳೇ ? ಹಾಗಿದ್ದರೆ ಉಪನಿಷತ್ತುಗಳ ಸಂಖ್ಯೆ ಹೆಚ್ಚಾಗಿ ಇರುವದೆಂದು ಮುಕ್ತಿಕೋಪನಿಷತ್ತಿನಲ್ಲಿಯೂ ಮಹಾವಾಕ್ಯ ರತ್ನಾವಳಿಯಲ್ಲಿಯೂ ಏಕೆ ಹೇಳುತ್ತಿದ್ದರು ? ಹಿಂದೂ ಜನರ ಹಿರಿಯರು ಬರೆದಿಟ್ಟವುಗಳಾದಾಗ್ಯೂ ಈಗಿನ ಹಿಂದೂಗಳಿಗೊಬ್ಬರಿಗೂ ಇವು ರುಚಿಯಾಗಿ ತೋರಬರುವದಿಲ್ಲವೇ ? ಕೆಲವು ಉಪನಿಷತ್ತುಗಳು ನವೀನವಾಗಿ ಆಗಿರುವವೆಂದು ಒಪ್ಪಲಿಕ್ಕೆ ಬರುವಂತೆ ಇವೆ. ಉದಾಹರಣೆಗೆ 'ಅಲ್ಲೋಪನಿಷತ್', ಎಂಬುದು. ಇಂಥವುಗಳನ್ನು ಬಿಡಬಹುದು. ಈಗ ಮುದ್ರಣವಾಗಿರುವ ಉಪನಿಷತ್ತುಗಳನ್ನು ಓದಿದರೆ ಯಾವ ಅಭಿಪ್ರಾಯವು ಉಂಟಾಗುವದೋ ಹಿಂದೂ ಧರ್ಮದ ಯಾವ ತತ್ವವು ಹೊರಬೀಳುವವೋ ಅಂಥಾ ಅಭಿಪ್ರಾಯಗಳನ್ನೇ ಅಂಥಾ ತತ್ವಗಳನ್ನೇ ಪ್ರಕಟ ಮಾಡುವ ಉಪನಿಷತ್ತುಗಳು ಯೋಗ್ಯವಾದವುಗಳೆಂದು ತಿಳಿದುಕೊಂಡು ಅಂಥವುಗಳನ್ನಾದರೂ ಮುದ್ರಿಸಿ ಉಳಿದವುಗಳ ಅಯೋಗ್ಯತೆಯನ್ನು ಪ್ರಕಟಿಸಿ ತೋರಿಸಬಾರದೇ ! ಇವುಗಳಲ್ಲಿ ತತ್ವಜ್ಞಾನದ ವಿಷಯವು ಸ್ವಲ್ಪವಾದರೂ ದೊರಕಲಾರದವೇನು ? ಹಾಗೂ ಅಲ್ಲದಿದ್ದರೆ ಈ

ಉಪನಿಷತ್ತುಗಳೇ ಹಿಂದೂ ಜನರಿಗೆ ಭಾರವಾಗಿ ತೋರಿರುವವೇ ? ಹಿಂದುಸ್ಥಾನದ ಬ್ರಹ್ಮವಿದ್ಯೆಯ ಸಾರವು ಎಷ್ಟು ಹೆಚ್ಚಿನದಾಗಿ ಇದೆಯೋ ಅಷ್ಟನ್ನೂ ಅನುಭವಿಸಬೇಕೆಂಬ ಅಪೇಕ್ಷೆಯು ತೋರುವದಿಲ್ಲವೇ ? ಏನು ಕಾರಣವಿರಬಹುದು ? ಯೋಚಿಸುವವರಾರು ? ಪ್ರಯತ್ನ ಪಡುವವರಾರು ? ಇಂಥಾ ಉಪನಿಷತ್ತುಗಳನ್ನೆಲ್ಲಾ ನೋಡಿ ಹಿಂದೂಗಳ ಧರ್ಮದ ಮುಖ್ಯ ಸಾರವನ್ನು ಹೊರಗೆ ತೆಗೆಯಬೇಕೆಂಬುವವರು ಯಾರು ? ಒಂದುವೇಳೆ—ಈಗ ಮುದ್ರಣವಾಗಿ ಇರತಕ್ಕವುಗಳಲ್ಲಿಯೇ ಎಲ್ಲಾ ಅಭಿಪ್ರಾಯವು ಬಂದಿರುತ್ತದೆ ಉಳಿದವುಗಳನ್ನು ಏಕೆ ಓದಬೇಕು—ಎಂದು ಕೆಲವರು ಹೇಳುವದಾದರೆ ಈಗ ಮುದ್ರಣವಾದ ೧೦೮ ಉಪನಿಷತ್ತುಗಳಲ್ಲಿ ಬೇರೆ ಬೇರೆ ವಿಷಯಗಳಿಲ್ಲವೇ ? ಅದರಂತೆ ಇವುಗಳಲ್ಲಿ ಏಕಿರಬಾರದು ?

ಈ ವಿಷಯಗಳನ್ನೆಲ್ಲಾ ಪರ್ಯಾಲೋಚಿಸಿ ಇವುಗಳನ್ನು ಮುದ್ರಿಸುವ ಕೆಲಸವನ್ನು ಮೊದಲು ಮಾಡಿ ಆ ಮೇಲೆ ಸರ್ವತ ವಿಮರ್ಶೆಗೆ ಬಿಡುವುದಾದರೆ ಅಲ್ಪ ಸ್ವಲ್ಪವಾದರೂ ಫಲವು ದೊರಕಿ ಆತ್ಮವಿದ್ಯೆಯ ತೇಜಃಪ್ರಭಾವವು ಇನ್ನೂ ಹೆಚ್ಚು ಬೆಳೆಯ ಬಹುದೆಂದು ನಿಶ್ಚಯಿಸಿಕೊಂಡು ಹಿಂದೂ ಮಹಾಶಯರು ಈ ಕಡೆಗೆ ಗಮನ ಕೊಡುವದು ಉತ್ತಮವಾಗಿದೆ. ಧರ್ಮಾಭಿಮಾನಿಗಳೂ ಶ್ರೀಮಂತರೂ ಈ ಕಡೆಗೆ ಗಮನ ಕೊಟ್ಟು ಈ ಹಿಂದೂ ಧರ್ಮೋದ್ಧಾರ ಕಾರ್ಯವನ್ನು ಮಾಡಲಿ.

ಇನ್ನು ಕನ್ನಡಿಗರ ಪಾಡೇನು ? ಬ್ರಹ್ಮವಿದ್ಯಾ ಬೋಧಕವಾದ ಇಂತಹ ಉಪನಿಷತ್ತುಗಳನ್ನು ಓದಬೇಕೆಂಬ ಲವಲವಿಕೆಯು ಇವರಲ್ಲಿ ಏಕೆ ತುಂಬಬಾರದು ? ತೆಲುಗಿನಲ್ಲಿ ಉಪನಿಷತ್ತು ಮತ್ತು ಅದರ ತಾತ್ಪರ್ಯವನ್ನು ವಿವರಿಸುವ ಪುಸ್ತಕಗಳು ಮುದ್ರಣವಾಗಿರುವಲ್ಲಿ ಕನ್ನಡಿಗರು ಅದರಂತೆ ಪುಸ್ತಕಗಳನ್ನು ಪಡೆಯಲು ಏಕೆ ಯತ್ನಿಸಬಾರದು ? ಮ. ರಾ. ರಾನಡೆ ಎಂಬುವವರು ಇಂಗ್ಲಿಷಿಗೆ ಭಾಷಾಂತರಿಸಿದ ಅಭಿಪ್ರಾಯದಿಂದ ಕನ್ನಡದಲ್ಲಿ ಉಪನಿಷತ್ತುಗಳನ್ನು ರಚಿಸಿದರೆ ಉಪನಿಷತ್ಕಾರರ ಅಭಿಪ್ರಾಯವು ಕನ್ನಡಕ್ಕೆ ಸಮಂಜಸವಾಗಿ ಬಂದಿತೆಂದು ತಿಳಿಯಲಾಗುವದಿಲ್ಲ. ಸಂಸ್ಕೃತದ ವಾಗ್ವೈಖರಿಯ ಸವಿಯು ಕನ್ನಡಕ್ಕೆ ಬರುವಲ್ಲಿ ಎಷ್ಟೋ ಕೊರತೆಯನ್ನು ಹೊಂದುತ್ತಿರುವಲ್ಲಿ ಅದು ಇಂಗ್ಲಿಷಿಗೆ ಹೋಗಿ ಅಲ್ಲಿಂದ ಕನ್ನಡಕ್ಕೆ ಬರುವಲ್ಲಿ

ಇನ್ನೂ ಕೊರತೆ ಎಂದೇ ಭಾವಿಸಬೇಕು. ಅನೇಕ ಕಡೆಗಳಲ್ಲಿ ಉಪನಿಷತ್ಕಾರರ ಮೂಲ ಅಭಿಪ್ರಾಯವನ್ನೇ ತಿಳಿವುದು ಕಷ್ಟವಾಗಿರುವಲ್ಲಿ ಶ್ರುತಿಗಳ ಕನ್ನಡ ಪ್ರತಿಯನ್ನು ಮಾತ್ರ ಓದಿದವರಿಗೆ ಕನ್ನಡಿಸಿದವರ ಅಭಿಪ್ರಾಯವು ಮಾತ್ರ ತಿಳಿವು ಮೂಲದ ತಾತ್ಪರ್ಯವು ಪ್ರಕಟಕ್ಕೆ ಬಾರದೆ ಉಳಿಯಬಹುದು. ಆದ್ದರಿಂದ ಮೂಲ ಪ್ರತಿಯನ್ನು ಮೇಲೆ ಬರೆದು ಕೆಳಗೆ ಭಾಷಾಂತರಗಳು ಹೊರಬಿದ್ದರೆ ಒಂದುವೇಳೆ ಭಾಷಾಂತರದಲ್ಲಿ ಹೆಚ್ಚುಕಡಿಮೆಗಳಾಗಿದ್ದರೆ ಅದನ್ನು ತಿಳಿದುಕೊಳ್ಳಲಿಕ್ಕೆ ಅವಕಾಶವಾಗುತ್ತದೆ. ಆದ್ದರಿಂದ ಇನ್ನುಮೇಲೆ ಆ ನಮೂನೆಯಲ್ಲಿ ಉಪನಿಷತ್ತುಗಳನ್ನು ಮುದ್ರಿಸಲಿಕ್ಕೆ ಕನ್ನಡಿಗರು ಪ್ರಯತ್ನಿಸಿದ್ದಾದರೆ ಕನ್ನಡ ವಾಙ್ಮಯಕ್ಕೆ ಭೂಷಣಪ್ರಾಯವಂತಾಗುವದು. ಕನ್ನಡ ವಚನರೂಪವಾಗಿ ವಚನಕಾರರು ಒಂದು ವಿಧದಲ್ಲಿ ಬ್ರಹ್ಮವಿದ್ಯೆಯನ್ನು ಬೋಧಿಸುತ್ತಿದ್ದರೆ ಪೂರ್ವಿಕರಾದ ಋಷಿಗಳೂ ಮತ್ತು ದೇವರುಗಳೂ ಸೇರಿ ನಡೆಸಿದ ಬ್ರಹ್ಮವಿದ್ಯಾವಿಷಯ ಬೋಧೆಯು ಮತ್ತೊಂದು ವಿಧದಲ್ಲಿ ಜನರ ಮನಸ್ಸಿನಲ್ಲಿ ಬಿಂಬಿಸಿ ಹಿಂದೂ ಜನಾಂಗದ ಸನಾತನ ಧರ್ಮದ ನಿಜತತ್ವವನ್ನು ತಿಳಿದಾಚರಿಸಲಿಕ್ಕೆ ಅನುಕೂಲವಾಗುತ್ತದೆ.

ಉಪನಿಷತ್ತುಗಳನ್ನು ಕನ್ನಡಿಸಿ ಪ್ರಕಟಿಸುವುದೆಂಬ ಮಹತ್ಕಾರ್ಯವನ್ನು ಮಾಡುವ ಒಂದು ಸಂಘವೇ ಸ್ಥಾಪನವಾಗಬೇಕೆಂದು ಹೇಳುವುದು ಅತಿಶಯದ ಸಂಗತಿಯಾಗಿ ಪರಿಣಮಿಸಲಾರದು. ನಮ್ಮ ಪೂರ್ವಿಕರ ಜ್ಞಾನ ಪ್ರಕಾಶದ ವಿದ್ಯೆಯನ್ನು ತಿಳಿಯದೆ ಮುಚ್ಚಿಟ್ಟು ನಾವು ಎಲ್ಲಿನವರೆವಿಗೆ ತಿರುಗುವೆವೋ ಅಲ್ಲಿನವರೆವಿಗೆ ನಮಗೆ ಶಾಂತಿ ಸುಖವು ದೊರಕದೆ ಕೋಟಲೆಗೊಳ್ಳುವುದೇ ವಿಶೇಷವಾಗುತ್ತದೆ. ಆತ್ಮಜ್ಞಾನದ ಸುಖವೇ ನಿತ್ಯ ಸುಖವು. ಶಾಂತಿ ಸುಖವು. ಇದು ನಮ್ಮ ಹಿರಿಯರ ಹೆಗ್ಗುರುತು. ಇಂಥಾ ಪಾರಮಾರ್ಥಿಕ ಸುಖವನ್ನು ಅನುಭವಿಸುವದಕ್ಕಾಗಿ ಪ್ರಾಪಂಚಿಕ ಸುಖವನ್ನು ಬಿಡಬೇಕೆಂಬುದೇನೂ ಇಲ್ಲ. ಲೌಕಿಕ ಕಾರ್ಯಗಳು ಎಂಥವೇ ಇದ್ದರೂ ಎಷ್ಟೇ ಇದ್ದರೂ ಅವುಗಳ ಜೊತೆಯಲ್ಲಿ ಪಾರಮಾರ್ಥಿಕವನ್ನು ನಡೆಸಬಹುದು.

ಇಂಥಾ ಬ್ರಹ್ಮವಿದ್ಯೆಯನ್ನು ಜನಸಾಮಾನ್ಯಕ್ಕೂ ತಿಳಿಯುವಂತೆ ಹರಡುವ ಕಾರ್ಯವನ್ನು ಕನ್ನಡಿಗರು ಇನ್ನಾದರೂ ನಡೆಸಿ ಶ್ರೇಯಸ್ಸನ್ನು ಹೊಂದಲಿ ಎಂದು ಮಹಾದೇವನನ್ನು ಪ್ರಾರ್ಥಿಸುವೆನು.

# ಪ್ರಕಾಶಕನ ಯುಗಾದಿಯ ವಿಜ್ಞಾಪನೆಗಳು



ಓದುಗರಾದ ಮಹನೀಯರೇ:—

ತಮ್ಮ ಅಮೋಘವಾದ ಹಸ್ತದಲ್ಲಿ ಸೇರಿ ಆಂಗೀರಸ ಚೈತ್ರಮಾಸದ ಅಂಕದ ಮೊದಲ್ಗೊಂಡು ಈ ಸದ್ಧರ್ಮ ದೀಪಿಕೆ ಎಂಬ ದೀನ ಪತ್ರಿಕೆಯು ತನ್ನ ಸೇವೆಯನ್ನು ಮಾಡುತ್ತಿರುವ ಸಂಗತಿಯು ತಮಗೆ ವೇದ್ಯವಿದ್ದದ್ದೇ ಇದೆ. ಈ ಪತ್ರಿಕೆಗೆ ಈ ಆಂಗೀರಸ ಸಂವತ್ಸರವು ಪ್ರಾರಂಭದ ವರ್ಷವಾಗಿದೆ. ಕೆಲವು ಅನಿವಾರ್ಯ ತೊಂದರೆಗಳಿಂದ ಸುಮಾರು ಆಶ್ವಯುಜ ಮಾಸದಲ್ಲಿ ಇದರ ರಿಜಿಸ್ಟರ್ ಆದ ಸಂಖೆಯು ದೊರೆದಿದ್ದರೂ, ಪತ್ರಿಕಾ ಪ್ರಾರಂಭದ ಕಾಲದಲ್ಲಿ ಒದಗಬಹುದಾದ ಅನೇಕ ಅನನುಕೂಲಗಳು ಒದಗಿದ್ದರೂ, ಈಗ ದೇಶದಲ್ಲಿ ಒದಗಿರುವ ಹಣದ ಕೊರತೆಯ ಕಾಲದಲ್ಲಿ ದ್ರವ್ಯದ ಕೇವಲ ಬಡತನದಲ್ಲಿ ಆರಂಭಿಸಲ್ಪಟ್ಟಿದ್ದರೂ ಮಹಾದೇವನ ಕೃಪೆಯಿಂದ ಇದೂ ವರೆವಿಗೆ ೧೦ ಸಂಚಿಕೆಗಳನ್ನು ಅರ್ಪಿಸಿರುವುದು ನಮ್ಮ ಈ ಬಡತನದ ಸ್ಥಿತಿಗೆ ಆನಂದದಾಯಕವಾದ ಸಂಗತಿಯಾಗಿದೆ.

ಈ ಮಾಸ ಪತ್ರಿಕೆಯ ವಿಷಯದಲ್ಲಿ ಕನ್ನಡ ಕವಿಚರಿತೆಯ ಕರ್ತರಾದ ಪ್ರಾಕ್ತನ ವಿಮರ್ಶ ವಿಚಕ್ಷಣ ರಾ. ಬ. ನರಸಿಂಹಾಚಾರ್ಯರವರು ಮತ್ತು ಮ. ರಾ. ವೀರಭದ್ರಪ್ಪನವರು ಹಾಲಭಾವಿ ಸಬ್ ಜಡ್ಜ್ ಇವರು ಕೊಟ್ಟಿರುವ ಸದಭಿಪ್ರಾಯವನ್ನು ೬ನೆಯ ಸಂಚಿಕೆಯಲ್ಲಿ ಪ್ರಕಟಿಸಿ ಇರುತ್ತದೆ. ಈಚೆಗೆ ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿಯವರು ತಮ್ಮ ಶಿವಾನುಭವದಲ್ಲಿ ಈಗ ಧರ್ಮಗ್ರಂಥಗಳು ಮುದ್ರಣವಾಗುವ ಕೆಲಸವು ಹೆಚ್ಚಾಗಿ ನಡೆದಿರುವದು ಶುಭಚಿಹ್ನೆ ಎಂತಲೂ ಹಾವೇರಿ ಶಿವಲಿಂಗವಿಜಯ ಮುದ್ರಾಲಯದಿಂದ ಹೊರಡುವ ಈ ಮಾಸ ಪತ್ರಿಕೆಯಲ್ಲಿ ಪ್ರಕಟವಾಗುವ ಸಿದ್ಧೇಶ್ವರ ವಚನವೆಂಬ ಗ್ರಂಥವು ಮಹತ್ವವುಳ್ಳುದೆಂದೂ ಇದಕ್ಕೆ ಸಮಾಜದ ಸಹಾಯವು ದೊರಕಬೇಕೆಂದೂ ಅಭಿಪ್ರಾಯಪಟ್ಟು ಈ ಪತ್ರಿಕೆಗೆ ಪ್ರತಿಯಾಗಿ ತಮ್ಮ 'ಶಿವಾನುಭವ, ದ್ವೈಮಾ

ಸಿಕ ಪತ್ರವನ್ನು ಕಳುಹಿಸುತ್ತಿದ್ದಾರೆ. ಈ ಬಗ್ಗ್ಯೆ ಮತ್ತು ಈ ಪತ್ರಿಕೆಗೆ ಪ್ರತಿಯಾಗಿ ಕಳುಹಿಸುವ ಪತ್ರಿಕೆಗಳ ಕರ್ತರ ಬಗ್ಗ್ಯೆ ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಈ ಪತ್ರಿಕೆಯು ಮುದ್ರಣವಾಗುತ್ತಿರುವ ಶಿವಲಿಂಗ ವಿಜಯ ಮುದ್ರಾಲಯದಲ್ಲಿ ಶ್ರೀ ತೋಂಟದ ಸಿದ್ಧೇಶ್ವರ ವಚನವನ್ನು ಮುದ್ರಿಸುವ ಬಗ್ಗೆ ಶ್ರೀ ಮನ್‌ನಿರಂಜನ ಜಗದ್ಗುರು ಗುರುಸಿದ್ಧೇಶ್ವರ ಮಹಾಸ್ವಾಮಿಗಳವರು ಸಂಸ್ಥಾನ ಮೂರು ಸಾವಿರಮಠ, ಹುಬ್ಬಳ್ಳಿ ಇವರಿಂದ ಬಂದ ಹಣ ಸುಮಾರು ೧೫೦ ರೂ. ಪ್ರಭುದೇವರು ಸಿದ್ಧರಾಮೇಶ್ವರನಿಗೆ ಬೋಧಿಸಿದ ಪರಮಯೋಗಮಂತ್ರಗೋಪ್ಯವನ್ನು ಮುದ್ರಿಸುವದಕ್ಕೆ ಶ್ರೀಮನ್ ನಿರಂಜನ ಜಗದ್ಗುರು ದುರುದುಂಡೀಶ್ವರ ಮಹಾಂತ ಸ್ವಾಮಿಗಳವರು ಸಂಸ್ಥಾನ ಅರಭಾವಿಮಠ ಇವರಿಂದ ಬಂದ ಹಣ ೧೦೦ ರೂಪಾಯಿ. ಉಡುತಡಿಯ ಮಹಾದೇವಿಯಕ್ಕನ ರಗಳೆಯನ್ನು ಪ್ರಚಾರಪಡಿಸುವದಕ್ಕೆ ದಾವಣಗೆರೆ ವಿದ್ಯಾವರ್ಧಕ ಫಂಡ್ ಸಂಘದವರು ಕೊಟ್ಟ ಹಣ ೧೦೦ ರೂ. ಪುರಾತನ ದೇವಿಯರ ತ್ರಿವಿಧಿಯನ್ನು ತಮ್ಮ ತಾಯಿಯವರ ಸ್ಮಾರಕಕ್ಕಾಗಿ ಮುದ್ರಿಸುವ ಬಗ್ಗೆ ಮ. ರಾ. ಬೆಳಗಾವಿ ಉಪ್ಪಿನ ಗುರಪ್ಪನವರಿಂದ ಬಂದ ಹಣ ೭೫ ರೂ. ಗುರುಕರುಣತ್ರಿವಿಧಿಯನ್ನು ಮುದ್ರಿಸುವ ಬಗ್ಗೆ ಶ್ರೀಮನ್ ನಿರಂಜನವರ್ಯ ಶಿರಾಳಕೊಪ್ಪದ ರುದ್ರಸ್ವಾಮಿಗಳಿಂದ ಬಂದ ಹಣ ೨೦ ರೂ. ದಾವಣಗೆರೆಯ ಶಿವಶರಣೆಯರಿಂದ ಕೋಳೂರು ಕೊಡಗೂಸಿನ ರಗಳೆಯನ್ನು ಮುದ್ರಿಸುವ ಬಗ್ಗೆ ಬಂದ ಹಣ ೨೦ ರೂ. ಹಾವೇರಿ ಹುಕ್ಕೇರಿ ಮಠದ ಶ್ರೀಮನ್ ನಿರಂಜನವರ್ಯ ಶಿವಬಸವ ಸ್ವಾಮಿಗಳವರು ಅನುಗ್ರಹಿಸಿದ ೭೫ ರೂ, ತಮ್ಮ ಹೆಸರನ್ನು ಪ್ರಕಟಿಸಬಾರದೆಂದು ಒಬ್ಬರು ಶ್ರೀಮನ್ ನಿರಂಜನವರ್ಯರಾದ ಸ್ವಾಮಿಗಳವರು ಅನುಗ್ರಹಿಸಿದ ಮೂವತ್ತು ರೂಪಾಯಿಗಳು, ಶ್ರೀ ನಿರಂಜನವರ್ಯ ಹಾನಗಲ್ ವಿರಕ್ತಮಠದ ಮಾಹೇಶ್ವರ ಸ್ವಾಮಿಗಳು ಅನುಗ್ರಹಿಸಿದ ಹತ್ತು ರೂಪಾಯಿಗಳು, ಆಗಾಗ್ಯೆ ಮಾಸಪತ್ರಿಕೆಯಲ್ಲಿ ಪ್ರಕಟಿಸಿದ ಪ್ರಕಾರ ಪೋಷಕರು ಮತ್ತು ಆಶ್ರಯದಾತರು ಇವರಿಂದ ಬಂದ ಹಣ, ಚಂದಾದಾರರಿಂದ ಬಂದ ಹಣ ಇದಲ್ಲದೆ ನೋಳೆಗಳನ್ನು ತರಿಸುವ ಬಗ್ಗೆ ಮ. ರಾ.

ಗಳಾದ ಬೊಮ್ಮನಹಳ್ಳಿ ಸಾವುಕಾರ ಪ್ರಭವಪ್ಪನವರು ಮಾಗಾವಿ ಗುರುಬಸವಪ್ಪನವರು ಚೌಷಷ್ಠಿ ಚನ್ನಪ್ಪನವರು ಕೊಟ್ಟ ಕೈಗಡದ ಹಣ ಮತ್ತು ಕಾಗದಗಳನ್ನು ತರಿಸುವ ಬಗ್ಗೆ ಮ. ರಾ. ಗಳಾದ ಹತ್ತಿ ಮಡಿವಾಳಪ್ಪನವರು ಆರಣೀ ರೇವಪ್ಪನವರು ಗುಂಜೆಟ್ಟಿ ಸಿದ್ದಲಿಂಗಪ್ಪನವರು ಇವರು ಕೊಟ್ಟ ಕೈಗಡದ ಹಣ ಚಿಲ್ಲರ ಕೆಲಸ ಮಾಡಿಸಿದವರು ಕೊಟ್ಟ ಹಣ ಇವೇ ಮುಂತಾದ ರೀತಿಯಲ್ಲಿ ಹಣ ಸಹಾಯವು ಒದಗಿದ್ದರಿಂದ ಎರಡು ವರುಷಗಳ ಕಾಲ ಮುದ್ರಾಲಯಕ್ಕೆ ಬೇಕಾವ ಸಾಮಾನುಗಳನ್ನು ಕಾಗದ ಮುಂತಾದವುಗಳನ್ನು ತರಿಸುವದು ಗ್ರಂಥಗಳನ್ನು ಮುದ್ರಿಸುವುದು ಮತ್ತು ಮಾಸ ಪತ್ರಿಕೆಯ ಸಂಚಿಕೆಗಳನ್ನು ಮುದ್ರಿಸುವುದು ಈ ಕೆಲಸಗಳು ನಡೆದಿರುತ್ತವೆ. ಈ ಮೇರೆಗೆ ಈ ಮುದ್ರಾಲಯಕ್ಕೆ ಹಣ ಒದಗಿಸಿದವರೆಲ್ಲರ ಉಪಕಾರಕ್ಕೆ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ. ಕೈಗಡದ ಹಣದಲ್ಲಿ ಕೆಲವನ್ನು ತೀರಿಸಿರುತ್ತದೆ. ಇನ್ನೂ ಕೆಲವು ಕೊಡತಕ್ಕದ್ದಿರುತ್ತದೆ.

ಈಗ ಕಳುಹಿಸುತ್ತಿರುವ ಮಾಸ ಪತ್ರಿಕೆಯ ಪ್ರತಿಗಳ ಸಂಖ್ಯೆ ೨೫೦೦ ಇದೆ. ಆದರೆ ಈ ಸಂಬಂಧದ ಹಣ ವಸೂಲು ಬಂದಿರುವದು ಮಾತ್ರ ಬಹಳ ಸ್ವಲ್ಪ. ಒಟ್ಟಿನಲ್ಲಿ ಮಾಸ ಪತ್ರಿಕೆಗಳಿಗಾಗಿ ಆದಾಯ ರೂಪದಲ್ಲಿ ಬಂದ ಹಣಕ್ಕಿಂತಲೂ ವೆಚ್ಚವಾದ ಹಣವೇ ಹೆಚ್ಚಾಗಿರುವದು. ಮುದ್ರಣಾಲಯಕ್ಕೆ ಬೇಕಾದ ಕತ್ತರಿಸುವ ಯಂತ್ರ ( Cutting Machine ) ಮೊಳೆಗಳು ಮೊದಲಾದವುಗಳನ್ನು ಇನ್ನೂ ತರಿಸಬೇಕಾಗಿರುತ್ತದೆ. ಇವುಗಳ ಕೊರತೆಯಲ್ಲಿ ಇಲ್ಲಿಂದ ಕಳುಹಿಸುವಂಥ ಅಂದವಿಲ್ಲದ ಪತ್ರಿಕೆಗಳನ್ನೇ ಧಾರ್ಮಿಕ ಗ್ರಂಥಗಳೆಂಬ ಭಾವನೆಯಿಂದ ಗ್ರಾಹಕರು ಅಂಗೀಕರಿಸಿದ್ದಕ್ಕಾಗಿ ಅವರ ಉಪಕಾರ ಸ್ಮರಣೆಯನ್ನು ಮಾಡುತ್ತೇನೆ.

ಈಗ ಇದರಲ್ಲಿ ಮುದ್ರಿಸಲ್ಪಡುತ್ತಿರುವ ಗ್ರಂಥಗಳಲ್ಲಿ ಹಂಪೆಯ ಹರೀಶ್ವರ ಕವಿಯು ರಚಿಸಿದ ಮಹಾದೇವಿಯಕ್ಕನ ರಗಳೆ, ಮತ್ತು ಎಡೆಯೂರು ತೋಂಟದ ಸಿದ್ಧಲಿಂಗ ಸ್ವಾಮಿಗಳು ರಚಿಸಿದ ಸಿದ್ಧೇಶ್ವರ ವಚನ ಇವೆರಡೂ ಹಳೆಗನ್ನಡದ ಗ್ರಂಥಗಳಾದ್ದರಿಂದ ಈಗ ಕೆಲವರಿಗೆ ತಿಳಿದುಕೊಳ್ಳುವದು ಕಷ್ಟವಾಗಿರಬಹುದು. ಈ ಗ್ರಂಥಕರ್ತರಲ್ಲಿ

ಒಬ್ಬರು ವೀರಶೈವರಲ್ಲಿ ಮೊದಲನೆಯವರಾದ ಕನ್ನಡದ ಉದ್ದಾಮಕವಿಗಳು. ಇನ್ನೊಬ್ಬರು ಮಹಾಮಹಿಮರಾದ ಸ್ವಾಮಿಗಳು. ಈ ಗ್ರಂಥಗಳಲ್ಲಿ ಒಂದು ಕನ್ನಡಭಾಷೆಯ ಸೌಂದರ್ಯದ ನೋಟಕ್ಕಾಗಿ ಬೇಕಾದುದು. ಮತ್ತೊಂದು ಧರ್ಮತತ್ವ ಪ್ರಚಾರಕ್ಕಾಗಿ ಬೇಕಾದುದು. ಆದ್ದರಿಂದ ಇವರಿಂದ ಬರೆಯಲ್ಪಟ್ಟ ಮೂಲ ಪ್ರತಿಯಂತೆಯೇ ಸಮಾಜದವರ ಮುಂದಿಡುವದು ಅವಶ್ಯಕವಾದುದೆಂಬ ಅಭಿಪ್ರಾಯವನ್ನು ಅಂಥವರು ತಮ್ಮ ಮನಸ್ಸಿನಲ್ಲಿ ತರಬೇಕು. ಇನ್ನು ೨ ಸಂಚಿಕೆಗಳೊಳಗಾಗಿ ಹಿಂದೆ ಆರಂಭಿಸಲ್ಪಟ್ಟವುಗಳನ್ನು ಮುಗಿಸಬೇಕೆಂದೂ ಶ್ರೀಮುಖ ಸಂವತ್ಸರದ ಸಂಚಿಕೆಗಳಲ್ಲಿ ಸುಲಭವಾಗಿ ತಿಳಿಯತಕ್ಕ ಪೂರ್ವದ ಗ್ರಂಥಗಳ ಮುದ್ರಣದ ಕಡೆಗೆ ಹೆಚ್ಚು ಗಮನ ಕೊಡಬೇಕೆಂದೂ ಯೋಚಿಸಿಕೊಂಡಿದ್ದೇನೆ.

ಗ್ರಂಥಗಳ ಪ್ರಚಾರದ ಕಡೆಗೆ ಜನರು ಈಗ ಗಮನ ಕೊಡಲಾರಂಭಿಸಿದ್ದಾರೆಂದು ತಿಳಿದು ಸಂತೋಷವಾಗುತ್ತದೆ. ಬಸವಜಯಂತಿಯ ಹಬ್ಬದ ಸ್ಮಾರಕಕ್ಕಾಗಿ ಕೆಲವರು ಧನಿಕರು 'ಬಸವೇಶ್ವರ ವಚನ' 'ಅನುಭವ ಮಂಟಪ' ಮುಂತಾದವುಗಳನ್ನು ಮುದ್ರಣ ಮಾಡಿಸಿ ಉಚಿತವಾಗಿ ಹಂಚಿ ಇದೊಂದು ಧರ್ಮಕಾರ್ಯವೆಂದು ಭಾವಿಸಿರುವರೆಂಬುದು ನಿದರ್ಶನಕ್ಕೆ ಬಂದಿದೆ. ಜ್ಞಾನ ದಾನಕ್ಕಿಂತ ಹೆಚ್ಚಿನ ದಾನವು ಯಾವದೂ ಇಲ್ಲ.

ಇಷ್ಟೆಲ್ಲ ಆದರೂ ಆಗಮ ಉಪನಿಷತ್ತುಗಳ ಪ್ರಚಾರಕ್ಕೆ ಈ ವರ್ಷ ಈ ಪತ್ರಿಕೆಗೆ ಸರಿಯಾದ ಅನುಕೂಲವೇ ದೊರೆದಿಲ್ಲ. ಶಿವನು ಮಹನೀಯರಾದವರಲ್ಲಿ ಪ್ರೇರಿಸಿ ತಕ್ಕ ಅನುಕೂಲವನ್ನು ಕೊಟ್ಟು ಮುಂದೆ ಈ ಕಾರ್ಯವನ್ನು ನಡೆಸುವನೆಂದು ನಂಬಿದ್ದೇನೆ.

೧ನೆಯ ಸಂಚಿಕೆಯಲ್ಲಿ ವಿಜ್ಞಾಪಿಸಿಕೊಂಡಂತೆ ಪ್ರಾರಂಭವಾದ ಈ ಬಡ ವ್ಯಕ್ತಿಯ ಸಮಾಜ ಸೇವೆಯ ನಾಲ್ಕನೆಯ ವರ್ಷವು ಇಲ್ಲಿಗೆ ಮುಗಿಯಿತು.

ಮುಂದಿನ ಶ್ರೀಮುಖ ಸಂವತ್ಸರದಲ್ಲಿ ಈ ಸೇವೆಯು ಇದಕ್ಕಿಂತ ಹೆಚ್ಚಾಗಿ ನಡೆಯಲಿ ಎಂದೂ ಸರ್ವ ಜನರು ಸುಖಿಗಳಾಗಿ ಆನಂದಿಸಲಿ ಎಂದೂ ಈ ವರ್ಷದ ಈ ಮೊದಲನೆಯ ದಿನದಲ್ಲಿ ಶ್ರೀ ಮಹಾದೇವನನ್ನು ಪ್ರಾರ್ಥಿಸುತ್ತೇನೆ.

ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥
ಯಥೋಕ್ತಾನ್ಯಪಿ ಕರ್ಮಾಣಿ ಪರಿಹಾಯ ದ್ವಿಜೋತ್ತಮಃ ।
ಆತ್ಮಜ್ಞಾನೇ ಶಮೇ ಚ ಸ್ಯಾದ್ ವೇದಾಭ್ಯಾಸೇನ ಯತ್ನವಾನ್ ।
ಏತದ್ಧಿ ಜನ್ಮಸಾಫಲ್ಯಂ ಬ್ರಾಹ್ಮಣಸ್ಯ ವಿಶೇಷತಃ ।
ಪ್ರಾಪ್ಯೈತತ್ ಕೃತ ಕೃತ್ಯೋಹಿ ದ್ವಿಜೋಭವತಿ ನಾನ್ಯಥಾ ॥

ತಾತ್ಪರ್ಯ.

ಯಾವ ಭಾವನೆಯಿಂದ ಯಾವ ಯಾವ ಕರ್ಮಗಳನ್ನು ಮಾಡುವನೋ ಆ ಭಾವನೆಯ ಶರೀರಗಳಿಂದ ಆಯಾ ಕರ್ಮದ ಫಲವನ್ನು ಉಣ್ಣುತ್ತಾನೆ.

............

ಈ ಕರ್ಮಗಳಲ್ಲೆಲ್ಲಾ ಆತ್ಮಜ್ಞಾನವೇ ಶ್ರೇಷ್ಠ. ಸಮಸ್ತ ವಿದ್ಯೆಗಳಲ್ಲಿ ಅದೇ ಪ್ರಸಿದ್ಧ. ಆದ್ದರಿಂದ ಅದು ಅಮೃತ (ಮರಣವಿಲ್ಲದಿರುವಿಕೆ) ವನ್ನು ಹೊಂದಿಸುತ್ತದೆ.

............

ಸಮಸ್ತ ಭೂತಗಳಲ್ಲಿ ತನ್ನನ್ನೂ ತನ್ನಲ್ಲಿ ಸರ್ವ ಭೂತಗಳನ್ನೂ ಸಮನಾಗಿ ನೋಡಿ ಆತ್ಮಯಜ್ಞ ಮಾಡಿದವನು ಸ್ವಾರಾಜ್ಯ (ಶ್ರೇಷ್ಠ ಪದವಿ) ವನ್ನು ಪಡೆಯುತ್ತಾನೆ. ಹಾಗೆ ತನಗಾಗಿ ಹೇಳಲ್ಪಟ್ಟ ಕರ್ಮಗಳನ್ನು ಬಿಟ್ಟು ದ್ವಿಜೋತ್ತಮನಾದವನು ಆತ್ಮಜ್ಞಾನ ಶಮ ಇವುಗಳನ್ನು ಅಭ್ಯಾಸ ಮಾಡಬೇಕು.

ಇದು ಬ್ರಾಹ್ಮಣನಿಗೆ ವಿಶೇಷವಾಗಿ ಜನ್ಮದ ಸಾಫಲ್ಯವು. ಇದನ್ನು ಹೊಂದಿದರೆ ದ್ವಿಜನು ಆವಶ್ಯಕ ಕೆಲಸವನ್ನು ಮಾಡಿದವನಾಗುತ್ತಾನೆ. ಬೇರೆ ಮಾರ್ಗದಿಂದ ಅವನ ಜನ್ಮದ ಸಫಲತೆಯಾಗುವದಿಲ್ಲ.

---

ವರ್ಣಾಚರಣೆಯನ್ನು ಹೇಳುವದಕ್ಕೆ ಆರಂಭಿಸಿದ ಮನುವು ಅಂಥಾ ವರ್ಣಾಚರಣೆಗಾಗಿ ಬರೆದ ತನ್ನ ಮನುಸ್ಮೃತಿಯ ಕಡೆಯ ಭಾಗದಲ್ಲಿ ಈ ಮಾತನ್ನು ಹೇಳಿರುವದನ್ನು ನೋಡಿದರೆ ಬ್ರಾಹ್ಮಣನು ತನ್ನ ಕರ್ಮವನ್ನು ಬಿಟ್ಟು ಶ್ರೇಷ್ಠವಾದ ಆತ್ಮಜ್ಞಾನವನ್ನು ಅವಲಂಬಿಸಬೇಕೆಂದು ತಾ

ನೇ ಒಪ್ಪಿಕೊಂಡಂತಾಗಿದೆ. ಇದರಿಂದ ಬ್ರಾಹ್ಮಣ ಕರ್ಮದಿಂದಲೇ ಜನ್ಮ ಸಾಫಲ್ಯವಿಲ್ಲವೆಂದೂ ಆತ್ಮಜ್ಞಾನವೇ ಶ್ರೇಷ್ಠವೆಂದೂ ನಿರ್ಧರಿಸಬಹುದಾಗಿದೆ.

ಈ ಮೇರೆಗೆ ಆತ್ಮಜ್ಞಾನದ ಧರ್ಮವನ್ನು ಉಳ್ಳವರು ಅತಿವರ್ಣಿಗಳೆಂದು ನಾರದ ಪರಿವ್ರಾಜಕೋಪನಿಷತ್ತು ಸಾರುತ್ತದೆ.

ಯಃ ಶರೀರೇಂದ್ರಿಯಾದಿಭ್ಯೋ ವಿಹೀನಂ ಸರ್ವ ಸಾಕ್ಷಿಣಂ ।
ಪಾರಮಾರ್ಥಿಕ ವಿಜ್ಞಾನಂ ಸುಖಾತ್ಮನಂ ಸ್ವಯಂ ಪ್ರಭಂ ।
ಪರತತ್ವಂ ವಿಜಾನಾತಿ ಸೋತಿ ವರ್ಣಾಶ್ರಮೀ ಭವೇತ್ ॥
ವರ್ಣಾಶ್ರಮಾದಯೋ ದೇಹೇ ಮಾಯಯಾ ಪರಿಕಲ್ಪಿತಾಃ
ನಾತ್ಮನೋ ಬೋಧರೂಪಸ್ಯ ಮಮ ತೇ ಸಂತಿ ಸರ್ವದಾ ॥
ಇತಿ ಯೋ ವೇದ ವೇದಾಂತೈ ಸ್ಸೋತಿ ವರ್ಣಾಶ್ರಮೀ ಭವೇತ್ ॥
ಯಸ್ಯ ವರ್ಣಾಶ್ರಮಾಚಾರೋ ಗಲಿತಃ ಸ್ವಾತ್ಮದರ್ಶನಾತ್ ।
ಸ ವರ್ಣಾನಾಶ್ರಮಾನ್ ಸರ್ವಾನ್ ಅತೀತ್ಯ ಸ್ವಾತ್ಮನಿ ಸ್ಥಿತಃ ॥
ಯೋತೀತ್ಯ ಸ್ವಾಶ್ರಮಾನ್ ವರ್ಣಾನ್ ಆತ್ಮನ್ಯೇವ ಸ್ಥಿತಃ ಪುಮಾನ್॥
ಸೋತಿ ವರ್ಣಾಶ್ರಮೀ ಪ್ರೋಕ್ತಃ ಸರ್ವವೇದಾರ್ಥವೇದಿಭಿಃ ॥

## ತಾತ್ಪರ್ಯ.

ಶರೀರ ಇಂದ್ರಿಯ ಮೊದಲಾದವುಗಳಿಲ್ಲದವನಾದ ಎಲ್ಲವನ್ನೂ ನೋಡುವವನಾದ ಸ್ವಯಂ ಪ್ರಕಾಶಕ (ತನ್ನಿಷ್ಟಕ್ಕೆ ತಾನೇ ಹೊಳೆಯುವವ)ನಾದ ಪರತತ್ವವನ್ನು ಯಾವನು ತಿಳಿಯುವನೋ ಆವನು ಅತಿವರ್ಣಾಶ್ರಮಿಯು. ಉಳಿದ ವರ್ಣಾಶ್ರಮಗಳು ದೇಹದಲ್ಲಿ ಮಾಯೆಯಿಂದ ಕಲ್ಪಿಸಲ್ಪಟ್ಟವುಗಳು. ಆತ್ಮನನ್ನು ತಿಳಿಯುವವನಿಗೆ ಅವು ಎಂದೂ ಇರುವದಿಲ್ಲ. ವೇದಾಂತಗಳಿಂದ ಹೀಗೆ ಯಾವನು ತಿಳಿಯುವನೋ ಆವನು ಅತಿ ವರ್ಣಾಶ್ರಮಿಯು. ಯಾವನಿಗೆ ತನ್ನ ಆತ್ಮ ದರ್ಶನದಿಂದ ವರ್ಣಾಶ್ರಮಾಚಾರಗಳು ಜಾರಿಹೋಗಿರುವವೋ ಅವನು ವರ್ಣಾಶ್ರಮಾಚಾರಗಳನ್ನು ಮೀರಿ ಆತ್ಮನಲ್ಲಿ ನೆಲಸಿದವನು. ತನ್ನ ಆಶ್ರಮ ವರ್ಣಗಳನ್ನು ಯಾವನು ಮೀರಿ ಆತ್ಮನಲ್ಲಿ ಕೂಡಿರುವನೋ ಆವನು ಅತಿವರ್ಣಾಶ್ರಮಿಯು ಎಂದು ಸರ್ವವೇದಾರ್ಥಗಳನ್ನು ತಿಳಿದವರು ಹೇಳುತ್ತಾರೆ.

ಹೀಗೆ ಉಪನಿಷತ್ತು ಆಗಮ ಮೊದಲಾದವುಗಳನ್ನು ನೋಡುವಲ್ಲಿ ಅತಿವರ್ಣ ಎಂಬುದೊಂದು ಉಂಟೆಂದೂ ಅದರ ಲಕ್ಷಣ ಮತ್ತು ಆಚರಣೆಯು ಈ ನಾಲ್ಕು ವರ್ಣಗಳಿಗಿಂತ ಮೇಲಾದುದೆಂದೂ ತೋರಿ ಬರುತ್ತದೆ. ಆದ್ದರಿಂದಲೇ ಬಸವೇಶ್ವರನೇ ಮೊದಲಾದವರು ಬ್ರಾಹ್ಮಣಾದಿ ವರ್ಣಗಳ ಕರ್ಮಗಳನ್ನು ತಿರಸ್ಕರಿಸಿದರೇ ಹೊರತು ಉಚ್ಛೃಂಖಲವೃತ್ತಿ (ಶಾಸ್ತ್ರವನ್ನು ಮೀರಿದ ಪದ್ಧತಿ) ಯಿಂದಲ್ಲ. ಈ ಅತಿವರ್ಣವನ್ನು ಹಿಂದೂ ದೇಶದಲ್ಲಿ ಯಾವ ಸರಕಾರದವರೂ ಗುರ್ತಿಸಿರುವದಿಲ್ಲ. ಮತ್ತು ಯಾವ ಖಾನೇಷುಮಾರಿಯಲ್ಲಿಯೂ ಲೆಕ್ಕಿಸಿರುವದಿಲ್ಲ ಇವರ ಲಕ್ಷಣ ಮತ್ತು ಹಕ್ಕುಬಾಧ್ಯತೆಗಳು ಹೇಗಿರುವವೆಂಬುದನ್ನು ಯಾವ ಉಚ್ಚ ನ್ಯಾಯಸ್ಥಾನದವರೂ ( **High courts** ) ತೀರ್ಮಾನಿಸಿರುವಪು ತಿಳಿದಿಲ್ಲ. ಈ ಅತಿವರ್ಣದವರ ಲಕ್ಷಣಗಳು ಇತರ ವರ್ಣದವರಿಗಿಂತ ಭಿನ್ನವಾಗಿವೆ. ಇವರಿಗಾಗಿ ಹೇಳಲ್ಪಟ್ಟ ಶಾಸ್ತ್ರ ಭಾಗವೂ ಇರುತ್ತದೆ ಎಂಬುದು ಮೇಲಿನ ಪ್ರಮಾಣಗಳಿಂದ ತಿಳಿಯುವದು. ಹೀಗಾಗಿ ಹಿಂದೂ ದೇಶದಲ್ಲಿ ಹಿಂದೂ ಜನರು ಹಿಂದೂ ಧರ್ಮವನ್ನು ತಿಳಿದಿರುವುದರಲ್ಲಿ ಕೊರತೆಯು ತೋರಿ ಬರುವಲ್ಲಿ ಇತರ ದೇಶೀಯರು ತಿಳಿಯುವುದು ಬಹು ಕಷ್ಟವಲ್ಲವೇ ?

ಕೆಲವರು ಅತಿವರ್ಣವೆಂಬುದು ಒಂದು ವರ್ಣವಲ್ಲ ನಾಲ್ಕು ವರ್ಣಗಳನ್ನು ಮೀರಿದಂಥಾ ಸ್ಥಿತಿಗೆ ಈ ಹೆಸರನ್ನು ಕರೆದಿರುತ್ತಾರೆ ಎಂದು ಹೇಳಬಹುದು. ಹ್ಯಾಗೆ ತಿಳಿದರೂ ಇದು ಒಬ್ಬಿಬ್ಬರಿಗೆ ಮಾತ್ರ ಅನ್ವಯಿಸದೆ ಈ ಮೀರಿದ ವರ್ಣಿಗಳ ಗುಂಪೊಂದು ಇರುವದೆಂಬುದನ್ನೂ ಇದರಂತೆ ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಸನ್ಯಾಸ ಎಂಬ ನಾಲ್ಕು ಆಶ್ರಮಗಳನ್ನು ಮೀರಿದ ಆಶ್ರಮಿ ( ಅತ್ಯಾಶ್ರಮಿ ) ಗಳ ಗುಂಪೊಂದು ಇರುತ್ತದೆಂಬದನ್ನೂ ಅನೇಕ ಗ್ರಂಥಗಳ ಉಲ್ಲೇಖದಿಂದ ನಾವು ತಿಳಿಯಲಿಕ್ಕೆ ಬರುತ್ತದೆ. ಹೀಗೆ ಅತಿವರ್ಣಿ ಅತ್ಯಾಶ್ರಮಿ ಈ ಎರಡು ಸ್ಥಿತಿಗಳನ್ನೂ ಹೊಂದಿದಂಥಾ ಒಂದು ಗುಂಪಿನವರು ಉಂಟೆಂಬುದೂ ತಿಳಿಯಬರುತ್ತದೆ.

ಶ್ವೇತಾಶ್ವತರನೆಂಬ ಋಷಿಯು ಅತ್ಯಾಶ್ರಮಿಗಳಿಗಾಗಿಯೇ ಹೇಳಿರುತ್ತೇನೆಂದು ಒಂದು ಉಪನಿಷತ್ತನ್ನು ರಚಿಸಿರುತ್ತಾನೆ. ಇದೇ ಶ್ವೇ

ತಾಶ್ವತರೋಪನಿಷತ್ತು. ಇತರ ಆಶ್ರಮದವರಿಗೆ ಇದು ಸರಿಬರುವಂತಿಲ್ಲ ಈ ಕಾರಣಗಳಿಂದ ಹಿಂದೂ ಶಾಸ್ತ್ರವನ್ನು ನೋಡುವಾಗ ಯಾರಿಗೆ ಹೇಳಿದ್ದು ಎಂಬುವನ್ನು ಮೊದಲೇ ಯೋಚಿಸಲೇಬೇಕು.

ಇವುಗಳನ್ನೆಲ್ಲ ನೋಡಿದಮೇಲಂತೂ ಹಿಂದೂ ಮತವು ಜನರನ್ನು ಭಿನ್ನ ಭಿನ್ನ ಸ್ಥಿತಿಯಲ್ಲಿ ಇರಿಸುತ್ತದೆ ಒಂದೇ ರೀತಿಯಾಗಿ ಒಂದೇ ಮಾತನ್ನು ಹೇಳಿಲ್ಲ. ಎಲ್ಲೆಲ್ಲಿನೋಡಿದರೂ ಭಿನ್ನವೇ ಎಂದು ಇನ್ನೂ ಶಂಕಿಸಬಹುದು ಈ ಆಕ್ಷೇಪಣೆಗೂ ಕಾರಣವಿಲ್ಲ.

ಹಿಂದೂ ಮತದ ಅತ್ಯುತ್ತಮವಾದ ಅಭಿಪ್ರಾಯವು ತ್ರೈಕಾಲುಗಳಿಲ್ಲದ ನಿರಾಕಾರ ಸ್ವರೂಪದಲ್ಲಿ ಮಹಾದೇವನಿದ್ದಾನೆಂದೂ ಅವನನ್ನು ಪ್ರಣವಸ್ವರೂಪನಾಗಿ ತಿಳಿಯಬೇಕೆಂದೂ ಇರುತ್ತದೆ. ಈ ನಿರಾಕಾರ ಸ್ವರೂಪವುಳ್ಳ ಮಹಾದೇವನನ್ನೂ ಪ್ರಣವವನ್ನೂ ತಿರಸ್ಕರಿಸುವ ಹಿಂದುವು ಒಬ್ಬನೂ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿ (ಹೆಚ್ಚಿನ ಮಾತು) ಆಗುವದಿಲ್ಲ. ಎಲ್ಲರೂ ಒಪ್ಪುತ್ತಾರೆಂದೇ ನಿರ್ಧಾರವಾಗಿ ತಿಳಿಯಬೇಕು. ಈ ಅರ್ಥವನ್ನೇ ಬಹಳ ಪೂರ್ವದವುಗಳು ಎನಿಸಿಕೊಂಡ ಉಪನಿಷತ್ತುಗಳೂ ಬೋಧಿಸುತ್ತವೆ.

ಇಂಥಾ ಉಪನಿಷತ್ತುಗಳನ್ನೂ ಇನ್ನೂ ಅನೇಕ ಸಂಸ್ಕೃತ ಗ್ರಂಥಗಳನ್ನೂ ಓದಿದ ಪ್ರಸಿದ್ಧನಾದ ಮ್ಯಾಕ್ಸ್‌ಮುಲ್ಲರ್ ಪಂಡಿತನಿಗೆ ಈ ನಿರಾಕಾರನಾದ ದೇವನು ರುಚಿಸಲಿಲ್ಲ (Page 244) ಪ್ರಣವವೂ ರುಚಿಸಲಿಲ್ಲ (Page 323) ಇವುಗಳಿಂದ ಪ್ರಯೋಜನ ಕಡಿಮೆ ಎಂಬ ಅಭಿಪ್ರಾಯವನ್ನು ತನ್ನ Six systems of Indian Philosophy ಗ್ರಂಥದಲ್ಲಿ ಹೇಳಿರುತ್ತಾನೆ. ವಿದ್ಯೆಯನ್ನೋದಿದ ಮಾತ್ರಕ್ಕೆ ಮಹಾದೇವನ ತಿಳಿವು ಒಂದೇ ವಿಧವಾಗಿ ಬಂತೆನ್ನಲಾಗುವದಿಲ್ಲ. ಅದು ತನ್ನ ಅನುಭವದಿಂದ ತಿಳಿಯತಕ್ಕ ನಿರ್ಣಯಿಸತಕ್ಕ ಮತ್ತು ಆಚರಿಸತಕ್ಕ ವಿಷಯವಾಗಿದೆ ಆ ಪಂಡಿತನಿಗೆ ಸಾಕಾರ (ಸಗುಣ) ಮೂರ್ತಿಯ ವಿಷಯವೇರುಚಿಸಿದ್ದರಿಂದ ಆ ಸಂಬಂಧದ ಕ್ರಿಯಗಳೇ ಆತನಿಗೆ ಅನ್ವಯಿಸಲಿಕ್ಕೆಬೇಕು. ಆದ್ದರಿಂದ ತಿಳಿಯತಕ್ಕ ಅಧಿಕಾರಿಗೆ ತಕ್ಕಂತೆ ಧರ್ಮವು ಏರ್ಪಡಿಸಲ್ಪಟ್ಟಿರುವದು ಸಾಧುವಾದುದೆಂದು ತಿಳಿಯಬೇಕು.

ಹಾಗಲ್ಲದೆ ಹಿಂದೂ ಮತವು ಒಂದೇ ವಿಷಯವನ್ನೇ ಬೋಧಿಸಿದ್ದರೆ ಅದೂ ಮಹಾದೇವನ ಒಂದು ಅಂಶದ ಬೋಧಕವಾಗಿ ಇರುತ್ತಿದ್ದಿತಲ್ಲದೆ ೪—೫ ಸಾವಿರ ವರುಷಗಳಿಂದ ಅಥವಾ ಅನಾದಿಯಿಂದ (ಬಹು ಪೂರ್ವಕಾಲದಿಂದ) ಹಿಂದೂಗಳೆಲ್ಲರಿಗೂ ಬೇಕಾಗಿ ಈ ವರೆವಿಗೂ ನಡೆದು ಬರುತ್ತಿರಲಿಲ್ಲ. ಮತ್ತು ಒಂದು ಪಕ್ಷವುಳ್ಳದೆಂದು ತಿಳಿಯಲು ಅವಕಾಶವನ್ನು ಹೊಂದುತ್ತಿದ್ದಿತಲ್ಲದೆ ಜಗತ್ತಿಗೆಲ್ಲಾ ವ್ಯಾಪಿಸತಕ್ಕದ್ದೆಂಬ ಭಾವನೆಯನ್ನು ಬೀರುವಂತೆ ಆಗುತ್ತಿರಲಿಲ್ಲ.

ಇಷ್ಟಾದರೂ ಮತ್ತೂ ಭಿನ್ನದ ಆಚರಣೆಯನ್ನೇ ತೋರಿಸುತ್ತದೆಂದು ತಿಳಿಯಲಿಕ್ಕೆ ಬರುವಂತೆ ಇಲ್ಲ.

ಅಥಾತೋ ಧರ್ಮಜಿಜ್ಞಾಸಾ, ಅಥಾತೋ ಬ್ರಹ್ಮಜಿಜ್ಞಾಸಾ,
ತಾತ್ಪರ್ಯ:— ಅನಂತರದಲ್ಲಿ ಧರ್ಮವಿಚಾರವು ಅನಂತರದಲ್ಲಿ ಬ್ರಹ್ಮವಿಚಾರವು.

ಎಂಬ ವಾಕ್ಯಗಳು ಧರ್ಮದ ಮತ್ತು ಬ್ರಹ್ಮವಿದ್ಯೆಯ ಶಾಸ್ತ್ರಾರಂಭದಲ್ಲಿ ಕಾಣುತ್ತವೆ. ಪೂರ್ವದಲ್ಲಿ ಒಂದು ಅಂಶದ ತಿಳಿವು ಬಂದಮೇಲೆ ಈ ಅಂಶವನ್ನು ತಿಳಿಯಬೇಕು ಎಂಬ ಅಭಿಪ್ರಾಯವು ಇವುಗಳಲ್ಲಿ ತೋರುವದರಿಂದ ಒಬ್ಬನೇ ಕ್ರಮ ಕ್ರಮದಲ್ಲಿಯಾಗಲೀ ವ್ಯುತ್ಕ್ರಮ (ಒಮ್ಮೆಲೆ ಏರುವುದು) ಮೂಲಕವಾಗಿಯಾಗಲೀ ಹೆಚ್ಚಿನ ಜ್ಞಾನಕ್ರಿಯೆಗಳನ್ನು ಹೊಂದಲಿಕ್ಕೆ ಈ ಧರ್ಮ ಭಾಗಗಳು ಏರ್ಪಡಿಸಲ್ಪಟ್ಟಿರುತ್ತವೆ ಎಂದು ತಿಳಿಯಬೇಕಾಗುತ್ತದೆ.

ಒಬ್ಬನು ಮಹಾದೇವನೇ ಇಲ್ಲವೆಂದು ಹೇಳುವ ತಿಳಿವಳಿಕೆಯನ್ನು ಮೊದಲು ಉಂಟಾಗಿದ್ದು ಮುಂದೆ ಪ್ರಪಂಚವನ್ನು ನೋಡಿ ತಿಳಿಯುತ್ತಾ ತಿಳಿಯುತ್ತಾ ಮಹಾದೇವನಿದ್ದಾನೆಂದು ನಿಶ್ಚಯಿಸಬಹುದು. ಹಾಗೆಯೇ ಆ ಮಹಾದೇವನು ಎಲ್ಲಾ ಕಡೆಗೂ ತುಂಬಿಕೊಂಡವನಾದ್ದರಿಂದ ತನ್ನಲ್ಲಿಯೂ ಇದ್ದಾನೆಂದು ತಿಳಿಯಬಹುದು. ಆಮೇಲೆ ತನ್ನಲ್ಲಿ ಇರುವುದು ಕೆಲವು ಲಕ್ಷಣಗಳಿಂದ ಪೃಥಕ್ಪಡುವದರಿಂದ ತಾನೇ ಆ ಮಹಾದೇವನ ಸ್ವರೂಪವೆನ್ನಬಹುದು ಮೊದಲು ಅವನು ಸಾಕಾರನೆನ್ನಬಹುದು. ಕಡೆಗೆ ಅವನು ನಿರಾ

ಕಾರನೆನ್ನಬಹುದು ಹೀಗೆ ಅವನ ತಿಳಿವಳಿಕೆಯು ಹೆಚ್ಚುತ್ತಾ ಹೋಗಿ ಈ ಮೊದಲು ಹೇಳಿದಂತೆ ಎಲ್ಲಿಗೆ ಅವನ ಕೊನೆಯ ನಿರ್ಣಯವು ಆಳವಡುವುದೋ ಅಲ್ಲಿಗೆ ಅವನ ಧರ್ಮವು ನಿಲ್ಲಲಿ ಎಂಬುದೇ ಹಿಂದೂ ಮತದ ಮುಖ್ಯ ಯೋಜನೆಯಾಗಿದೆ.

" ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಶಾಸ್ತ್ರದ ಮುಂದೆ ಯಾವ ಶಾಸ್ತ್ರವೂ ಇಲ್ಲದಿರುವದರಿಂದ ಅದರ ಅಭಿಪ್ರಾಯದಲ್ಲಿ ಮಹಾದೇವನು ನಿರಾಕಾರನಾಗಿದ್ದಾನೆ. ಅವನನ್ನು ತನ್ನ ಸ್ವರೂಪದಲ್ಲಿಯೇ ನೋಡಬೇಕು ಎಂಬುದೇ ಮುಖ್ಯವಾಗಿ ಇರುವದರಿಂದಲೂ ಹಳೆಯವಾದ ಮುಂಡಕ ಮಾಂಡೂಕ್ಯ ಉಪನಿಷತ್ತುಗಳೇ ಮೊದಲಾದವುಗಳು ನಿರಾಕಾರ ಲಕ್ಷಣವನ್ನು ತಿಳಿಸಿ ಅವನನ್ನು ಅಕ್ಷರ ಮೊದಲಾದ ಪದಗಳಿಂದ ವಿವರಿಸಿ ಇದೇ ಅಭಿಪ್ರಾಯವನ್ನೇ ಬೋಧಿಸುವದರಿಂದಲೂ ಈ ಜ್ಞಾನಾಚರಣೆಯು ಅತ್ಯಂತ ಮೇಲಿನ ( ಉಪ್ಪರಿಗೆಯ ) ಪ್ರದೇಶವೆಂದು ತಿಳಿಯಬೇಕು. ಈ ಆಚರಣೆಯಲ್ಲಿ ನಡೆಯುವವರೇ ಧೀರರು. ಈ ಸ್ಥಿತಿಯನ್ನು ಒಂದೇ ಜನ್ಮದಲ್ಲಿ ಪಡೆಯಬಹುದು.

ಹಾಗಲ್ಲದಿದ್ದರೆ

ಏಕೇನ ಜನ್ಮನಾ ಮುಕ್ತಿ ರ್ವೀರಾಣಾಂತು ಮಹೇಶ್ವರಿ

ತಾತ್ಪರ್ಯ— ಧೀರರಾದವರಿಗೆ ಒಂದೇ ಜನ್ಮದಲ್ಲಿ ಮುಕ್ತಿಯುಂಟು ಎಂಬ ಪ್ರಮಾಣಕ್ಕೆ ಸರಿಯಾದ ಉಪಯೋಗವು ಆಗದೆ ಹೋಗುವದು

ಇವುಗಳ ತಾತ್ಪರ್ಯದಂತೆ ಈ ದಿವಸವೇ ಎಲ್ಲರೂ ಹಿಂದೂ ಶಾಸ್ತ್ರದ ಈ ಮುಖ್ಯಾಭಿಪ್ರಾಯವನ್ನು ಎಂದರೆ ನಿರಾಕಾರ ನಿಷ್ಕಲ ನಿರಂಜನನಾದ ಮಹಾದೇವನನ್ನು ತಿಳಿಯಬೇಕೆಂಬುದನ್ನು ಅರಿದಾಚರಿಸುವವರಾದರೆ ಈ ದಿವಸವೇ ಅವರೆಲ್ಲರೂ ಒಂದೇ ಅಭಿಪ್ರಾಯವುಳ್ಳವರೂ ಸಮಾನ ಧರ್ಮಿಗಳೂ ಹಿಂದೂ ಧರ್ಮದ ಪರಿಣಾಮಾವಸ್ಥೆಯನ್ನು ಹೊಂದಿದವರೂ ಆಗುತ್ತಾರೆ.

ವರ್ಣಾಶ್ರಮಗಳ ವಿಷಯವೂ ಹೀಗೆಯೇ ಇರುತ್ತದೆ. ಒಂದು ವರ್ಣದವನು ಮತ್ತೊಂದು ವರ್ಣದವನಾಗುವದಕ್ಕೆ ಸ್ಮೃತಿಗಳು ಒಪ್ಪು

ತ್ತವೆ ಎಂಬುದನ್ನು ಮೇಲೆ ತೋರಿಸಿರುತ್ತದೆ. ಅನೇಕ ಋಷಿಗಳು ಹುಟ್ಟುವಾಗ ಶೂದ್ರರಾದಾಗ್ಯೂ ಕಡೆಯಲ್ಲಿ ಬ್ರಾಹ್ಮಣರು ಅತಿವರ್ಣಿಗಳು ಎನಿಸಿಕೊಂಡಿದ್ದಾರೆ.

ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ

ತಾತ್ಪರ್ಯಃ— ಹುಟ್ಟುವಿಕೆಯಿಂದ ಶೂದ್ರನಾಗಿ ಜನಿಸಿರುತ್ತಾನೆ. ಕರ್ಮದಿಂದ ದ್ವಿಜ ಎನ್ನಿಸಿಕೊಂಡಿದ್ದಾನೆ. ಎಂಬುದೂ ಇದೇ ಅಭಿಪ್ರಾಯವನ್ನು ತೋರಿಸುತ್ತದೆ.

ಆದರೆ ಜನ್ಮದಿಂದಲೇ ವರ್ಣಗಳು ಬಂದಿವೆ ಅವು ಜನ್ಮದ ಕಡೆಯವರೆಗೂ ಇರಬೇಕು. ಎಂಬ ವಾದವು ನಿಲ್ಲುವಂಥಾದ್ದಲ್ಲ.

ಬ್ರಹ್ಮೋಪನಿಷತ್ತು.

ಸಶಿಖಂ ವಪನಂ ಕೃತ್ವಾ ಬಹಿಃ ಸೂತ್ರಂ ತ್ಯಜೇದ್‌ಬುಧಃ ।
ಯದಕ್ಷರಂ ಪರಂ ಬ್ರಹ್ಮ ತತ್ ಸೂತ್ರಮಿತಿಧಾರಯೇತ್

..............

ತತ್ ಸೂತ್ರಂ ಧಾರಯೇದ್ ಯೋಗೀ ಯೋಗವಿತ್ ತತ್ವದರ್ಶಿವಾನ್
ಬಹಿಃ ಸೂತ್ರಂ ತ್ಯಜೇದ್ ವಿದ್ವಾನ್ ಯೋಗಮುತ್ತಮಮಾಸ್ಥಿತಃ ।
ಬ್ರಹ್ಮಭಾವಮಿದಂ ಸೂತ್ರಂ ಧಾರಯೇದ್ ಯಃ ಸ ಚೇತನಃ ।
ಧಾರಣಾತ್ ತಸ್ಯ ಸೂತ್ರಸ್ಯ ನೋಚ್ಛಿಷ್ಟೋ ನಾಶುಚಿರ್ಭವೇತ್ ।
ಸೂತ್ರಮಂತರ್ಗತಂ ಯೇಷಾಂ ಜ್ಞಾನ ಯಜ್ಞೋಪವೀತಿನಾಂ।
ತೇ ವೈ ಸೂತ್ರವಿದೋ ಲೋಕೇ ತೇ ಚ ಯಜ್ಞೋಪವೀತಿನಃ ॥
ಜ್ಞಾನಶಿಖಿನೋ ಜ್ಞಾನನಿಷ್ಠಾ ಜ್ಞಾನ ಯಜ್ಞೋಪವೀತಿನಃ
ಅಗ್ನೇರಿವ ಶಿಖಾ ನಾನ್ಯಾ ಯಸ್ಯ ಜ್ಞಾನ ಮಯೀ ಶಿಖಾ
ಸ ಶಿಖೀತ್ಯುಚ್ಯತೇ ವಿದ್ವಾನ್ ಇತರೇ ಕೇಶಧಾರಿಣಃ ॥
ಬ್ರಾಹ್ಮಣ್ಯಂ ಸಕಲಂ ತಸ್ಯ ಇತಿ ಬ್ರಹ್ಮವಿದೋ ವಿದುಃ

ಪಂಡಿತನಾದವನು ಜುಟ್ಟನ್ನು ಬೋಳಿಸಿ ಹೊರಗೆ ಇರುವ ಜನಿವಾರವನ್ನು ಬಿಟ್ಟು ಬಿಡಬೇಕು. ಅಕ್ಷರ ಪರಬ್ರಹ್ಮನು ಯಾವನೋ ಅವನನ್ನು ಸೂತ್ರವೆಂದು ಧರಿಸಬೇಕು. ....... ಆ ಸೂತ್ರವನ್ನೇ ಯೋಗ

ವನ್ನು ಬಲ್ಲವನೂ ತತ್ವವನ್ನು ನೋಡಿದವನೂ ಆದ ಯೋಗಿಯು ಧರಿಸ ಬೇಕು. ಉತ್ತಮಯೋಗದಲ್ಲಿದ್ದವನು ಹೊರಗಿನ ಜನಿವಾರವನ್ನು ಬಿಟ್ಟು ಬಿಡಬೇಕು. ಯಾವನು ಬ್ರಹ್ಮಭಾವವುಳ್ಳ ಸೂತ್ರವನ್ನು ಧರಿಸುವನೋ ಅವನು ಚೈತನ್ಯ ಉಳ್ಳವನು ಅವನಿಗೆ ಅಶುಚಿಯಾಗಲೀ ಎಂಜಲು ದೋಷ ವಾಗಲೀ ಇಲ್ಲ. ಯಾರು (ಇಂಥಾ) ಜ್ಞಾನ ಸೂತ್ರವನ್ನು ಹೊಂದಿರುವ ರೋ ಅವರ ಆ ಸೂತ್ರವು ಒಳಗಿರತಕ್ಕದ್ದು. ಇವರೇ ಸೂತ್ರವನ್ನು ಬಲ್ಲವ ರು. ಇವರೇ ಯಜ್ಞೋಪವೀತಿಗಳು. ಜ್ಞಾನಶಿಖೆಯುಳ್ಳವರು. ಜ್ಞಾನನಿ ಷ್ಠರು. ದೀಪಕ್ಕೆ ಶಿಖೆಯು ( ಕುಡಿ=ತುದಿಯಭಾಗ ) ಹೇಗೆ ಬೇರೆ ಇರು ವದಿಲ್ಲವೋ ಹಾಗೆ ಜ್ಞಾನದಿಂದ ತುಂಬಿದ ಶಿಖೆಯುಳ್ಳವನೇ ಜುಟ್ಟುಳ್ಳವ ನು (ಶಿಖಿಯು). ಉಳಿದವರೆಲ್ಲರೂ ಕೂದಲು ಧಾರಿಗಳು. ಅವನಿಗೆ ಬ್ರಾ ಹ್ಮಣ್ಯವು ಸಕಲವು. ಎಂದರೆ ಕೂಡಿರುವಂಥಾದ್ದು. ಹೀಗೆ ಬ್ರಹ್ಮ ಜ್ಞಾನಿಗಳು ತಿಳಿದಿರುತ್ತಾರೆ.

ಈ ಮೇರೆಗೆ ಚಾತುರ್ವರ್ಣ್ಯದಲ್ಲಿ ಉತ್ತಮರಾದ ಬ್ರಾಹ್ಮಣರ ನ್ನೇ ಚಪ್ಪರಿಸಿ ಎಬ್ಬಿಸಿ ಜನಿವಾರವನ್ನು ಬಿಟ್ಟುಬಿಡಿರಿ ಎಂದು ಹೇ ಳುವ ಹಿಂದೂ ಧರ್ಮವು ಉಳಿದ ವರ್ಣದವರ ಶ್ರೇಯಸ್ಸನ್ನು ಕೋ ರದೆ ಇರುವದೇ ? ಎಂದರೆ ಜನ್ಮಾಂತ್ಯದವರಿವಿಗೂ ಕರ್ಮಿಗಳಾಗಿ ಬಂ ಧವನ್ನು ಅನುಭವಿಸಬೇಕೆಂದು ಹೇಳುವದೇನು ?

ಪಾರಮೇಶ್ವರಾಗಮದಲ್ಲಿ

ವರ್ಣಾಶ್ರಮ ವಿಭಾಗೋಯಂ ವೃತ್ತಿತೋ ನ ತು ಜನ್ಮತಃ

ತಾತ್ಪರ್ಯ — ವರ್ಣಾಶ್ರಮ ವಿಭಾಗವು ವೃತ್ತಿಯಿಂದ ಬಂದದ್ದೇ ಹೊ ರತು ಜನ್ಮದಿಂದ ಬಂದದ್ದಲ್ಲ.

ನ ಸಾಧಯತಿ ಮಾಂ ಯೋಗೋ ಜಾತಯಶ್ಚಾಶ್ರಮಾ ಅಪಿ

ತಾತ್ಪರ್ಯ ಶಿವನ ಬೋಧೆ— ನನ್ನನ್ನು ಯೋಗವಾಗಲೀ ಜಾತಿಗಳಾ ಗಲೀ ಆಶ್ರಮಗಳಾಗಲೀ ಸಾಧಿಸುವದಿಲ್ಲ.

ಈ ಮೊದಲು ಉದಾಹರಿಸಿದಂತೆ ಅಪಿ ವಾ ಯಶ್ಚಂಡಾಲಃ ಎಂಬುದೂ ಇದೇ ಅರ್ಥವನ್ನೇ ತೋರಿಸುತ್ತದೆ. ಎಂದರೆ ಒಬ್ಬ ಚಂಡಾಲನು ಒ ಮ್ಮೆಗೆ ಅತಿವರ್ಣಿಯಾಗಬಹುದು ಎಂದು ಹೇಳುತ್ತದೆ. ಆದ್ದರಿಂದ

ಹಿಂದೂ ಧರ್ಮವು ಮನುಷ್ಯನ ಧರ್ಮಸ್ಥಿತಿಯು ಮಹಾದೇವನ ಜ್ಞಾನವನ್ನು ಹೊಂದಿದ ಪ್ರಕಾರ ಏರುತ್ತಾ ಏರುತ್ತಾ ಕಟ್ಟಕಡೆಯಲ್ಲಿ ಆತನಿಗೆ ಸಮಾನ ಸ್ಥಿತಿಯು ಆಶ್ರಯವನ್ನು ಕೊಟ್ಟಿರುವದೇ ಹೊರತು ಭಿನ್ನಸ್ಥಿತಿಯಲ್ಲಿ ಕೊಟ್ಟಿಲ್ಲ. ಈ ಧರ್ಮದ ಉಪ್ಪರಿಗೆಯನ್ನು ಹತ್ತತಕ್ಕವರು ಯಾವ ಯಾವ ಮೆಟ್ಟಲಿನಲ್ಲಿ ನಿಂತು ಬಿಡುವರೋ ಅಲ್ಲಿಯೇ ಅವರಿಗೆ ವಿಶಾಲವಾದ ಸ್ಥಳವು ದೊರಕುವಂತಾಗಿ ಆನಂದಿಸುತ್ತಿರುವರು. ಪ್ರತಿಯೊಂದು ಮೆಟ್ಟಲೂ ವಿಶಾಲವಾಗಿದೆ. ಎಲ್ಲಾ ಮೆಟ್ಟಲುಗಳನ್ನೂ ಹತ್ತಿ ಉಪ್ಪರಿಗೆಯನ್ನು ಸೇರಿದಾಗ ಅನುಭವಿಸುವ ಸುಖವು ಪರಮಾನಂದವನ್ನು ಕೊಡುವಂಥಾದ್ದು. ಆ ಆನಂದಕ್ಕೆ ಕೊರತೆಯೇ ಇಲ್ಲ. ಅದು ಅತ್ಯಂತ ವಿಸ್ತಾರವಾದ ಸ್ಥಾನವು. ಆ ಸ್ಥಾನವನ್ನು ಸೇರಿ ಅದರ ಸುಖವನ್ನು ನೋಡಿದವರು ಮತ್ತೆ ಇಳಿಯಬೇಕೆನ್ನುವದಿಲ್ಲ. ಆದ್ದರಿಂದ ಈ ಧರ್ಮವು ಭೂಮಿಯ ಮೇಲಿರುವ ಇತರ ಧರ್ಮಗಳಿಗಿಂತ ವಿಶಾಲವಾದುದೂ ಸಾರವುಳ್ಳದೂ ಶ್ರೇಷ್ಠವಾದುದೂ ಆಗಿರುವದೇ ಹೊರತು ಗೊಡ್ಡಲ್ಲ.

ಈ ಕಾರಣಗಳಿಂದ ಹಿಂದೂ ಧರ್ಮದೊಳಗೆ ಸೇರಿದ ಬ್ರಾಹ್ಮಣನಾಗಲೀ ಕ್ಷತ್ರಿಯನಾಗಲೀ ಇತರರಾಗಲೀ ತಮ ತಮಗೆ ವಿಧಾಯಕವಾಗಿರುವ ಧರ್ಮದಂತೆ ಆಚರಿಸಿ ಮುಂದೆ ಏರುತ್ತಾ ಅತಿವರ್ಣಿಯಾಗಿ ಹೆಚ್ಚಿನ ಯೋಗ್ಯತೆಯನ್ನು ಪಡೆಯಲು ಯತ್ನಿಸಬಹುದಾಗಿದೆ.

ಇವುಗಳನ್ನೆಲ್ಲ ನೋಡಿದ ಮೇಲೆ ಧರ್ಮ ಸ್ವಾತಂತ್ರ್ಯವನ್ನು ಈಗ ಅನುಭವಿಸುತ್ತಿದ್ದೇವೆ ಎಂದು ಹೇಳುವಂಥಾ ಮೊದಲು ವಿವರಿಸಲ್ಪಟ್ಟ ಲಕ್ಷಣವುಳ್ಳ ಕೆಲವರು ನಿಜವಾದ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವರೆಂದು ನಿರ್ಣಯಿಸಬಹುದೇನು ?

ಒಟ್ಟಿನಲ್ಲಿ ಇಂಥವರ ಕೊನೆಯ ಧ್ಯೇಯವೆಂದರೆ ಎಲ್ಲರೂ ಕೂಡಿ ಉಂಡುಟ್ಟಿರಬೇಕೆಂದು ಹೇಳುವದೇ ಎಂದು ತೋರುತ್ತದೆ. ಆದರೆ ಮಹಾದೇವನ ಸಂಬಂಧವೇನು ಎಂಬುದನ್ನು ಯೋಚನೆಗೇ ತರುವಂತಿಲ್ಲ ಅದರಲ್ಲಿ ಯಾರ ತಿಳಿವಳಿಕೆ ಹೇಗಾದರೂ ಇರಲಿ ಎಂದು ಉದಾಸೀನ ಭಾವವೇ ಇದೆ. ಹೀಗಾದರೆ ಮನುಷ್ಯ ಜಾತಿ ಎಲ್ಲವೂ ಒಂದೇ ಎಂದು ತೋರಿಸುವದಕ್ಕಾಗುವದೇ ಹೊರತು ಮನುಷ್ಯನ ಧರ್ಮವು ಒಂ

ದೇ ಎಂದು ತೋರಿಸಲಿಕ್ಕಾಗುವದಿಲ್ಲ. ಮಂಗಗಳಾಗಲೀ ಇತರ ಪಶು ಗಳಾಗಲೀ ಪಕ್ಷಿಗಳಾಗಲೀ ಕೂಡಿರುತ್ತವೆ, ಕೂಡಿ ಉಣ್ಣುತ್ತವೆ, ಅದರಂತೆ ಇವರೂ ಮಾಡಿದ ಹಾಗಾಯಿತು. ಪೂರ್ವದ ಕಾಡು ಜನ ರೂ ಎಲ್ಲರೂ ಕೂಡಿ ಉಂಡು ಬದುಕುತ್ತಿರಬಹುದು. ಇವರಿಗೆ ಧರ್ಮಜ್ಞಾನವೇ ಇರಲಿಲ್ಲ.

ಇವರಿಗೂ ಈಗ ಇವರಂತೆ ಮಾಡಬೇಕೆಂಬುವವರಿಗೂ ಏನು ವ್ಯತ್ಯಾಸ ?

ಹೀಗಾಗಿ ಧರ್ಮ ಪ್ರಾಧಾನ್ಯವುಳ್ಳ ಹಿಂದೂ ದೇಶದಲ್ಲಿ ಅದರ ನಿಜ ಸ್ಥಿತಿಯನ್ನು ತಿಳಿಯುವ ಬದಲಾಗಿ ಧರ್ಮದ ಔದಾಸೀನ್ಯಕ್ಕೆ ಕಾರಣ ಮಾಡಿದಂತಾಗುವದೇ ಹೊರತು ಬೇರೆ ಇಲ್ಲ. ಇದರಿಂದ ಹಿಂದೂ ದೇಶವು ತನ್ನ ಧಾರ್ಮಿಕ ಪ್ರಖ್ಯಾತಿಯನ್ನು ಕಳೆದುಕೊಳ್ಳುವ ಕಾಲವು ಪ್ರಾರಂಭವಾದಂತಾಗುವದು. ಆದ್ದರಿಂದ ಹೀಗೆ ಮಾಡುವದು ಧರ್ಮದ ವಿನಾಶಕ್ಕೆ ಕಾರಣವಾಗಿದೆ ಎಂದು ತಿಳಿಯುವದೇ ಹೊರತು ಹಿಂದೂ ಶಾಸ್ತ್ರದ ದೃಷ್ಟಿಯ ಪ್ರಕಾರ ಧರ್ಮ ಸ್ವಾತಂತ್ರ್ಯವಲ್ಲ.

ಈ ಸ್ವಾತಂತ್ರ್ಯದ ಜನರು ಹೇಳುವದು ಸಾಧುವಾಗಿದ್ದರೆ ಇಷ್ಟರೊಳಗಾಗಿ ಅವುಗಳೆಲ್ಲಾ ಸರ್ವರಿಂದ ಅಂಗೀಕಾರವನ್ನು ಹೊಂದಿ ನಡೆಯೊಳಗೆ ಬರುತ್ತಿದ್ದವು. ಧರ್ಮ ಸಂಬಂಧವಾದ ರಕ್ತವು ಹಿಂದೂ ಜನಾಂಗದಲ್ಲಿ ಅನಾದಿ ಪರಂಪರೆಯಿಂದ ಈ ವರೆವಿಗೂ ಬಂದಿರುವದರಿಂದಲೂ ತಮ್ಮ ಪೂರ್ವಿಕರ ಆಚರಣೆಯಂತೆ ನಡೆಯಬೇಕೆಂಬ ಅಭಿಮಾನವು ಬಲವಾಗಿರುವದರಿಂದಲೂ ಧರ್ಮ ನಾಶದ ಲಕ್ಷಣವನ್ನು ಹೊಂದಲು ಬಹು ಜನರು ಹಿಂಜರಿಯುತ್ತಿರುವರು. ಧರ್ಮದ ಸ್ಥಿತಿ ಹೇಗಿರುವದೆಂಬುದನ್ನು ಶಾಸ್ತ್ರ ಮತ್ತು ವೃದ್ಧಾಚಾರವನ್ನು ತೋರಿಸುವದರ ಮೂಲಕ ಜನರನ್ನು ಸುಧಾರಿಸಲಿಕ್ಕೆ ಹತ್ತಿದರೆ ಸರ್ವಜನ ಮಾನ್ಯವಾಗುವದೇ ಹೊರತು ಧರ್ಮ ಪದ್ಧತಿಗೆ ಅನುಗುಣವಿಲ್ಲದ ನಡತೆಗಳನ್ನು ಕೆಲವರು ತಾವು ಆಚರಿಸಿದರೆ ಅದನ್ನು ನೋಡಿದ ಮಾತ್ರದಿಂದಲೇ ಇತರರು ಎಂದೂ ಆಚರಿಸಲಾರರು. ಇಷ್ಟೇಕೆ ! ಈಗ ರಾಜ್ಯಕ್ಕಾಗಿ ಪ್ರಾಣಕೊಡುತ್ತಿರುವಂತೆ ಪೂರ್ವದಲ್ಲಿ ಧರ್ಮಕ್ಕಾಗಿ ಪ್ರಾಣ ಕೊಟ್ಟ ವೀರರು ಸಾವಿರಾರು ಇರುತ್ತಾರೆ. ಧರ್ಮ ಹೇಗಿದ್ದರೂ ಇರಲಿ

ನಾವು ಪ್ರಪಂಚಯಾತ್ರೆಯನ್ನು ಸುಖದಿಂದ ಮಾಡಿಕೊಂಡು ಹೋದರಾಯಿತು ಎಂಬ ನಿರ್ಲಕ್ಷ್ಯ ಭಾವವು ಅವರಲ್ಲಿ ಇರಲೇ ಇಲ್ಲ.

ಇಷ್ಟರಮಟ್ಟಿಗೆ ಜನ ಪ್ರೀತಿಗೆ ಕಾರಣವಾದ ಹಿಂದೂ ಧರ್ಮವು ಒಬ್ಬರನ್ನೊಬ್ಬರು ದ್ವೇಷಿಸುವ ನಿಂದಿಸುವ ಸ್ಥಿತಿಗೆ ಏಕೆ ಬಂದಿತೆಂಬುದನ್ನು ಇನ್ನು ಸ್ವಲ್ಪ ವಿಚಾರ ಮಾಡಬೇಕಾಗಿದೆ.

ಈ ವಿಚಾರವನ್ನು ಮಾಡುವಾಗ ಧರ್ಮ ಗುರುಗಳ ಮತ್ತು ರಾಜರ ವಿಷಯ:ವು ಇವಕ್ಕೆ ಸಂಬಂಧ ಪಡುವದರಿಂದ ಇವರ ಚರಿತ್ರೆಯ ಕಡೆಗೆ ಗಮನ ಕೊಡಬೇಕಾಗುತ್ತದೆ.

ಧರ್ಮವು ಸುಸ್ಥಿರವಾಗಿ ನಡೆಯುವದಕ್ಕೆ ಬಹುಮಟ್ಟಿಗೆ ರಾಜರು ಕಾರಣರಾಗಿರುತ್ತಾರೆ. ಜನಕರಾಜನ ಕಾಲದಲ್ಲಿ ಧರ್ಮ ಸಂಬಂಧದ ವಾದ ವಿವಾದಗಳು ನಡೆಯುತ್ತಾ ಇದ್ದವೆಂಬುದನ್ನು ಉಪನಿಷತ್ತುಗಳಿಂದ ತಿಳಿಯಬಹುದು. ಹಿಂದೂ ರಾಜ್ಯಭಾರದ ಕಾಲದಲ್ಲಿ ರಾಜನ ಸಭೆಯು ಧಾರ್ಮಿಕರು ಮೊದಲಾದವರಿಂದ ತುಂಬಿಕೊಂಡು ಯಾವ ವಿಷಯದ ವಿವಾದಗಳು ಬಂದರೂ ಆ ಸಭೆಯಲ್ಲಿ ಆಯಾ ಸಂಬಂಧದಲ್ಲಿ ಬಲ್ಲವರಿಂದ ಶಾಸ್ತ್ರ ವಿಚಾರವು ಮಾಡಲ್ಪಟ್ಟು ರಾಜನಿಗೆ ಆಯಾ ವಿಷಯಗಳ ಪೂರ್ಣ ಮನನವಾದ ಮೇಲೆ ತೀರ್ಮಾನವನ್ನು ಕೊಡುತ್ತಿದ್ದನು. ಆಗ ಧರ್ಮ ವಿಷಯದಲ್ಲಿ ಸ್ವಲ್ಪ ತಪ್ಪಿ ನಡೆದರೂ ಶಿಕ್ಷೆಯಾಗುವ ಸಂಭವವಿತ್ತು ಈಗ ನ್ಯಾಯ:ಸ್ಥಾನಗಳಲ್ಲಿ ವಕೀಲರ ಬಲದಿಂದ ತೀರ್ಮಾನವಾಗಬೇಕಾಗಿದೆ. ಅವರಾದರೂ ಏನು ಮಾಡಿಯಾರು ? ತಾವು ಓದಿದ ಹಿಂದೂ ಲಾ ಮೊದಲಾದ ಕಾನೂನ್‌ಗಳಲ್ಲಿ ಇದ್ದಂತೆ ವಾದಿಸುವವರು ಧರ್ಮ ಶಾಸ್ತ್ರದಲ್ಲಿ ಹೇಳಲ್ಪಟ್ಟ ವಿಷಯಗಳೆಲ್ಲವೂ ಲಾ ದಲ್ಲಿ ಎಲ್ಲಿವೆ ?

ಗುರುಗಳು ಮಾಡಿರುವ ಕೆಲಸಗಳನ್ನು ನೋಡುವದಾದರೆ ಶ್ರೀ ಶಂಕರಾಚಾರ್ಯರು ಅದ್ವೈತ ತತ್ವವನ್ನೇ ಮುಖ್ಯವೆಂದು ಹಿಂದುಸ್ಥಾನದಲ್ಲೆಲ್ಲಾ ಬೋಧಿಸಿದರು. ಮಧ್ವಾಚಾರ್ಯರು ದ್ವೈತ ತತ್ವವನ್ನು ಪ್ರಕಟಿಸಿದರು. ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ತತ್ವವೇ ಶ್ರೇಷ್ಠವೆಂದು ಜಗತ್ತಿಗೆ ತೋರಿಸಿದರು. ಹೀಗೆ ತೋರಿಸುವಾಗ ಬ

ಹು ಜನರ ಒಪ್ಪಿಗೆಯೂ ಕೆಲವುವುಟ್ಟಿಗೆ ರಾಜರ ಬೆಂಬಲವೂ ಇರುತ್ತಿದ್ದುದರಿಂದ ಒಂದೊಂದು ತತ್ವವು ಒಂದೊಂದು ಕಾಲದಲ್ಲಿ ಒಂದೊಂದು ಭಾಗದಲ್ಲಿ ಪ್ರಾಮುಖ್ಯವೆನಿಸಿಕೊಂಡು ಬಾಳಿದವು. ಆದರೆ ಏನು! ಇಡೀ ಹಿಂದುಸ್ಥಾನದ ಧರ್ಮಗಳನ್ನೆಲ್ಲಾ ತೃಪ್ತಿಪಡಿಸುವಂತಹ ಹವ್ಯಾಸಕ್ಕೆ ಯಾರೊಬ್ಬರೂ ಬೀಳಲಿಲ್ಲ. ಪ್ರತಿಯೊಬ್ಬರೂ ತಮ್ಮ ಮಾರ್ಗವನ್ನೇ ಅನುಸರಿಸಬೇಕು ಎಂಬುದಕ್ಕೆ ಅನೇಕ ಪ್ರಯತ್ನಗಳನ್ನು ನಡೆಸಿರುತ್ತಾರೆ.

ಬಸವೇಶ್ವರನಾದರೂ ಶಿವಾದ್ವೈತವನ್ನು ಸಾರಿ ಲೋಕಪ್ರಿಯನೆನಿಸಿಕೊಂಡರೂ ಹಿಂದೂ ಧರ್ಮದ ದೃಷ್ಟಿಯಿಂದ ಅವನು ಹಿಂದೂ ಧರ್ಮದ ಅಂಗವನ್ನು ಬೋಧಿಸಿದನಾದನೇ ಹೊರತು ಇಡೀ ಹಿಂದೂ ಧರ್ಮದ ಪ್ರೀತಿಕಾರಕನಾಗಿ ಪರಿಣಮಿಸಲಿಲ್ಲ. ಹೇಗೆಂದರೆ--

ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣ ಕರ್ಮ ವಿಭಾಗಶಃ

ತಾತ್ಪರ್ಯ. ಜನರಲ್ಲಿ ಇರುವ ಗುಣ ಮತ್ತು ಕೆಲಸಗಳ ವಿಭಾಗದಿಂದ ನಾಲ್ಕು ವರ್ಣಗಳನ್ನು ನಾನು ಸೃಷ್ಟಿಸಿದೆನು.

ಹೀಗೆ ಶ್ರೀ ಕೃಷ್ಣನು ಹೇಳಿರುವಾಗ 'ಬ್ರಾಹ್ಮಣ ಮೊದಲಾಗಿ ಹೊಲೆಯ ಕಡೆಯಾದ ಭವಿಗಳನೆಲ್ಲಾ ಒಂದೆಂಬೆ' ಎಂಬ ಬಸವೇಶ್ವರನ ವಚನವು ಆ ಧರ್ಮಾನುಯಾಯಿಗಳಿಗೆ ಕಠೋರವಾಗಿ ತೋರಬಹುದಲ್ಲವೇ!

ಧಾರ್ಮಿಕ ವಿಷಯವು ಅವರವರ ಪ್ರೀತಿಗೆ ಅನುಸಾರವಾಗಿರುವುದು. ಅದು ಮನುಷ್ಯನ ಕಣ್ಣಿಗೆ ತೋರುವಂಥಾದ್ದಲ್ಲ. ಇಂಥಾದ್ದರಲ್ಲಿ ಇತರರ ಧರ್ಮವನ್ನು ಜರಿದು ತನ್ನದೇ ಶ್ರೇಷ್ಠವೆಂದು ಒತ್ತಿಹೇಳುವದಕ್ಕಿಂತಲೂ ಪ್ರತಿಯೊಂದರ ಗುಣದ ಪರಿಣಾಮವನ್ನು ತಿಳಿಯಹೇಳಿ ಅವರವರ ಪ್ರೀತಿ ಬಂದಂತೆ ನಡೆಯಲು ಅವಕಾಶ ಕೊಡುವದು ಉತ್ತಮವಲ್ಲವೇ।

ಹೀಗೆ ಶಂಕರಾಚಾರ್ಯರೇ ಮೊದಲಾದವರು ಬೋಧಿಸಿದ ವಿಷಯಗಳು ಹಿಂದೂ ಧರ್ಮದ ಅಂಗಗಳೇ ಆಗಿದ್ದರೂ ಹಿಂದೂ ಧರ್ಮದ ಇಡೀ ದೇಹವನ್ನು ಕುರಿತು ಯೋಚಿಸುವುದು ಕಡಿಮೆಯಾದ್ದರಿಂದ ಇವರ ಅನುಯಾಯಿಗಳಲ್ಲಿ ನಮ್ಮ ಮತ ಹೆಚ್ಚು ತಮ್ಮ ಮತ

ಹೆಚ್ಚು ಎಂಬ ನಂಬುಗೆಯು ಬೆಳೆದು ತಮ್ಮ ತಮ್ಮ ಧರ್ಮವನ್ನಷ್ಟೇ ಪ್ರಾಮುಖ್ಯವಾಗಿ ನೋಡಿಕೊಳ್ಳುತ್ತಾ ಬಂದದ್ದರಿಂದ ಇತರರ ವಿಷಯವಲ್ಲಿ ಗಮನವು ಕಡಿಮೆಯಾಗಿ ಪರಸ್ಪರ ದ್ವೇಷಾಸೂಯೆಗಳಿಗೆ ಮತ್ತು ನಿಂದೆಗಳಿಗೆ ಕಾರಣವಾಗುತ್ತಾ ಬಂದಿತು. ಬಸವೇಶ್ವರನ ಕಡೆಯ ಕಾಲದ ಸ್ಥಿತಿಯನ್ನು ಕೇಳಿದವರಿಗೆ ಈ ವಿಷಯವು ಚನ್ನಾಗಿ ವ್ಯಕ್ತ ಪಡುತ್ತದೆ. ಮತ್ತು ವರ್ಣಗಳು ಕುಲ ಧರ್ಮಗಳು ಕೆಲಸದ ಅನುಸಾರವಾಗಿ ಬಂದವೆಂದು ಯೋಚಿಸದೆ ಒಬ್ಬರು ಮತ್ತೊಬ್ಬರನ್ನು ಉದಾಸೀನ ಭಾವದಿಂದ ಕಾಣುವುದೂ ಅಸೂಯೆಗೆ ಕಾರಣವೆಂದೇ ತಿಳಿಯಬೇಕಾಗಿದೆ. ಆತಿವರ್ಣದ ಗಮನವಿಲ್ಲದಿರುವುದೂ ಕೂಡಾ ಹಿಂದೂ ಧರ್ಮದ ಶ್ರೇಷ್ಠ ಸ್ಥಿತಿಯನ್ನೇ ಮುಚ್ಚಿರುವದು. ಈಗಲೂ ಇವೇ ಬೇರೂರಿಕೊಂಡು ಹಿಂದೂ ದೇಶದಲ್ಲೆಲ್ಲ ಧಾರ್ಮಿಕದ ಅನೈಕಮತ್ಯತೆಯು ನೆಲೆಗೊಂಡಿರಲಿಕ್ಕೆ ಕಾರಣವಾಗಿವೆ.

ಹೀಗಾಗದೆ ಧರ್ಮದ ನಿಜಸ್ಥಿತಿಯು ಹೀಗೆ ಇದೆ ಇಂಥಿಂಥಾ ಸ್ಥಿತಿಯಲ್ಲಿ ಇಂಥಾ ಫಲಗಳುಂಟು ಎಂಬುದನ್ನು ಶಾಸ್ತ್ರ ದೃಷ್ಟಿಯಿಂದ ತೋರಿಸಿ ಪ್ರೀತಿಕಾರಕವಾಗಿ ಮಾಡಿದ್ದರೆ ತಮ್ಮ ಪ್ರೀತಿ ಬಂದ ಸ್ಥಿತಿಯಲ್ಲಿಯೇ ಜನರು ತಮತಮಗೆ ತಕ್ಕ ಯೋಗ್ಯತೆಯನ್ನು ಪಡೆದಿರುತ್ತಿದ್ದರು. ಇಲ್ಲವೇ ಎಲ್ಲರೂ ಉಚ್ಚ ತರಗತಿಯಲ್ಲಿಯೇ ಇದ್ದು ದ್ವೇಷಾಸೂಯೆಗಳಿಲ್ಲದೆ ಇರಬಹುದಾಗಿದ್ದಿತು.

ಇದಲ್ಲದೆ ಮೊಗಲಾಯರ ರಾಜ್ಯಭಾರವು ಏರ್ಪಟ್ಟಂದಿನಿಂದೀಚೆಗೆ ಪ್ರಬಲ ಬೋಧಕರು ಹಿಂದೂ ಧರ್ಮದಲ್ಲಿ ಉದಯಿಸಲಿಲ್ಲವೆಂದು ತೋರುತ್ತದೆ. ಶಿವಾಜಿಮಹಾರಾಜನುದಿಸಿದರೂ ಮಹಮ್ಮದೀಯರ ಪ್ರಾಬಲ್ಯವನ್ನು ಕಡಿಮೆ ಮಾಡುವುದಕ್ಕಾಗಿ ಅವನ ಕಾಲವು ವಿನಿಯೋಗವಾಯಿತೇ ಹೊರತು ಹಿಂದೂ ದೇಶದಲ್ಲೆಲ್ಲಾ ಧರ್ಮ ಸುಧಾರಣೆಗಾಗಿ ಪ್ರಬಲ ಪ್ರಯತ್ನವನ್ನೇನೂ ಮಾಡಿದಂತೆ ತೋರಲಿಲ್ಲ ಅವನಿಗೆ ಅದು ಸಾಧ್ಯವೂ ಇರಲಿಲ್ಲ.

ಕೆಲವರು ಮಹಮ್ಮದೀಯ ಹಾವಳಿಕಾರರಿಂದ ಮತ್ತು ರಾಜರಿಂದ ಹಿಂದೂ ದೇವಾಲಯಗಳು ನಾಶವಾಗಿ ಹಿಂದೂ ಧರ್ಮದವರು ಕಾಫರರೆನಿಸಿಕೊಂಡು ಜಜಿಯಾ ಮೊದಲಾದ ತೆರಿಗೆಗಳನ್ನು ಕೊ

ಟ್ಟು ತಮ್ಮನ್ನು ಸುಮ್ಮನೆ ಇರಗೊಟ್ಟರೆ ಸಾಕು ಎಂಬ ಯೋಚಿಸು ವಂತಹ ಕಾಲದಲ್ಲಿ ಸುಧಾರಣೆ ಎಲ್ಲಿಯದು !

ಇವೆಲ್ಲ ಕಾರಣಗಳಿಂದ ಹಿಂದೂ ಧರ್ಮದವರು ತಮ್ಮ ನಿಜಸ್ಥಿತಿಯನ್ನು ತಾವು ತಿಳಿದುಕೊಳ್ಳಲಿಕ್ಕೆ ಅವಕಾಶವಿಲ್ಲದೆ ತಮ್ಮ ಧರ್ಮವೇನೆಂಬುದನ್ನು ಶಾಸ್ತ್ರದಲ್ಲಿರುವದನ್ನು ಕಣ್ಣೆತ್ತಿ ನೋಡುವದಕ್ಕೂ ಅನುಕೂಲವಿಲ್ಲದೆ ತಮ್ಮ ಪೂರ್ವಿಕರು ಹೇಗೆ ನಡೆದರೋ ನಾವೂ ಹಾಗೆಯೇ ನಡೆಯೋಣ ಎಂಬ ಭಾವನೆಯಲ್ಲಿ ಬಿದ್ದು ನಡೆದರೇ ಹೊರತು ತಮ್ಮ ಧಾರ್ಮಿಕ ಸ್ಥಿತಿಯ ಸುಧಾರಣೆಗಾಗಿ ಪ್ರಯತ್ನಿಸಲಿಲ್ಲ.

ಮಹಮ್ಮದೀಯರೂ ಚನ್ನಾಗಿರಲಿ ಬೌದ್ಧರೂ ಚನ್ನಾಗಿರಲಿ ಬ್ರಾಹ್ಮಣರೂ ಚನ್ನಾಗಿರಲಿ ಕ್ಷತ್ರಿಯರೂ ಚನ್ನಾಗಿರಲಿ ಲಿಂಗವಂತರೂ ಚನ್ನಾಗಿರಲಿ ಪ್ರತಿಯೊಬ್ಬರೂ ಚನ್ನಾಗಿರಲಿ ಎಂಬ ಉದಾರ ಭಾವದಿಂದ ಪ್ರತಿಯೊಬ್ಬರ ಧರ್ಮಗಳನ್ನು ವಿವರಿಸಿ ತೋರಿಸಿದಂಥಾ-ಇದು ಇಲ್ಲದೆ ಇದ್ದರೆ ಹೋಗಲಿ - ಸಕಲ ಧರ್ಮದವರೂ ತಮ್ಮ ಧರ್ಮವನ್ನು ಯಥಾರೀತಿಯಾಗಿ ನಡೆಸಲಿ ಎಂದು ಹೇಳಿದಂಥಾ ಚಕ್ರವರ್ತಿಯನ್ನು ವಿಕ್ಟೋರಿಯಾ ಮಹಾರಾಣಿಯವರ ಆಜ್ಞಾ ಪತ್ರಿಕೆ ( Proclamation ) ಹೊರಡುವವರೆವಿಗೂ ಕಾಣುವದೇ ಅಪರೂಪವಾಗಿತ್ತು. ಅಕಬರನೊಬ್ಬನು ಇದಕ್ಕೆ ವಿನಹಾಯತಿಯವನಾದರೂ ಇವನ ರಾಜ್ಯದ ಆಕಾಂಕ್ಷೆಯ ದೆಸೆಯಿಂದ ಹಿಂದೂಗಳಿಗೆ ಶ್ರಮವಿಲ್ಲದೆ ಇರಲಿಲ್ಲ. ಧರ್ಮದ ಸುಧಾರಣೆಗಾಗಿ ಕೆಲವು ಪ್ರಯತ್ನವನ್ನು ಇವನು ಮಾಡಿದನಾದರೂ ಅದು ಐಕಮತ್ಯದ ಫಲಕಾರಿಯಾಗಿ ಪರಿಣಮಿಸಲಿಲ್ಲ. ಹೀಗಾಗಿ ಅನೇಕ ಶತಮಾನಗಳ ಕಾಲ ತಮ್ಮ ಧರ್ಮ ಸುಧಾರಣೆಗಾಗಿ ಅನುಕೂಲವಿಲ್ಲದೆ ಇದ್ದುದರ ದೆಸೆಯಿಂದ ಹಿಂದೂ ಧರ್ಮವು ಇನ್ನೂ ಅನೇಕ ಪಂಗಡಗಳಾಗಿ ಒಡೆಯಲಿಕ್ಕೆ ಕಾರಣವಾಯಿತು.

ಇಂಗ್ಲೆಂಡಿನ ರಾಜರ ಚಕ್ರವರ್ತಿತ್ವವು ಹಿಂದೂ ದೇಶದಲ್ಲಿ ನೆಲೆಗೊಂಡಂದಿನಿಂದ ಹಿಂದೂಗಳಿಗೆ ಧರ್ಮ ಸ್ವಾತಂತ್ರ್ಯಕ್ಕೆ ಬೇಕಾದಷ್ಟು ಅವಕಾಶವು ಸಿಕ್ಕಿತೆಂಬುದು ನಿರ್ವಿವಾದವಾದ ವಿಷಯವಾಗಿದೆ. ಆಜ್ಞಾಪತ್ರಿಕೆ ( Proclamation ) ಯ ಕಾಲದಿಂದ ರಾಜರು ಧಾ

ರ್ಮಿಕ ವಿಷಯದಲ್ಲಿ ಕೈ ಹಾಕದೆ ಅದನ್ನು ಪೂರ್ಣವಾಗಿ ಜನರ ಸ್ವಾತಂತ್ರ್ಯಕ್ಕೆ ಬಿಟ್ಟರು. ಆದ್ದರಿಂದ ಇದು ಧರ್ಮ ಸ್ವಾತಂತ್ರ್ಯದ ಕಾಲವೆಂಬುದು ನಿಜ. ಆದರೆ ಈ ಸ್ವಾತಂತ್ರ್ಯದ ಕಾಲದಲ್ಲಿ ಹಿಂದೂಗಳು ತಮ್ಮ ಧಾರ್ಮಿಕ ಸುಧಾರಣೆಯನ್ನು ಬಹಳವಾಗಿ ಮಾಡಿಕೊಳ್ಳಬಹುದಾಗಿದ್ದಿತು. ಇಡೀ ಹಿಂದುಸ್ಥಾನದ ಹಿಂದೂ ಧಾರ್ಮಿಕ ಮಹಾ ಸಭೆಯನ್ನೇ ಸೇರಿಸಬಹುದಾಗಿದ್ದಿತು. ತಮ್ಮ ಧಾರ್ಮಿಕ ಸಂಬಂಧದಲ್ಲಿ ಅನೇಕ ವಿಷಯಗಳನ್ನು ಪರಿಷ್ಕರಿಸಿ ಪುಸ್ತಕಗಳನ್ನು ಬರೆಸಿ ಇಡಬಹುದಾಗಿದ್ದಿತು. ಧರ್ಮ ಸುಧಾರಣೆಗಾಗಿ ಧರ್ಮೋನ್ನತಿಗಾಗಿ ತಮ್ಮ ಅತ್ಯಂತ ಶ್ರೇಷ್ಠವಾದ ಪ್ರಯತ್ನಗಳನ್ನು ಮಾಡಬಹುದಾಗಿದ್ದಿತು.

ಮಹಮ್ಮದೀಯರು ಬಂದು ದೊಡ್ಡದೊಂದು ಪರಿಘವನ್ನು ತೆಗೆದುಕೊಂಡು ದೇವಾಲಯದ ಮೂರ್ತಿಗಳನ್ನು ಒಡೆಯುತ್ತಿದ್ದಾಗ ಕುಯ್ಯೋ ಮೊರ್ರೋ ನಮ್ಮ ಧರ್ಮವು ಹಾಳಾಯಿತು, ರಕ್ಷಕರಿಲ್ಲವೇ ಎಂದು ಗೋಳಾಡುತ್ತಿದ್ದ ಹಿಂದೂಗಳು ಶಾಂತಕಾಲವು ಬಂದಾಗ ಅದರ ರಕ್ಷಣೆಯ ಯೋಚನೆಯನ್ನೇ ಬಿಟ್ಟರು. ಸಂಕಟ ಬಂದಾಗ ಮಹಾದೇವನನ್ನು ನೆನೆಯುವರೆಂಬ ಲೋಕದ ಮಾತನ್ನು ಸಾರ್ಥಕಪಡಿಸಿಕೊಂಡಂತಾಗಿದೆ.

ಒಂದೊಂದು ಪಂಗಡದವರೇ ಸಭೆಗಳನ್ನು ಮಾಡಿಕೊಂಡು ಉದ್ಧಾರ ಮಾಡಿಕೊಂಡರೆಂದು ಹೇಳುವದಾದರೆ ಅದು ಸ್ವಲ್ಪಮಟ್ಟಿಗಾಗಿರುವದೆಂದು ತಿಳಿಯ ಬಂದರೂ ತಮ್ಮ ತಮ್ಮ ಮೇಲ್ಮೈಗೆ ಆಲೋಚನೆಯೇ ಹೊರತು ಇಡೀ ಹಿಂದುಸ್ಥಾನವನ್ನು ಧಾರ್ಮಿಕ ಸ್ಥಿತಿಯಲ್ಲಿ ಒಂದುಗೂಡಿಸುವ ಕೆಲಸವನ್ನು ಯಾರೂ ಮಾಡಿಲ್ಲ. ಆರ್ಯ ಸಮಾಜ ಬ್ರಹ್ಮ ಸಮಾಜ ಮೊದಲಾದವು ಕೆಲವು ತತ್ವಗಳನ್ನಾಯ್ದುಕೊಂಡು ಏಕೀಕರಣ ಮಾಡಿದರೆಂದು ಯೋಚಿಸಿದರೆ ಅದಾದರೂ ಎಷ್ಟುಮಟ್ಟಿಗೆ ಫಲದಾಯಕವಾಗಿದೆ ? ಇಡೀ ಹಿಂದೂ ಧರ್ಮವೇ ಐಕಮತ್ಯಕ್ಕೆ ಯಥೇಚ್ಛವಾದ ಅವಕಾಶವನ್ನು ಕೊಟ್ಟಿರುವಲ್ಲಿ ಅದನ್ನು ಮೂಲೆಗೊತ್ತಿ ಬೇರೊಂದು ಮಾರ್ಗವನ್ನು ಏರ್ಪಡಿಸಲಿಕ್ಕೆ ಹೋಗಿರುವದು ಸೂರ್ಯನೆದುರಿಗೆ ದೀಪವನ್ನು ಹಚ್ಚಿದಂತೆಯೇ ಸರಿ.

ಹೀಗೆ ಧರ್ಮ ಸುಧಾರಣೆ ಮಾಡುವದನ್ನು ಬಿಟ್ಟು ಈಗಿನವರು

ನಡೆಸುವ ಧರ್ಮಸ್ವಾತಂತ್ರ್ಯವು ಮಹಾದೇವನ ಲಕ್ಷ್ಯವನ್ನೇ ಮಾಡಿದೆ ಒಂದೇ ಸಲಕ್ಕೆ ಮನುಷ್ಯ ಜಾತಿಯನ್ನು ಒತ್ತಟ್ಟಿಗೆ ಮಾಡುವ ಕಡೆಗೆ ಸಾಗಿರುತ್ತದೆ. ಇದು ಪೂರ್ವದವರ ಧರ್ಮಕ್ಕೆ ಕಳಂಕವಲ್ಲವೇ !

ಆದುದಾಯಿತು. ಇನ್ನಾದರೂ ಹಿಂದೂ ಧಾರ್ಮಿಕ ಮಹಾ ಸಭೆಯನ್ನು ಕರೆದು ಎಲ್ಲಾ ಹಿಂದೂಗಳನ್ನು ಧಾರ್ಮಿಕ ಸ್ಥಿತಿಯಲ್ಲಿ ಐಕಮತ್ಯ ಮಾಡುವ ಕೆಲಸಗಳನ್ನು ಕೈಗೊಂಡದ್ದಾದರೆ ಹಿಂದೂ ದೇಶಕ್ಕೆ ಇದರಿಂದ ದೊಡ್ಡ ಲಾಭವಾಗುತ್ತದೆ. ಇದಿಲ್ಲದೆ ಹೋದರೆ ಹಿಂದೂಗಳು ಮಾಡುವ ರಾಜಕೀಯ, ಆರ್ಥಿಕ, ಔನ್ನತಿಕ, ಮೊದಲಾದ ಕಾರ್ಯಗಳೆಲ್ಲವೂ ಪೂರ್ಣ ಫಲದಾಯಕಗಳಾಗುವದಿಲ್ಲ.

ಈ ಉದ್ದೇಶದಿಂದ ಈ ಲೇಖನವನ್ನು ಬರೆಯಲಾರಂಭಿಸಿದ ೩ ತಿಂಗಳೊಳಗಾಗಿ ಸರ್ವ ಧರ್ಮ ಸಮ್ಮೇಳನವನ್ನು ಮಾಡಬೇಕೆಂದು ಬೆಂಗಳೂರಿನ ಮಹಮ್ಮದೀಯರಿಗೆ ಮಹಾದೇವನು ಪ್ರೇರಿಸಿದನು. ಆದರೆ ಅದರ ಫಲಿತಾಂಶವು ತಿಳಿಯಲಿಲ್ಲ. ಈಚೆಗೆ ಅಮೇರಿಕಾದಲ್ಲಿ ಸರ್ವ ಧರ್ಮ ಸಮ್ಮೇಳನವನ್ನು ಸೇರಿಸುವದಕ್ಕೆ ಮಹಾದೇವನ ಪ್ರೇರಣೆಯಾಗಿರುವುದಾಗಿ ತಿಳಿಯುತ್ತದೆ. ಹೀಗೆ ನಡೆಯುವದನ್ನಾದರೂ ನೋಡಿ ಹಿಂದೂಗಳು ಜಗತ್ತನ್ನೆಲ್ಲಾ ಆಕರ್ಷಿಸುವ ತಮ್ಮ ಧರ್ಮವನ್ನು ಸುಧಾರಿಸಿಕೊಂಡು ಸರ್ವ ಧರ್ಮಗಳಲ್ಲಿ ಇದರ ನಿಜ ಸ್ಥಿತಿಯನ್ನು ತೋರಿಸದೆ ಬಿಟ್ಟರೆ ಕಾಲಾನುಕಾಲದಲ್ಲಿ ಹಿಂದೂ ದೇಶವು ಹಿಂದೂ ಜನರಿಗೆ ಎಂಬ ನಿಜಾರ್ಥಕ್ಕೆ ಭಂಗವೇ ಬರಬಹುದು. ಇದರಲ್ಲಿ ಸನಾತನ ಧರ್ಮಿಯರೂ ಅಸ್ಪೃಶ್ಯೋದ್ಧಾರಕರೂ ಯೋಚನೆ ಮಾಡತಕ್ಕ ಅಂಶಗಳು ಇರುವದರಿಂದ ಅವರೂ ತಕ್ಕ ಯೋಜನೆಯನ್ನು ಮಾಡುವವರಾಗಲಿ.

ಸರ್ವರಿಗೂ ಮಂಗಳವಾಗಲಿ.



# ಈಗಿನ ಸಮಾಚಾರಗಳು.

## —ಬರೆದು ಬಂದುದು—

( ಸುದ್ದಿಗಾರರ ಪತ್ರಗಳಿಗೆ ಪ್ರಕಾಶಕರು ಉತ್ತರವಾದಿಗಳಲ್ಲ. )

## ಅಥಣಿಯಲ್ಲಿ ನಡೆದ ಬಸವಜಯಂತಿಯ ಉತ್ಸವ.

ವರ್ಷದ ಪದ್ಧತಿಯಂತೆ ಇಲ್ಲಿಯ ಶ್ರೀ ಮುರುಘಸಿದ್ಧಶಿವಯೋಗಿಗಳ ಸೆಟ್ಟರಮಠ ಅಥಣಿ ಇದರಲ್ಲಿಯ ಶ್ರೀ ಬಸವಜಯಂತಿಯ ಉತ್ಸವವನ್ನು ಒಳ್ಳೇವಿಜೃಂಭಣೆಯಿಂದ ಜರುಗಿಸಿದರು ತಾ ॥೨೪-೪-೩೩ ರಿಂದ ತಾ॥ ೨೮-೪-೩೩. ಐದು ದಿವಸಗಳ ವರಿಗೆ ಪ್ರತಿನಿತ್ಯ ಮುಂಜಾನೆ ೬ ಘಂಟೆಕ್ಕೆ ಶ್ರೀ ಬಸವೇಶ್ವರ ಧ್ವಜದವಂದನೆ ವ ಶ್ರೀ ಮುರುಘಸಿದ್ಧ ಶಿವಯೋಗಿಯ ವ ಶ್ರೀ ಬಸವೇಶ್ವರನ ರುದ್ರಾಭಿಷೇಕ ವ ಗಣಾರಾಧನೆ ವ ಸಂಜೆಗೆ ಭಜನಾ ವ ಬಸವೇಶ್ವರ ವಚನ ಪಠಣ ಈ ಪ್ರಕಾರ ನೇಮದಿಂದ ಸಾಗಿದವು.

ತಾ॥ ೨೮-೪-೩೩ ಶುಕ್ರವಾರ ಮುಂಜಾನೆ ೭ ರಿಂದ ೮ ವರಿಗೆ ಸಾಯಕಲ್ ರೇಸು ಸಂಬಂಧ ಬಕ್ಷಿಸ ಕೊಡುವದರಲ್ಲಿ ಬಂದಿತು. ಮಧ್ಯಾನ್ಹ ೩ ಘಂಟೆಯಿಂದ ೫ ಘಂಟೆಯ ವರೆಗೆ ಹೆಣ್ಣುಮಕ್ಕಳು ಶ್ರೀ ಬಸವೇಶ್ವರನ ನಾಮಕರಣವನ್ನು ಮಾಡಿದನಂತರ ಶ್ರೀ ಬಸವನ ಮಾಹಾತ್ಮ್ಯದ ವಿಷಯಕ್ಕೆ ಮೂರು ನಾಲ್ಕು ಮಂದಿ ಸ್ತ್ರೀಯರು ಭಾಷಣ ಮಾಡಿದರು. ಮತ್ತೊಂದು ಮಹತ್ವದ ಸಂಗತಿಬೇಕೆಂದರೆ ಸ್ತ್ರೀ ಸಮಾಜದಲ್ಲಿ ಕಲಾ ಕೌಶಲ್ಯವು ಬೆಳೆಯಬೇಕೆಂಬ ಉದ್ದೇಶದಿಂದ ೩ ನೇ ಕಲಾಕೌಶಲ್ಯ ವಸ್ತು ಪ್ರದರ್ಶನವು ನೇರವೇರಿಸಲ್ಪಟ್ಟಿತು. ಊರಲ್ಲಿನ ಸ್ತ್ರೀಯರು ತಯಾರಿಸಿದ ಕಸೂತಿ ವ ಹೆಣಿಕೆಯ ಪಾವಡ ವ ಹೆಣಿಕೆಯ ಫೋಟೋ ಮುಂತಾದವುಗಳುಪ್ರದರ್ಶನದಲ್ಲಿ ಕೂಡಿದ್ದವು, ಈ ಪ್ರದರ್ಶನದಲ್ಲಿ ತಂದು ಕೊಟ್ಟ ಯಾವತ್ತೂ ಜನರಿಗೆ ಮೊದಲು ಎರಡು ನಂಬರಿನವರಿಗೆ ಭಂಗಾರದ ಪದಕ ಮೂರನೆ ನಂಬರಿನ ವರಿಗೆ ಬೆಳ್ಳಿಯ ಪದಕ ಈ ಪ್ರಕಾರ ಬಕ್ಷೀಸ ಕೊಡಲ್ಪಟ್ಟಿತು. ಮುಂದೆ ಸಂಜೆಯ ೬ ಘಂಟೆಯಿಂದಾ ರಾತ್ರಿ ೧೧ ಘಂ

ಟಿಯವರೆಗೆ ಶ್ರೀ ಬಸವೇಶ್ವರ ಫೋಟೋ ಶೃಂಗರಿಸಿದ ಪಲ್ಲಕ್ಕಿಯಲ್ಲಿಯೂ ಶ್ರೀಮನ್ ನಿರಂಜನ ನಿರಾಭಾರಿ ದೇಶಿಕವರೇಣ್ಯರವರ ಮಹಾಸ್ವಾಮಿಗಳವರ ಫೋಟೋ ಶೃಂಗರಿಸಿದ ರಥದಲ್ಲಿಯೂ ಇಟ್ಟು ಬ್ಯಾಂಡ್ ತಾಸೆ ಹಲಿಗೆ ಕರಡಿ ಮಜಲು ಮುಂತಾದ ವಾದ್ಯಗಳೊಂದಿಗೆ ಮೆರೆವಣಿಗೆಯು ಊರಲ್ಲಿನ ಮುಖ್ಯ ಮುಖ್ಯ ಬೀದಿಗಳಲ್ಲಿ ಹಾಯಿದು ಮರಳಿ ೧೧ಘಂಟೆಗೆ ತಲ್ಪಿತು. ಸದರಿ ಮೆರವಣಿಗೆಗೆ ಸುಮಾರುಐದು ನೂರು ಜನರು ಕೂಡಿದ್ದರು. ಮೆರವಣಿಗೆಯ ಮುಂಭಾಗದಲ್ಲಿ ಹೂವಿನಹಾರ ಗುಲಾಲ ಮುಂತಾದವುಗಳಿಂದ ಅಲಂಕರಿಸಲ್ಪಟ್ಟಂಥ ವ ಮಠದಲ್ಲಿ ಪೂಜಿಸಲ್ಪಟ್ಟಂಥ ಅರವತ್ತು ಎಪ್ಪತ್ತು ಹೋರಿ ಮುಂತಾದ ಬಸವಣ್ಣಗಳು ಮೆರೆಯಿಸಲ್ಪಟ್ಟದ್ದರಿಂದ ಸದರಿ ಮೆರವಣಿಗೆಗೆ ಹೆಚ್ಚಾದ ಶೋಭೆ ಉಂಟಾಯಿತು.

ತಾ॥ ೨೯-೪-೩೩ ದಿವಸ ಮಧ್ಯಾನ್ಹ ಮೂರು ಘಂಟೆ ಸುಮಾರಕ್ಕೆ ಮೂರು ರಾಟೆಗಳನ್ನು ತರಿಸಿ ಕೆಲವು ಸ್ತ್ರೀಯರಿಂದ ನೂಲು ತೆಗೆಸುವದರಲ್ಲಿ ಬಂದಿತು. ಅವರಲ್ಲಿ ಉತ್ತಮ ನೂಲು ತಯಾರಿಸಿದವರಿಗೆ ಬಕ್ಷೀಸು ಕೊಡಲ್ಪಟ್ಟವು ಆದೇ ಕಾಲಕ್ಕೆ ಮೇಲೆಹೇಳಿದ ಕಲಾಕೌಶಲ್ಯದ ಪ್ರದರ್ಶನದ ಬಕ್ಷೀಸುಗಳು ವ ಸಾಯಕಲ್ ರೇಸಿನ ಬಕ್ಷೀಸುಗಳು ಸಹ ಕೊಡಲ್ಪಟ್ಟವು.

ಈ ಪ್ರಕಾರ ಶ್ರೀ ಬಸವೇಶ್ವರ ಜಯಂತಿಯು ಉತ್ಸವವುಒಳ್ಳೇ ಉತ್ಸುಕತೆಯಿಂದಲೂ ವಿಜೃಂಭಣೆಯಿಂದಲೂ ನೇರವೇರಿಸಲ್ಪಟ್ಟಿತು ಎಂಬದನ್ನು ಶ್ರೀ ಭಜನಾ ಸಂಘದವರ ಪರಿಯಿಂದ ತಿಳಿಸಲಿಕ್ಕೆ ನನಗೆ ಬಹಳೇ ಆನಂದವಾಗುತ್ತದೆ.

ಶ್ರೀ ಮುರುಘುಸಿದ್ಧ ಶಿವಯೋಗಿಯವರ ಭಜನಾ ಸಂಘದ ಸೆಕ್ರೆಟರಿ
ವೀರಪ್ಪಾ ಶಿವಬಸಪ್ಪಾ ಕೋಟಿ, ಅಥಣಿ.

———

# ಮಹಾಸಭೆಗಾಗಿ ಕೆಲವು ಸೂಚನೆಗಳು

ಧಾರವಾಡದಲ್ಲಿ ಮಹಾಸಭೆಯು ಮೇ ೧೮-೧೯ ರಲ್ಲಿ ಕೂಡಲು ಏರ್ಪಡಾಗಿರುವದು ಸರಿಯಷ್ಟೆ. ಈರೀತಿ ಕೂಡಿಸಲು ಬಹಳ ದಿನಗಳಿಂದ ಏರ್ಪಾಡು ನಡೆಯುತ್ತಿದ್ದಾಗ್ಯೂ ಇಂಥಾ ತಾರೀಖಿಗೆ ಕೂಡಿಸುತ್ತೇವೆಂದು ಗೊತ್ತುಮಾಡಿ ೧—೧॥ ತಿಂಗಳು ಮಾತ್ರ ಆಗಿದೆ ಹೀಗೆ ಗೊತ್ತುಮಾಡಿ ೧—೧॥ ತಿಂಗಳಲ್ಲಿ ಹಿಂದೆ ಯಾವ ಮಹಾಸಭೆಗಳೂ ಕೂಡಿಸಲ್ಪಟ್ಟಂತೆ ತೋರುವುದಿಲ್ಲ. ಇದರ ಕಾರ್ಯಕಲಾಪಗಳು ಹಳ್ಳಿಯವರು ಸರಕಾರದ ಅಧಿಕಾರಿಗಳು ಶ್ರೀಮಂತರು ಮೊದಲಾದವರೆಲ್ಲರಿಗೂ ತಿಳಿದು ಅವರು ಇದಕ್ಕೆ ಸಿದ್ಧರಾಗಿ ಬರುವ ಅನುಕೂಲತೆಗಳನ್ನು ಇಷ್ಟುಬೇಗನೆ ಮಾಡಿಕೊಳ್ಳುವರೇ ಎಂಬುದನ್ನು ಈವರ್ಷ ನಿರೀಕ್ಷಿಸ ಬೇಕಾಗಿರುವದು.

ಇದೂವರೆವಿಗೆ ಅನೇಕ ಮಹಾ ಸಭೆಗಳಾದರೂ ವೀರಶೈವರಲ್ಲಿ ಐಕಮತ್ಯವು ಉಂಟಾಗದೆ ಅನೈಕ್ಯವು ಬೆಳೆಯುತ್ತಾ ಇರುವದು ಶೋಚನೀಯವಾದ ಸಂಗತಿಯಾಗಿದೆ. ಈಗ ಮುಖಂಡರಿಗೆ ಬಾಯಿಮಾತಿನಲ್ಲಿಹೇಳಿ ಸರಿಪಡಿಸಲಿಕ್ಕೆ ಆಗದೆಇದ್ದರೆ ವಿವಾದಕ್ಕೆ ಆಸ್ಪದವಾಗಿ ಇರುವ ವೀರಶೈವ ಧರ್ಮದ ಮುಖ್ಯತತ್ವಗಳು ಯಾವರೀತಿ ಇರುವವೆಂಬದನ್ನು ಮಹಾಸಭೆಯವರು ನಿರ್ಣಯಿಸಿ ಪ್ರಕಟಿಸಿದಲ್ಲಿ ಸಮಾಜದಲ್ಲಿ ಒಂದೇವಿಧವಾದ ಭಾವನೆಯುಂಟಾಗಲು ಸಹಕಾರಿಯಾಗುವದು. ಇದಕ್ಕಾಗಿ ಪಕ್ಷಪಾತವಿಲ್ಲದವರು ಕೂಡಿರುವ ಒಂದುಸಂಘವು ಏರ್ಪಡಿಸಲ್ಪಟ್ಟುಅವರಾದರೂ ಈಕೆಲಸವನ್ನು ಮಾಡುವದು ಒಳ್ಳೆಯದು.

ಮಹಾ ಸಭೆಯಲ್ಲಿ ಆದ ಅನೇಕ ತೀರ್ಮಾನಗಳು ಸಮಾಜದಲ್ಲಿ ಪ್ರಚಾರದಲ್ಲಿ ಬಂದಿಲ್ಲ ಸಭೆಯ ನಿರ್ಣಯಗಳು ಜಾರಿಗೆ ಬರುವದಕ್ಕೆ ತಕ್ಕ ಯೋಜನೆಯನ್ನು ಈಸಲ ವಿಶೇಷವಾಗಿ ನಡೆಸುವರೆಂದು ನಂಬುತ್ತೇನೆ.

ಶಿಕ್ಷಣ ಪ್ರಸಾರಕ ಸಂಘದವರು ಬಸವೇಶ್ವರನ ಕಾಲದಲ್ಲಿ ಏರ್ಪಡಾದಂತೆ ಶಿವಾನುಭಾವ ಮಂಟಪವನ್ನು ಏರ್ಪಡಿಸುವದು ವೀರಶೈವರ ಎಲ್ಲಾಶಾಲೆಗಳಲ್ಲಿಯೂ ಎಲ್ಲಾ ವಿದ್ಯಾರ್ಥಿ ವಸತಿಗಳಲ್ಲಿಯೂ ಕೆಲವು ಹೊತ್ತು ಪ್ರಮಥರ ವಚನಗಳ ಓದುವಿಕೆಯು ನಡೆಯುವಂತೆ

ಏರ್ಪಡಿಸುವದು, ಇವುಗಳಕಡೆಗೆ ತಮ್ಮಗಮನವನ್ನು ಕೊಡಬೇಕಾದ್ದು ಯುಕ್ತವೆಂದು ತೋರುತ್ತದೆ-

ಪರಿಷತ್ತನ್ನು ರಚಿಸಬೇಕಾದರೆ ವೇದಗಳನ್ನೋದಿದವರು, ಷಡ್ ದರ್ಶನಗಳನ್ನೋದಿದವರು, ಧರ್ಮತತ್ವವನ್ನು ಚನ್ನಾಗಿತಿಳಿದವರು ಇಂಥವರು ಹತ್ತುಮಂದಿ ಅಥವಾ ಕಡೆಯಪಕ್ಷ ಮೂರು ಮಂದಿಯಾದರೂ ಇರುವಂತೆ ಆಗಬೇಕೆಂದೂ ಇಲ್ಲದಿದ್ದರೆ ಅಂಥಃಪರಿಷತ್ತಿನಿಂದ ಪ್ರಯೋಜನವಿಲ್ಲವೆಂದೂ ಮನುಸ್ಮೃತಿಯು ಹೇಳುತ್ತದೆ.

ತರುಣ ಪರಿಷತ್ತಿನವರು ತಮ್ಮ ಲೌಕಿಕ ವಿಚಾರಗಳಲ್ಲಿ ಬಲ್ಲವರನ್ನು ಸೇರಿಸಿಕೊಂಡು ಆ ವಿಚಾರಗಳಲ್ಲಿ ತಮ್ಮ ಉನ್ನತಿಯನ್ನು ಸಾಧಿಸಿಕೊಳ್ಳ ಬಹುದಾದಾಗ್ಯೂ ಧಾರ್ಮಿಕ ವಿಚಾರದಲ್ಲಿ ಮಾತ್ರಬಲ್ಲವರ ಸಲಹೆಯನ್ನು ತೆಗದುಕೊಳ್ಳದೆ ನಿರ್ಣಯ ಮಾಡಲಾರರೆಂದು ನಂಬುತ್ತೇನೆ. ಮತ್ತು ತರುಣರ ಪರಿಷತ್ತು ಪ್ರತಿವರ್ಷವೂ ತಪ್ಪದೆ ನಡೆಯುವದಕ್ಕೆ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಳ್ಳುವವರಾಗಲಿ.

ಮಹಿಳಾ ಪರಿಷತ್ತಿನವರು ಧರ್ಮಸಂಬಂಧದ ಚಿಕ್ಕ ಚಿಕ್ಕ ಗ್ರಂಥಗಳನ್ನು ತಿಳಿಗನ್ನಡದಲ್ಲಿ ಬರೆಯಿಸಿ ಅವುಗಳನ್ನು ಮಹಿಳೆಯರು ಓದುವ ಅಥವಾ ಓದಿಸಿ ತಿಳಿದುಕೊಳ್ಳುವ ಅಭ್ಯಾಸವನ್ನು ಇಟ್ಟುಕೊಳ್ಳುವಂತೆ ಏರ್ಪಡಿಸುವದು ಒಳ್ಳೆಯದು.

ವೀರಶೈವರಲ್ಲಿ ಮುದ್ರಣವಾಗದೆ ಕೈಬರಹದ ಪ್ರತಿಯಲ್ಲಿಯೇ ಉಳಿದಿರುವ ಗ್ರಂಥಗಳಸಂಖ್ಯೆ ಬಹಳವಾಗಿರುವದರಿಂದ ಮಹಾಸಭೆಯ ಅಂಗವಾಗಿರುವ ಪ್ರತಿಯೊಬ್ಬರೂ ಇವುಗಳ ಉದ್ಧಾರದ ಕಡೆಗೆ ವಿಶೇಷ ಗಮನಕೊಡಬೇಕಾಗಿದೆ. ಹಿರಿಯರ ಅಥವಾಪೂಜ್ಯರ ಒಂದುಬಟ್ಟೆ ಅಥವಾ ಒಂದು ಸಾಮಾನು ಇದ್ದರೆ ಅದನ್ನು ಪೂಜ್ಯಬುದ್ಧಿಯಿಂದ ಕಾದಿಡುವ ನಮ್ಮವರು ಅವರು ರಚಿಸಿದ ಗ್ರಂಥಗಳನ್ನು ಅಲಕ್ಷ್ಯ ಮಾಡಿರುವದು ನೋಡಿದರೆ ಬಹಳ ನಾಚಿಕೆಯಾಗುತ್ತದೆ. ಪಾಶ್ಚಾತ್ಯರೂ ಕೂಡಾ ವಾಚನಾಲಯಗಳು ಪುಸ್ತಕಭಂಡಾರಗಳು ಇವುಗಳಿಗೆ ತಮ್ಮದ್ರವ್ಯವನ್ನು ಸೂರೆಮಾಡುವದನ್ನು ನೋಡಿಯಾದರೂ ನಮ್ಮವರು ತಮ್ಮ ಪೂರ್ವಿಕರನ್ನು ಅನುಕರಿಸಿ ಅವರು ಬರೆದಗ್ರಂಥಗಳನ್ನು ಒಬ್ಬೊಬ್ಬ ಧನಿಕರು ಅಥವಾ ಮಂದಿಗಳು ಒಂದೊಂದನ್ನು ಮುದ್ರಿಸಲು ಸಹಾಯಕರಾಗಬಾರದೇ?

# ಮಹನೀಯರಲ್ಲಿ ಪ್ರಕಾಶಕನ ವಿಜ್ಞಾಪನೆಗಳು.



ದೈವ ಕೃಪೆಯಿಂದ ಇಲ್ಲಿಗೆ ೧೨ ಸಂಚಿಕೆಗಳು ಮುಗಿದವು. ಇದೂ ವರೆವಿಗೆ ಹಣ ಕೊಟ್ಟವರ ಋಣವು ತೀರಿದಂತಾಯಿತು. ಹೋದ ಕಾರ್ತಿಕ ಮಾಸದಿಂದ ಕಳುಹಿಸಲು ಪ್ರಾರಂಭವಾದುದು ಈ ಜ್ಯೇಷ್ಠ ಮಾಸಕ್ಕೆ ಮುಗಿಯಿತು. ಆರಂಭಿಸಿದ ಗ್ರಂಥಗಳೆಲ್ಲವೂ ಮುಗಿದಿರುತ್ತವೆ. ಆದರೆ ಒಂದೆರಡು ಗ್ರಂಥದ ಮುನ್ನುಡಿ ಮೊದಲಾದವು ಮುಗಿದಿಲ್ಲ. ಈ ಗ್ರಂಥಗಳಿಗೆ ಇಟ್ಟಿರುವ ಬೆಲೆಯ ಮೇಲೆ ಲೆಖ್ಖ ಮಾಡಿದರೆ ಮಾಸ ಪತ್ರಿಕೆಯನ್ನು ತರಿಸುವವರಿಗೆ ಕಡಿಮೆ ಬೆಲೆಗೆ ಗ್ರಂಥಗಳು ದೊರಕಿದಂತಾಗಿರುವದಲ್ಲದೆ ಪುಸ್ತಕಗಳಲ್ಲದ ಇತರ ವಿಷಯಗಳ ಓದುವಿಕೆಗೂ ಅವಕಾಶವಾದಂತಾಗಿದೆ.

ಪೂರ್ವಿಕರ ಗ್ರಂಥಗಳಲ್ಲದೆ ಈಗಿನವರು ಧರ್ಮ ವಿಷಯವನ್ನೊಳಗೊಂಡು ಬರೆದ ಗ್ರಂಥಗಳಿಗೆ ಅಥವಾ ಲೇಖನಗಳಿಗೆ ಈ ಪತ್ರಿಕೆಯಲ್ಲಿ ಅವಕಾಶ ಸಿಕ್ಕುವುದು, ಎಂದು ಮೊದಲ ಸಂಚಿಕೆಯಲ್ಲಿ ವಿಜ್ಞಾಪಿಸಿಕೊಂಡಿದ್ದ ಮೇರೆಗೆ ಮ. ರಾ. ಶೀಲವಂತರ ಗದಿಗಪ್ಪನವರು ಹಾವೇರಿ, ಇವರು ಬರೆದ ಸತೀಹಿತ ಬೋಧೆ ಎಂಬ ಗ್ರಂಥಕ್ಕೆ ಈ ಆಂಗೀರಸ ಸಂವತ್ಸರದ ಸಂಚಿಕೆಗಳಲ್ಲಿಯೇ ಅವಕಾಶವನ್ನು ಕೊಟ್ಟಿರುತ್ತದೆ. ಈ ಮಾಸ ಪತ್ರದ ದೆಸೆಯಿಂದಾದ ವೆಚ್ಚದ ಹಣವು ಇದರ ಉತ್ಪತ್ತಿಗಿಂತ ಹೆಚ್ಚಾಗಿದೆ ಎಂದು ಕಳೆದ ಸಂಚಿಕೆಯಲ್ಲಿಯೇ ವಿಜ್ಞಾಪನೆ ಮಾಡಿಕೊಂಡಿದ್ದೇನೆ. ಮುಂದಾದರೂ ಈ ಪತ್ರಿಕೆಯನ್ನು ಕಾಪಾಡಿಕೊಂಡು ಹೋಗುವುದು ಸಮಾಜದವರ ದಯೆಗೆ ಸೇರಿದುದೇ ಆಗಿದೆ. ಸಮಾಜದ ದಯೆ.ಯೇ ಈಶ್ವರನ ದಯೆ. ಸಮಾಜ ಸೇವೆಯೇ ಈಶ್ವರ ಸೇವೆ.

ಪ್ರಕಾಶಕ

# ವೀರಶೈವ ಮಹಾ ಸಭೆಯ ವಿಚಾರಗಳು.



ಬೆಂಗಳೂರಿನಲ್ಲಿ ಮಹಾ ಸಭೆಯಾದಂದಿನಿಂದೀಚೆಗೆ ೪ ವರ್ಷಗಳಿಂದ ನಿಂತಿದ್ದು ಈ ವರ್ಷ ಮಹಾ ಸಭೆಯು ಧಾರವಾಡದಲ್ಲಿ ಆದದ್ದು ಸಂತೋಷಕರವಾದ ಕೆಲಸವು. ಶಿಕ್ಷಣ ಸಭಾ, ತರುಣರ ಪರಿಷತ್ತು, ಮಹಿಳಾ ಸಭಾ, ಪ್ರದರ್ಶನ, ಮುಂತಾದ ಕೆಲಸಗಳು ಈ ಮಹಾ ಸಭೆಯ ಅಂಗವಾಗಿ ನಡೆವಂತೆ ಏರ್ಪಡಿಸಿದುದು ಹೊಸ ಮಾದರಿಯನ್ನು ತೋರಿಸಿಕೊಟ್ಟಂತಾಗಿದೆ. ಆದರೆ ಈ ವರ್ಷದ ಮಹಾ ಸಭೆಯಲ್ಲಿ ಕೆಲವು ಕಾರ್ಯಗಳಲ್ಲಿ ಸಭಿಕರು ಗೊಂದಲವನ್ನೆಬ್ಬಿಸಿದುದು ವಿಷಾದಕರವಾದ ಸಂಗತಿಯು. ಸಮಾಜ ಬಾಂಧವರು ಮುಂದಾಳುಗಳ ಅಭಿಪ್ರಾಯವು ಏನಿರುವದು ಎಂಬುದನ್ನು ತಿಳಿದುಕೊಳ್ಳುವದಕ್ಕೆ ಅವಕಾಶ ಕೊಟ್ಟು ತಮ್ಮ ಅಭಿಪ್ರಾಯವನ್ನು ಸಮ್ಮತಿ ಕೇಳುವಂತೆ ಮಾಡಿ ಅವರಲ್ಲಿ ಹೆಚ್ಚಿನ ಸಮ್ಮತಿಗಳನ್ನು ತೋರಿಸಿ ನಿರ್ಧರಗಳನ್ನು ಮಾಡಿಸುವದು ಸೌಮ್ಯವಾದ ಉಪಾಯವು. ಇಷ್ಟು ನಿಧಾನವನ್ನು ತಾಳದಿದ್ದರೆ ಮಹಾ ಸಭೆಯಂಥಾ ದೊಡ್ಡ ಕಾರ್ಯಗಳು ಹೇಗೆ ನಡೆಯಬೇಕು ?

ಮಹಾ ಸಭೆಗೆ ಹೋಗಿ ಬರುವ ಖರ್ಚು ಕೂಡಿ ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳು ಸಮಾಜದಿಂದ ಖರ್ಚಾಗಿರಬಹುದು. ಇಷ್ಟ ನೊಬಲಗೂ ಅಂದ ಛಂಡಕ್ಕಾಗಿ ಖರ್ಚಾಗದೆ ಯೋಗ್ಯವಾದ ರೀತಿಯಲ್ಲಿ ಖರ್ಚಾಯಿತೆಂದು ಗೊತ್ತು ಮಾಡುವದು ಒಳ್ಳೆಯದಲ್ಲವೇ ?

ಈ ಮಹಾ ಸಭೆಗಾಗಿ ಆದ ಜಮಾ ಖರ್ಚು ಈ ವರೆವಿಗೂ ಪ್ರಕಟವಾಗಲಿಲ್ಲ. ಮಹಾ ಸಭೆಯ ಚಿರಸ್ಥಾಯಿ ಫಂಡ್ ಸಂಘದವರೂ ತಮ್ಮ ವಾರ್ಷಿಕ ಲೆಖ್ಖವನ್ನು ಪ್ರಕಟಿಸುತ್ತಿರುವದಿಲ್ಲ. ಮಹಾ ಸಭೆಯವರ ಉತ್ಪತ್ತಿ ಎಷ್ಟು? ಯಾವ ಯಾವ ಉದ್ದೇಶಕ್ಕಾಗಿ ಎಷ್ಟೆಷ್ಟು ಖರ್ಚು ಮಾಡುವರು? ಎಂಬುದು ತಿಳಿದೇ ಇಲ್ಲ. ಇದನ್ನು ಸಮಾಜದವರಿಗೆ ತಿಳಿಯುವಂತೆ ಮಾಡುವದರಿಂದ ಸಮಾಜದವರ ಅಭಿಮಾನವು ಹೆಚ್ಚಾಗುತ್ತದೆ.

ಇದರಲ್ಲಿ ನಡೆದ ಠರಾವುಗಳ ವಿಷಯದಲ್ಲಿ ಅಭಿಪ್ರಾಯ ತಿಳಿಸಲು ಇನ್ನು ಮುಂದೆ ಅವಕಾಶವು ಕೊಡಲ್ಪಡುವುದು.

# ಸ್ತ್ರೀಹಿತ ಬೋಧೆ.



## ಸತಿಗೆ ಪಾತಿವ್ರತ್ಯವೇ ಭೂಷಣಂ

### ಗೌರವ್ವನು ಸುಶೀಲೆಗೆ ಹೇಳುತ್ತಾಳೆ.

### ಗಂಡನ ಸಂಗಡ ಹೆಂಡತಿಯು ನಡೆದುಕೊಳ್ಳುವ ರೀತಿ.

ತಂಗೀ ಸುಶೀಲೆ, ನೀನು ಚನ್ನಾಗಿ ವಿದ್ಯಾ ಬುದ್ಧಿಯನ್ನು ಕಲಿತಿರುವಿ, ಆದರೆ ಇನ್ನುಮೇಲೆ ನೀನು ನಿನ್ನ ಪತಿಯ ಗೃಹದಲ್ಲಿ ಹೇಗೆ ನಡೆಯಬೇಕೆಂಬದನ್ನು ವಿವರಿಸಿ ಹೇಳುತ್ತೇನೆ. ಲಕ್ಷ್ಯವಿಟ್ಟು ಕೇಳು. ಸ್ತ್ರೀಯರು ಬಾಲ್ಯದಲ್ಲಿ ತಾಯಿತಂದೆಗಳ ಆಜ್ಞೆಯಂತೆಯೂ ತಾರುಣ್ಯಾವಸ್ಥೆಯಲ್ಲಿ ಪತಿಯ ಆಜ್ಞೆಯಂತೆಯೂ ಮತ್ತು ವೃದ್ಧಾಪ್ಯ ಕಾಲದಲ್ಲಿ ಮಕ್ಕಳ ಆಜ್ಞೆಯಂತೆಯೂ ಇರಬೇಕೆಂಬದನ್ನು ನೀನು ಓದಿರಬಹುದು. ಆದರೂ ನಿನಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳುತ್ತೇನೆ ಕೇಳು.

ತಂಗೀ, ನೀನು ನಿನ್ನ ಗಂಡನ ಮನೆಗೆ ಹೋದ ಮೇಲೆ ಅವನ ನಡತೆಯು ಯಾವರೀತಿ ಇರುವದೆಂಬುದನ್ನು ಗೊತ್ತು ಮಾಡಿಕೋ. ಒಬ್ಬರು ಸಿಟ್ಟಿನ ಸ್ವಭಾವದವರು ಇರುತ್ತಾರೆ ಒಬ್ಬರು ತಮ್ಮ ಹೆಂಡಂದಿರ ಮೇಲೆ ಅಂತರಂಗದಲ್ಲಿ ಎಷ್ಟು ಪ್ರೇಮವುಳ್ಳವರಾದರೂ ಹೆಂಡತಿಯರು ಏನಾದರೂ ದುಷ್ಟ ಶಬ್ದವನ್ನು ಮಾತಾಡಿದಕೂಡಲೇ ಆ ಪ್ರೀತಿಯನ್ನೇ ಕಡಿಮೆಮಾಡಿಬಿಡುತ್ತಾರೆ. ಒಬ್ಬರು ಶಾಂತರಿರುತ್ತಾರೆ. ಇನ್ನೂ ಅನೇಕ ಬಗೆಯುವರು ಇರುತ್ತಾರೆ. ಆದ್ದರಿಂದ ನಿನ್ನ ಗಂಡನ ಮನಸ್ಸು ಹೇಗೆ ಇರುವದೋ ಅದನ್ನು ತಿಳಿದುಕೊಂಡು ಆತನ ಮನಸ್ಸಿನ ಅಭಿಪ್ರಾಯಕ್ಕೆ ವಿರೋಧವು ಬಾರದಂತೆ ನೀನು ವರ್ತಿಸು. ಒಂದುವೇಳೆ ಪತಿಯ ಆಲೋಚನೆಗಳು ಯುಕ್ತವಲ್ಲವೆಂದು ನಿನಗೆ ತೋರಿದರೆ ಆತನು, ಒಬ್ಬನೇ ಶಾಂತರೀತಿಯಿಂದ ಇದ್ದಾಗ ನಿನ್ನ ಮನಸ್ಸಿನ ಅಭಿಪ್ರಾಯವನ್ನು ಆತನಲ್ಲಿ ಹೇಳು. ಕಡೆಯಲ್ಲಿ ಆತನ ಅಭಿಪ್ರಾಯದಂತೆಯೇ ನಡೆ. ಇದೇ ಪತಿವ್ರತೆ ಎನಿಸುವ ಮಾರ್ಗವು.

ನಿನ್ನ ಮುಖವು ಯಾವಾಗಲೂ ನಿನ್ನ ಪತಿಯ ಮುಂದೆ ಪ್ರಫುಲ್ಲಿತವಾಗಿ ( ನಗುಮುಖವಾಗಿ ) ಇರಲಿ. ಗಂಟು ಮೋರೆಯನ್ನು ನೀನು ಎಂದಿಗೂ ಹಾಕಬೇಡ. ಈಗಿನ ಸ್ತ್ರೀಯರು ತಮ್ಮ ಗಂಡಂದಿರು ತಮ್ಮ ಮಾತುಗಳನ್ನು ಕೇಳಿದರೆ ಮಾತ್ರ ಕುಲುಕುಲು ನಗುತ್ತ ಕುಣಿದಾಡುವರು ಇಲ್ಲದಿದ್ದರೆ ಈಗ ಬಣ್ಣ ಕೊಡಿಸಿದ ದುರಗವ್ವನ ಮೂರ್ತಿಯ ಮೋರೆಯಂತೆ ಅವರ ಮೋರೆಯು ಯಾವಾಗಲೂ ಉರಿಯುತ್ತಿರುತ್ತದೆ ಇದು ಉತ್ತಮವಲ್ಲ. ಆದ್ದರಿಂದ ನೀನು ಯಾವಾಗಲೂ ನಿನ್ನ ಪತಿಯ ಮನಸ್ಸನ್ನು ಸಂತೋಷಗೊಳಿಸುತ್ತಲೂ ಅವನ ಮುಂದೆ ನೀನು ಒಳ್ಳೆಯ ವಿನಯದಿಂದಲೂ ಭಯಭಕ್ತಿಯಿಂದಲೂ ನಡೆದುಕೋ. ಮತ್ತು ನಿನ್ನ ಗಂಡನು ನೀನು ಮಾಡಿದ ತಪ್ಪಿಗಾಗಿ ಏನಾದರೂ ಎಂದರೆ ಅಥವಾ ಶಿಕ್ಷಿಸಿದರೆ ನೀನು ಮಾತ್ರ ಗಂಟು ಮೋರೆಯನ್ನು ಹಾಕಿ ಪ್ರತ್ಯುತ್ತರವನ್ನು ಎಂದಿಗೂ ಕೊಡಬೇಡ. ಆದರಿಂದ ನಿನ್ನ ಬಾಳ್ವೆಯೇ ಕೆಟ್ಟುಹೋಗುವ ಸಂದರ್ಭವೂ ಬರಬಹುದು. ಇದನ್ನು ಚನ್ನಾಗಿ ನೆನಪಿನಲ್ಲಿಟ್ಟುಕೋ.

ತಂಗೀ, ಈಗಿನ ಕೆಲವರು ಸ್ತ್ರೀಯರಿಗೆ ಯಾರಾದರೂ ಗಂಡಹೆಂಡರು ಸುಸೂತ್ರವಾಗಿ ಬಾಳ್ವೆಯನ್ನು ಮಾಡಿಕೊಂಡು ಒಳ್ಳೇ ಪ್ರೇಮದಿಂದ ಇದ್ದರೆ ಸಹನವಾಗುವದಿಲ್ಲ. ಆದ್ದರಿಂದ ಗಂಡನ ವಿಷಯವಾಗಿ ಹೆಂಡತಿಯಲ್ಲಿ, ಹೆಂಡತಿಯ ವಿಷಯವಾಗಿ ಗಂಡನಲ್ಲಿ ಏನಾದರೂ ಚಾಡಿಯನ್ನು ಚುಚ್ಚುವರು. ಹೀಗೆ ಮಾಡುವವರ ಮಾತಿಗೆ ಗಮನ ಕೊಡುವದರಿಂದ ನಿನ್ನ ಮನಸ್ಸು ಕೆಡಬಹುದು. ಅಂಥಾ ಚಾಡಿಕೋರರಾದ ದುಷ್ಟ ಸ್ತ್ರೀಯರ ನೆರಳು ಸಹಿತ ನೀನು ನೋಡಬೇಡ.

ಇನ್ನು ಕೆಲವರು ನಿನಗೆ ಹೇಳಬಹುದು. ' ಏನೇ, ನೀನು ಒಳ್ಳೇ ದಿಟ್ಟೆಯು. ಗಂಡನ ಕೂಡ ನಗುವದೂ ಅವನ ಕೂಡ ಒಳ್ಳೆಯ ಸಲಿಗೆಯಿಂದ ಮಾತಾಡುವದೂ ಅವನು ಹೇಳಿದಂತೆ ಕುಣಿಯುವದೂ ನಮಗೆ ಸೇರುವದಿಲ್ಲ ಬಿಡು. ನಾವು ಗಂಡನ ಮನೆಗೆ ಬಂದಾಗ್ಯೆ ಊಟಕ್ಕೆ ಸಹಾ ನೀಡುತ್ತಿದ್ದಿಲ್ಲ. ಅವರು ಎಷ್ಟು ಮಾತಾಡಿಸಿದರೂ ನಾವು ಗಂಟು ಮೋರೆಯನ್ನೇ ಕಟ್ಟಿಕೊಂಡು ಇರುತ್ತಿದ್ದೆವು, ' ಎಂದು ಹೇಳುವ ಮೂಢ ಪದ್ಧತಿಯವರ ಮಾತುಗಳನ್ನು ನೀನು ಎಂದೂ ಕೇಳಬೇಡ. ಅಂಥವರನ್ನು ನೀನು ಎಂದೂ ನಿನ್ನ ಮನೆಗೆ ಬರಗೊಡದಿರು. ನಿನ್ನ ಗಂ

ಡನು ಹೊರಗೆ ಹೋದ ಹೊತ್ತಿನಲ್ಲಿ ನಿನಗೆ ಬೋಧಿಸಬೇಕೆಂದು ಇಂಥವರು ಹೊಂಚು ಹಾಕಿಕೊಂಡು ಕುಳಿತಿರುತ್ತಾರೆ. ಆದ್ದರಿಂದ ಬಹು ಎಚ್ಚರಿಕೆ!

ನೀನು ಒಬ್ಬರ ಮನೆಗೆ ಹರಟೆಯನ್ನು ಕೊಚ್ಚಲಿಕ್ಕೆ ಎಂದೂ ಹೋಗಬೇಡ. ನಿನ್ನ ಗಂಡನು ಹೊರಗೆ ಹೋದ ಹೊತ್ತಿನಲ್ಲಿ ನೀನು ಕಸೂತಿಯನ್ನು ಹಾಕುವದು ನೂಲು ತೆಗೆಯುವದು ಮುಂತಾದ ಉಪಯೋಗಕರವಾದ ಕೆಲಸಗಳನ್ನು ಮಾಡು. ಇಲ್ಲದಿದ್ದರೆ ಪುರಾಣ ಪುಣ್ಯ ಕಥೆಗಳನ್ನೂ ಭಕ್ತಿ ಮತ್ತು ನೀತಿವಂತರಾದ ಸ್ತ್ರೀಯರ ಕಥೆಗಳನ್ನೂ ಓದುತ್ತ ಹೊತ್ತುಗಳೆ.

ನಿನ್ನ ಗಂಡನು ಹೊರಗಿನಿಂದ ದುಡಿದು ಬಂದ ಕೂಡಲೇ ನೀನು ಗಂಟು ಮೋರೆಯನ್ನು ಹಾಕಿಕೊಂಡು ನನಗೆ ಅಂಥಾ ಒಡವೆಯನ್ನು ಮಾಡಿಸಲಿಲ್ಲ, ಇಂಥಾ ಸೀರೆಯನ್ನು ತರಲಿಲ್ಲ, ಮೊನ್ನೆ ಇಟ್ಟುಕೊಳ್ಳಲಿಕ್ಕೆ ನತ್ತು ಮಾಡಿಸಿದಿರಿ ಮುತ್ತುಗಳು ರಾಗಿಯ ಕಾಳಿನಷ್ಟು ಅವೆ. ನೆರೆಮನೆಯ ಲಿಂಗವ್ವನ ಗಂಡನು ಮಾಡಿಸಿದ ನತ್ತಿನ ಮುತ್ತು ನೆನೆದ ಕಡಲೆಯ ಕಾಳಾಗಿವೆ. ನಾವು ದೇವರಲ್ಲಿ ಬೇಡಿ ಬಂದಿರುವದೇ ಇಲ್ಲ ಅದಕ್ಕೆ ನೀವೇನು ಮಾಡುವಿರಿ. ನಮ್ಮ ಹಣೆಯ ಬರಹವೇ ಇಷ್ಟು. ಎಂದು ಒಂದಲ್ಲ ಎರಡಲ್ಲ ಅನೇಕ ತರಹದ ತಾಪಗಳನ್ನು ಗಂಡನ ಮುಂದೆ ಹೇಳಲಿಕ್ಕೆ ಹತ್ತುವದರಿಂದ ಅವನು 'ದೇವರೇ ನನಗೆ ಸ್ಮಶಾನಕ್ಕಿಂತ ಈ ಜಗತ್ತಿನಲ್ಲಿ ಯಾವುದೂ ಸುಖವು ತೋರುವದಿಲ್ಲ, ಎಂದು ಮಹಾದೇವನಿಗೆ ಮೊರೆ ಇಡಬಹುದು. ಮತ್ತು ಇಂಥಾ ಕೆಟ್ಟ ಹೆಂಡತಿಯರ ಸಲುವಾಗಿ ಅನೇಕ ಗಂಡಸರು ಏನಾದರೂ ಅಪಾಯವನ್ನು ಮಾಡಿಕೊಂಡು ಪ್ರಾಣವನ್ನು ಕಳೆದುಕೊಂಡ ಉದಾಹರಣೆಗಳು ಅನೇಕ ಉಂಟು. ಆದ್ದರಿಂದ ನಿನ್ನ ಗಂಡನು ಎಂಥಾ ಸಣ್ಣ ತರಗತಿಯ ಸೀರೆಯನ್ನು ತಂದರೂ ಎಂಥಾ ಕುಪ್ಪಸವನ್ನು ತಂದರೂ ನೀನು ಅದನ್ನು ಒಳ್ಳೆಯ ಸಂತೋಷದಿಂದಲೂ ಪ್ರೇಮದಿಂದಲೂ ಉಟ್ಟುಕೋ. ನೀನು ಹಟವನ್ನು ಎಂದಿಗೂ ಮಾಡಬೇಡ.

ಈಗಿನ ಕೆಲವು ಹೆಂಗಸರು ತಮ್ಮ ಗಂಡನು ಊರಿಗೆ ಹೋಗುವದರ ದಾರಿಯನ್ನೇ ನೋಡುತ್ತಿರುತ್ತಾರೆ. ಅವನು ಹೋದ ಕೂಡಲೇ

ಇವರ ಚಲ್ಲಾಟಕ್ಕೆ ನೆಲೆಯೇ ಇಲ್ಲದಂತಾಗುತ್ತದೆ! ಮನೆಯ ಬಾಗಿಲನ್ನು ಹಾಕಿ ತಮ್ಮ ಗೆಳತಿಯರ ಮನೆಗೆ ಬಂದು " ಏನೇ ಗಂಗವ್ವಾ ನೋಡು ನಮ್ಮ ಹಿರಿಯನು ಊರಿಗೆ ಹೋಗಿರುತ್ತಾನೆ. ನನ್ನ ವಿಶ್ರಾಂತಿಗೆ ನೆಲೆಯೇ ಇಲ್ಲ. ಏನು ಮಾಡಿದರೂ ಬೈಯುವದು ಮಾಡದಿದ್ದರೂ ಬೈಯುವದು ಅವನ ದೆಸೆಯಿಂದ ಸಾಕಾಗಿ ಹೋಗಿರುತ್ತದೆ. ಅವನು ಹೋದಾಗಿನಿಂದ ನನಗೆ ಬೊಟ್ಟು ಮಾಂಸ ಖಂಡವು ಏರಿದಂತಾಗಿದೆ " ಎಂದು ಹೇಳುತ್ತಿರುತ್ತಾರೆ. ಗಂಡನಿಗೆ ಬಹುವಚನವನ್ನು ತಮ್ಮ ಗೆಳತಿಯರ ಮುಂದೆ ಇವರು ಎಂದೂ ಆಡುವದಿಲ್ಲ. ಗಂಡನ ಅಭಿಮಾನವು ಇವರಿಗೆ ಎಳ್ಳಷ್ಟಾದರೂ ಇರುವದಿಲ್ಲ. ಇಂಥ ಹೆಂಗಸರ ಬಾಳ್ವೆಯು ನಾಯಿಗಿಂತಲೂ ಕಡೆ ಎಂದು ತಿಳಿದು ನೀನು ಎಚ್ಚರಿಕೆಯಿಂದ ಬಾಳ್ವೆಯನ್ನು ಮಾಡು.

ಸ್ತ್ರೀಯರು ತಮ್ಮ ಗಂಡಂದಿರಲ್ಲಿ ನಡೆದುಕೊಳ್ಳುವ ರೀತಿಯನ್ನು ನೀತಿ ಶಾಸ್ತ್ರವು ಹೀಗೆ ಹೇಳುತ್ತದೆ.

ಶ್ಲೋಕ ಭೋಜ್ಯೇಷುಮಾತಾ ಕರಣೇಷುಮಂತ್ರೀ
; ಶಯನೇಷು ರಂಭಾ ಕಾರ್ಯೇಷುದಾಸೀ

ಇದರಲ್ಲಿ ಹೇಳಿರುವಂತೆ ನೀನು ಗಂಡನಿಗೆ ಊಟ ಮಾಡಿಸುವದರಲ್ಲಿ ಹೆತ್ತ ತಾಯಿಗಿಂತಲೂ ಹೆಚ್ಚು ಮಮತೆಯನ್ನು ಮಾಡು. ಅವನು ಊಟ ಮಾಡದ ವಿನಹ ನೀನು ಎಂದೂ ಊಟ ಮಾಡಬೇಡ ಕಂಡೆಯಾ. ಇನ್ನು ಗಂಡನ ಮನಸ್ಸಿನೊಳಗಿನ ಆಲೋಚನೆಗಳಲ್ಲಿ ನೀನು ಮಂತ್ರಿಯಂತೆ ಸಹಾಯಕಳಾಗಿ ಒಳ್ಳೆಯ ವಿನಯದಿಂದ ಅವನಿಗೆ ಕಷ್ಟ ಬರದಂತೆ ನಿನ್ನ ಆಲೋಚನೆಗಳನ್ನು ಹೇಳು ಶಯನದಲ್ಲಿ ನಿನ್ನ ಗಂಡನಿಗೆ ಪ್ರೇಮವಾಗುವಂತೆಯೂ ವಿಹಿತವಾಗುವಂತೆಯೂ ವರ್ತಿಸು. ನೀನು ನಿನ್ನ ಗಂಡನ ಸೇವಾ ಶುಶ್ರೂಷೆಯಲ್ಲಿ ದಾಸಿಯಂತೆ ನಡೆದುಕೋ ಮತ್ತು ಅವನ ಸೇವೆಯಲ್ಲಿ ಎಳ್ಳಷ್ಟಾದರೂ ಕೊರತೆಯನ್ನು ಮಾಡಬೇಡ.

ತಂಗೀ, ನಿನಗೆ ಮುಖ್ಯವಾಗಿ ಹೇಳುವದೇನಂದರೆ ' ಸತಿಗೆ ಪತಿಯೇ ದೇವನು ; ಎಂಬುದನ್ನು ಚನ್ನಾಗಿ ನೆನಪಿನಲ್ಲಿಟ್ಟುಕೋ.

ವೀರಶೈವರಲ್ಲಿ ಕೆಲವರು ಸ್ತ್ರೀಯರು ದುರ್ನಡತೆಯುಳ್ಳ ಅಯ್ಯನವರ ಪಾದ ಪೂಜೆಯಿಂದ ತಮಗೆ ಶ್ರೇಷ್ಠವಾದ ಫಲವು ಬರುತ್ತದೆ ಎಂದು ನಂಬಿ, ಅವರನ್ನೇ ಮುಖ್ಯವೆಂದು ಭಾವಿಸಿ ತಮ್ಮ ಗಂಡಂದಿರನ್ನು ತುಚ್ಛವಾಗಿ (ಕೀಳಾಗಿ) ಕಾಣುವರು. ಇದು ಒಳ್ಳೆಯದಲ್ಲ. ಇಂಥಾ ಮೂರ್ಖ ಸ್ತ್ರೀಯರ ಬಾಳ್ವೆಗೆ ಧಿಕ್ಕಾರವಿರಲಿ! ತಂಗೀ, ದುರ್ ನಡತೆಯ ಜಂಗಮರ ಪಾದೋದಕವನ್ನು ನೀನು ಎಂದೂ ತೆಗೆದುಕೊಳ್ಳಬೇಡ. ಆದರೆ ವೀರಶೈವ ಶಾಸ್ತ್ರದ ಪ್ರಕಾರ ಗುರು ಜಂಗಮರ ಪಾದೋದಕವು ಶ್ರೇಷ್ಠವಾದದ್ದೇ. ಎಂಥಾ ಗುರುಗಳ ಪಾದೋದಕವನ್ನು ತೆಗೆದುಕೊಳ್ಳಬೇಕೆಂದರೆ ಅವರು ಗೃಹಸ್ಥಾಶ್ರಮಿಗಳಾದರೆ ಏಕ ಪತ್ನೀ ವ್ರತಸ್ಥರೂ ಉಳಿದ ಆಶ್ರಮದಲ್ಲಿ ಇದ್ದರೆ ಅದಕ್ಕೆ ತಕ್ಕ ಯೋಗ್ಯ ನಡತೆಯವರೂ ಅಷ್ಟಾವರಣ ನಿರತರೂ ಷಟ್‌ಸ್ಥಲ ಸಂಪನ್ನರೂ ಸದಾಚರಣೆಯುಳ್ಳವರೂ ಇದ್ದು ಅಜ್ಞಾನಿಗಳಾದ ಭಕ್ತರಿಗೆ ಜ್ಞಾನವನ್ನು ಉಪದೇಶಿಸಿ ಮೋಕ್ಷ ಮಾರ್ಗವನ್ನು ತೋರಿಸತಕ್ಕಂಥವರಾಗಿರಬೇಕು. ಅಂಥವರ ಪಾದೋದಕವನ್ನೇ ನೀನು ತೆಗೆದುಕೊಳ್ಳಬೇಕು.

ಇನ್ನು ಜಂಗಮರು ಎಂದರೆ ವಿರಕ್ತರು. ನಿತ್ಯವೂ ಶಿವಸ್ಮರಣ, ಶಿವಭಜನೆ, ಶಿವಸ್ತೋತ್ರ, ಶಿವಪೂಜೆ, ಶಿವಾನುಭಾವ ವಚನಗಳನ್ನು ಓದುವದು, ಬಂದವರಿಗೆ ಇವುಗಳನ್ನೇ ಬೋಧಿಸುವುದು, ಇವೇ ಮೊದಲಾದ ಶಿವನ ಸಹವರ್ತಿಯಾಗಿರುವ ಲಕ್ಷಣವುಳ್ಳ ಶಿವಾನುಭಾವಿಗಳಾದ ಜಂಗಮರ ಪಾದೋದಕವನ್ನೇ ನೀನು ತೆಗೆದುಕೋ.

ಈ ಲಕ್ಷಣಗಳಿಲ್ಲದೆ ಕೇವಲ ಲೌಕಿಕದಲ್ಲಿ ಬಿದ್ದು ಹೊರಳಾಡುವ, ಮಠದ ಕಾವಲುಗಾರರಾಗಿರುವ, ಹೊನ್ನು, ಹೆಣ್ಣು, ಮಣ್ಣಿನ ಬಲೆಗೆ ಸಿಕ್ಕಿರುವ, ಧಾರ್ಮಿಕ ದೃಷ್ಟಿಯಿಲ್ಲದ, ಜನರಲ್ಲಿ ಶಿವಭಕ್ತಿಯನ್ನು ಹೆಚ್ಚಿಸುವದಕ್ಕೆ ಪ್ರಯತ್ನ ಮಾಡದೆ ಇರುವ, ಭಕ್ತರನ್ನು ಧರ್ಮದಲ್ಲಿ ಉದ್ಧರಿಸುವದಕ್ಕೆ ಪ್ರಯತ್ನಮಾಡದೆ ಇರುವ, ದುರಾಸೆಯನ್ನು ತುಂಬಿಕೊಂಡಿರುವ, ಜಂಗಮರ ಪಾದೋದಕವನ್ನು ತೆಗೆದುಕೊಳ್ಳುವದರಲ್ಲಿ ಯೋಗ್ಯವಾದ ಫಲವು ದೊರಕುವದಿಲ್ಲ. ಕೆಟ್ಟ ಜಂಗಮರನ್ನು ವೀರ

ಶೈವ ವಚನಕಾರರು ಅಲ್ಲಗಳೆದಿರುತ್ತಾರೆ. ಆದ್ದರಿಂದ ಸಿಕ್ಕಸಿಕ್ಕ ದುರಾಚಾರಿ ನಾಮಧಾರಿ ಜಂಗಮರ ಪಾದೋದಕವನ್ನು ನೀನು ಎಂದೂ ತೆಗೆದು ಕೊಳ್ಳಬೇಡ. ಇದನ್ನು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಂಡು ಇದರಂತೆಯೇ ನೀನು ವರ್ತಿಸು.

ಹಿಂದೆ ಗಂಡನಲ್ಲಿ ಭಕ್ತಿ ಇಟ್ಟಿದ್ದ ಪತಿವ್ರತೆಯಾದ ಋಷಿ ಪತ್ನಿಯ ಮಹಿಮೆಯನ್ನು ಕೇಳು. ಅತ್ರಿ ಋಷಿಯ ಪತ್ನಿಯಾದ ಅನಸೂಯಾ ದೇವಿಯ ಪಾತಿವ್ರತ್ಯವನ್ನು ಪರೀಕ್ಷಿಸುವದಕ್ಕಾಗಿ ಬ್ರಹ್ಮ ವಿಷ್ಣು ಮಹೇಶ್ವರ ಇವರು ಮೂವರೂ ಕೂಡಿ ಭೂಲೋಕಕ್ಕೆ ಬಂದು ಆಕೆಯ ಬಾಗಿಲಲ್ಲಿ ನಿಂತು, ಅಮ್ಮಾ, ನಮಗೆ ಹಸಿವೆಯಾಗಿದೆ, ಎಂದು ಕೂಗಿದರು. ಆ ಕ್ಷಣವೇ ಆಕೆಯು ಹೊರಗೆ ಬಂದು, ಒಳ್ಳೆಯ ವಿನಯದಿಂದಲೂ ಭಯಭಕ್ತಿಯಿಂದಲೂ ಕರೆದುಕೊಂಡು ಹೋಗಿ ಅವರಿಗೆ ಸ್ನಾನಾದಿಗಳನ್ನು ಮಾಡಿಸಿ ಒಳ್ಳೇ ಭಕ್ತಿಯಿಂದ ಊಟಕ್ಕೆ ಬಡಿಸುವ ಕಾಲಕ್ಕೆ ಅವರು ಅಮ್ಮಾ, ನೀವು ದಿಗಂಬರರಾಗಿ ( ಬಟ್ಟೆಯನ್ನು ಕಳೆದು ) ನಮಗೆ ಊಟಕ್ಕೆ ಬಡಿಸಿರಿ ಎಂದರು. ಹಾಗೆಯೇ ಆಗಲಿ, ಎಂದು ಆ ಪತಿವ್ರತಾಶಿರೋಮಣಿಯಾದ ಅನಸೂಯಾ ದೇವಿಯು ತನ್ನ ಗಂಡನ ಪಾದೋದಕವನ್ನು ಒಳ್ಳೆಯ ಭಕ್ತಿಯಿಂದ ತೆಗೆದುಕೊಂಡು ಆ ಮೂವರ ಮೇಲೆ ಸಿಂಪಡಿಸಲು ಆ ಬ್ರಹ್ಮ ವಿಷ್ಣು ಮಹೇಶ್ವರರು ಸಣ್ಣ ಸಣ್ಣ ಕೂಸುಗಳಾಗಿ ಅಡಹತ್ತಿದರು. ಕೂಡಲೆ ಆ ಕೂಸುಗಳನ್ನು ತೆಗೆದುಕೊಂಡು ಅವಳು ಮೊಲೆ ಕುಡಿಸಿದಳಂತೆ.

ತಂಗಿ, ಪೂರ್ವದಲ್ಲಿ ಇದ್ದ ಇಂಥಾ ಪತಿವ್ರತಾಶಿರೋಮಣಿಗಳ ಕಥೆಗಳು ಅನೇಕ ಇರುತ್ತವೆ. ಇಂಥಾ ಕಥೆಗಳನ್ನು ನಾನು ಹೇಳಹತ್ತಿದ ಕೂಡಲೇ ನನ್ನ ಕಣ್ಣುಗಳಲ್ಲಿ ಒಂದೇಸವನೆ ಆನಂದಾಶ್ರುಗಳು ಬರುವವು. ಆದ್ದರಿಂದ ಪಾತಿವ್ರತ್ಯವು ಸಾಮಾನ್ಯವಾದದ್ದಲ್ಲ. ಆದ್ದರಿಂದಲೇ ಅವರ ಕೀರ್ತಿಯು ಸೂರ್ಯ ಚಂದ್ರರು ಇರುವ ವರೆಗೆ ಉಳಿಯಿತು. ನಿನ್ನ ಪಾತಿವ್ರತ್ಯವು ಎಷ್ಟು ಬಲಿಷ್ಠವಾಗುತ್ತದೆಯೋ ಅಷ್ಟು ನಿನ್ನ ಕೀರ್ತಿಯೂ ಹಬ್ಬುತ್ತದೆ. ಆದ್ದರಿಂದ ಸತಿಗೆ ಪಾತಿವ್ರತ್ಯವೇ ಭೂಷಣವೆಂದು ಚನ್ನಾಗಿ ನೆನಪಿನಲ್ಲಿಟ್ಟುಕೋ.

ತಂಗೀ, ವೀರಶೈವರ ಹೆಣ್ಣುಮಕ್ಕಳು ತಮ್ಮ ಇಷ್ಟ ಲಿಂಗವನ್ನು

ಮರೆತು ಮಕ್ಕಳ ಸಲುವಾಗಿ ಸುಣ್ಣವನ್ನು ಹಚ್ಚಿದ ಕಲ್ಲಿಗೆ ಸಹಾ ನ ಸಗೆ ಮಕ್ಕಳನ್ನು ಕೊಡು ದೇವರೇ ಎಂದು ದೀರ್ಘದಂಡ ನಮಸ್ಕಾರವನ್ನು ಹಾಕುತ್ತಾರೆ. ಕೆಲವರು ಮರಗವ್ವ ದ್ಯಾಮವ್ವ ಚೌಡವ್ವ ಎಲ್ಲವ್ವ ಈರಣ್ಣ ಬಸವಣ್ಣ ಇದೂ ಅಲ್ಲದೆ ಮಸೀದಿ ಮುಂತಾದವುಗಳಿಗೆ ನಡೆದುಕೊಳ್ಳುತ್ತಾರೆ. ಈ ಮೂರ್ತಿಗಳಲ್ಲಿರುವ ದೇವನು ಲಿಂಗದಲ್ಲಿ ಇಲ್ಲವೇನು ? ಲಿಂಗವು ತನ್ನಲ್ಲಿ (ಭಕ್ತನಲ್ಲಿ) ಶಿವನಿದ್ದಾನೆ ಎಂದು ತೋರಿಸುವ ಮುಖ್ಯ ಗುರುತು. ಆದ್ದರಿಂದ ಲಿಂಗವನ್ನು ನಂಬಿ ನಡೆದವರಿಗೆ ಅಪರ ಅಪೇಕ್ಷೆಯು ಸಿದ್ಧಿಸುತ್ತದೆ. ಲಿಂಗಪೂಜೆಯಿಂದ ಹಿಂದೆ ಅನೇಕರು ಮಹಿಮರಾಗಿದ್ದಾರೆ. ಹೀಗೆ ಲಿಂಗದಲ್ಲಿಯೇ ಭಕ್ತಿಯಿಟ್ಟು ನಡೆದುಕೊಳ್ಳುವದಾದರೆ ಗುಡಿಗುಂಡಾರಗಳ ಮತ್ತು ಪುಣ್ಯ ಕ್ಷೇತ್ರಗಳ ದೇವರ ದರ್ಶನವು ಪ್ರಯೋಜನವಿಲ್ಲ ಎಂಬುದನ್ನು ಪೂರ್ಣ ಲಕ್ಷ್ಯದಲ್ಲಿಡು.

ತಂಗಿ, ಎಲ್ಲ ಗಂಡಂದಿರೂ ಒಳ್ಳೆಯವರೇ ಎಂದು ನಾನು ಹೇಳುವದಿಲ್ಲ. ನಿನ್ನ ಗಂಡನು ದುರಾಚಾರಿಯಾಗಿದ್ದರೆ ನೀನು ಮಾತ್ರ ಕೆಟ್ಟ ನಡತೆಯನ್ನು ಎಂದೂ ಕಲಿಯಬೇಡ. ಅದರಿಂದ ನಿನ್ನ ಬಾಳ್ವೆಯು ನಾಯಿಗಿಂತಲೂ ಕಡೆಯಾದೀತು. ಅವನು ಎಂಥಾ ಕೆಟ್ಟ ನಡತೆಯವನಿದ್ದರೂ ಅವನು ಸಂತೋಷದಿಂದ ಇರುವಾಗ ಒಳ್ಳೆಯ ವಿನಯದಿಂದಲೂ ಭಕ್ತಿಯಿಂದಲೂ ಆತನ ಕೆಟ್ಟ ನಡತೆಯನ್ನು ಬಿಡಲಿಕ್ಕೆ ಪ್ರಾರ್ಥಿಸು. ಅನೇಕ ವಿಧ ಹಿತಕರವಾದ ಉಪಾಯಗಳಿಂದ ಅಂಥಾ ಕೆಟ್ಟ ಆಚಾರವನ್ನು ಬಿಡುವಂತೆ ಮಾಡು.

ತಂಗೀ, ಪರ ಪುರುಷರನ್ನು ಅಣ್ಣ ತಮ್ಮಂದಿರೆಂದು ತಿಳಿ. ಈ ತಿಳವಳಿಕೆಯು ನಿನ್ನಲ್ಲಿ ದೃಢವಾಗಿ ಹುಟ್ಟುತ್ತ ಹೋದಂತೆ ನಿನ್ನ ಪಾತಿ ವ್ರತ್ಯಕ್ಕೆ ಕಳೆ ಬರುತ್ತದೆಂದು ತಿಳಿದುಕೋ.

ತಂಗೀ, ಈಗಿನ ಸ್ತ್ರೀಯರು ಸುಧಾರಿಸಿದ ಪದ್ಧತಿಯವರಾಗಲಿಕ್ಕೆ ಪ್ರಯತ್ನ ನಡೆಸಿರುತ್ತಾರೆ. ಹೇಗೆಂದರೆ ಗಂಡನು ನೀರು ತಂದರೆ ನಾವು ಅಡಿಗೆಯನ್ನು ಮಾಡುತ್ತೇವೆ. ಅವನೂ ನಾವೂ ಸಮಾನ ಅಧಿಕಾರಿಗಳು ನಾವೇ ಏಕೆ ದುಡಿಯಬೇಕೆಂದು ಕೇಳುವರು ! ಗಂಡಸ

ರಿಗಾಗಿ ಹೆಂಗಸರು ಮನೆಯ ಕೆಲಸಗಳನ್ನು ಮಾಡದೆ ಇದ್ದರೆ ಅವರು ಹೊರಗಿನಿಂದ ದುಡಿದು ತರುವದು ಹೇಗೆ? ಇಂಥಾ ಮೂರ್ಖ ಸ್ತ್ರೀಯರು ಜಗತ್ತಿನಲ್ಲಿ ತುಂಬಿದರೆ ಲೋಕದ ಕೆಲಸಗಳು ಹೇಗೆ ನಡೆದಾವು! ತಂಗೀ, ಅಂಥವರ ನೆರಳು ಕೂಡಾ ನಿನಗೆ ಬೀಳದಿರಲಿ.

ತಂಗೀ, ನಿನಗೆ ಒಟ್ಟಿನಲ್ಲಿ ಹೇಳುವದೇನಂದರೆ, ನಿನ್ನ ಗಂಡನೇ ದೇವನು, ಅವನೇ ಮುತ್ತು, ರತ್ನ, ಭಂಗಾರ, ಅವನೇ ನಿನ್ನ ಬಂಧು, ಅವನೇ ನಿನ್ನ ರಕ್ಷಕ, ಅವನೇ ನಿನ್ನ ಸ್ನೇಹಿತ, ಅವನೇ ನಿನ್ನ ಸರ್ವಸ್ವ, ಎಂದು ದೃಢವಾಗಿ ನಂಬಿ ಅವನಲ್ಲಿ ಭಕ್ತಿ ವಿಶ್ವಾಸವನ್ನಿಟ್ಟು ಅವನ ಪಾದ ಸೇವೆಯನ್ನು ಚನ್ನಾಗಿ ಮಾಡಿ ಅವನಿಗೆ ಸಂತೋಷವಾಗುವಂತೆ ನಡೆದುಕೊಂಡರೆ ನಿನಗೆ ಸದ್ಗತಿಯು ಆಗುವದು.

ತಂಗೀ, ನಿನಗೆ ನಾನು ಹಿಂದೆ ಹೇಳಿದಂತೆ ವೀರಶೈವರ ಹೆಣ್ಣುಮಕ್ಕಳಿಗೆ ಗುರು ಲಿಂಗ ಜಂಗಮದ ವಿನಹಾ ಬೇರೆ ದೇವರೇ ಇಲ್ಲ ಆದ್ದರಿಂದ ಇಷ್ಟಲಿಂಗವನ್ನು ಬಿಟ್ಟು ಬೇರೆ ಇರುವ ಕಲ್ಲಿನ ಮೂರ್ತಿಗಳನ್ನು ಎಂದೂ ಪೂಜೆ ಮಾಡಬಾರದು ಈಗಿನ ಕೆಲವು ಸುಶಿಕ್ಷಿತರಲ್ಲದ ಹೆಂಗಸರು ತಮ್ಮ ಚೌಕ (ಲಿಂಗದ ಕರಡಿಗೆ) ದಲ್ಲಿ ರೊಕ್ಕವನ್ನು ಹಾಕಿ ತಮ್ಮ ಇಷ್ಟ ಲಿಂಗವನ್ನು ಗಡಿಗೆಯಲ್ಲಿ ಹಾಕಿ ಓಡಾಡುವರು. ಇಂಥಾ ಮೂರ್ಖ ಹೆಂಗಸರೇ ಕಲ್ಲಿನ ಮೂರ್ತಿಗಳಿಗೆ ಮುಡುಪು ಕಟ್ಟಿ ಅವುಗಳಿಗೆ ನಡೆದುಕೊಳ್ಳುವರು. ಇಂಥವರಿಗೆ ತಮ್ಮ ಇಷ್ಟ ಲಿಂಗವು ಗೋಲಿಯುಗುಂಡಿಗಿಂತಲೂ ಕಡೆಯಾಗಿರುವದು. ತಂಗೀ ನೀನು ನಿನ್ನ ಇಷ್ಟ ಲಿಂಗವನ್ನು ಭಕ್ತಿಯಿಂದ ಪೂಜೆ ಮಾಡು. ಕೆಲಕೆಲವು ಹೆಂಗಸರು ತಮ್ಮ ಗಂಡಂದಿರು ಊಟ ಮಾಡಿ ಹೋಗುವದೊಂದೇ ತಡ ದೇವರೂ ಇಲ್ಲ. ದಿಂಡರೂ ಇಲ್ಲ. ತಮ್ಮ ಹೊಟ್ಟೆಯೇ ದೇವರೆಂದು ಅದನ್ನು ಮೊದಲು ತುಂಬುವರು. ಆದರೆ ತಂಗೀ, ನೀನು ಮಾತ್ರ ನಿನ್ನ ಗಂಡನ ಊಟವಾದನಂತರ ನಿನ್ನ ಇಷ್ಟ ಲಿಂಗವನ್ನು ಭಕ್ತಿಯಿಂದ ಪೂಜೆ ಮಾಡಿಕೊಂಡು ಊಟ ಮಾಡು. ವೀರಶೈವರಿಗೆ ಇಷ್ಟ ಲಿಂಗವೇ ಭೂಷಣವು. ನೀನು ಯಾವಾಗಲೂ ಇದನ್ನು ಧರಿಸಿ ಶುದ್ಧವಾಗಿರು.

ತಂಗೀ, ನೀನು ಪತಿದೈವವೆಂದು ನಂಬಿ ನಡೆವುದು ಗೃಹಸ್ಥರ ಧರ್ಮವು. ಆದರೆ ಗುರು ಲಿಂಗ ಜಂಗಮರು ದೇವರೆಂದು ನಂಬಿ ನಡೆವುದು ಮತ ಧರ್ಮವು. ಆದ್ದರಿಂದ ನೀನೂ ನಿನ್ನ ಗಂಡನೂ ಸಹ ಇವರಲ್ಲಿ ಭಕ್ತಿ ಇಟ್ಟು ನಡೆದುಕೊಳ್ಳಬೇಕು. ನೀನು ಗೃಹಸ್ಥಳೂ ಧರ್ಮನಿಷ್ಠಳೂ ಆಗಿ ನಡೆವುದು ಮುಖ್ಯವೆಂದು ತಿಳಿ.

**ಸುಶೀಲೆ:**— ಅವ್ವಾ, ನಿನ್ನಿಂದ ಅನೇಕ ವಿಷಯಗಳು ತಿಳಿದವು. ಇನ್ನು ಸಂಸಾರದಲ್ಲಿರುವಾಗ ಅತ್ತೆಯೊಡನೆ ನಡೆದುಕೊಳ್ಳಬೇಕಾದ ನಡತೆಯನ್ನು ದಯವಿಟ್ಟು ತಿಳಿಸು.



## ಅತ್ತೆಯ ಸಂಗಡ ನಡೆದುಕೊಳ್ಳುವ ರೀತಿ.

**ಗೌರವ್ವ:**— ತಂಗೀ, ಅತ್ತೆಯ ಸಂಗಡ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಹೇಳುತ್ತೇನೆ ಕೇಳು. ನೀನು ನಿನ್ನ ಗಂಡನ ಮನೆಯಲ್ಲಿ ನಿನ್ನ ಅತ್ತೆಯ ಕೂಡ ಒಳ್ಳೆಯ ಪ್ರೀತಿಯಿಂದ ಇರಬೇಕೆಂಬದನ್ನು ಮರೆಯಬೇಡ. ನೀನು ನಿನ್ನ ತವರ ಮನೆಯಲ್ಲಿ ನಿನ್ನ ತಾಯಿಯನ್ನು ಎಷ್ಟು ಪ್ರೇಮದಿಂದ ನೋಡುವೆಯೋ ಅದರ ಇಮ್ಮಡಿಯಷ್ಟು ಪ್ರೀತಿಯಿಂದ ನಿನ್ನ ಅತ್ತೆಯನ್ನು ಕಾಣು. ನೀನು ಊಟ ಮಾಡುವದರೊಳಗಾಗಿ ನಿನ್ನ ಅತ್ತೆಯ ಊಟವಾಗಿರುವದೆಂಬುದನ್ನು ಅಥವಾ ನಿನ್ನೊಡನೆ ಊಟ ಮಾಡುತ್ತಾಳೆ ಎಂಬುದನ್ನು ನೀನು ನೋಡಿಕೋ. ನಿನ್ನ ಸರ್ವಸ್ವವಾದ ಗಂಡನನ್ನು ಒಂಬತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತುಕೊಂಡು ಆ ಮೇಲೆ ಅನೇಕ ಬಾಧೆಯನ್ನು ಅನುಭವಿಸಿ ಹಡೆದು ಜೋಪಾನ ಮಾಡಿದ ಅತ್ತೆಯ ಸೇವೆಯೂ ನಿನಗೆ ಮುಖ್ಯವೆಂದು ತಿಳಿದು ಆಕೆಯ ಆಜ್ಞಾಧಾರಕಳಾಗಿ ನಡೆದುಕೋ.

ಈಗಿನ ಕೆಲವರು ಗಂಡ ಹೆಂಡಿರಿಗೆ ಮನೆಯಲ್ಲಿ ಅತ್ತೆ ಮಾವಂದಿರಿದ್ದರೆ ತಲೆಶೂಲೆ. ತಂಗೀ— ಈಗಿನ ಇಂಗ್ರೇಜಿ ಭಾಷೆಯನ್ನು ಕಲಿ

ತವರಲ್ಲಿ ಅನೇಕ ತರುಣರಿಗೆ ಗುರು ಹಿರಿಯರೆಂದರೆ ಆಗದು. ಇವರಿಗೆ ಆ ಚಾ ರ ವು ಬೇಕಾಗಿರುವದಿಲ್ಲ. ಧ ರ್ಮ ದ ಕ ಡೆ ಗೆ ಲಕ್ಷ್ಯವೇ ಇಲ್ಲ. ಕ್ರಾಪು ತಿದ್ದಿಕೊಂಡು ಮೀಸೆಯನ್ನು ಬೋಳಿಸಿಕೊಂಡು ಕೈಯಲ್ಲಿ ಬಿಳೇ ಬತ್ತಿಯನ್ನು ಹಿಡಿದುಕೊಂಡು ಸಿಳ್ಳು ಹಾಕುತ್ತಾ ಹೊರಟರೆ ಅದೇ ಇವರಿಗೆ ಮುಖ್ಯ ಆಚಾರ. ಬತ್ತಿಯ ಹೊಗೆಯ ವಾಸನೆಯಿಂದ ಕೂಡಿದ ಬಟ್ಟೆಗಳೇ ಇವರಿಗೆ ಮಡಿ. ಇಂಥವರಿಗೆ ಮನೆಯಲ್ಲಿ ಹೊಸದಾಗಿ ಹೆಂಡಿರು ಬಂದರೆ ತೀರಿತು. ಮೊದಲೇ ಮಂಗ, ಮೇಲೆ ಸಾರಾಯಿ ಕುಡಿಸಿದಂತೆ ಆಗಿ— ತಾಯಿಯು ಮುಪ್ಪಿನವಳು ಇರಲಿ, ತಂದೆಯು ಮುಪ್ಪಿನವನು ಇರಲಿ,— ಅವರಲ್ಲಿ ಆವನಿಗೆ ಭಕ್ತಿಯ ಗಂಧವು ಕೂಡಾ ಇರುವದಿಲ್ಲ. ಮೊದಲು ತಾಯಿ ತಂದೆಗಳನ್ನು ಹೊರಗೆ ಹಾಕಿ ತಾವು ಇಬ್ಬರೇ ಚಕ್ಕಂದದಿಂದ ಕುಣಿದಾಡಬೇಕೆನ್ನುತ್ತಾರೆ. ಇಂಗ್ಲಿಷ್ ಕಲಿತ ಕೆಲವರು ತರುಣಿಯರು ಕೂಡಾ ಧರ್ಮದ ಕಡೆಗೆ ಲಕ್ಷ್ಯಕೊಡದೆ ತಮ್ಮ ಇಚ್ಛೆಗೆ ಬಂದಂತೆ ನಡೆಯುತ್ತಾರೆ. ತಂಗೀ, ಇಂಥಾ ಗುಣವು ನಿನಗೆ ಬರದಿರಲಿ.

ನಿನ್ನ ಗಂಡನು ಒಂದು ವೇಳೆ ನಿನ್ನ ಅತ್ತೆಯನ್ನು ದೂಷಿಸುತ್ತಿದ್ದರೆ ನೀನು ಮಾತ್ರ ಅವನಂತೆ ಕುಣಿಯಬೇಡ. ನಿನ್ನ ಅತ್ತೆಯ ಮನಸ್ಸನ್ನು ನೀನು ನೋಯಿಸಿದರೆ ನಿನಗೆ ಮಹಾದೇವನು ಮೆಚ್ಚುವದಿಲ್ಲ. ನಿನಗೆ ಎಂದೂ ಸುಖವಾಗಲಾರದು. ನೀನು ನಿನ್ನ ಗಂಡನ ಪ್ರೇಮವು ನಿನ್ನ ಅತ್ತೆಯಲ್ಲಿ ಸ್ಥಿರವಾಗಿರುಂತೆ ವಿನಯದಿಂದ ಪ್ರಯತ್ನಿಸು. ನಿನ್ನ ಅತ್ತೆಯು ನಿನಗೆ ಬುದ್ಧಿವಾದಗಳನ್ನು ಹೇಳಿದರೆ, ಮತ್ತು ನಿನಗೆ ಈಗ ಆಹಿತವಾಗಿದ್ದರೂ ಕಡೆಯಲ್ಲಿ ನಿನಗೆ ಹಿತವಾಗುವ ಕೆಲಸಗಳನ್ನು ಮಾಡಿದರೆ, ನೀನು ಮಾತ್ರ ಪ್ರತ್ಯುತ್ತರವನ್ನು ಕೊಡದಂತೆ ಯಾವಾಗಲೂ ಅವಳ ಸೇವೆಯನ್ನು ಚನ್ನಾಗಿ ಮಾಡು. ಹೀಗಾದರೆ ನಿನ್ನ ಅತ್ತೆಯು ಎಂಥಾ ಕಠಿಣ ಹೃದಯದವಳಿದ್ದಾಗ್ಯೂ ಅವಳ ಪ್ರೇಮವು ನಿನ್ನಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಇನ್ನು ಅವಳ ಹೊಟ್ಟೆ ನೆತ್ತಿಯನ್ನು ನೋಡುವ ಭಾರವು ಪೂರ್ಣ ನಿನ್ನನ್ನು ಅವಲಂಬಿಸಿರುತ್ತದೆ. ಎಂದಮೇಲೆ ನೀನು ನಿನ್ನ ಅತ್ತೆಯ ವಿಷಯಲ್ಲಿ ಭೇದವನ್ನು ಎಂದೂ ಮಾಡಬೇಡ.

ತಂಗೀ, ಈಗಿನ ಸೊಸೆಯರು ತಮ್ಮ ಪ್ರಪಂಚವನ್ನು ಅಚ್ಚುಕಟ್ಟಿನಲ್ಲಿ ಮಾಡುವದನ್ನು ಬಿಟ್ಟು ಗಂಡನಿಗೂ ಅತ್ತೆಗೂ ಇದ್ದರೂ ಇಲ್ಲದಿದ್ದರೂ ತಮ್ಮ ಬಾಯಿ ಮಾತ್ರ ಯಾವಾಗಲೂ ಕುರಿಗಳ ಬಾಯಿಯಂತೆ ಆಡುತ್ತಿದ್ದರೇ ಅವರಿಗೆ ಸಮಾಧಾನವು. ಅಡಿಗೆಯನ್ನು ಮಾಡುವಾಗಲೂ ಸಹಿತ ತುಸು ಬೆಲ್ಲ ಅಥವಾ ತುಸು ಸಂಡಿಗೆ ಮೊದಲಾದವುಗಳನ್ನು ನಮೂನೆಗೋಸ್ಕರ ಬಾಯಿಯಲ್ಲಿ ಹಾಕಿಕೊಳ್ಳುತ್ತ ಅಡಿಗೆಯನ್ನು ಮಾಡುವವರೂ ಉಂಟು. ತಂಗೀ, ನೀನು ಮಾತ್ರ ಇಂಥ ತಿನಸುಗಳನ್ನು ಎಂದೂ ಕಲಿಯಬೇಡ. ಸಂಸಾರಕ್ಕೆ ಬೇಕಾಗುವ ಸಾಮಾನುಗಳನ್ನು ಅಚ್ಚುಕಟ್ಟಿನಲ್ಲಿ ಉಪಯೋಗ ಮಾಡುತ್ತಾ ಹೋಗು. ಕೆಲವರು ಸ್ತ್ರೀಯರು ಮನೆಗೆ ತಂದ ಸಾಮಾನುಗಳಲ್ಲಿ ಅಕ್ಕಿ ಬೇಳೆ ಹಾಲು ಬೆಣ್ಣೆ ಮುಂತಾದವುಗಳನ್ನು ಕದ್ದುಮಾರಿ ತಮ್ಮಲ್ಲಿ ಕಳ್ಳಗಂಟನ್ನು ಮಾಡಿಕೊಂಡು ಹೆರವರಿಗೆ ಬಡ್ಡಿಯನ್ನು ಕೊಡುವರು. ಇಂಥವರಿಗೆ ಅತ್ತೆಯವರು ಹೇಳಲಿಕ್ಕೆ ಹೋದರೆ ಅವರೊಡನೆ ಜಗಳಕ್ಕೆ ಹೋಗುವರು. ಹೀಗೆ ನೀಚ ಕೆಲಸವನ್ನು ಮಾಡುತ್ತಹೋದಂತೆ ಕಡೆಗೆ ದುಡ್ಡಿನ ರುಚಿಯು ಹೆಚ್ಚಾಗಿ ಮನೆಯಲ್ಲಿಯ ಮರ ಬುಟ್ಟಿಗಳು ಕೂಡಾ ಉಳಿಯುವದಿಲ್ಲ. ಇಂಥ ನೀಚ ಹೆಂಡಿರ ಕೂಡ ಇರುವ ಗಂಡನು ದುಡಿದು ದುಡಿದು ಮುಪ್ಪಾಗಿ ಕೈಯಲ್ಲಿ ಕಾಸಿಲ್ಲದೆ ಅನೇಕ ಸಂಕಟಕ್ಕೆ ಗುರಿಯಾಗಿ ಕಡೆಗೆ ಸಾಲಗಾರರ ತಾಪಕ್ಕೆ ಸಾಕಾಗಿ ಉರಲು ಹಾಕಿಕೊಂಡು ಸಾಯುವನು. ತಂಗೀ, ನೀನು ಮಾತ್ರ ಇಂಥ ಕೆಟ್ಟ ಕೆಲಸವನ್ನು ಮಾಡಿದರೆ ನಿನ್ನ ಗಂಡನನ್ನೂ ಮತ್ತು ಅತ್ತೆಯನ್ನೂ ವಂಚಿಸಿದ ದೋಷವು ಬರುವದಲ್ಲದೆ ನಿನ್ನ ಪಾತಿವ್ರತ್ಯವು ಸುಟ್ಟುಹೋದೀತು. ಆದ್ದರಿಂದ ಬಹು ಜೋಕೆಯಿಂದ ಬಾಳ್ವೆಯನ್ನು ಮಾಡುತ್ತಹೋಗು.

ಅತ್ತೆಯನ್ನೇ ಕೇಳಿ ಮನೆತನದ ಒಳ್ಳೆಯ ಪದ್ಧತಿಗಳನ್ನು ತಿಳಿದುಕೊಂಡು ಮನೆಯಲ್ಲಿಯ ಕೆಲಸಗಳನ್ನು ಮಾಡು. ಈಗಿನ ಹೆಂಡತಿಯರು ಗಂಡನ ಮನೆಗೆ ಬಂದಕೂಡಲೆ ತಮ್ಮ ಮನಸ್ಸಿಗೆ ಬಂದಂತೆ ನಡೆಯುತ್ತಾರೆ. ಆಗ ಮನೆಯಲ್ಲಿಯ ಅತ್ತೆಯು ಹೋಗಿ ಹೊಸದಾಗಿ ಬಂದ ಸೊಸೆಯೇ ಅತ್ತೆಯಾಗುತ್ತಾಳೆ. ಇಂಥ ಸೊಸೆಯರು ತಮ್ಮ ಅತ್ತೆಯರಿಗೆ ಅತ್ತೆ ಎಂದು ಕರೆಯುವದಕ್ಕೂ ಕೂಡಾ ನಾಚಿಕೊಳ್ಳು

ತ್ತಾರೆ. ಮನೆಯಲ್ಲಿ ಅತ್ತೆಯು ಸೊಸೆ ಮಾಡಿದ ತಪ್ಪಿಗಾಗಿ ಏನಾದರೂ ಸಿಟ್ಟು ಮಾಡಿದರೆ ಕೂಡಲೆ ತಮ್ಮ ಗೆಳತಿಯರ ಮುಂದೆ ನೋಡೆ, ನೀಲವ್ವಾ ನಮ್ಮ ಮುದುಕಿಯು ಹೀಗೆ ಎಂದಳು, ಹಾಗೆ ಎಂದಳು, ಎಂದು ಹೇಳಿ ತಮ್ಮ ಅತ್ತೆಯರನ್ನು ನಾಯಿಗಿಂತಲೂ ಕಡೆಮಾಡಿ ಹೀಯಾಳಿಸಿ ಮಾತಾಡುವರು. ತಂಗೀ, ಇಂಥ ನೀಚ ಸ್ತ್ರೀಯರ ಸಂಗವನ್ನು ನೀನು ಎಂದೂ ಮಾಡಬೇಡ. ಹಿಂದಿನ ಕಾಲದ ಪತಿವ್ರತಾ ಶಿರೋಮಣಿಗಳನ್ನು ನೆನೆಸಿಕೋ.

ಸಂತಸಖೂಬಾಯಿಯು ತನ್ನ ಅತ್ತೆಯು ಕೊಡುವ ಅನೇಕ ತರಹದ ಕಷ್ಟವನ್ನು ಸಹಿಸಿ ಆಕೆಯ ಮೇಲೆ ಎಷ್ಟು ಮಮತೆಯನ್ನು ಮಾಡಿರುತ್ತಾಳೆಂಬದನ್ನು ನಾವು ಓದಿದರೆ, ತಂಗೀ, ನಮ್ಮ ಕಣ್ಣುಗಳೊಳಗಿಂದ ಆನಂದಾಶ್ರುಗಳು ಒಂದೇ ಸವನೆ ಹೋಗಹತ್ತುವವು. ಆದ್ದರಿಂದಲೇ ಅಂಥಾ ಪತಿವ್ರತಾ ಶಿರೋಮಣಿಯ ಮನೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಆಳಾಗಿ ದುಡಿದನು. ಆದ್ದರಿಂದ ಅತ್ತೆಯ ಸೇವೆಯನ್ನು ಮನಃಪೂರ್ವಕವಾಗಿಯೂ ಭಯ-ಭಕ್ತಿಯಿಂದಲೂ ನೀನು ಮಾಡುತ್ತಹೋದರೆ ನಿನಗೆ ಬಹಳ ಪುಣ್ಯವು ಬರುವದು. ಇದನ್ನು ನಿಷ್ಟಯವಾಗಿ ನಂಬಿ ಇದರಂತೆ ತಪ್ಪದೆ ನಡೆದುಕೋ.

ತಂಗೀ, ಈಗಿನ ಸೊಸೆಯರು ತಮ್ಮ ಅತ್ತೆಯ ಹತ್ತರ ದುಡ್ಡು ಇರುತ್ತದೆಂದು ತಿಳಿದ ಕೂಡಲೇ ಇವರು ಅತ್ತೆಯ ಮೇಲೆ ಮಾಡುವ ಪ್ರೇಮವನ್ನು ನೋಡಿದರೆ ನೆರೆಮನೆಯ ಜನರು, "ಅಹಹಾ! ಎಂಥ ಹುಡುಗಿಯು. ಇವಳು ಸಣ್ಣವಳಾದರೂ ಚಿಂತೆ ಇಲ್ಲ. ಎಷ್ಟು ಶಾಂತಗುಣ! ಎಷ್ಟು ವಿನಯ! ಅತ್ತೆಯ ಮಾತನ್ನಂತೂ ಅಕ್ಷರಶಃ ಪಾಲಿಸುವಳು! ಇವಳ ಅತ್ತೆಯು ಬಿರುನುಡಿಗಳನ್ನು ಆಡಿದರೆ ಪಿಟ್ಟೆಂದು ಮಾತನಾಡದೆ ಅತ್ತೆಯ ಆಜ್ಞಾಧಾರಕಳಾಗಿ ನಡೆದುಕೊಳ್ಳುತ್ತಾಳೆ!" ಎಂದು ಕೊಂಡಾಡುವರು. ಅವರೆ ಸೊಸೆಯಲ್ಲಿ ಇರುವ ಸ್ವಾರ್ಥಮಯವಾದ ನೀಚಗುಣವು ಅವರಿಗೇನು ಗೊತ್ತು? ಪಾಪ, ಹಾಗೆ ಪ್ರೇಮ ಮಾಡಿ ಸೊಸೆಯು ಮುದುಕಿಯ ಗಂಟನ್ನು ಬಿಡಿಸುವದೊಂದೇ ತಡ, ಕೇಳುವ್ವ ದೇನು!' ಅತ್ತೆಯು ಹೊರಟಳೇ ಬಗಲಲ್ಲಿ ಕುಂಚಿಗೆಯನ್ನು ತೆಗೆದುಕೊಂಡು ಭಿಕ್ಷಕ್ಕೆ. ಆಮೇಲೆ ಅತ್ತೆಯನ್ನು ಮಾತಾಡಿಸುವದು ಒತ್ತಟ್ಟಿ

ಗಿರಲಿ. ಪಾಪ, ಅತ್ತೆಯು ಏನಾದರೂ ಎನ್ನುವದೊಂದೇ ತಡ. ಅದಕ್ಕೆ ಅವಳು ಸಿಟ್ಟಿನಿಂದ "ಸುಮ್ಮನೆ ಕೂಡೆ, ಏನು ಹಚ್ಚಿರುವಿ ನಿನ್ನ ಮುದಿ ಗುಮರಿಯನ್ನು" ಎಂದು ಬಾಯಿಗೆ ಬಂದಂತೆ ಮಾತಾಡಿ ಅತ್ತೆಯನ್ನು ಕಂಡವರ ಮುಂದೆ ದೂಷಿಸುವಳು. ತಂಗೀ, ಕಡೆಗೆ ಇಂಥ ಅತ್ತೆಯರು ಮರ ಮರನೆ ಮರುಗಿ ಇವರ ಬಾಳ್ವಿಗೆ ಲಟಿಕೆಯನ್ನು ಮುರಿದು ಸಾಯುವ ತನಕ ಕಷ್ಟಪಟ್ಟು ಸತ್ತುಹೋದ ಉದಾಹರಣೆಗಳು ಅನೇಕ ಉಂಟು. ಆದ್ದರಿಂದ ತಂಗೀ, ನಿನಗೆ ಅಂಥ ಗುಣವು ಬರದಿರಲಿ. ಇಂಥ ನೀಚ ಗುಣದ ಹೆಂಗಸರು ತಮ್ಮ ಬಾಳ್ವೆಯು ಮುಂದೆ ನಾಯಿಗಿಂತಲೂ ಕಡೆಯಾದೀತೆಂದು ಅರಿಯರೇ ಅರಿಯರು. ಆದ್ದರಿಂದ ತಂಗೀ, ನೀನು ಮಾತ್ರ ಅಂಥಾ ಕೃತ್ರಿಮ ಪ್ರೇಮವನ್ನು ಮಾಡದೆ ನೀನು ಸದಾ ನಿನ್ನ ಅತ್ತೆಯಲ್ಲಿ ಭಕ್ತಿ ವಿಶ್ವಾಸದಿಂದ ಅವಳ ಸೇವೆಯನ್ನು ಚನ್ನಾಗಿ ಮಾಡು.

ಸುಶೀಲೆ:— ಅವ್ವಾ, ನಿನ್ನಿಂದ ಸಂಸಾರದಲ್ಲಿ ನಡೆಯುವ ವಿಷಯಗಳು ಚನ್ನಾಗಿ ತಿಳಿಯುತ್ತವೆ. ಮುಂದೆ ಮಾವನೊಡನೆ ಮತ್ತು ಸಂಸಾರದಲ್ಲಿ ಉಳಿದವರೊಡನೆ ನಡೆಯುವ ಬಗೆಯನ್ನು ದಯಮಾಡಿ ಹೇಳುವೆಯಾ?



## ಮಾವನೊಡನೆ ನಡೆದುಕೊಳ್ಳುವ ರೀತಿ.

ಗೌರವ್ವ:— ತಂಗೀ ಸುಶೀಲೆ, ನಿನ್ನ ಮಾವನ ವಿಷಯವಾಗಿ ಹೇಗೆ ನಡೆಯಬೇಕೆಂಬದನ್ನು ಹೇಳುತ್ತೇನೆ ಕೇಳು. ನೀನು ನಿನ್ನ ತವರುಮನೆಯಲ್ಲಿ ನಿನ್ನ ಹಡೆದ ತಂದೆಯನ್ನು ಎಷ್ಟು ಮಮತೆಯಿಂದ ನೋಡುವೆಯೋ ಅಷ್ಟೇ ಪ್ರೇಮವನ್ನು ನಿನ್ನ ಮಾವನ ಮೇಲೆ ಮಾಡು. ಮತ್ತು ನಿನ್ನ ಮಾವನು ಊಟ ಮಾಡದ ವಿನಹ ನೀನು ಎಂದೂ ಊಟ ಮಾಡಬೇಡ. ತಂಗೀ ನಿನ್ನ ಮಾವನು ಏನಾದರೂ ನಿನಗೆ ಆಡಿದರೆ ನೀನು ಮಾತ್ರ ಅವನಿಗೆ ಎಂದೂ ಪ್ರತ್ಯುತ್ತರವನ್ನು

ಕೊಡಬೇಡ. ನಿನ್ನ ಹಿತಕ್ಕಾಗಿಯೇ ಅವನು ಎನ್ನುವನೇ ವಿನಹ ನಿನ್ನ ಮೇಲಿನ ಅಸೂಯೆಯಿಂದ ಅವನು ಎಂದೂ ಎನ್ನಲಾರನು. ನನ್ನ ಸೊಸೆ ಎನ್ನುವ ಅಂತಃಕರಣವು ಅವನಿಗೆ ಇದ್ದೇ ಇರುತ್ತದೆ. ಅದ್ದ ರಿಂದ ನೀನು ನಿನ್ನ ಮಾವನ ಅಭಿಪ್ರಾಯವನ್ನು ಅನುಸರಿಸಿ ನಡೆದುಕೊ.

ಈಗಿನ ಕೆಲವರು ಸೊಸೆಯರಿಗೆ ಮನೆಯಲ್ಲಿ ಮಾವನಿದ್ದರೆ ಸಹನ ವೇ ಆಗುವದಿಲ್ಲ. ನೀನು ಮಾತ್ರ ಹಾಗೆ ಮಾಡಬೇಡ. ನಿನ್ನ ಮಾವನ ಸೇವೆಯಲ್ಲಿ ಎಳ್ಳಷ್ಟಾದರೂ ಕೊರತೆಯನ್ನು ಮಾಡಬೇಡ.

ಕೆಲವರು ತಮ್ಮ ಮಾವನು ಏನಾದರೂ ಎನ್ನುವದೊಂದೇ ತಡ ಅವನ ಕಿವಿಗಳು ಕೇಳುತ್ತಿದ್ದರೆ ಮಾತ್ರ ಅವನಿಗೆ ಬಹುವಚನದಿಂದ ಮೊಮ್ಮಕ್ಕಳನ್ನು ಆಡಿಸುತ್ತ ನೀವು ಸುಮ್ಮನೆ ಕೂತುಕೊಳ್ಳಿರಿ, ನಿ ಮಗೆ ಏತಕ್ಕೆ ಬೇಕಾಗಿರುತ್ತದೆ ಹಾಳು ರಗಳೆ, ಎಂದು ಗೌರವದ ಉ ದಾಸೀನ ಭಾವವನ್ನು ತೋರಿಸುತ್ತಾರೆ. ಮಾವನು ಮುಪ್ಪಿನವನಾ ಗಿದ್ದು ಅವನ ಕಿವಿಗಳು ಕೇಳದಿದ್ದರೆ ಮಾತ್ರ, ಪಾಪ, ಅವನ ಮುಂದೆ ಯೇ ಆಡಬಾರದ ಶಬ್ದಗಳನ್ನು ಆಡಿ ಲಟಿಕೆಯನ್ನು ಸಹ ಮುರಿಯು ತ್ತಾರೆ. ಇಂಥಾ ನೀಚ ಸ್ತ್ರಿಯರೇ ಈಗ ಬಹಳವಾಗಿರುವಂತೆ ಕಾ ಣುವುದು. ತಂಗೀ, ಇಂಥವರನ್ನು ಕಣ್ಣೆತ್ತಿ ಸಹ ನೋಡಬೇಡ.

ಕೆಲವರು ತಮ್ಮ ಮಾವನೆಂದರೆ ತಾವು ಹಡೆದ ಮಕ್ಕಳನ್ನು ಆ ಡಿಸುತ್ತ ಮನೆಯನ್ನು ಕಾಯುವದೊಂದು ಆಳೆಂದು ತಿಳಿಯುವರು. ಅವನಲ್ಲಿ ಪೂಜ್ಯ ಭಾವನೆಯೇ ಇರುವದಿಲ್ಲ. ಆದ್ದರಿಂದ ನೀನು ಮಾತ್ರ ನಿನ್ನ ಗಂಡನಲ್ಲಿ ಎಷ್ಟು ಭಯ ಭಕ್ತಿಯಿಂದ ನಡೆಯುವೆಯೋ ಅದರಂ ತೆಯೇ ನಿನ್ನ ಮಾವನಲ್ಲಿಯೂ ನಡೆದುಕೋ.

ತಂಗೀ, ನಿನ್ನ ಮನಸ್ಸಿಗೆ ಏನಾದರೂ ಕಷ್ಟವಾದರೆ ಹಿಂದಿನ ಪತಿವ್ರತಾ ಸ್ತ್ರೀಯರ ಕಥೆಗಳನ್ನು ನೆನಪು ಮಾಡಿಕೋ. ಮಹಾ ಪತಿ ವ್ರತೆಯಾದ ಸಾವಿತ್ರೀದೇವಿಯು ತನ್ನ ಪಾತಿವ್ರತ್ಯದ ಬಲದಿಂದ ತನ್ನ ಗಂಡನ ಪ್ರಾಣವನ್ನು ಪಡೆದದ್ದಲ್ಲದೆ ತನ್ನ ಮಾವನಾದ ದ್ಯುಮತ್ಸೇ ನನ ಕಣ್ಣುಗಳನ್ನು ಪುನಃ ತಂದುಕೊಡಲಿಲ್ಲವೇ! ಅವರು ಅಂಥ ಮಹ ತ್ವವನ್ನು ಮಾಡಿದರೆ ಈಗಿನ ಕೆಲವರು ತಮ್ಮ ಮಾವನ ಕಣ್ಣುಗಳು

ಬರಲೆಂಪು ದೇವನನ್ನು ಪ್ರಾರ್ಥಿಸುವದು ಹಾಗಿರಲಿ, ಮಾವನು ಏನಾದ ರೂ ಆಡಿದರೆ ಕಣ್ಣುಗಳಿಗೆ ಯಾವುದರಿಂದಲಾದರೂ ತಿವಿದು, ಇದ್ದ ಕುರು ಡುಗಣ್ಣುಗಳನ್ನೂ ಕಳೆಯುವದಕ್ಕೆ ಯತ್ನಿಸುವರು. ಇಂಥವುಗಳೆಲ್ಲವೂ ನೀಚ ಕೆಲಸಗಳು. ನೀನು ನಿನ್ನ ಮಾವನಿಗೆ ವಿರೋಧವಾದುದನ್ನು ಎಂ ದೂ ಬಯಸಬೇಡ. ಮತ್ತು ಮಾಡಬೇಡ. ಅವನ ಅಪ್ಪಣೆಯನ್ನು ನಡೆಸು. ಹಾಗಾದರೆ ನಿನ್ನ ಮಾವನು ಎಂಥಾ ಕಠಿಣ ಹೃದಯದವನಿ ದ್ದಾಗ್ಯೂ ನಿನ್ನ ಮೇಲೆ ಮಮತೆಯನ್ನು ಮಾಡಿಯೇ ಮಾಡುತ್ತಾನೆ. ಇದನ್ನು ಚನ್ನಾಗಿ ನೆನಪಿನಲ್ಲಿಟ್ಟುಕೋ.

ತಂಗೀ, ಅತ್ತೆಯು ಹತ್ತರ ದುಡ್ಡು ಇದ್ದರೆ ಮಾಡುವ ಕೃತ್ರಿ ಮ ಪ್ರೇಮವನ್ನು ಹಿಂದೆ ಹೇಳಿದ್ದೇನೆ. ಅದರಂತೆಯೇ ಕೆಲವರು ಮಾ ವನ ಹತ್ತರ ದುಡ್ಡು ಇದ್ದರೆ ಅದನ್ನು ತಮಗೆ ಕೊಡುವ ವರೆಗೆ ಅ ಥವಾ ತಮಗೆ ಒಡವೆಗಳನ್ನು ಮಾಡಿಸುವತನಕ. ಒಳ್ಳೇ ಪ್ರೇಮವನ್ನು ಮಾಡುವರು. ಆದರೆ ಮಾವನು ಇಂಥ ಸೊಸೆಯರ ಮಾತಿಗೆ ಮ ರುಳಾಗದೆ ತನ್ನ ಹತ್ತರ ದುಡ್ಡು ಇಟ್ಟುಕೊಂಡರೆ ತೀರಿತು, ಆತನ ಸೇವೆಯನ್ನೇ ಮಾಡುವದಿಲ್ಲ. ಕಂಡವರ ಮುಂದೆ ಅವನನ್ನು ದೂಷಿ ಸುತ್ತಾರೆ. ಇಂಥವರು ಮಾವನಿಗೆ ಮಾತಾಡುವ ಬಿರುನುಡಿಗಳನ್ನು ಯಾರಾದರೂ ಹಿರಿಯರು ಕೇಳಲಾರರು. ಬುದ್ಧಿಯ ಮಾತುಗಳನ್ನು ಹೇಳಿ ದರೆ "ನಿಮ್ಮದೇನು ಮನೆಯಲ್ಲಿ ಕೂತು ಹೇಳುವದೊಂದೇ ಗೊತ್ತು, ಇಂ ಥಾ ಮಾವನ ಕೈಯಲ್ಲಿ ಯಾರೂ ಇರಲಿಕ್ಕಿಲ್ಲ, ನಾ ಅಂತೆ (ಆದ್ದರಿಂದ) ಅವನ ಕೈಯಲ್ಲಿ ಉರಿಯುತ್ತೇನೆ. ನಿಮ್ಮಂಥ ನೆರೆಮನೆಯವರಿಗೆ ಏನು ಗೊತ್ತು, ನಮ್ಮ ಮುದುವನ ಗುಣವು ನಮಗೇ ಗೊತ್ತು. ನನ್ನ ಭಂಗಾರದಂಥ ಮಕ್ಕಳ ಕೈಯಲ್ಲಿ ಚಿಂವ್ ಚಿಂವ್ ಎಂದರೂ ಒಂದು ಕಾ ಸು ಸಹ ಕೊಡುವದಿಲ್ಲ. ದುಡಿದ ಗಂಟನ್ನೆಲ್ಲಾ ತನ್ನ ಹತ್ತರ ಇಟ್ಟು ಕೊಳ್ಳುತ್ತಾನೆ. ನಾವು ಮಾತ್ರ ಇವನ ಚಾಕರಿಯನ್ನು ಮಾಡಬೇ ಕಂತೆ, ಹೇಳಲಿಕ್ಕೆ ಎಲ್ಲರಿಗೂ ಬರುತ್ತದೆ." ಎಂದು ಬುದ್ಧಿ ಹೇಳುವ ವರ ಸಂಗಡ ಮೋರೆಯನ್ನು ಕಟ್ಟಿಕೊಳ್ಳುವರು. ಇದೂ ಒಳ್ಳೆಯದಲ್ಲ. ಆದ್ದರಿಂದ ತಂಗೀ, ನೀನು ಮಾತ್ರ ಇಂಥಾ ದುಡ್ಡಿನ ಪ್ರೇಮವನ್ನು ಎಂದೂ ಮಾಡಬೇಡ. ಇಂಥ ಪ್ರೇಮವನ್ನು ನೀನು ಮಾಡಿದರೆ ನಿನ್ನ

ಸೊಸೆಯರೂ ಕೂಡಾ ಅವರಂತೆಯೇ ಮಾಡುವರೆಂದು ಪೂರ್ಣ ನೆನಪಿನ ಲ್ಲಿಟ್ಟುಕೋ. ನೀನು ಇಂಥಾ ದುರ್ನಡತೆಯ ಹೆಂಗಸರಂತೆ ವರ್ತಿಸದೆ ನಿನ್ನ ಮಾವನಲ್ಲಿ ಒಳ್ಳೆಯತನದಿಂದ ನಡೆದುಕೋ.

ನಿನ್ನ ಗಂಡನು ನಿನ್ನ ಮಾವನನ್ನು ಒಂದು ವೇಳೆ ದೂಷಿಸುತ್ತಿದ್ದರೆ ನಿನ್ನ ಗಂಡನ ಪ್ರೇಮವು ನಿನ್ನ ಮಾವನ ಮೇಲೆ ಸದಾ ಇರುವಂತೆ ಅವನನ್ನು ಬೇಡಿಕೋ.

ತಂಗೀ, ನೀನು ನಿನ್ನ ಪತಿಯ ಗೃಹದಲ್ಲಿ ನಿನ್ನ ಗಂಡನ, ಅತ್ತೆಯ ಮತ್ತು ನಿನ್ನ ಮಾವನ ಆಜ್ಞೆಗಳನ್ನು ಅಕ್ಷರಶಃ ಪಾಲಿಸುತ್ತ ಹೋಗು. ಇದರಿಂದ ನಿನಗೆ ಬಹಳ ಸುಖ ಉಂಟು. ಮಹಾದೇವನೂ ಮೆಚ್ಚುತ್ತಾನೆ.

ಇನ್ನು ನಾದಿನಿ ಭಾವ ಮೈದುನ ಇವರ ಸಂಗಡ ನಡೆಯುವ ರೀತಿಯನ್ನು ಹೇಳುವೆನು ಕೇಳು.

ನಿನ್ನ ನಾದಿನಿಯರನ್ನು ಒಡಹುಟ್ಟಿದ ಅಕ್ಕ ತಂಗಿಯರೆಂದೇ ತಿಳಿ. ಅವರಿಗೆ ದುಷ್ಟ ಶಬ್ದವನ್ನು ನೀನು ಎಂದೂ ಆಡಬೇಡ. ನಿನ್ನ ಗಂಡನು ಪ್ರತ್ಯಕ್ಷ ದೇವನೆಂದ ಬಳಿಕ ಅಂಥವನ ಅಕ್ಕ ತಂಗಿಯರೆಂದ ಮೇಲೆ ನೀನು ಅವರಲ್ಲಿ ಒಳ್ಳೆಯ ವಿನಯದಿಂದ ನಡೆದುಕೋ. ನಿನ್ನ ನಾದಿನಿಯರು ನಿನಗೆ ವಿರೋಧವಾಗಿ ನಡೆದರೂ ನೀನು ಮಾತ್ರ ಅವರಿಗೆ ವಿರೋಧದಿಂದ ನಡೆಯುವ ಯೋಚನೆಯನ್ನು ಮಾಡಬೇಡ. ತಂಗೀ, ಈಗಿನ ಹೆಂಗಸರು ತಮ್ಮ ನಾದಿನಿಯರು ತಮ್ಮಂತೆ ಮನೆಯ ಕೆಲಸಗಳನ್ನು ಮಾಡಿದರೆ ಮಾತ್ರ ಸುಮ್ಮನೆ ಇರುವರು. ಇಲ್ಲದಿದ್ದರೆ ತಮ್ಮ ಗಂಡಂದಿರ ಮುಂದೆ "ಹಾಗೆ ಮಾಡುವಳು, ಹೀಗೆ ಮಾಡುವಳು, ಮನೆಯಲ್ಲಿ ಎಷ್ಟು ಕೆಲಸವಿದ್ದರೂ ತಾನು ಮಾತ್ರ ಗಣೇಶನಂತೆ ತಣ್ಣಗೆ ಕೂಡುವಳು, ನಾವು ಮಾತ್ರ ಕತ್ತೆಯಂತೆ ಸಾಯುವ ತನಕ ದುಡಿಯಬೇಕಾಗಿದೆ," ಎಂದು ಅನೇಕ ಚಾಡಿಗಳನ್ನು ಹೇಳುತ್ತಾರೆ. ತಂಗೀ, ನೀನು ಹಾಗೆ ಮಾಡದೆ ಅವರನ್ನು ಪ್ರೀತಿಸುತ್ತಾ ಬಂದರೆ ಅವರು ತಾವಾಗಿಯೇ ಮನೆಯ ಕೆಲಸಗಳನ್ನು

ಮಾಡುತ್ತಾ ನಿನಗೆ ಸಹಾಯಕರಾಗುವರು. ಆದ್ದರಿಂದ ಅವರ ವಿಷಯವಾಗಿ ಗಂಡನಲ್ಲಿ ಚಾಡೀ ಹೇಳುವ ಗುಣವನ್ನು ಎಂದೂ ಕಲಿಯಬೇಡ. ನಿನ್ನ ನಾದಿನಿಯರಲ್ಲಿ ಯಾವ ಭೇದವನ್ನೂ ಮಾಡದೆ ಅವರ ಸಹಕಾರಿಯಾಗಿ ನಡೆದುಕೋ.

ಇನ್ನು ನಿನ್ನ ಭಾವ ಮೈದುನರ ಕೂಡ ಹಿತದಿಂದ ಇರಬೇಕೆಂಬುದನ್ನು ನೀನು ಚನ್ನಾಗಿ ತಿಳಿದಿರು. ನಿನ್ನ ಗಂಡನಿಗೆ ಊಟ ಮಾಡಿಸುವದು ಮುಂತಾದ ಹೊರಗಿನ ಉಪಚಾರಗಳಲ್ಲಿ ಎಷ್ಟು ಆದರವಿಟ್ಟು ನಡೆಯುವೆಯೋ ಆದರಂತೆಯೇ ನಿನ್ನ ಭಾವ ಮೈದುನರೊಂದಿಗೆ ನಡೆದುಕೋ. ಅವರ ಉಪಚಾದಲ್ಲಿ ಯಾವ ಭೇದವನ್ನೂ ಎಣಿಸಬೇಡ.

ತಂಗೀ, ಇನ್ನು ನಿನಗೆ ಹೇಳುವದೇನಂದರೆ ನಾನು ಹೇಳಿದಂತೆ ನಿನ್ನ ಕುಟುಂಬದಲ್ಲಿ ಇರುವ ಉಳಿದವರೊಂದಿಗೂ ನೀನು ಪ್ರೇಮದಿಂದ ನಡೆದುಕೊಂಡು ಹೋದರೆ ನಿನಗೆ ಸದ್ಗತಿಯು ಆಗುವದು. ನಿನ್ನ ಅತ್ತೆ ಮಾವಂದಿರು ಮುಂತಾದವರಿಗೆ ವಿರೋಧವಾಗಿ ನಡೆದು ಗಂಡನನ್ನು ಲಕ್ಷ್ಯ ಮಾಡದೆ, ಗುರು ಲಿಂಗ ಜಂಗಮರಲ್ಲಿ ಭಕ್ತಿ ಇಡದೆ ಜನರ ಕಡೆಯಿಂದ ಎಂಥ ದುರ್ಗುಣದವಳೇ! ಎಂದು ಎನಿಸಿಕೊಳ್ಳಬೇಡ. ಹಾಗೆ ಎನಿಸಿಕೊಂಡು ನೂರು ವರ್ಷ ಬಾಳ್ವೆಯನ್ನು ಮಾಡುವದಕ್ಕಿಂತ ಐದು ದಿನಗಳು ಸುಗುಣಿ, ಶಿವಭಕ್ತಳು ಎಂದೆನಿಸಿಕೊಂಡು ಹೋದರೂ ನೀನು ಇದ್ದಂತೆಯೇ ಎಂದು ನಂಬಿ ನೀನು ತಪ್ಪದೆ ನಡೆದುಕೋ.

ಸಂಸಾರದಲ್ಲಿ ತಾಳ್ಮೆಯೇ ಮೇಲಾದ ಪ್ರಯೋಜನವುಳ್ಳದ್ದೆಂದೂ ತಿಳಿದು ನಡೆ.

ಇನ್ನು ನಿನಗೆ ಧರ್ಮ ಸಂಬಂಧದಲ್ಲಿ ಹೇಳುವದೇನಂದರೆ:— ಶಿವಭಕ್ತಿಯಿಂದ ನಡೆವುದರಲ್ಲಿ ಹೆಚ್ಚಿನ ಪ್ರಯೋಜನವುಳ್ಳ ಆಚರಣೆಯು ಅಷ್ಟಾವರಣವನ್ನು ನಂಬಿ ನಡೆಯತಕ್ಕದ್ದಾಗಿರುತ್ತದೆ. ಭಸ್ಮ, ರುದ್ರಾಕ್ಷಿ, ಶಿವಮಂತ್ರ ಇವುಗಳೊಡನೆ ಮೇಲೆ ಹೇಳಿದಂತೆ ಗುರು, ಲಿಂಗ, ಜಂಗಮರಲ್ಲಿ ಭಕ್ತಿ ಇಟ್ಟು ಪಾದೋದಕ ಪ್ರಸಾದಗಳನ್ನು ಪಡೆವುದರಿಂದ ಅಷ್ಟಾವರಣವು ಸಿದ್ಧಿಸಿದಂತೆ ಆಗುತ್ತದೆ. ತಂಗೀ, ವೀರಶೈವರಿಗೆ ಮು

ಖ್ಯವಾಗಿರುವ ಈ ಆಚರಣೆಯನ್ನು ನೀನು ತಪ್ಪಬೇಡ. ಗುರು, ಲಿಂಗ ಜಂಗಮರಲ್ಲಿ ಯಾರೊಬ್ಬರು ದೊರಕಿದರೂ ಅವರಲ್ಲೇ ಮೂರೂ ವಸ್ತುಗಳುಂಟೆಂದು ಭಾವಿಸಿ ಪೂಜಿಸು. ಇದು ನಿನ್ನ ಮನಸ್ಸಿನಲ್ಲಿ ಯಾವಾಗಲೂ ನೆನಪಿರಲಿ.

ಸುಶೀಲೆ:— ಅವ್ವಾ ನೀನು ಇಷ್ಟು ಹೊತ್ತಿನವರೆಗೆ ಬೋಧಿಸಿದ ನಿನ್ನ ಮಾತಿನಂತೆ ನಾನು ನನ್ನ ಜನ್ಮವಿರುವವರೆಗೂ ನನ್ನ ಕುಟುಂಬದಲ್ಲಿ ಎಲ್ಲರೊಂದಿಗೂ ನಡೆದು ಜನ್ಮವನ್ನು ಸಾರ್ಥಕ ಮಾಡಿಕೊಳ್ಳುತ್ತೇನೆ. ಆದರೆ ನೀನು ಗಂಡನ ವಿಷಯದಲ್ಲಿ ಗಂಡನ ಆಜ್ಞಾಧಾರಕಳಾಗಿಯೇ ನಡೆದುಕೋ ಎಂದು ಹೇಳಿರುತ್ತೀ, ಗಂಡನು ಒಂದು ವೇಳೆ ದುರಾಚಾರಿಯಾಗಿದ್ದರೆ ನೀನು ಹೇಳಿದಂತೆ ಕೆಟ್ಟ ನಡತೆಯನ್ನು ಬಿಡಿಸಲಿಕ್ಕೆ ಪ್ರಯತ್ನ ಮಾಡಿದರೂ ಅವನು ಬಿಡದಿದ್ದರೆ— ಅವ್ವಾ, ಆಮೇಲೆ ಹೇಗೆ?

ಗೌರವ್ವ — ತಂಗೀ, ನೀನು ಮಾಡಿದ ಪ್ರಶ್ನೆಯು ಯುಕ್ತವೇ ಸರಿ. ಗಂಡನ ಹಿತವನ್ನು ಬಯಸಿ ನೀನು ಎಷ್ಟೆಷ್ಟು ಪ್ರೇಮ ಮಾಡುವೆಯೋ ಅಷ್ಟಷ್ಟು ನಿನ್ನ ಗಂಡನ ಪ್ರೇಮವು ನಿನ್ನ ಕಡೆಗೆ ಒಲಿಯುತ್ತ ಬರುವದು. ಆಗ ಅವನು ನಿನ್ನ ಮಾತನ್ನು ನಡೆಸುತ್ತಾನೆ. ಲೋಕದಲ್ಲಿ ಒಬ್ಬರ ಮನಸ್ಸನ್ನು ಒಲಿಸಬೇಕಾದರೆ ಪ್ರೇಮಕ್ಕಿಂತ ಹೆಚ್ಚಿನ ವಸ್ತುವು ಯಾವುದೂ ಇಲ್ಲ. ಪ್ರೇಮವೇ ಪ್ರೇಮವನ್ನು ದೊರಕಿಸುತ್ತದೆ. ಈ ಮಾತನ್ನು ನೀನು ಮರೆಯದಿರು.

ಸುಶೀಲೆ:— ಅವ್ವಾ, ಸಂಸಾರದಲ್ಲಿ ನಡೆದುಕೊಂಡು ಹೋಗತಕ್ಕ ರೀತಿಯನ್ನು ನಿಮ್ಮಂಥ ಹಿರಿಯರು ಬೋಧಿಸುವದರಿಂದ ನಮ್ಮಂಥಾ ಚಿಕ್ಕವರ ಜೀವನದ ಮಾರ್ಗವು ಅತ್ಯುತ್ತಮವಾಗುತ್ತದೆ. ಆದ್ದರಿಂದ ನೀನು ಈ ಉಪಕಾರವನ್ನು ಮಾಡಿದ್ದಕ್ಕಾಗಿ ನಾನು ಕೃತಜ್ಞಳಾಗಿದ್ದೇನೆ.



## ಈ ಪುಸ್ತಕದ ಸಂಬಂಧದಲ್ಲಿ
# ಮಹನೀಯರ ಅಭಿಪ್ರಾಯಗಳು.



ಶ್ರೀಯುತ ಶೀಲವಂತರ ಗದಿಗೆಪ್ಪನವರು ಬರೆದ 'ಸತೀಹಿತಬೋಧೆ, ಎಂಬ ಚಿಕ್ಕ ಲೇಖವನ್ನು ಮೊದಲಿನಿಂದ ಪೂರಾ ಓದಿದೆನು. ಇದರಲ್ಲಿ ನಮ್ಮ ಭಾರತ ಹೆಂಗಳೆಯರು ಆರ್ಯಧರ್ಮ ಪದ್ಧತಿಯಂತೆ ಹೇಗಿರಬೇಕೆಂಬುದನ್ನು ಸುಲಭ ಭಾಷೆಯಲ್ಲಿ ಓದುಗರಿಗೆ ಮನಸ್ಸಿನಮೇಲೆ ಚನ್ನಾಗಿ ಬಿಂಬಿಸುವಂತೆ ಸರಿಯಾಗಿ ಚಿತ್ರಿಸಿದ್ದಾರೆ. ಪ್ರಸ್ತುತಕಾಲವು ಸ್ವತಂತ್ರ ವೃತ್ತಿಯದು. ಈಗಿನ ಶಿಕ್ಷಣಪದ್ಧತಿ ಪರದೇಶ ವ್ಯವಹಾರ ಸಂಸ್ಕಾರ ಮೊದಲಾದವುಗಳಿಂದ ನಮ್ಮ ಸ್ತ್ರೀ ವರ್ಗದ ಆಚಾರ ವಿಚಾರಗಳಲ್ಲಿ ಒಂದುತರಹದ ಪರಿಣಾಮವಾಗಿ ನಮ್ಮ ಮೊದಲಿನ ಆರ್ಯಧರ್ಮಾಚಾರ ಸಾಂಪ್ರದಾಯ ರೀತಿಗೆ ಅನೇಕಕಡೆಗೆ ಭಂಗ ತಟ್ಟಿರುವದನ್ನು ನಾವು ನೋಡುತ್ತಿದ್ದೇವೆ. ಈ ಹೊತ್ತಿನಲ್ಲಿ ಹೆಣ್ಣುಮಕ್ಕಳ ಸ್ವಚ್ಛಂದ ವೃತ್ತಿಯನ್ನು ನಿರ್ಬಂಧಿಸಿ ನಮ್ಮ ಭಾರತಮಹಿಳೆಯರ ಪ್ರಕಾಶವನ್ನು ಸ್ಪಷ್ಟಗೊಳಿಸುವದಕ್ಕಾಗಿ ಇಂತಹ ಬರೆವಣಿಗೆಗಳು ಹೊರಬೀಳುವದು ಆವಶ್ಯವದೆ. ಈ ಚಿಕ್ಕಲೇಖನವು ನಮ್ಮ ಸಧ್ಯದ ಸಮಾಜಕ್ಕೆ ಒಳ್ಳೇ ಉಪಯುಕ್ತವಾದ ವಚನ ಭಾಗವಾಗುವದೆಂದು ನನ್ನ ಅಭಿಪ್ರಾಯವು.

**ಶಿವಮೂರ್ತಿಸ್ವಾಮಿ ಹಿರೇಮಠ**
ಬಿ. ಎ, ಎಲ್ ಎಲ್. ಬಿ. ವಕೀಲ ಹಾವೇರಿ

---

ಶ್ರೀಯುತ ಗದಿಗಪ್ಪ ಶೀಲವಂತ ಇವರು ಬರೆದಿರುವ ಸತೀಹಿತಬೋಧೆ ಎಂಬ ಪುಸ್ತಕವನ್ನು ನಾನು ಓದಿ ನೋಡಿದೆನು. ಇವರೊಳಗಿನ ವಿಷಯಗಳು ಸ್ತ್ರೀಯರಿಗೆ ತಮ್ಮ ಗಂಡಂದಿರ ಮನೆಯಲ್ಲಿ ನಡೆದುಕೊಳ್ಳಲಿಕ್ಕೆ ತಕ್ಕವುಗಳಾಗಿವೆ. ಗಂಡನ ಮನೆಗೆ ಮೊದಲನೆಯಸಾರಿ ಹೋಗುವ ಸ್ತ್ರೀಯರು ಈ ಪುಸ್ತಕವನ್ನು ಓದತಕ್ಕದ್ದು ಅ

ತ್ಯಂತ ಅವಶ್ಯಕವಾಗಿದೆ. ಮತ್ತು ವೃದ್ಧ ಸ್ತ್ರೀಯರು ಇವನ್ನು ಓದಿ ಕೊಂಡು ತರುಣಿಯರಿಗೆ ಆಗಾಗ್ಯೆ ಬೋಧಿಸುವದರಿಂದ ಬಹಳ ಪ್ರಯೋಜನ ಉಂಟು.

ಮಡಿವಾಳಪ್ಪ ಹತ್ತಿ.
ಪ್ರೆಸಿಡೆಂಟ್ ಹಾವೇರಿ ಮುನಿಸಿಪಾಲಿಟಿ.

---

ನನ್ನ ಗೆಳೆಯಂದಿರಾದ ಗದಿಗೆಪ್ಪನವರು **ಸತೀಹಿತಬೋಧೆ** ಎಂಬುದೊಂದು ಚಿಕ್ಕ ಲೇಖವನ್ನು ಬರೆದು ಪ್ರಕಟಿಸಿದ್ದಾರೆ. ತಮ್ಮ ಅನುಭವದಲ್ಲಿ ಬಂದ ಉದಾಹರಣೆಗಳಿಂದ ಮುಂದೆ ಸೊಸೆಯಂದಿರು ಅತ್ತೆಯ ಮನೆಯಲ್ಲಿ ಹೇಗೆ ನಡೆದರೆ ಸುಖವಾದೀತೆಂದು ವಿಚಾರ ಮಾಡಿ ಬರೆದ ಲೇಖವಿದು. ಸಾಲಿಯಲ್ಲಿ ಸಣ್ಣ ಹುಡುಗರಿಗೆ ಮುಂದೆ ಸಂಸಾರದಲ್ಲಿ ಸುಖದಿಂದ ದಾರಿ ಸಾಗಲೆಂಬ ಹಾರೈಕೆಯಿಂದ ಅಯ್ಯನವರು ಕಲಿಸುವಂತೆ, ಸೊಸೆಯಂದಿರೂ ಇದನ್ನು ಓದಿ ಮನನ ಮಾಡಿ ಇದರಂತೆ ನಡೆದು ಸುಖ ಹೊಂದಲೆಂಬುದು ಪ್ರತಿಯೊಬ್ಬ ಕನ್ನಡಿಗನದೂ ಅಪೇಕ್ಷೆ ಇರುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಅತ್ತೆ ಸೊಸೆ ಎಂಬುದು ಬೆಕ್ಕು ಇಲಿಯಂತೆ ಸಮಾನಾರ್ಥಕ ಶಬ್ದವು ರೂಢಿಯಲ್ಲಿಯಾಗಿ ಮನೆತನಗಳು ಮುರಿದು ಹೋದ ಉದಾಹರಣೆಗಳೇನು ಕಡಿಮೆ ಇಲ್ಲ. ಅದೆಲ್ಲವೂ ಹಳೆಯದಾಗಿ ಹೊಸ ಯುಗದಲ್ಲಿ ಸಂಸಾರವೆಂಬ ರಥವನ್ನು ಸುಖರೂಪದಿಂದ ಸಾಗಿಸಿ ಒಬ್ಬರ ಹೊರೆಯನ್ನು ಹೊಸಬರು ತೆಗೆದುಕೊಂಡು ಕೀರ್ತಿ ಹೊಂದಿ ಜನರಿಗೆ ಉದಾಹರಣೆಯಾದರೆ ಈ ಪುಟ್ಟ ಬರಹವನ್ನು ಬರೆದವರ ಶ್ರಮವು ಸಾರ್ಥಕವಾದೀತೆಂಬ ಅನ್ನಲು ಅಡ್ಡಿ ಇಲ್ಲವೆಂಬುದು ನನ್ನ ಮತ.

H. G. Bengeri.
B. A. (Hons) B. T.
ಹೆಡ್ ಮಾಸ್ತರ್
ಮುನಿಸಿಪಲ್ ಹೈಸ್ಕೂಲ್
ಹಾವೇರಿ.

# ಸದ್ಧರ್ಮ ದೀಪಿಕೆ

ಸಂಚಿಕೆ. ೧೩.

( ಪ್ರಕಟಿಸಿದ ದಿನ. ಶ್ರಾವಣ ಶು. ೧೫ ಶಕ ೧೮೫೫ ಶ್ರೀಮುಖ)

**Registered No. B. 3050.**



ಶ್ರೀಮನ್ನಿರಂಜನವರ್ಯ ಶಿವಬಸವ ಮಹಾ ಸ್ವಾಮಿಗಳವರ ಹು
ರಿಮಠ ಹಾವೇರಿಯಲ್ಲಿ ಪ್ರಕಾಶಕರಾದ ಚನ್ನಮಲ್ಲಪ್ಪ ನೂರೊಂ
ಕೋರಿ ಇವರು ಇದನ್ನು ಪ್ರಕಟಿಸಿದರು. ಸದರಿಯವರು ಇದ
ಹಾವೇರಿಯ ಶಿವಲಿಂಗ ವಿಜಯ ಮುದ್ರಾಲಯದಲ್ಲಿ ಮುದ್ರಿಸಿದರು.

ವರ್ಷ ೨, ಶ್ರೀಮುಖ ಸಂವತ್ಸರ

## ದಯಾಳುಗಳಾದ ವಾಚಕ ಮಹಾಶಯರೇ :—

ಬಡತನದಲ್ಲಿ ಹುಟ್ಟಿದ ಈ ಸದ್ಧರ್ಮ ದೀಪಿಕೆಯು ಒಂದು ವರ್ಷ ಕಾಲ ಬೆಳೆದುದು ತಮ್ಮ ಸಹಾಯದಿಂದಲೇ. ಇದು ಎರಡನೆಯ ವರ್ಷದ ಪ್ರಾರಂಭದ ಸಂಚಿಕೆಯು. ಹೋದ ವರ್ಷ ಆರಂಭಿಸಿದ ಗ್ರಂಥಗಳಲ್ಲಿ ಸಿದ್ಧೇಶ್ವರ ವಚನ, ನುಲಿಯ ಚಂದಯ್ಯನ ಶಾರದ ಇವುಗಳ ವಿನಹ ಉಳಿದವು ಈ ಸಂಚಿಕೆಗೆ ಮುಗಿದಿರುತ್ತವೆ. ಅವುಗಳೂ ಮುಂದೆ ಪೂರ್ತಿ ಮಾಡಲ್ಪಡುವವು.

ಹೊಸ ವರ್ಷದಲ್ಲಿ ಹೆಚ್ಚಾಗಿ ವಚನ ರೂಪವಾಗಿರುವ ಗ್ರಂಥಗಳನ್ನೂ, ಸಾಧಾರಣ ಕನ್ನಡ ತಾತ್ಪರ್ಯದೊಡನೆ ಇದೂ ವರೆವಿಗೆ ಮುದ್ರಣವಾಗದೆ ಇದ್ದ ಉಪನಿಷತ್ ಮೊದಲಾದವುಗಳನ್ನೂ ಕೆಲವು ಪದ್ಯ ಗ್ರಂಥಗಳನ್ನೂ ಪ್ರಕಾಶಕ್ಕೆ ತರಬೇಕೆಂದು ಯೋಚಿಸಿ ಇರುತ್ತದೆ. ಪೂರ್ವಿಕ ಮಹಾಶಯರ ಗ್ರಂಥಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಮುದ್ರಿಸುವುದೇ ಮುಖ್ಯ ಧ್ಯೇಯವೆಂಬುದು ಈ ಪತ್ರಿಕೆಯ ಆರಂಭ ಕಾಲದಲ್ಲಿ ಉದ್ದೇಶಿಸಿದ ವಿಷಯವೆಂಬುದನ್ನು ಮರೆಯುವಂತಿಲ್ಲ. ಪೂರ್ವಿಕರ ಗ್ರಂಥಗಳು ಸಾವಿರಾರು ಇವೆ. ಇವೆಲ್ಲವನ್ನೂ ಮುದ್ರಣಕ್ಕೆ ಗುರಿಪಡಿಸಬೇಕೆಂಬ ಅಭಿಮಾನವು ಸಮಾಜದವರಿಗೆ ಹುಟ್ಟಬೇಕು. ಈ ರೀತಿ ಮಾಡುವದರಿಂದ ಸಮಾಜದಲ್ಲಿ ಇರುವ ಮತ ಸಂಬಂಧವಾದ ಅನೇಕಾಭಿಪ್ರಾಯಗಳು ಹೋಗಿ ಒಂದೇ ರೀತಿಯಾದ ಅಭಿಪ್ರಾಯವು ಉಂಟಾಗುವುದರಲ್ಲಿ ಏನೂ ಸಂಶಯವಿಲ್ಲ. ಆದ್ದರಿಂದ ಅಂಥಾ ಉದ್ದೇಶವನ್ನಿಟ್ಟುಕೊಂಡು ಇದ್ದುದನ್ನು ಇದ್ದಂತೆ ಪ್ರಕಟಿಸಬೇಕೆಂದು ನಿಶ್ಚಯಿಸಲ್ಪಟ್ಟಿರುವ ಈ ಪತ್ರಿಕೆಗೆ ಆಶ್ರಯದಾತರೂ ಪೋಷಕರೂ ಚಂದಾದಾರರೂ ಹೆಚ್ಚಾಗತಕ್ಕದ್ದು ಅವಶ್ಯಕವಾಗಿದೆ.

ಇಂಥಾ ಉದ್ದೇಶವುಳ್ಳ ಪತ್ರಿಕೆಗಳು ಕಡೆಯ ಪಕ್ಷ ೮—೧೦ ಹೊರಟರೂ ಗ್ರಂಥಗಳ ಮುದ್ರಣ ಕೆಲಸವು ಮುಗಿಯುವಂತಿಲ್ಲ.

ಅನೇಕರು ಈಗಿನ ಕಾಲದ ಪ್ರಗತಿ (ಸುಧಾರಣೆ) ಯ ವಿಷಯಗಳು ಇದರಲ್ಲಿ ಇಲ್ಲವೆಂದು ಶಂಕಿಸಬಹುದು. ಪ್ರಗತಿ ಸಂಬಂಧವಾದ ಪತ್ರಿಕೆಗಳು ಅನೇ

ಕ ಇರುತ್ತವೆ. ಆದರೆ ಅವುಗಳಿಂದ ಆಗುವ ಬೋಧೆಯು ನವೀನ ಪದ್ಧತಿಯೊಂದನ್ನೇ ಅವಲಂಬಿಸಿ ಇರುವದೇ ಹೊರತು ಪೂರ್ವಿಕರ ವಿಚಾರವು ಹೇಗಿದ್ದಿತು ? ಈಗಿನವರ ವಿಚಾರವು ಹೇಗೆ ಇದೆ ? ಇವೆರಡನ್ನೂ ಹೋಲಿಸಿದತೆ ಯಾವ ರೀತಿ ನಡೆಯುವದು ಈ ಕಾಲಕ್ಕೆ ಉತ್ತಮವು? ಎಂಬುದನ್ನು ವಿವರಿಸಿ ತಿಳಿಸುವದಿಲ್ಲ. ಹಾಗೆ ತಿಳಿಸದೆ ಇರುವದಕ್ಕೆ ಪೂರ್ವಿಕರ ಗ್ರಂಥಗಳೆಲ್ಲವೂ ಅಚ್ಚಾಗಿ ಅವುಗಳಲ್ಲಿ ಇರುವ ಮುಖ್ಯ ತಾತ್ಪರ್ಯವು ತಿಳಿಯದೆ ಇರುವುದು ಒಂದು ಕಾರಣವೆಂದು ಯೋಚಿಸಲೇ ಬೇಕು. ಧಾರ್ಮಿಕ ಸ್ಥಿತಿಯು ಪೂರ್ವ ಪರಂಪರೆಯಿಂದ ನಡೆದುಕೊಂಡು ಬಂದಿರುವ ಈ ದೇಶದಲ್ಲಿ ಈ ಕಾಲಕ್ಕೆ ಯುಕ್ತವೆಂದು ಕಾಣುವಂತೆಯೇ ಎಲ್ಲರೂ ನಡೆಯಬೇಕೆಂದು ವಿಧಿಸಿದರೆ ಅದು ನಡೆವಳಿಕೆಯಲ್ಲಿ ಬರುವದು ಬಹು ಕಷ್ಟ ಸಾಧ್ಯವಾಗುವದು. ಆದ್ದರಿಂದ ಪೂರ್ವಿಕರ ಗ್ರಂಥಗಳು ಬಯಲಿಗೆ ಬಂದರೆ ಎರಡರ ವಿಮರ್ಶೆಯೂ ನಡೆದು ಜನರು ಅನುಸರಿಸುವ ಮಾರ್ಗವು ಸುಲಭವಾಗಿ ಕಣ್ಣಿನ ಮುಂದೆ ಇಡಸ್ಪಷ್ಟಂತಾಗುವದು. ಆಗ ಜನರೂ ಸೌಮ್ಯವಾಗಿ ತಮ್ಮ ನಡತೆಯನ್ನು ತಿದ್ದಿಕೊಳ್ಳುವರು. ಆದ್ದರಿಂದ ಪೂರ್ವ ಗ್ರಂಥಗಳ ಪ್ರಾಚುರ್ಯದ ಕಡೆಗೂ ಹೆಚ್ಚು ಗಮನ ಕೊಡಬೇಕಾಗಿದೆ.

ಕಳೆದ ವರ್ಷದ ಅನುಭವದಲ್ಲಿ ಮಾಸಪತ್ರಿಕೆಯ ಖರ್ಚಿಗೆ ತಕ್ಕಷ್ಟು ಹಣ ಉತ್ಪತ್ತಿಯಾಗದೆ ಬಹಳ ತೊಂದರೆಗೆ ಗುರಿಯಾಗಿರುವದು ಗೊತ್ತಾಗಿದೆ. ಈ ವರ್ಷ ಶ್ರೀಮನ್ ನಿರಂಜನವರ್ಯರಾದ ಸ್ವಾಮಿಗಳವರೇ ಮುಂತಾದ ಸಮಾಜ ಬಾಂಧವರು ಹೆಚ್ಚಾಗಿ ಉತ್ತೇಜನ ಕೊಡಬೇಕೆಂದು ಪ್ರಾರ್ಥನೆ.

ಮೊದಲು ಚಂದಾ ಕೊಟ್ಟವರ ಪೋಷಕರ ಮತ್ತು ಆಶ್ರಯದಾತರಾದವರ ವಾಯಿದೆಯು ಪೂರೈಸಿತು. ಈ ಪತ್ರಿಕೆಯು ಕೈಸೇರಿದ ಒಡನೆಯೇ ಅವರು ಮಣಿಯಾರ್ಡರ್ ಮೂಲಕ ಹಣವನ್ನು ಕಳುಹಿಸಬೇಕು. ಇಲ್ಲವಾದರೆ ಮುಂದಿನ ಪತ್ರಿಕೆಯು ವಿ. ಪಿ. ಯಾಗಿ ಕಳುಹಿಸಲ್ಪಡುವದು. ಆಗ ನಾಲ್ಕಾಣೆ ಹೆಚ್ಚು ಬೀಳುವದು.

ಧರ್ಮಾಭಿಮಾನಿಗಳ ವಿಧೇಯನಾದ
ಪ್ರಕಾಶಕ.

# ಆಗಮುಗಳು.



ಹಿಂದುಗಳಲ್ಲಿ ಧರ್ಮ ವಿಚಾರವನ್ನು ತಿಳಿದುಕೊಳ್ಳುಲಿಕ್ಕೆ ಆಗಮುಗಳು ಬಹು ಮುಖ್ಯವಾದವುಗಳಾಗಿವೆ. ವೇದಾಗಮ ಪುರಾಣೇತಿಹಾಸಗಳು ಹಿಂದೂ ಮತಬೋಧೆಗೆ ಮುಖ್ಯವಾದವುಗಳೆಂಬ ಬಹುಶ್ರುತವಾದ ವಾಕ್ಯವೇ ಆಗಮುಗಳು ಉಂಟೆಂಬುದನ್ನು ತೋರಿಸುವದಕ್ಕೆ ನಿದರ್ಶನವಾಗಿದೆ; ಆದರೆ ಈಗ ಹಿಂದೂಗಳಲ್ಲಿ ಬಹು ಭಾಗದ ಜನರು ಆಗಮುಗಳ ವಿಚಾರವನ್ನು ಅರಿಯರು. ಪ್ರಸಿದ್ಧವಾದ ಬೆಂಗಳೂರಿನ ಸಾರ್ವಜನಿಕ ಪುಸ್ತಕ ಭಂಡಾರ (Public Library) ದಲ್ಲಿ ಈಗ ೩-೪ ವರ್ಷಗಳ ಹಿಂದೆ ಆಗಮದ ಒಂದು ಪ್ರತಿಯೂ ಇರಲಿಲ್ಲವೆಂಬದನ್ನು ತಿಳಿದು, ಬಹಳ ವ್ಯಸನವುಂಟಾಯಿತು. ತಮ್ಮ ಧರ್ಮದ ಮೂಲ ಗ್ರಂಥಗಳನ್ನು ನೋಡದೆ, ಅವುಗಳಲ್ಲಿ ಏನಿರುವುದೆಂಬದರ ವಿಚಾರದ ಕಡೆಗೆ ಗಮನ ಕೊಡದೆ, ತಮ್ಮ ಹಿರಿಯರ ಧಾರ್ಮಿಕ ತಾತ್ಪರ್ಯವೇನಿರುವುದೆಂಬದನ್ನು ಲಕ್ಷಿಸದೆ, ಹಿಂದುಗಳು ಬರಬರುತ್ತಾ ಧಾರ್ಮಿಕ ಸ್ಥಿತಿಯಲ್ಲಿ ಬಹು ಹೀನಸ್ಥಿತಿಗೆ ಬರುತ್ತಾ ಇದ್ದಾರೆ. ಇದಕ್ಕಾಗಿ ಎಷ್ಟು ದುಃಖಪಟ್ಟರೂ ತೀರದು.

ಆಗಮುಗಳಲ್ಲಿ ಪಾಂಚರಾತ್ರಾಗಮ, ವೈಖಾನಸಾಗಮ, ಶಿವಾಗಮ ಎಂಬುದಾಗಿ ಅನೇಕ ಭಾಗಗಳುಂಟು. ಈ ಆಗಮುಗಳಿಗೆ 'ತಂತ್ರ' ಎಂದೂ ಕರೆಯುತ್ತಾರೆ. ಪಾಂಚರಾತ್ರ ವೈಖಾನಸ ಈ ಭಾಗಗಳು ಕರ್ಮದ ವಿಷಯವನ್ನು ಹೆಚ್ಚಾಗಿ ಬೋಧಿಸುತ್ತವೆ. ಶಿವಾಗಮುಗಳು ಜ್ಞಾನ ಮತ್ತು ಯೋಗ ಈ ವಿಷಯಗಳನ್ನು ಹೆಚ್ಚಾಗಿ ಬೋಧಿಸುತ್ತವೆ. ಆದ್ದರಿಂದ ಇವುಗಳಿಗೆ 'ಸಿದ್ಧಾಂತ' ಎಂಬ ಮತ್ತೊಂದು ಹೆಸರೂ ಇದೆ.

'ವೇದ ಸಿದ್ಧಾಂತಯೋರೈಕ್ಯತ್ವ ಪ್ರತಿಪಾದನಾತ್'

ತಾತ್ಪರ್ಯ:— 'ವೇದ ಸಿದ್ಧಾಂತಗಳಲ್ಲಿ ಒಂದೇ ವಿಧವಾಗಿರುವ ಸಮಾನ ಬೋಧೆಯು ಮಾಡಲ್ಪಟ್ಟಿರುವದರಿಂದ.'

ಇಲ್ಲಿ 'ಸಿದ್ಧಾಂತ' ಎಂದರೆ ಆಗಮ ಎಂಬುದಾಗಿ ಅನೇಕರು ವ್ಯಾಖ್ಯಾನ ಮಾಡಿರುತ್ತಾರೆ.

ಯಾವ ವಿಷಯವು ಬೇಕೆಂದು ಬಯಸುವೆವೋ, ಆ ವಸ್ತು ಇದ ರಲ್ಲಿ ಸಿಕ್ಕುವದೆಂಬ

ಆಜ್ಞಾವಸ್ತು ಸಮಂತಾಚ್ಚ ಗಮ್ಯತೇ ಇತ್ಯಾಗಮೋ ಮತಃ।

ಈ ಶ್ಲೋಕದ ಅಭಿಪ್ರಾಯವು ಸಾಧುವೆಂದೇ ತಿಳಿಯಬೇಕು. ಕೈಲಾಸದಲ್ಲಿ ರುವ ಶಿವನಿಂದ ಬೋಧಿಸಲ್ಪಟ್ಟಿರುವವವಿಂದ ಅಂಥ ಆಗಮಗಳಿಗೆ ಶಿವಾಗ ಮಗಳೆಂದು ಕರೆಯುತ್ತಾರೆ.

ಮದರಾಸಿನಲ್ಲಿ ಪ್ರಕಟವಾಗುತ್ತಿದ್ದ "ಸಿದ್ಧಾಂತ ದೀಪಿಕೆ" ಎಂಬ ಆಂಗ್ಲ ಮಾಸಪತ್ರಿಕೆಯ ೭ನೆಯ ಭಾಗ (೧೯೦೬-೧೯೦೭ನೇ ಇಸವಿ)ದ ೧೪೭ನೆಯ ಪುಟದಲ್ಲಿ ಹೀಗೆ ಬರೆಯಲ್ಪಟ್ಟಿರುವದು:—

'Sivajnana Siddhiyar' Sutra 8 Versus 13-15.

"ಶಿವಜ್ಞಾನ ಸಿದ್ಧಿಯಾರ್" ಎಂಬ ಹೆಸರುಳ್ಳ, ಅರುಲನಂದಿ ಶಿವಾ ಚಾರ್ಯರು ಮಾಡಿರುವ ತಮಿಳು ಗ್ರಂಥದ ೮ನೆಯ ಸೂತ್ರದ ೧೩-೧೫ ನೆಯ ಪದ್ಯಗಳ ಅರ್ಥವು ಹೀಗೆ ಇರುತ್ತದೆ:—

The only real books are the Vedas and Saivagamas. All other books are derived from these. These two books wore eternally revealed by the Perfect God. Of these the Vedas are general and given out for all. The Agamas are special and revealed for the benifit of the blessed and they contain the essential truth of the Veda and Vedanta. Hence all other books are purva-paksha and the Saivagamas alone form the Siddhanta.

ತಾತ್ಪರ್ಯ:—ವೇದಗಳು ಶಿವಾಗಮಗಳು ಮಾತ್ರ ನಿಜವಾದ (ಮೂಲ) ಪುಸ್ತಕಗಳು. ಇತರ ಪುಸ್ತಕಗಳೆಲ್ಲವೂ ಇವುಗಳಿಂದ ಹುಟ್ಟಿವೆ ಈ ಎರಡೂ ಭಾಗಗಳು ಪೂರ್ವದಲ್ಲಿ ಮಹಾದೇವನಿಂದ ಬಂದವುಗಳು. ಇವುಗಳಲ್ಲಿ ವೇದ

ಗಳು ಸಾಮಾನ್ಯವಾದವು; ಎಲ್ಲರಿಗಾಗಿ ಪ್ರಕಟವಾದವುಗಳು. ಆಗಮುಗಳು ವಿಶೇಷಗ್ರಂಥಗಳು, ಆ ಮಹಾದೇವನ ದಯೆಯನ್ನು ಪಡೆದವರ ಉಪಯೋಗಕ್ಕಾಗಿ ಪ್ರಕಟವಾದವುಗಳು. ಈ ಆಗಮುಗಳು ವೇದ ಮತ್ತು ವೇದಾಂತಗಳ ಸಾರವಾದ ನಿಜತತ್ವವನ್ನು ಒಳಗೊಂಡಿವೆ; ಆದ್ದರಿಂದ ಇತರ ಪುಸ್ತಕಗಳು ಪೂರ್ವಪಕ್ಷವಾದರೆ ಶಿವಾಗಮುಗಳೇ ಸಿದ್ಧಾಂತ(ನಿರ್ಣಯ) ರೂಪವಾಗಿವೆ.

ಹಾಗಾದರೆ ಈ ಶಿವಾಗಮುಗಳಲ್ಲಿ ಏನಿರುವದು?

ಶಿವಾಗಮುಗಳು ೧೦ ರುದ್ರಾಗಮುಗಳು ೧೮ ಇವೆರಡೂ ಸೇರಿ, ಸಾಮಾನ್ಯವಾಗಿ ಶಿವಾಗಮುಗಳೆಂದು ಭಾವಿಸಲ್ಪಟ್ಟಿರುವ ಈ ಆಗಮುಗಳು ಒಟ್ಟು ೨೮. ಇವುಗಳಲ್ಲಿ—

೧ನೆಯ ಕಾಮಿಕಾಗಮದಲ್ಲಿ ಉತ್ತರ, ಭೈರವೋತ್ತರ, ನಾರಸಿಂಹ (ಮೃಗೇಂದ್ರ) ಎಂಬ ಮೂರು ಭಾಗಗಳೂ, ೨ನೆಯ ಯೋಗಜಾಗಮದಲ್ಲಿ ವೀಣಾಶಿರೋತ್ತರ, ತಾರಕತಂತ್ರ, ಸಾಂಖ್ಯಾಗಮ, ಶಾಂತ್ಯಾಗಮ, ಆತ್ಮಯೋಗ ಎಂಬ ಐದು ಭಾಗಗಳೂ, ೩ನೆಯ ಚಿಂತ್ಯಾಗಮದಲ್ಲಿ ಸುಚಿಂತ್ಯಾಗಮ, ಶುಭಾಗಮ, ವಾಮತಂತ್ರ, ಪಾಪನಾಶಕ, ಸಾರೋದ್ಭವ, ಅಮೃತಾಗಮ ಎಂಬ ಆರು ಭಾಗಗಳೂ, ೪ನೆಯ ಕಾರಣಾಗಮದಲ್ಲಿ ಕಾರಣ ತಂತ್ರ, ಪಾವನ ತಂತ್ರ, ದೌರ್ಜನ್ಯ ತಂತ್ರ, ಮಹೇಂದ್ರತಂತ್ರ, ಭೀಮತಂತ್ರ, ಮಾರಣತಂತ್ರ, ಈಶಾನತಂತ್ರ ಎಂಬ ಏಳು ಭಾಗಗಳೂ, ೫ನೆಯ ಅಜಿತಾಗಮದಲ್ಲಿ ಪ್ರಭೂತಾಗಮ, ವೀರೋದ್ಭೂತಾಗಮ, ಪಾರ್ವತೀತಂತ್ರ, ಪದ್ಮಸಂಹಿತಾ ಎಂಬ ನಾಲ್ಕು ಭಾಗಗಳೂ, ೬ನೆಯ ದೀಪ್ತಾಗಮದಲ್ಲಿ ಅಮೇಯಾಗಮ, ಅಪ್ರತಿಮಾಗಮ, ಆಪ್ಯಾಗಮ, ಅಸಂಖ್ಯಾಗಮ, ಅಮಿತೌಜಸಾಗಮ, ಆನಂದಾಗಮ, ಮಾಧವೋದ್ಭೂತ, ಅದ್ಭುತಾಗಮ, ಅಮೃತಾಗಮ ಎಂಬ ಒಂಬತ್ತು ಭಾಗಗಳೂ, ೭ನೆಯ ಸೂಕ್ಷ್ಮಾಗಮದಲ್ಲಿ ಸೂಕ್ಷ್ಮಸಂಹಿತಾ ಎಂಬ ಭಾಗವೂ, ೮ನೆಯ ಸಹಸ್ರಾಗಮದಲ್ಲಿ ಅತೀತಾಗಮ, ಅಮಲಾಗಮ, ಶುದ್ಧಾಗಮ, ಅಪ್ರಮೇಯಾಗಮ, ಜ್ಯೋತಿರ್ಭಾವನಾಗಮ, ಪ್ರಬುದ್ಧಾಗಮ, ವಿಬುದ್ಧಾಗಮ, ಹಸ್ತಾಗಮ, ಅಲಂಕಾರಾಗಮ, ಸುಬೋಧಾಗಮ ಎಂಬ ಹತ್ತು ಭಾಗಗಳೂ, ೯ನೆಯ ಅಂಶುಮದಾಗಮದಲ್ಲಿ ವಿದ್ಯಾಪುರಾಣ, ಭಾಸ್ಕರಾಗಮ, ನೀಲಲೋಹಿತಾಗಮ, ಪ್ರಕರಣಾಗಮ, ಭೂತತಂತ್ರ,

ಆತ್ಮಾಲಂಕಾರ, ಕಾಶ್ಯಪಾಗಮ, ಗೌತಮಾಗಮ, ಮಹೇಂದ್ರಾಗಮ, ಬ್ರಹ್ಮಾಗಮ, ವಸಿಷ್ಠಾಗಮ, ಈಶಾನೋತ್ತರ ಎಂಬ ಹನ್ನೆರಡು ಭಾಗಗಳೂ, ೧೦ನೆಯ ಸುಪ್ರಬೋಧಾಗಮದಲ್ಲಿ ಸುಬೋಧಾಗಮ, ಪ್ರಬೋಧಾಗಮ, ಬೋಧನಾಗಮ ಎಂಬ ಮೂರು ಭಾಗಗಳೂ, ೧೧ನೆಯ ವಿಜಯಾಗಮದಲ್ಲಿ ವಿಜಯತಂತ್ರ, ಉದ್ಭವತಂತ್ರ, ಸೌಮ್ಯತಂತ್ರ, ಅಘೋರತಂತ್ರ, ಮೃತ್ಯುನಾಶಕತಂತ್ರ, ಕುಬೇರೇಶತಂತ್ರ, ವಿಮಲತಂತ್ರ, ಮಹಾಘೋರ ತಂತ್ರ ಎಂಬ ಎಂಟು ಭಾಗಗಳೂ, ೧೨ನೆಯ ನಿಶ್ವಾಸಾಗಮದಲ್ಲಿ ನಿಶ್ವಾಸ, ಉತ್ತರನಿಶ್ವಾಸ, ನಿಶ್ವಾಸ ಮುಖೋದಯ, ನಿಶ್ವಾಸನಯನ, ನಿಶ್ವಾಸಕಾರಕ, ಘೋರಸಂಹಿತಾ ಸುಸಾಂಖ್ಯ ಗುಹ್ಯ ಎಂಬ ಎಂಟು ಭಾಗಗಳೂ, ೧೩ನೆಯ ಸ್ವಾಯಂಭುವಾಗಮದಲ್ಲಿ ಸ್ವಯಂಭೂತ, ಪ್ರಜಾಪತಿಮತ, ಪದ್ಮತಂತ್ರ ಎಂಬ ಮೂರು ಭಾಗಗಳೂ, ೧೪ನೆಯ ಅನಲಾಗಮದಲ್ಲಿ ಆಗ್ನೇಯ ಎಂಬ ಒಂದೇ ಭಾಗವೂ, ೧೫ನೆಯ ವೀರಾಗಮದಲ್ಲಿ ಪ್ರಸ್ತಾರತಂತ್ರ, ಪ್ರಸ್ಫುರತಂತ್ರ, ಪ್ರಬೋಧಕ ತಂತ್ರ, ಬೋಧಕತಂತ್ರ, ಬೋಧಾ ತಂತ್ರ, ಅಮೋಹ ತಂತ್ರ, ಮೋಹಸಮಯ ತಂತ್ರ, ಶಕಟತಂತ್ರ, ಶಾಕಟ ತಂತ್ರ, ಹಲ ತಂತ್ರ, ವಿಲೇಖನ ತಂತ್ರ ಭದ್ರ ತಂತ್ರ, ವೀರತಂತ್ರ ಎಂಬ ಹದಿಮೂರು ಭಾಗಗಳೂ, ೧೬ನೆಯ ರೌರವಾಗಮದಲ್ಲಿ ಕಾಲದಹನ, ರೌರವೋತ್ತರ, ಕೌಮಾರ, ಕಾಲ, ಮಹಾಕಾಲ, ಇಂದ್ರಾಗಮ ಎಂಬ ಆರು ಭಾಗಗಳೂ, ೧೭ನೆಯ ಮಕುಟಾಗಮದಲ್ಲಿ ಮಕುಟ, ಮಕುಟೋತ್ತರ ಎಂಬ ಎರಡು ಭಾಗಗಳೂ, ೧೮ನೆಯ ವಿಮಲಾಗಮದಲ್ಲಿ ಅನಂತ ಭೋಗಾಗಮ, ಆಕ್ರಾಂತಾಗಮ, ಹೃದ್ದಾಹಾಗಮ, ಅವಿಕೃತಾಗಮ, ಉದ್ಭೂತಾಗಮ, ಮಾರಣತಂತ್ರ ಎಂಬ ಆರು ಭಾಗಗಳೂ, ೧೯ನೆಯ ಚಂದ್ರಜ್ಞಾನಾಗಮದಲ್ಲಿ ಸ್ಥಿರಸಂಹಿತಾ, ಸ್ಥಾಣುಸಂಹಿತಾ, ಮಹತ್ ಸಂಹಿತಾ, ನಂದಿ ಸಂಹಿತಾ, ನಂದಿಕೇಶ್ವರ ಸಂಹಿತಾ, ಏಕಪಾದಪುರಾಣ, ಶಂಕರಾಗಮ, ನೀಲಭದ್ರ ತಂತ್ರ, ಶಿವಭದ್ರಾಗಮ, ಕಾಲಭೇದಾಗಮ, ಶ್ರೀಮುಖಾಗಮ, ಶಿವಶಾಸನಾಗಮ, ಶಿವಶೇಖರಾಗಮ, ದೇವೀಮತಾಗಮ, ಎಂಬ ಹದಿನಾಲ್ಕು ಭಾಗಗಳೂ, ೨೦ನೆಯ ಬಿಂಬಾಗಮದಲ್ಲಿ ಚತುರ್ಮುಖ ತಂತ್ರ, ಮಲಯ ತಂತ್ರ, ಮಹಾಯೋಗ, ಸಂಸ್ತೋಭಾಗಮ, ಪ್ರತಿಬಿಂಬಾಗಮ, ಅರ್ಥಾಲಂಕಾರ, ವಾಯವ್ಯ ತಂತ್ರ, ಕಾಟತಂತ್ರ, ತ್ರುಟ ನೀಲಕಾಠ, ತುಲಾವೃತ, ತುಲಾಯೋಗ,

ಕುಟ್ಟಿಮಾತಂತ್ರ, ಸರ್ವಶೇಖರ, ಮಹಾವಿದ್ಯಾ, ಮಹಾಸಾರ ಎಂಬ ಹದಿನೈದು ಭಾಗಗಳೂ, ೨೧ನೆಯ ಪ್ರೋದ್ಗೀತಾಗಮದಲ್ಲಿ ಕವಚಾಗಮು, ವರಾಹತಂತ್ರ, ಪಿಂಗಳವ ತ, ಪಶುಬಂಧ ಸಂಹಿತಾ, ದಂಡಧರ ತಂತ್ರ, ಕುಶತಂತ್ರ, ಧನುರ್ಧಾರಣ, ಶಿವಜ್ಞಾನ, ವಿಜ್ಞಾನ, ತ್ರಿಪಾಲ ಜ್ಞಾನ, ಆಯುರ್ವೇದ, ಧನುರ್ವೇದ, ಸರ್ಪದಂಷ್ಟ್ರಾವಿಭೇದ, ಸಂಗೀತ, ಭರತ, ಆತೋದ್ಯ ಎಂಬ ಹದಿನಾರು ಭಾಗಗಳೂ, ೨೨ನೆಯ ಲಲಿತಾಗಮದಲ್ಲಿ ಲಲಿತಾ, ಲಲಿತೋತ್ತರ, ಕೌಮಾರತಂತ್ರ, ವಿಘ್ನೇಶ್ವರಾಗಮ ಎಂಬ ನಾಲ್ಕು ಭಾಗಗಳೂ, ೨೩ನೆಯ ಸಿದ್ಧಾಗಮದಲ್ಲಿ ಸಾರೋತ್ತರ, ದೇವೇಶೋತ್ತರ, ಶಾಲಭೇದ, ಶಶಿಮಂಡಲ ಎಂಬ ನಾಲ್ಕು ಭೇದಗಳೂ, ೨೪ನೆಯ ಶಾಂತಾಗಮದಲ್ಲಿ ಲಿ೦ಗಾಧ್ಯಕ್ಷ, ಸುರಾಧ್ಯಕ್ಷ, ಶಂಕರ ತಂತ್ರ, ಮಹೇಶ್ವರಾಗಮ, ಅಸಂಖ್ಯತಂತ್ರ, ಅನಿಲಾಗಮ, ದ್ವಂದ್ವಾಗಮ ಎಂಬ ಏಳು ಭಾಗಗಳೂ, ೨೫ನೆಯ ಸರ್ವೋತ್ತರಾಗಮದಲ್ಲಿ ಉತ್ತರಾಗಮ, ತತ್ವೋತ್ತರಾಗಮ, ವಿಷಯೋತ್ತರಾಗಮ ಎಂಬ ಮೂರು ಭಾಗಗಳೂ, ೨೬ನೆಯ ಪಾರಮೇಶ್ವರಾಗಮದಲ್ಲಿ ಮತಂಗ ತಂತ್ರ, ಯಕ್ಷಿಣೀತಂತ್ರ, ಪದ್ಮಾಗಮ, ಪೌಷ್ಕರ, ಸುಪ್ರಯೋಗ, ಹಂಸಾಗಮ, ಸಾಮಾನ್ಯಾಗಮ ಎಂಬ ಏಳು ಭಾಗಗಳೂ, ೨೭ಯ ಕಿರಣಾಗಮದಲ್ಲಿ ಗರುಡಾಗಮ, ನೈಋತಾಗಮ, ನೀಲತಂತ್ರ, ರೂಕ್ಷಾಗಮ, ಭಾನಾಗಮ, ವೈಕ್ರಮಾಗಮ, ಬುದ್ಧಾಗಮ. ಪ್ರಬುದ್ಧಾಗಮ, ಕಾಲತಂತ್ರ ಎಂಬ ಒಂಬತ್ತು ಭಾಗಗಳೂ ೨೮ನೆಯ ವಾತುಲಾಗಮದಲ್ಲಿ ವಾತುಲ, ಉತ್ತರವಾತುಲ, ಕಾಲಜ್ಞಾನ, ಪರಾಜಿತ, ಸರ್ವಾಗಮ, ಸರ್ವೇಷ್ಟಾಗಮ, ಶ್ರೇಷ್ಠಾಗಮ, ನಿತ್ಯಾಗಮ-ಶುದ್ಧಾಗಮ, ಮಹದಾಗಮ, ವಿಶ್ವಾಸಾಗಮ, ವಿಶ್ವಾತ್ಮಕಾಗಮ ಎಂಬ ಹನ್ನೆರಡು ಭಾಗಗಳೂ ಇರುತ್ತವೆ.

ಈ ಹೆಸರುಗಳನ್ನು ಆಗಮದ ಶ್ಲೋಕಗಳ ಬರಹದ ಪ್ರತಿಯ ಆಧಾರದಿಂದಲೂ ಮತ್ತು ಶಿವಜ್ಞಾನ ಸಿದ್ಧಿಯಾರ್ ಎಂಬ ಆಂಗ್ಲಪುಸ್ತಕದಲ್ಲಿರುವ ಹೆಸರುಗಳಿಂದಲೂ ಸಂಗ್ರಹಿಸಿ ಇರುತ್ತದೆ. ಈ ಎರಡೂ ಬಹುಮಟ್ಟಿಗೆ ಹೋಲುತ್ತವೆ. ಈ ಹೆಸರುಗಳನ್ನೋದುವದಕ್ಕೆ ಓದುಗರು ಬೇಸರಪಡಬಹುದು. ಓದಿದರೆ ಸ್ವಲ್ಪ ಪ್ರಯೋಜನವಿದೆ. ಹಾಗೆ ಓದುವದಾದರೆ ಈ ಕೆಳಗೆ ಕಂಡ ವಿಷಯಗಳು ಅವರ ಊಹೆಗೆ ಬರಬಹುದು-

ಈ ಕಾಲದ ಪುಸ್ತಕಗಳಲ್ಲಿ ಯಾರು ರಚಿಸಿದರೋ, ಯಾವ ಅಥವಾ ಯಾರ ವಿಷಯವಾಗಿ ರಚಿಸಲ್ಪಟ್ಟಿತೋ, ಅವರ ಹೆಸರು ಇರುವಂತೆ ಈ ಆಗಮಗಳಲ್ಲಿ ಇರುವದಿಲ್ಲ. ಕೆಲವು ಆಗಮಗಳು ಶಿವನಿಂದ ಯಾರಿಗೆ ಹೇಳಲ್ಪಟ್ಟಿರುವವೋ ಅವರ ಹೆಸರಿನಿಂದ ಕರೆಯಲ್ಪಟ್ಟಿರುತ್ತವೆ.

ಉದಾ:—ಶಿವನು ಮೃಗೇಂದ್ರನಿಗೆ ಬೋಧಿಸಿದುದರಿಂದ ಮೃಗೇಂದ್ರಾಗಮ, ಇದರಂತೆಯೇ ಕಾಶ್ಯಪಾಗಮ, ಗೌತಮಾಗಮ ಎಂಬ ಹೆಸರುಗಳು ಕಾಣಬರುವದರಿಂದಲೂ, ಸೂಕ್ಷ್ಮತಂತ್ರದ ೭ನೆಯ ಪಟಲದಲ್ಲಿ

ಆದಿಶೈವಾಸ್ತು ವಿಜ್ಞೇಯಾಃ ಕೌಶಿಕಾದ್ಯಾ ನಗಾತ್ಮಜೇ ।
ಕೌಶಿಕಃ ಕಾಶ್ಯಪಶ್ಚೈವ ಭರದ್ವಾಜಾತ್ರಿಗೌತಮಾಃ ||
ಆದಾವೇತೇ ಮಹಾದೇವಿ ಪಂಚವಕ್ತ್ರೇಷು ದೀಕ್ಷಿತಾಃ ॥

ತಾತ್ಪರ್ಯ:—ಕೌಶಿಕಾದಿ ಋಷಿಗಳನ್ನು ಆದಿಶೈವರೆಂದು ತಿಳಿಯಬೇಕು. ಕೌಶಿಕ, ಕಾಶ್ಯಪ, ಭಾರದ್ವಾಜ, ಅತ್ರಿ, ಗೌತಮ ಇವರು ನನ್ನ ಐದು ಮುಖಗಳಲ್ಲಿ ದೀಕ್ಷೆ ಹೊಂದಿದವರು.

ಎಂದು ಹೇಳಿರುವದರಿಂದಲೂ ಈ ಆಗಮಗಳು ಈ ಋಷಿಗಳಿಗಾಗಿ ಹೇಳಲ್ಪಟ್ಟವುಗಳೆಂದು ಊಹೆಗೆ ಬರುತ್ತದೆ. ಈ ಆಗಮಗಳಿಂದ ಆ ಕಾಲದ ಕೆಲವರ ಹೆಸರುಗಳೂ ಮತ್ತು ಅವರ ವಿಷಯವಾದ ಅನೇಕ ಸಂಗತಿಗಳೂ ತಿಳಿದು ಬರುತ್ತಿವೆ. ಕನ್ನಡ ಛಂದಶ್ಶಾಸ್ತ್ರದಲ್ಲಿ ನಾಗವರ್ಮನು "ಪಿಂಗಳಮತದಿಂದ" ಎಂಬದಾಗಿ ಕೆಲವು ಅಂಶಗಳನ್ನು ಬರೆದಿಶುವದರಿಂದ ಈ ಆಗಮಗಳಲ್ಲಿಳುವ ಪಿಂಗಳಮತ ಎಂಬದು ಛಂದಶ್ಶಾಸ್ತ್ರವೇ ಎಂದು ಊಹೆ. ಆಯುರ್ವೇದವು ವೈದ್ಯ ಭಾಗವೆಂಬುದು ಸರ್ವರಿಗೂ ತಿಳಿದ ವಿಷಯವೇ ಆಗಿದೆ. ಭರತ, ಸಂಗೀತ, ಧನುರ್ವೇದ, ಅರ್ಥಾಲಂಕಾರ ಮಹಾಯೋಗ ಮೊದಲಾದವುಗಳು ಆಯಾ ವಿದ್ಯೆಗಳನ್ನು ತಿಳಿಸುತ್ತವೆ. ಮಾರಣತಂತ್ರ ಮೊದಲಾದ ಕೆಲವು, ಮಂತ್ರವಿದ್ಯೆಯನ್ನು ಬೋಧಿಸುತ್ತವೆ. ವಾತುಲಾಗಮದಲ್ಲಿ ಅಕ್ಷರಗಳ ಉತ್ಪತ್ತಿ, ಮೊದಲಾದ ವ್ಯಾಕರಣ ಭಾಗವನ್ನು ನೋಡಬಹುದು. ಆತ್ಮಯೋಗ ಸಾಂಖ್ಯಾಗಮ ಮೊದಲಾದವು ಷಡ್ದರ್ಶನಗಳಲ್ಲಿ ಸೇರಿರುವ ಉತ್ತರಮೀಮಾಂಸ ಮತ್ತು ಸಾಂಖ್ಯಾದಿಗಳ ಮೂಲ ಗ್ರಂಥಗಳಾಗಿವೆ ಏಕಪಾದ ಪುರಾಣ, ವಿದ್ಯಾಪುರಾಣ ಎಂಬ ಭಾಗಗಳು ಇರುವದರಿಂದ ವ್ಯಾಸ ಋಷಿಯು ಪುರಾಣಗಳನ್ನು ಬರೆ

ಯುವದಕ್ಕೆ ಮುಂಚಿತವಾಗಿಯೇ ಪುರಾಣ ಎಂಬುದು ಬಳಕೆಯಲ್ಲಿ ಇದ್ದಿತೆಂದು ತಿಳಿಯು ಬರುತ್ತದೆ.

ಕೆಲವು ಆಗಮಗಳಿಂದ ದೇವಸ್ಥಾನಗಳನ್ನು ಕಟ್ಟಿಸುವದು ಮುಂತಾದ ವಿಷಯಗಳನ್ನು ವಿವರವಾಗಿ ನೋಡಬಹುದು. ವೇದದಲ್ಲಿ ಸಂಕ್ಷಿಪ್ತವಾಗಿ ಹೇಳಿದ ಕೆಲವು ಕರ್ಮಗಳ ವಿವರವನ್ನು ಈ ಆಗಮಗಳಲ್ಲಿ ಬಹಳವಾಗಿ ನೋಡಬಹುದಾಗಿದೆ. ಇದರಿಂದ ಆಗಮಗಳು ಜನರಿಗೆ ಅವಶ್ಯಕವಾದ ಎಲ್ಲ ವಿಷಯಗಳನ್ನು ಬೋಧಿಸುತ್ತವೆ ಎಂಬುದೂ, ಈಗ ಹಿಂದೂಗಳಲ್ಲಿ ಪ್ರಚಾರದಲ್ಲಿರುವ ಶಾಸ್ತ್ರಗಳಿಗೆ ಈ ಆಗಮಗಳೇ ಮೂಲಾಧಾರವೆಂಬುದೂ ಸ್ಪಷ್ಟಪಡುತ್ತದೆ; ಆದ್ದರಿಂದ ಮೇಲೆ ಕಂಡ 'ತಮಿಳು ಗ್ರಂಥ' ವಲ್ಲಿ ಹೇಳಲ್ಪಟ್ಟ ವಿಷಯವು ಅಕ್ಷರಶಃ ನಿಜವೆಂದು ತೋರುತ್ತದೆ.

ವಿವೇಕಚಿಂತಾಮಣಿ ಮೊದಲಾದ ಆರು ಶಾಸ್ತ್ರ ಪುಸ್ತಕಗಳನ್ನು ಬರೆದು ಪ್ರಸಿದ್ಧರಾದ ಶ್ರೀ ನಿಜಗುಣ ಶಿವಯೋಗಿಗಳು ಈ ಶಿವಾಗಮಗಳ ವಿಷಯದಲ್ಲಿ ಹೀಗೆ ಅಭಿಪ್ರಾಯ ಪಟ್ಟಿರುವರು:—

ನೂರತೊಂಬತ್ತೆಂಟು ಭೇದಗಳುಳ್ಳ ಶಿವರುದ್ರಾಗಮಗಳೆ ೯ ಸದಾಶಿವನ ಪಂಚ ಮುಖಗಳಿಂದುದಯಿಸಿದವಾಗಿ "ಈಶಾನಸ್ಸರ್ವ ವಿದ್ಯಾನಾಮೀಶ್ವರಃ'' ಎಂಬ ಶ್ರುತ್ಯರ್ಥದ ಅನುಸಾರಮಾಗಿ ಅಷ್ಟಾದಶ ಮಹಾವಿದ್ಯೆಗಳುಂ ಅಷ್ಟಾದಶ ಉಪ ವಿದ್ಯೆಗಳುಂ ಚತುಷ್ಷಷ್ಟಿ ತಂತ್ರಗಳಂ ಚತುಷ್ಷಷ್ಟಿ ಉಪತಂತ್ರಗಳುಂ ಇಹಪರ ತತ್ವಾರ್ಥ ಸರ್ವಸ್ವಮುಂ ಸಕಲ ಮತ ಕುಲ ಕರ್ಮ ಧರ್ಮ, ಶಿಲ್ಪ ವ್ಯಾಪಾರ ರಹಸ್ಯಮುಂ ಶಿವಾಗಮದಿಂದಲೇ ಉಪದಿಷ್ಟಮಾಗಿ ಅನುಭವಸಿದ್ಧಮಪ್ಪುದರಿಂ ಪ್ರಪಂಚವೆಲ್ಲಮುಂ ಶಿವಾಗಮಜ್ಞೇಯಮಾಗಿ ಜೀವಕೋಟಿಯೆಲ್ಲಮುಂ ಶೈವಮಕ್ಕುಂ ॥

ವಿದ್ಯೆಗಳಲ್ಲಿ ಪರಾವಿದ್ಯೆ, ಅಪರಾವಿದ್ಯೆ ಎಂದು ಎರಡು ಭಾಗಗಳಿರುತ್ತವೆ. ಈ ಎರಡರಲ್ಲಿ ಪರಾವಿದ್ಯೆಯು ಆತ್ಮವಿದ್ಯೆ; ಅಪರಾವಿದ್ಯೆಯು ಸಾಮಾನ್ಯ ವಿಷಯಗಳನ್ನು ತಿಳಿಸುವ ವಿದ್ಯೆಯು. ಈ ಅಪರಾವಿದ್ಯೆಯು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ವ್ಯಾಕರಣಾದಿ ವೇದದ ಅಂಗಗಳು ಮೊದಲಾದವುಗಳಿಂದ ತಿಳಿಯಲ್ಪಡುವದೆಂದು ಬಹಳ ಹಳೆಯದಾದ "ಮುಂಡಕೋಪನಿಷತ್'' ಇತ್ಯಾದಿ ಕೆಲವು ಉಪನಿಷತ್ತು

ಗಳು ಹೇಳುತ್ತವೆ. ಮಹಾದೇವನನ್ನು ತಿಳಿಯುವ ಪರಾವಿದ್ಯೆ ಅಥವಾ ಪರಮವಿದ್ಯೆಯನ್ನು ಶಿವಾಗಮಗಳು ಇಪ್ಪತ್ತೆಂಟರಿಂದ ತಿಳಿಯಬಹುದೆಂದು ಹೇಳುವ ಶಿವಪುರಾಣ ವಾಯವೀಯ ಸಂಹಿತೆಯ ಅಭಿಪ್ರಾಯವೂ, ಮೇಲೆ ಕಂಡ ತಮಿಳುಗ್ರಂಥದ ಅಭಿಪ್ರಾಯವೂ ಒಂದೇ ಆಗಿರುವದರಿಂದ, ಇದೇ ಹಿಂದೂಗಳೆಲ್ಲರ ಮುಖ್ಯ ಅಭಿಪ್ರಾಯವೆಂಬುದನ್ನು ಸರ್ವರೂ ಚನ್ನಾಗಿ ನೆನಪಿನಲ್ಲಿ ಇಡಬೇಕು.

ಮೇಲೆ ಕಂಡ 'ಶಿವಜ್ಞಾನ-ಸಿದ್ಧಿಯಾರ್' ಎಂಬ ಗ್ರಂಥವನ್ನು ಆಂಗ್ಲಭಾಷೆಗೆ ಬದಲಿಸಿರುವ ಶೈವ ಸಿದ್ಧಾಂತ ಮಹಾಸಮಾಜದ ಮೂರನೆಯ ಮತ್ತು ಆರನೆಯ ಮಹಾಸಭೆಗೆ ಅಧ್ಯಕ್ಷರಾಗಿದ್ದ ಜೆ. ಎಂ. ನಲ್ಲಸ್ವಾಮಿ ಪಿಳ್ಳೆ, B. A. B. L ರವರು ತಮ್ಮ ಗ್ರಂಥದ ೧೩-೧೪ನೆಯ ಪುಟದಲ್ಲಿಯ ಪೀಠಿಕೆಯಲ್ಲಿ ಪ್ರಸಿದ್ಧರಾದ ಶ್ರೀ ಶಂಕರಾಚಾರ್ಯರು ಎಂಟನೆಯ ಶತಮಾನದಲ್ಲಿ ಇದ್ದರೆಂತಲೂ, ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದ ಶ್ರೀ ನೀಲಕಂಠ ಶಿವಾಚಾರ್ಯರು ಇವರಿಗಿಂತ ಸ್ವಲ್ಪ ಮುಂಚೆಯೇ ಇದ್ದರೆಂತಲೂ, ಇವರು ಕೂಡಾ ವೇದ ಮತ್ತು ಶಿವಾಗಮಗಳು ಒಂದೇ ಅಭಿಪ್ರಾಯಗಳುಳ್ಳವೆಂದು ಬ್ರಹ್ಮಸೂತ್ರದ II, ii ನೆಯ ಅಧಿಕರಣ ೩೮ ನೆಯ ಸೂತ್ರದ ವ್ಯಾಖ್ಯೆಯಲ್ಲಿ ಅಭಿಪ್ರಾಯಪಟ್ಟಿರುವರೆಂತಲೂ ಬರೆದಿರುತ್ತಾರೆ. ಅವರ ಯಥಾ ವಾಕ್ಯವು ಇದೇ.

Sri Nilakanta Sivacharya declared in no unmistakable terms that he perceived no difference between the Veda and Saivagaama. And it is our contenfion as that of Sri Neelakanta that all the Vedas and Upanishats and Agamas established the Saiva Religion and Siddhanta philosophy.

ತಾತ್ಪರ್ಯ:—ಶ್ರೀ ನೀಲಕಂಠ ಶಿವಾಚಾರ್ಯರು ವೇದ ಮತ್ತು ಶಿವಾಗಮಗಳಿಗೆ ವ್ಯತ್ಯಾಸವು ಇಲ್ಲವೆಂದು ದೃಢಮಾಡಿಕೊಂಡಿರುವದಾಗಿ ತಪ್ಪಿಲ್ಲದ ರೀತಿಯಲ್ಲಿ ಪ್ರಕಟಿಸಿದರು.

ಇದರಿಂದ ಆ ಆಂಗ್ಲ ಭಾಷೆಯ ಪದವೀಧರರೂ ಇದೇ ಅಭಿಪ್ರಾಯವುಳ್ಳವರಾಗಿತ್ತಾರೆ ಎಂಬುದು ವ್ಯಕ್ತಪಟ್ಟಂತಾಯಿತು. ಕೆಲವು ಆಗಮ ಭಾಗಗಳನ್ನು ಓದಿದ ಈ ಬರೆಹಗಾರನಿಗೂ ಇದೇ ಅಭಿಪ್ರಾಯವು ಉಂಟಾಗಿರುತ್ತದೆ. ವೀರಶೈವರು ಪ್ರಮಾಣವೆಂದು ನಂಬುವ ಸಿದ್ಧಾಂತ ಶಿಖಾಮಣಿ ಮೊದಲಾದ ಅನೇಕ ಗ್ರಂಥಗಳಲ್ಲಿ ವೀರಶೈವ ಮತಕ್ಕೆ ಶಿವಾಗಮಗಳೇ ಮೂಲ ಗ್ರಂಥಗಳೆಂದು ಸ್ಪಷ್ಟವಾಗಿ ಹೇಳಿರುತ್ತದೆ; ಆದ್ದರಿಂದ ಈ ಶಿವಾಗಮಗಳೇ ವೀರಶೈವರ ಪ್ರಾಮಾಣ್ಯ ಗ್ರಂಥಗಳು, ಮೂಲ ಗ್ರಂಥಗಳು, ಮಾರ್ಗದರ್ಶಕ ಗ್ರಂಥಗಳು, ಯಾವಾಗಲೂ ಓದುವ ಗ್ರಂಥಗಳು, ವೀರಶೈವರ ಶಾಲೆಗಳಲ್ಲಿ ಓದಲಿಕ್ಕೆ ಪುಸ್ತಕಗಳಾಗಿ ನೇಮಿಸತಕ್ಕ ಗ್ರಂಥಗಳು, ಹಿಂದೂಗಳೆಲ್ಲರಿಗೂ ತಮ್ಮ ಧರ್ಮದ ಮುಖ್ಯ ಸಾರವನ್ನು ತಿಳಿಸುವ ಗ್ರಂಥಗಳು ಆಗಿರುತ್ತವೆ.

ಈ ದೆಸೆಯಿಂದಲೇ ವೀರಶೈವರನ್ನು ಆಗಮಾಂತದವರೆಂದು ಭಾವಿಸಿ, ಇವರ ವಿಷಯವಾಗಿ ಮೇಲೆ ಕಂಡ 'ಸಿದ್ಧಾಂತ ದೀಪಿಕೆ' ಎಂಬ ಆಂಗ್ಲಪತ್ರಿಕೆಯ ಹನ್ನೊಂದನೆಯ ಭಾಗದ ೩೧೫ನೆಯ ಪುಟದಲ್ಲಿ ತತ್ವಜ್ಞಾನ ಪಂಡಿತರು (Doctor of philosophy) ಎಂಬ ಬಿರುದನ್ನು ಸಂಪಾದಿಸಿದ ಮ॥ ರಾ॥ ವಿ. ವಿ. ರಮಣಶಾಸ್ತ್ರಿಯವರು ಹೀಗೆ ಹೇಳಿರುತ್ತಾರೆ:—

When all the outer observances of the veerasaivas are closely studied with sympathy and insight you will see that the cntire religion is a vindication of the principle of the brother-hood of man andits ncessary concomitant, the neighbourly love, nay, the universal love and that of the renunciation of the world that is the renunciation of the prapancha with its vicious cycle of bitters and sweets sweets and bitters and so on, in never ending succession. I may safely say that there are few faiths that have flourished on the

Indian soil, which have so openly preached the equality of man, of the prince and the peasant, of the sage and the sinner in the social scale.

The veerasyvas did away with lip-religion of polished commonplaces and of mere moral and spiritual shibboleths, and actually lived the principles that they taught. The invidious distinction that is usually shown iu India between man and man as a social being, as a moral being and as a spiritual being, has brought the country so low in real spirituality that sham and humbug and fine phrases exist in place of real religion.

ತಾತ್ಪರ್ಯ:—ವೀರಶೈವರ ಹೊರಗಿನ ಆಚರಣೆಗಳನ್ನೆಲ್ಲಾ ಕೊನೆಯವರೆವಿಗೂ ಮಮತೆ ಮತ್ತು ವಿವೇಕದಿಂದ ವಿಚಾರ ಮಾಡಿದ್ದಾದರೆ, ಆ ಮತವೆಲ್ಲವೂ ಮನುಷ್ಯನ ಸಹೋದರ ಭಾವದ ಸ್ಥಾಪನೆಯೇ ಆಗಿರುತ್ತದೆ. ಆವಶ್ಯಕವಾಗಿ ಅದರೊಡನೆ ಸೇರುವದು ನೆರೆಹೊರೆಯವರ ಪ್ರೀತಿಗೆ-ಇಷ್ಟೇ ಅಲ್ಲ; ಜಗತ್ತಿನ ಪ್ರೀತಿಗೆ-ಆಸ್ಪದವಾದದ್ದು. ಮತ್ತು ಜಗತ್ತನ್ನು ಬಿಡುವಂಥಾದ್ದು, ಎಂದರೆ ತಿರುತಿರುಗಿ ಬರುವ-ಸುಖದ ಮೇಲೆ ದುಃಖ, ದುಃಖದ ಮೇಲೆ ಸುಖ, ಹೀಗೆ ಎಂದೂ ಕೊನೆಯಿಲ್ಲದೆ ಒಂದಾಗುತ್ತಲೊಂದು ಬರುತ್ತಿರುವ-ಕಟ್ಟುದಾದ ಚಕ್ರವುಳ್ಳ ಪ್ರಪಂಚದ ಬಿಡುಗಡೆಯನ್ನು ಹೊಂದತಕ್ಕಂಥಾದ್ದು- ಎಂಬ ಪ್ರಯೋಜನವುಳ್ಳದ್ದಾಗಿರುತ್ತದೆ. ಜನಾಂಗದ ಹೋಲಿಕೆಯಲ್ಲಿ ಮನುಷ್ಯನ ಸಮತೆಯನ್ನು ಧೊರೆ ಮತ್ತು ಬಡವ, ಋಷಿ ಮತ್ತು ಪಾಪಿ ಇವರು ಸಮಾನವೆಂಬ ಭಾವವನ್ನು, ಬಹಿರಂಗವಾಗಿ (ಸ್ಪಷ್ಟವಾಗಿ) ಉಪದೇಶಿಸುವಂತಹ ಕೆಲವು ಧರ್ಮಗಳು ಹಿಂದೂ ದೇಶದ ಭೂಮಿಯಲ್ಲಿ ವಿರಿಕೆಯಲ್ಲಿರುವವು, ಎಂದು ನಾನು ಸುಲಭವಾಗಿ ಹೇಳಬಹುದು.

ವೀರಶೈವರು ಬರೀ ನೀತಿಯ ಪಾರಮಾರ್ಥಿಕದ ಆಡಂಬರದ

ಮತ್ತು ಮೆರುಗು ಕೊಟ್ಟ ಸಮಾನತೆಯನ್ನು ಬಾಯಿಂದ ಹೇಳುವ ಮತವನ್ನು ಬಿಟ್ಟಿರುತ್ತಾರೆ; ಮತ್ತು ಅವರಿಗೆ ಕಲಿಸಲ್ಪಟ್ಟಿರುವ ಮೂಲಸೂತ್ರಗಳಂತೆ ತಪ್ಪದೆ ನಡೆಸಿಕೊಂಡಿರುತ್ತಾರೆ. ಹಿಂದೂದೇಶದಲ್ಲಿ ಸಮಾಜದಲ್ಲಿ ನಡತೆಯಲ್ಲಿ, ಧಾರ್ಮಿಕದಲ್ಲಿ, ಮನುಷ್ಯ ಮನುಷ್ಯರಲ್ಲಿ ತೋರಿಸುವಂಥಾ ಮನವನ್ನು ಕೆಡಿಸುವ ಭೇದವು ದೇಶವನ್ನು ಬಹಳ ಹೀನಸ್ಥಿತಿಗೆ ತಂದಿರುತ್ತದೆ. ನಿಜವಾದ ಧರ್ಮದ ಅಥವಾ ಮತದ ಬದಲಾಗಿ ಸುಳ್ಳಾದ ಮೋಸಕರವಾದ ಮತ್ತು ಜಂಭದಿಂದ ಕೂಡಿದ ತತ್ತ್ವಗಳು ಪ್ರಚಲಿತವಾಗಿರುತ್ತವೆ.

ಇಂಥ ಒಳ್ಳೆಯ ಅಭಿಪ್ರಾಯವು ಆಗಮಗಳಲ್ಲಿ ತೋರಿ ಬಂದುದನ್ನು ಈ ಮಹನೀಯರು ನೋಡಿದುದರಿಂದಲೇ ಅಲ್ಲವೇ ಹೀಗೆ ಬರೆದಿರುವುದು?

ಹಾಗಾದರೆ ಈ ಆಗಮಗಳು ಯಾವಾಗ ಉಂಟಾದವು ಎಂಬುದನ್ನು ಚರಿತ್ರ ದೃಷ್ಟಿಯಿಂದ ಪರಿಶೀಲಿಸೋಣ.

ಬಸವೇಶ್ವರನು ತನ್ನ ವಚನಗಳಲ್ಲಿ ಆಗಮಗಳುಂಟೆಂದು ಹೇಳಿರುವವರಿಂದ, ಇವು ಆತನಿಗಿಂತಲೂ ಪೂರ್ವದಲ್ಲಿದ್ದವು ಎಂದು ತಿಳಿಯುತ್ತದೆ. ಬಸವೇಶ್ವರನಿಗಿಂತ ಪೂರ್ವದಲ್ಲಿ ಇದ್ದ ನೀಲಕಂಠ ಶಿವಾಚಾರ್ಯರು ಆಗಮಗಳ ವಿಷಯದಲ್ಲಿ ಪಟ್ಟಿರುವ ಅಭಿಪ್ರಾಯವು ಈ ಮುಂಚೆ ತೋರಿಸಲ್ಪಟ್ಟಿರುವದರಿಂದ, ಅವರು ಇದ್ದ ೮ನೆಯ ಶತಮಾನಕ್ಕಿಂತಲೂ ಮುಂಚೆ ಆಗಮಗಳು ಇದ್ದಂತಾಯಿತು.

ಬ್ರಹ್ಮಸೂತ್ರ ಭಾಷ್ಯವನ್ನು ಬರೆವುದಕ್ಕೆ ಮುಂಚೆ ಶ್ರೀ ಶಂಕರಾಚಾರ್ಯರು ಆಗಮಗಳನ್ನು ೧೮ ಸಾರಿ ಓದಿದರೆಂದು ಮು। ರಾ। M. K. ನಾರಾಯಣ ಸ್ವಾಮಿ ಐಯ್ಯರವರು ಬರೆದಿರುವ "ಸೂತಸಂಹಿತೆ" ಎಂಬ ಪುಸ್ತಕದ ಒಂದು ಟಿಪ್ಪಣಿಯಲ್ಲಿ ಇರುವದಾಗಿ ಈ ಮುಂಚೆ ಹೇಳಲ್ಪಟ್ಟ ಮು। ರಾ। ಜೆ. ಎಂ. ನಲ್ಲಸ್ವಾಮಿ ಪಿಳ್ಳೆ ಎಂಬುವವರು ಪ್ರಕಟಿಸಿದ 'ಶಿವಜ್ಞಾನ ಸಿದ್ಧಿಯಾರ್' ಎಂಬ ಆಂಗ್ಲ ಪುಸ್ತಕದ ಪೀಠಿಕೆಯ ೧೫ನೆಯ ಪುಟದಲ್ಲಿ ಇರುತ್ತದೆ. ಆದ್ದರಿಂದ ಆಗಮಗಳು ಶಂಕರಾಚಾರ್ಯರಿಗಿಂತಲೂ ಮುಂಚೆ ಇದ್ದಂತಾಯಿತು.

ತಮಿಳಿನಲ್ಲಿ "ಸಂಗಮು'' ಎಂಬ ಗ್ರಂಥವನ್ನು ಬರೆಯುವದಕ್ಕೆ ಮುಖ್ಯರಾದ ನಕ್ಕೀರರ್ ಎಂಬುವವರು ಕ್ರಿಸ್ತ ಶಕ ೧ನೆಯ ಶತಮಾನದಲ್ಲಿ ಇದ್ದ

ರೆಂತಲೂ, ಇವರು ಮತ್ತು ಇವರ ಸಮಕಾಲದವರು ಬರೆದ ವಿಷಯಗಳು ತಮಿಳು ಮುಖ್ಯ ಗ್ರಂಥಗಳಲ್ಲಿ ೧೧ನೆಯದಾದ 'ತಿರುಮಂತ್ರ' ಎಂಬ ಗ್ರಂಥ ದಲ್ಲಿ ಇರುವದಾಗಿಯೂ, ಇವುಗಳ ದೆಸೆಯಿಂದ ಶಿವಾಗಮಗಳು ಇವರ ಕಾಲದಲ್ಲಿ ಇದ್ದ ಸಂಗತಿಯು ಚೆನ್ನಾಗಿ ವ್ಯಕ್ತಪಡುವದೆಂದೂ ಆ 'ಶಿವಜ್ಞಾನ ಸಿದ್ಧಿಯಾರ್' ಗ್ರಂಥದ ಪೀಠಿಕೆಯ ೧೬ನೆಯ ಪುಟದಲ್ಲಿ ಇರುತ್ತದೆ. ಇದ ರಿಂದ ಕ್ರಿ. ಶ. ೧ನೆಯ ಶತಮಾನಕ್ಕೆ ಮುಂಚೆ ಶಿವಾಗಮಗಳು ಇದ್ದಂ ತಾಯಿತು.

ಮೇಲೆ ಕಂಡ ಐಯರವರು ಆಗಮಗಳ ಕಾಲವು ಮಹಾಭಾರತ, ರಾಮಾಯಣಗಳ ಪೂರ್ವದಲ್ಲಿ ಇದ್ದಿತೆಂತಲೂ ಆಗಮದ ಸಿದ್ಧಾಂತವು ಇವು ಗಳಲ್ಲಿ ಕಂಡು ಬರುವದೆಂತಲೂ ವೇದದ ಬ್ರಾಹ್ಮಣ ಎಂಬ ಭಾಗವು ಆದ ಕಾಲವೇ ಈ ಆಗಮಗಳ ಕಾಲವೆಂತಲೂ ಅಭಿಪ್ರಾಯಪಟ್ಟಿರುವರೆಂದೂ, ತಮ್ಮ ಅಭಿಪ್ರಾಯವೂ ಅದೇ ರೀತಿ ಎಂದೂ ಮ। ರಾ। ಪಿಳ್ಳೆಯವರು ಬರೆದಿರುತ್ತಾರೆ. ಇದರಿಂದ ಆಗಮಗಳ ಕಾಲವು ಇನ್ನೂ ಹಿಂದಕ್ಕೆ ಹೋಗುತ್ತದೆ.

ಶೈವಾಗಮಗಳುಂಟೆಂದು 'ಅನ್ನಪೂರ್ಣೋಪನಿಷತ್' ಮೊದಲಾದ ಕೆಲವು ಉಪನಿಷತ್ತುಗಳೂ ಒಪ್ಪುತ್ತವೆ.

ಇದನ್ನೆಲ್ಲಾ ನೋಡುವಲ್ಲಿ ಆ ಶಿವಾಗಮಗಳು ತಮ್ಮಷ್ಟಕ್ಕೆ ತಾವೇ ಹೇಳುವಂತೆ ಮರ ಗಿಡ ಮೃಗಗಳುಳ್ಳ, ಋಷಿ, ಗಂಧರ್ವ, ಯಕ್ಷಾದಿಗಳಿಂದ ಕೂಡಿದ ಹಿಮಾಲಯ (ಹೇಮಾ ಲಯ = ಹೇಮಕೂಟ = ಕನಕಗಿರಿ)ದಲ್ಲಿ ಇರುವ ಕೈಲಾಸ ಎಂಬ ಭಾಗದಲ್ಲಿ ಶಿವ ಅಥವಾ ಶಂಕರ (ಇನ್ನೂ ಅನೇಕ ಹೆಸರುಗಳಿವೆ) ಎಂಬ ದೇವನು ಇದ್ದ ನೆಂತಲೂ, ಅವನ ಕಾಲವು ಪುರಾಣಗಳ ಕಾಲಕ್ಕಿಂತಲೂ ಬಹಳ ಬಹಳ ಮುಂಚೆ ಇದ್ದಿತೆಂತಲೂ ಊಹಿಸಲಿಕ್ಕೆ ಬರುವಂತೆ ಇದೆ. ಇದಕ್ಕೆ ಅನುಸಾ ರವಾಗಿ ಶಿವನು ಕೈಲಾಸದಲ್ಲಿದ್ದನೆಂತಲೂ ಅವನನ್ನು ಭುಸುಂಡನೇ ಮೊದ ಲಾದ ಋಷಿಗಳು ಕಂಡು ನಮಸ್ಕಾರ ಮಾಡಿ, ಧರ್ಮತತ್ವಗಳನ್ನು ಕೇಳಿ ತಿಳಿದುಕೊಂಡರೆಂತಲೂ ಭಸ್ಮಜಾಬಾಲೋಪನಿಷತ್ ಮೊದಲಾದ ಕೆಲವು ಉಪನಿಷತ್ತುಗಳೂ ಹೇಳುತ್ತವೆ.

ಕೆಲವು ಗ್ರಂಥಗಳಲ್ಲಿ ಬ್ರಹ್ಮನೆಂಬ ದೇವನ ಲೋಕದಲ್ಲಿ ಮಾನಸ ಸರೋವರವು ಇದ್ದಿತೆಂದೂ, ಅಲ್ಲಿ ಅವನ ವಾಹನವಾದ ಹಂಸೆಯು ಕ್ರೀಡಿ

ಸುತ್ತಿದ್ದಿತೆಂದೂ ಬರೆದಿರುತ್ತದೆ. ಈಗ ಹಿಮಾಲಯದ ಒಂದು ಭಾಗದಲ್ಲಿ ಮಾನಸ ಸರೋವರವು ತೋರಿ ಬರುವದರಿಂದಲೂ, ಕೈಲಾಸ ಎಂಬುದಾಗಿ ಕರೆಯಲ್ಪಡುವ ಭಾಗವೂ ಅಲ್ಲಿ ಇರುವದರಿಂದಲೂ, ಅಲ್ಲಿಯೇ ಗೌರೀ ಶಂಕರ ಎಂಬ ಶಿಖರವಿರುವದರಿಂದಲೂ, ಹರಿದ್ವಾರ ಮುಂತಾಗಿ ವಿಷ್ಣುವಿನ ಸಂಬಂಧವಾದ ಸ್ಥಳವೂ ಅಲ್ಲಿಯೇ ಇರುವದಾಗಿ ತಿಳಿಯಬರುವದರಿಂದಲೂ, ದೇವರೆಂದು ಕರೆಯಲ್ಪಡುತ್ತಿರುವ ಬ್ರಹ್ಮ ವಿಷ್ಣು ಶಂಕರರು ಮತ್ತು ಉಳಿದವರು ಹಿಮಾಲಯಕ್ಕೆ ಸಂಬಂಧಪಟ್ಟ ಭಾಗಗಳಲ್ಲಿ ಇದ್ದರೆಂತಲೂ, ಇವರ ಸಂಖ್ಯೆಯು ಮೂವತ್ತುಮೂರು ಕೋಟಿ ಎಂಬ ತಿಳಿಯುವದರಿಂದ, ಆಗ ಅವರಿದ್ದ ಈ ಪ್ರದೇಶವು ಬಹು ವಿಶಾಲವಾಗಿ ದೇವತೆಗಳು ಋಷಿಗಳು ಮುಂತಾದವರಿಂದ ತುಂಬಿ ನಾಗರಿಕತೆಯುಳ್ಳದ್ದಾಗಿತ್ತೆಂತಲೂ, ಆಗ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳು ದೇಶಭಾಷೆಯಾಗಿದ್ದವೆಂತಲೂ, ಆ ಕಾಲದಲ್ಲಿ ಆಗಮಗಳು ಉಂಟಾದವೆಂದೂ ಊಹಿಸುವದಕ್ಕೆ ಅವಕಾಶ ಇದೆ. ಕಾಶ್ಮೀರ ದೇಶದಲ್ಲಿ ಶೈವ ಮತವಿರುವದಕ್ಕೂ ಆಗಮಗ್ರಂಥಗಳು ಕಾಶ್ಮೀರ ದೇಶದ ಗ್ರಂಥ ಭಂಡಾರದಲ್ಲಿರುವದಕ್ಕೂ ಬಹುಮಟ್ಟಿಗೆ ಇದೇ ಕಾರಣವೆಂದು ಸುಲಭವಾಗಿ ತಿಳಿಯಲಿಕ್ಕೆ ಬರುವಂತಿದೆ. ಬಸವೇಶ್ವರನು ಕಾಶ್ಮೀರದಿಂದ ಜಂಗಮರನ್ನು ಕರೆತಂದನೆಂದು ಬರೆವಣಿಗೆಗಳು ದೊರೆಯುವುದರಿಂದ, ಆ ದೇಶವು ಈ ಶೈವ ವೀರಶೈವರ ಮೂಲಸ್ಥಾನವೆಂದು ಪರಿಗಣಿಸಲಿಕ್ಕೆ ಬರುವಂತಾಗಿರುವುದಕ್ಕೆ ಇದೇ ಕಾರಣವೆಂದು ತಿಳಿಯಬಹುದಾಗಿದೆ.

ಭೂ ಸಂಶೋಧನ ಮೊದಲಾದ ವಿಷಯಗಳಿಂದ ಈ ವಿಷಯಗಳ ನಿಜತ್ವವು ಇನ್ನೂ ಹೊರಬೀಳಬೇಕಾಗಿರುವದು. ಕೆಲವರು ಬರೆವಣಿಗೆಯು ಹುಟ್ಟಿ ೧೫೦೦-೨೦೦೦ ವರ್ಷವಾಗಿರುವದರಿಂದ, ಅದಕ್ಕೆ ಮುಂಚೆ ಗ್ರಂಥಗಳೇ ಇರಲಿಲ್ಲವೆಂದು ಹೇಳುವರು. ಜನಮೇಜಯರಾಯನ ಕಾಲದ ತಾಮ್ರದ ಶಾಸನವು ದೊರಕಿ ಇರುವದಾಗಿ ತಿಳಿಯ ಬರುತ್ತದೆ; ಆದ್ದರಿಂದ ಓಲೆಯ ಪ್ರತಿಯಲ್ಲಿ ಬರೆಯುವ ಪದ್ಧತಿಯು ರೂಢಿಗೆ ಬರುವದಕ್ಕೆ ಮುಂಚೆ ತಾಮ್ರದ ತಗಡುಗಳನ್ನು ಮಾಡಿಸಿ, ಅದರಲ್ಲಿ ಬರೆಯುತ್ತಿದ್ದರೆಂದು ತಿಳಿಯುತ್ತದೆ. ಇದಕ್ಕಿಂತ ಮುಂಚೆ ಇನ್ನೊಂದು ರೀತಿಯಲ್ಲಿ ಗ್ರಂಥಗಳನ್ನು ಬರೆಯುತ್ತಿದ್ದರೆಂದು ಹೊರಬಿದ್ದಿರುತ್ತದೆ. ಪಂಜಾಬಿನಲ್ಲಿ "ಹರಪಮಹ (ಡಿ)ಜಾರೋ" ಎಂಬ ಊರು ಸುಮಾರು ೩೦ ಅಡಿ ಆಳದಲ್ಲಿ ಸಿಕ್ಕಿರುವದೆಂ

ತಲೂ, ಅದು ೪-೫ ಸಾವಿರ ವರುಷಗಳ ಹಿಂದೆ ಇದ್ದದ್ದೆಂತಲೂ ತಿಳಿಯ ಬರುತ್ತಿದೆ. ಪೂರ್ವಿಕರು ಕೆಲವು ವಿಷಯಗಳನ್ನು ಇಟ್ಟಿಗೆಯ ಆಕಾರವಾಗಿ ಮಾಡಿದ ಮಣ್ಣಿನಲ್ಲಿ ಬರೆದು ಅವುಗಳನ್ನು ಸುಟ್ಟು ಆ ವಿಷಯವು ಗ್ರಂಥದ ಒಂದು ಪುಟವಾಯಿತೆಂದು ಭಾವಿಸಿ, ಇಂಥಾ ಅನೇಕ ಇಟ್ಟಿಗೆಗಳನ್ನು ಕೂಡಿಸಿ ಒಂದು ಗ್ರಂಥವನ್ನು ಪೂರ್ತಿ ಮಾಡುತ್ತಿದ್ದರು. ಆ ಇಟ್ಟಿಗೆಗಳನ್ನು ತುಂಬಿದ ಒಂದು ಕೋಣೆಯೇ ಒಂದು ಗ್ರಂಥವಾಗುತ್ತಿತ್ತು ಎಂತಲೂ, ಇಂಥ ಗ್ರಂಥಗಳು ಆ ಊರಲ್ಲಿ ಸಿಕ್ಕಿರುವವೆಂದೂ ವಾರ್ತೆಯಿದೆ.

ಮ। ರಾ। ಪಿಳ್ಳೈಯವರೂ ಶಿವಾಗಮಗಳ ವಿಷಯದಲ್ಲಿ ಹೀಗೆ ಅಭಿಪ್ರಾಯಪಟ್ಟಿರುತ್ತಾರೆ:— (ಪುಟ ೭)

I do hope that when the mists of misapprehension and ignorance are fully removed the claims of Saiva agamanta would be fully recogniged for the glory of our ancient mother land and the whole world.

ತಾತ್ಪರ್ಯ.

"ತಪ್ಪು ತಿಳಿವಳಿಕೆ ಮತ್ತು ತಿಳಿವಳಿಕೆಯಿಲ್ಲದಿರುವಿಕೆ ಎಂಬ ಮಂಜಿನ ಹನಿಗಳು ಸಂಪೂರ್ಣವಾಗಿ ಬಿಡಲ್ಪಟ್ಟರೆ, ಶೈವ ಆಗಮಾಂತದ ನಿಜ ಸಂಗತಿಗಳು ನಮ್ಮ ಪೂರ್ವಿಕರ ಮಾತೃಭೂಮಿಯ ಅಥವಾ ಜಗತ್ತಿನ ಕೀರ್ತಿಯನ್ನು ಹರಡುವವೆಂಬ ಭಾವನೆಯಿಂದ ಅಂಗೀಕರಿಸಲ್ಪಡುತ್ತವೆ ಎಂದು ದೃಢವಾಗಿ ನಂಬುತ್ತೇನೆ."

ಎಂಥಾ ಹೃದಯಂಗಮವಾದ ಲೇಖನಿದು?

ಇದೂ ವರೆವಿಗೆ ದೊರೆತಿರುವ ಕೆಲವು ಶಿವಾಗಮಗಳು ಅವುಗಳ ಆಧಾರದಿಂದ ರಚಿಸಲ್ಪಟ್ಟ ಗ್ರಂಥಗಳು, ಕೆಲವು ಉಪನಿಷತ್ತುಗಳು ಇವುಗಳನ್ನು ಸ್ವಲ್ಪ ಮಟ್ಟಿಗೆ ನೋಡಿದ ಮಾತ್ರದಿಂದ ಈ ವಿಷಯವನ್ನು ಬರೆದವನಿಗೂ ಮೇಲಿನ ಅಂಶವು ತಿಲಾಂಶವೂ ತಪ್ಪಿನದಲ್ಲ ಎಂಬ ಸಂಗತಿಯು ದೃಢಪಟ್ಟಿರುತ್ತದೆ.

ಇಂಥ ಆಗಮಗಳ ವಿಷಯದಲ್ಲಿ ಹಿಂದೂಜನರು ಏನು ಮಾಡಿರುತ್ತಾರೆ?

ಪಾಂಚರಾತ್ರಾಗಮವು ಮದರಾಸಿನ ಅಡ್ಯಾರ (Adyar) ಲೈಬ್ರರಿಯವರಿಂದ ಅಚ್ಚು ಹಾಕಿಸಲ್ಪಟ್ಟಿರುವುದಾಗಿ ತಿಳಿಯುತ್ತದೆ, ಶೈವಾಗಮಗಳಲ್ಲಿ ಪಾರಮೇಶ್ವರಾಗಮ, ಸೂಕ್ಷ್ಮಾಗಮ, ದೇವೀಕಾಲೋತ್ತರಾಗಮ, ವಾತೂಲಾಗಮ ಇವುಗಳ ಬಹು ಸ್ವಲ್ಪ ಭಾಗದ ಮೂಲವು ಕನ್ನಡದಲ್ಲಿ ಅಚ್ಚಾಗಿದೆ. ಮಹಾರಾಷ್ಟ್ರ ಭಾಷೆಯ ಅರ್ಥದೊಡನೆ ಕೂಡಿ ಪಾರಮೇಶ್ವರಾಗಮ ಸೂಕ್ಷ್ಮಾಗಮದ ಭಾಗಗಳು ಮುದ್ರಿತವಾಗಿವೆ. ಕಾರಣಾಗಮ ಕಿರಣಾಗಮಗಳು ಗ್ರಂಥಲಿಪಿಯಲ್ಲಿ ಮುದ್ರಣವಾಗಿರುವವೆಂದು ಕೇಳಿಕೆ. ಅಂತು ಕೋಟ್ಯನುಕೋಟಿ ಶ್ಲೋಕಗಳಲ್ಲಿ ಕೆಲವು ಸಾವಿರ ಹೊರಬಿದ್ದಿರಬಹುದು, ಉಳಿದವುಗಳು ಎಲ್ಲಿವೆ ಎಂದು ಹುಡುಕುವವರೇ ಕಾಣರು ಇವುಗಳ ಹೆಸರೇ ಮಸುಳಿಸುವ ಸ್ಥಿತಿಗೆ ಬಂದಿರುತ್ತದೆ. ಹಿಂದೂಜನರಿಗೆ ತಮ್ಮ ಪೂರ್ವಿಕರ ಗ್ರಂಥಗಳ ಮೇಲೆ ಅಭಿಮಾನವಿಲ್ಲವೇ? ತಮ್ಮ ಧರ್ಮದ ವಿವರವನ್ನು ತಿಳಿಯಲು ಇಚ್ಛೆ ಇಲ್ಲವೇ? ಪೂರ್ವಿಕರು ತಿಳಿದಿದ್ದ ಶ್ರೇಷ್ಠವಾದ ಧರ್ಮವನ್ನು ಹಿಂದೂದೇಶದಿಂದ ಹೊರಗೆ ಅಟ್ಟಿ ಬಿಡಬೇಕೆಂದು ಯೋಚಿಸುತ್ತಿರುವರೇ? ಒಂದುವೇಳೆ ಹಾಗೆ ಅಟ್ಟಿದರೆ ಎಲ್ಲಿಯಾದರೂ ಸಂರಕ್ಷಣೆ ಹೊಂದಿಕೊಂಡಿರಲಿ, ಎಂದು ಮರುಕಗೊಳ್ಳಬಹುದು. ಇವು ಹಿಂದೂದೇಶದಲ್ಲಿಯೇ ಅಡಗಿರುವವು. ಇವುಗಳನ್ನು ಹಿಂದೂಗಳೇ ಹೊರಗೆ ತೆಗೆಯದಿದ್ದರೆ ಇವು ಹೊರಗೆ ಬರುವ ಬಗೆ ಹೇಗೆ? ಜರ್ಮನಿ ಮೊದಲಾದ ಕೆಲವು ಪಾಶ್ಚಿಮಾತ್ಯ ದೇಶಗಳಲ್ಲಿ ಕೆಲವರು ಉಪನಿಷತ್ತು ಮೊದಲಾದವುಗಳನ್ನು ಓದುತ್ತಿದ್ದಾರೆಂದು ತಿಳಿಯುತ್ತದೆ. ಹೀಗೆ ಅಭಿಮಾನವುಳ್ಳ ಪರದೇಶಿಯರೇ ಇವುಗಳನ್ನು ಎತ್ತಲೆಂದು ಬಿಟ್ಟಿರುವರೇನು? ಅವರು ಹಾಗೆ ಅಭಿಮಾನವಿಟ್ಟು ಕೆಲಸ ಮಾಡುವ ವರೆವಿಗೂ ಈಗಿನ ಓಲೆಯ ಪ್ರತಿಗಳು ಉಳಿಯುತ್ತವೆ ಎಂಬ ನಂಬಿಗೆಯಾದರೂ ಏನು? ಕೆಲವು ಓಲೆಯ ಪ್ರತಿಗಳನ್ನು ಈಗ ಮುಟ್ಟಿದರೆ ಪುಡಿಪುಡಿಯಾಗುವ ಸ್ಥಿತಿಯಲ್ಲಿ ಅವು ತೋರಬರುತ್ತವೆ. ಅವುಗಳಿಗೂ ಸುಮಾರು ೫೦೦ ವರ್ಷ ಆಯುಷ್ಯವೆಂದು ತೋರುತ್ತವೆ. ಈಗ ಅವುಗಳ ಕಡೆಗೆ ಗಮನ ತೆಗೆದುಕೊಳ್ಳದೆ ನೂರಾರು ವರ್ಷಗಳಾದವು. ಅವನ್ನು ಬರೆದಿಟ್ಟು ಎಷ್ಟು ನೂರು ವರ್ಷಗಳಾಗಿವೆಯೋ!

ಕಾಶ್ಮೀರ ರಾಜಕೀಯ ಶಾಖೆಯವರು ಕೆಲವು ಆಗಮಗಳನ್ನು ಅಚ್ಚು ಹಾಕಿಸಿದ್ದಕ್ಕಾಗಿ ಆನಂದಿಸಬೇಕಾಗಿದೆ. (ಅವರು ತಮ್ಮಲ್ಲಿ ಇರುವ ಬರಹದ ಪ್ರತಿಗಳ ಹೆಸರನ್ನು ಪ್ರಕಟಿಸುವದಿಲ್ಲವಾಗಿ ತಿಳಿಸಿರುತ್ತಾರೆ.) ಅವರಲ್ಲಿ ಇನ್ನೂ ಯಾವ ಯಾವ ಆಗಮಗಳಿರುತ್ತವೆ ಎಂಬದನ್ನೂ ತಂಜಾ

ವೂರು, ತಿರುವಾಂಕೂರು ಮೊದಲಾದ ಕಡೆಗಳಲ್ಲಿ ಈ ಆಗಮಗಳಿರುವ ವೆಂದು ತಿಳಿಯ ಬಂದಿರುವದರಿಂದ, ಅಲ್ಲಿ ಯಾವ ಯಾವವು ಇರುತ್ತವೆಂಬದನ್ನೂ ತಿಳಿದು, ಅವುಗಳ ಉದ್ಧಾರಕ್ಕೆ ಬಹು ಮುಖವಾಗಿ ಪ್ರಯತ್ನಿಸುವದು ಒಳ್ಳೆಯದಲ್ಲವೆ? ಮದರಾಸಿನಲ್ಲಿರುವ ಪ್ರಾಚ್ಯ ಪುಸ್ತಕಾಲಯ (Oriental Library) ದಲ್ಲಿ ೧೦-೧೧ ಆಗಮಗಳು (ಕೆಲವು ಭಾಗಗಳು)ಇವೆ. ಅಲ್ಲಿನ ಆಡ್ಯಾರ ಪುಸ್ತಕಾಲಯದಲ್ಲಿಯೂ, ಮೈಸೂರಿನ ಪ್ರಾಚ್ಯ ಗ್ರಂಥಕೋಶದಲ್ಲಿಯೂ ಕೆಲವು ಆಗಮಗಳ ಭಾಗಗಳಿರುತ್ತವೆ. ಇವುಗಳ ಮುದ್ರಣವಾಗಬೇಡವೇ?

ಮೂಲ ಗ್ರಂಥಗಳು ಹಾಳಾಗುತ್ತಿರುವ ಕಾಲವಲ್ಲಿ ಅವರ ಕಡೆಗೆ ಗಮನ ಕೊಡದೆ, ಅವುಗಳ ಸಂಗ್ರಹ ಗ್ರಂಥಗಳನ್ನು ಅಂದ ಮಾಡಿ, ಅರ್ಥ ಬರೆದು, ಟಿಪ್ಪಣಿ ಮಾಡಿ, ಭಾಷಾಂತರ ಮಾಡಿ, ಬೆರಗುಗೊಳಿಸಿ ಮತ್ತೆ ಮತ್ತೆ ಮುದ್ರಿಸಿದರೆ, ಫಲವೇನು? ಮೂಲಗ್ರಂಥಗಳ ಮುದ್ರಣವಾದರೆ ಸಂಗ್ರಹ ಗ್ರಂಥಗಳಲ್ಲಿ ಪಕ್ಷಪಾತವಿದ್ದರೆ ಅದನ್ನು ತಪ್ಪಿಸಿ, ನಿಜ ತತ್ವವನ್ನು ಹೊರಗೆಡವಲಿಕ್ಕೆ ಅನುಕೂಲವಾಗುತ್ತದೆ.

ಕೆಲವು ಆಗಮಗಳು ಈಚೆಗೆ ರಚಿತವಾದವುಗಳು, ಕೆಲವು ಆಗಮಗಳಲ್ಲಿ ಈಚೆಗೆ ಕೆಲವು ಅಂಶಗಳು ಸೇರಿಸಲ್ಪಟ್ಟಿವೆ, ಎಂಬ ಸಂಗತಿಯನ್ನು ನಾವು ನೋಡಬಹುದು; ಆದರೆ ಇವೇ ಮೂಲ ಗ್ರಂಥಗಳೆಂದು ಪರಿಶೋಧಿಸುವಷ್ಟು ಬುದ್ಧಿಯು ಹಿಂದೂಧರ್ಮದ ನಿಜಸ್ಥಿತಿಯನ್ನು ತಿಳಿದ ಸಂಸ್ಕೃತ ಭಾಷಾಜ್ಞಾನಿಗೆ ಇರುತ್ತದೆ ಎಂದು ದೃಢವಾಗಿ ಹೇಳುತ್ತೇನೆ.

ಹಿಂದೂಮಹನೀಯರೇ! ಯಾವದರಿಂದ ಹಿಂದೂಧರ್ಮದ ಮುಖ್ಯ ಮುಖ್ಯ ಗ್ರಂಥಗಳು ಹೊರಬಿದ್ದಿರುವವೋ, ಅಂಥಾ ಮೂಲವನ್ನು ಹುಡುಕಿ ತೆಗೆಯಿಸಿ ಉದ್ಧಾರ ಮಾಡಿರಿ. ಉದಾಸೀನ ಮಾಡಬೇಡಿರಿ. ಪೂರ್ವಿಕರ ಧಾರ್ಮಿಕ ಆಸ್ತಿಯನ್ನು ಕಳೆದುಕೊಳ್ಳಬೇಡಿರಿ. ಈ ಆಸ್ತಿಯು ನಿಮ್ಮನ್ನು ಕಾಪಾಡುವದು. ಬಿಡಬೇಡಿರಿ.

(ಈ ವಿಷಯವನ್ನು ಬರೆಯುವದಕ್ಕೆ ಸಹಾಯಕವಾಗಿರುವಂಥ ಆಂಗ್ಲಪುಸ್ತಕಗಳನ್ನು—ಎಂದರೆ "ಸಿದ್ಧಾಂತ ದೀಪಿಕೆ" ಎಂಬ ಮಾಸಪತ್ರದ ಕೆಲವು ಭಾಗಗಳು ಮತ್ತು "ಶಿವಜ್ಞಾನ ಸಿದ್ಧಿಯಾರ್" ಎಂಬ ಆಂಗ್ಲಗ್ರಂಥ ಇವುಗಳನ್ನು—ಒದಗಿಸಿ ಕೊಟ್ಟ ಬ್ಯಾಡಿಗಿ ವಿರಕ್ತಮಠದ ಶ್ರೀಮನ್‌ನಿರಂಜನವರ್ಯ ಚನ್ನಬಸವ ಸ್ವಾಮಿಗಳವರ ಉಪಕಾರವನ್ನು ಸ್ಮರಿಸುತ್ತೇನೆ.)

ಶುಭವಾಗಲಿ.

## ಸದ್ಧರ್ಮ ದೀಪಿಕೆ ಎಂಬ ಈ ಮಾಸಪತ್ರಿಕೆಯ ವಿಷಯದಲ್ಲಿ ಕೆಲವು ಮಹನೀಯರ ಅಭಿಪ್ರಾಯಗಳು.

ಬೆಂಗಳೂರು ಗವರ್ನಮೆಂಟ್ ಸೆಂಟ್ರಲ್‌ಕಾಲೇಜು ಇಂಗ್ಲಿಷ್ ಪ್ರೊಫೆಸರವರಾದ ಮ. ರಾ. B. M. ಶ್ರೀಕಂಠಯ್ಯನವರು

ಇವರು ಈರೀತಿ ಬರೆದಿರುತ್ತಾರೆ.

೨೫ ಬಸವನಗುಡಿ, ಬೆಂಗಳೂರು.

೧೮—೮—೩೩

ಅಯ್ಯಾ, ತಾವು ವಿಶ್ವಾಸವಿಟ್ಟು ಕಳುಹಿಸಿದ ಸದ್ಧರ್ಮ ದೀಪಿಕೆಯ ೧—೧೦, ೧೩ ಈ ಸಂಚಿಕೆಗಳು ತಲಪಿದವು. ನೋಡಿ ಆನಂದವಾಯಿತು. ತಮ್ಮ ಪೂರ್ವಿಕರ ಗ್ರಂಥಗಳೂ, ತಮ್ಮ ಮತದ ವಿಷಯದ ವಿವರಣೆಗಳೂ, ಈರೀತಿ ಬೆಳಕಿಗೆ ಬರಬೇಕಾದ್ದು ತಮ್ಮ ಮತೀಯರಿಗೇ ಅಲ್ಲ, ಕನ್ನಡಿಗರೆಲ್ಲರಿಗೂ ಬೇಕು ಎಂದು ನನ್ನಭಾವನೆ. ತಾವು ಶ್ರದ್ಧೆಯಿಂದ ನಡೆಸುತ್ತಿರುವ ಕೆಲಸ ವೃದ್ಧಿಹೊಂದಿ ಯಶಸ್ವಿಯಾಗಲಿಎಂದು ಹಾರೈಸುತ್ತೇನೆ. ದಯವಿಟ್ಟು ಮೇಲೆ ಬಿಟ್ಟುಹೋಗಿರುವ ೧೧—೧೨ ನೆಯ ಸಂಚಿಕೆಗಳನ್ನು ಕಳುಹಿಸಿಕೊಡಿ. ಮತ್ತು ಮುಂದೆ ನನ್ನನ್ನು ವರ್ಗಣಿಯಲ್ಲಿ ಸೇರಿಸಿಕೊಂಡು ಮುಂದಿನಸಲ ಆಗಬಹುದಾದ ಮೊಬಲಗಿಗೆ ವಿ. ಪಿ. ಕಳುಹಿಸಿ.

ತಮ್ಮವ—ಬಿ. ಎಂ. ಶ್ರೀಕಂಠಯ್ಯ

(ಎಂದು ಸಹಿ ಇರುತ್ತದೆ.)

ಈ ಮಹನೀಯರಿಗೆ ಕನ್ನಡ ಭಾಷೆಯ ಪ್ರೇಮವು ಎಷ್ಟಿರುವದೆಂಬುದು ಇದರಿಂದ ಗೊತ್ತಾಗುತ್ತದೆ. ಇವರ ಮೇಲ್ಪಂಕ್ತಿಯನ್ನು ಅನುಸರಿಸಿ ಕನ್ನಡಿಗರೆಲ್ಲರೂ ಉತ್ಸಾಹಗೊಂಡರೆ ಕನ್ನಡ ಭಾಷೆಯು ಎಲ್ಲಾ ವಿಧದಲ್ಲಿಯೂ ಸರ್ವಾಂಗ ಸುಂದರವಾಗಿ ಶೋಭಿಸುವದಲ್ಲವೇ? ಮಹಾರಾಷ್ಟ್ರ ಭಾಷಾ ಪ್ರೇಮವು ಆ ದೇಶದಲ್ಲಿ ಹೆಚ್ಚಾಗಿರುವದರಿಂದ ಆ ಭಾಷೆಯ ಗ್ರಂಥಗಳೂ ಶಾಸ್ತ್ರ ಪುಸ್ತಕಗಳೂ ಹೆಚ್ಚಾಗಿರುವವು- ಹಾಗೆ ಕನ್ನಡಿಗರಿಗೆ ಅಭಿಮಾನವು ಎಂದಿಗೆ ಹೆಚ್ಚಾಗುವದೋ!

ವೀರಶೈವ ಮತದ ಗ್ರಂಥಗಳ ಪ್ರಚಾರದ ವಿಷಯದಲ್ಲಿ ಇನ್ನೂ ಏನೂ ಮಾಡಿಲ್ಲವೆಂಬ ಯೋಚನೆ ಇರುತ್ತಿರುವಾಗ ಮತದ ವಿಷಯು ಗಳು ಬೆಳಕಿಗೆ ಬರುತ್ತಿರುವವೆಂದು ಇವರು ಬರೆದಿರುವದು ಇವರ ಗುಣ ಗ್ರಹಣಶಕ್ತಿಯು ಅತಿಶಯುವೆಂಬುದನ್ನು ತೋರಿಸುತ್ತದೆ.

—೦—

ಹುಬ್ಬಳ್ಳಿಯ ವಕೀಲರಾದ ಮ. ರಾ. ವೀರಪ್ಪ ಬಸಪ್ಪ ಬಿಳಿ ಅಂಗಡಿ B. A. L. L. B. ಇವರು ಹೀಗೆ ಬರೆದಿರುತ್ತಾರೆ.

ಹುಬ್ಬಳ್ಳಿ ೧—೧೧—೩೩

.........................................

ನಿಮ್ಮ ದೀಪಿಕೆಯಲ್ಲಿ ಬಳಸುವ ಕಾಗದವು ಅತಿ ತೆಳುವಾಗಿ ಗ್ಲೇಜ ಇಲ್ಲದಾಗಿರುವ ಮೂಲಕ ಅವು ಅಂದವಾಗಿಲ್ಲ. ಮತ್ತು ಇಂಥ ಕಾಗದವುಳ್ಳ ಗ್ರಂಥವು ಬಹುದಿನ ತಾಳವು. ಶಿವಾನುಭವದಂಥ ಕಾಗದಗಳನ್ನು ಉಪಯೋಗಿಸಬೇಕು. ಇದಕ್ಕಾಗಿ ವಾರ್ಷಿಕಚಂದಾಹಣವನ್ನು ಸ್ವಲ್ಪ ಹೆಚ್ಚುಮಾಡಿದರೂ ಅಡ್ಡಿಯಿಲ್ಲ. ಶಿವಾನುಭವದಲ್ಲಿ ಪ್ರಕಟವಾಗದೆಇರುವ ಗ್ರಂಥಗಳನ್ನು ನೀವು ಪ್ರಕಟಿಸಬೇಕಾಗಿ ಕೋರುತ್ತೇನೆ. ನಿಮ್ಮ ಮತಾಭಿಮಾನಕ್ಕಾಗಿ ನಾನು ನಿಮ್ಮನ್ನು ಕೊಂಡಾಡದೆ ಇರೆನು. ನೀವು ಕೈಕೊಂಡಕಾರ್ಯವು ಅತಿಘುತ್ತ್ಯವಾದದ್ದು.

ಇತಿತಮ್ಮ ವಿನಯದ

ವೀರಪ್ಪ ಬಿಳಿಅಂಗಡಿ ಹುಬ್ಬಳ್ಳಿ.

(ಎಂದು ಸಹಿ ಇರುತ್ತದೆ.)

ಇವರ ಅಪೇಕ್ಷೆಯಂತೆ ಒಳ್ಳೆಯಕಾಗದವನ್ನು ಉಪಯೋಗಿಸಲು ವರ್ಗಣಿದಾರರ ಸಂಖ್ಯೆಯು ಸುಮಾರು ೧೫೦ ಇದ್ದು ವೆಚ್ಚಕ್ಕೆ ಸಾಲದೆಇರುವ ತೊಂದರೆಯಿಂದ ಸಾದಾ ಹೊಳಪಿನ ಕಾಗದವನ್ನೇ ಉಪಯೋಗಿಸಬೇಕಾಗಿದೆ. ವರ್ಗಣಿಯದರವನ್ನು ಹೆಚ್ಚುಮಾಡಿ ಈ ತೊಂದರೆಯನ್ನು ಕಳೆದುಕೊಳ್ಳಬಹುದಾದರೂ ವರ್ಗಣಿದಾರರು ಹೆಚ್ಚಾಗುವ ಪಕ್ಷಕ್ಕೆ ಇದೇವರ್ಗಣಿಯದರದಲ್ಲಿ ಒಳ್ಳೆಯ ಕಾಗದವನ್ನ ಉಪಯೋಗಿಸಬಹುದಾದ್ದರಿಂದ ಧರ್ಮಾಭಿಮಾನಿಗಳು ಈ ಕಡೆಗೆ ಗಮನಕೊಟ್ಟು ವರ್ಗಣಿದಾರರನ್ನು ಹೆಚ್ಚುಮಾಡಿಕೊಟ್ಟಲ್ಲಿ ಒಳ್ಳೆಯಕಾಗದವನ್ನು ಉಪಯೋಗಿಸಲಿಕ್ಕೆ ಅನುಕೂಲವಾಗುತ್ತದೆ.

ಶ್ರೀ ಗುರುಪ್ರಸನ್ನ.

ಹಾವೇರಿಯ ವಕೀಲರಾದ ಮ. ರಾ. ಯುಗಟಿ ವೀರಪ್ಪನವರು B. A. L L B. ಮತ್ತು ಶ್ರೀ ಚನ್ನಮಲ್ಲಿಕಾರ್ಜುನ ಇವರು ಅಮೇರಿಕಾ ಖಂಡದ ಚಿಕಾಗೋ ಪಟ್ಟಣದಲ್ಲಿ ನಡೆಯುವ ಸರ್ವಮತ ಸಮ್ಮೇಲನಕ್ಕೆ ಕಳುಹಿಸಿದ ಆಂಗ್ಲ ಲೇಖನದ ಕನ್ನಡ ಮೂಲವು.

ಅಧ್ಯಕ್ಷರೇ ಮಹನೀಯರೇ ಮತ್ತು ಮಹಿಳೆಯರೇ!

ಜಗತ್ತಿನಲ್ಲಿ ಎಲ್ಲಾ ಧರ್ಮಗಳ ಮುಖ್ಯ ಉದ್ದೇಶವು ಮನುಷ್ಯನ ಮನಸ್ಸನ್ನು ಯೋಗ್ಯಸ್ಥಿತಿಯಲ್ಲಿ ಇರಿಸಿ ಅವನನ್ನು ಮಾನಸಿಕ - ಸ್ಥಿತಿಯಲ್ಲಿ ಉನ್ನತಿಗೊಳಿಸುವಂಥಾದ್ದೇ ಆಗಿರುತ್ತದೆ. ಇದು ಬಾಹ್ಯಸ್ಥಿತಿಯಲ್ಲಿಯೂ ಸುಖದಲ್ಲಿ ಇರಿಸುತ್ತದೆ. ಇಂಥಾ ಸ್ಥಿತಿಯಲ್ಲಿ ಅತ್ಯುತ್ತಮವಾದ್ದನ್ನು ಆರಿಸುವುದಕ್ಕಾಗಿ ಮನುಷ್ಯನು ಬಹಳದಿವಸಗಳಿಂದಲೂ (ಸಾವಿರಾರುವರ್ಷಗಳಿಂದಲೂ) ಪ್ರಯತ್ನ ಪಡುತ್ತಿದ್ದಾನೆ. ಈಗಲೂ ಇದೇಪ್ರಯತ್ನಕ್ಕಾಗಿ ಈ ಸಭೆಯು ಕೂಡಿಸಲ್ಪಟ್ಟಿರುವದೆಂದು ತಿಳಿಯುತ್ತೇನೆ. ಹೀಗೆ ಪ್ರಯತ್ನಪಟ್ಟು ನಿರ್ಣಯಮಾಡಿದುದನ್ನು ಸರ್ವರೂ ಆಚರಣೆಯಲ್ಲಿ ತರಬೇಕು. ಹಾಗಾದರೇನೇ ಅದು ಸಭೆಸೇರಿಸಿದುದರ ಉತ್ತಮಫಲವು. ಯಾವ ದಿವಸ ಇಡೀಜಗತ್ತಿನ ಜನರೆಲ್ಲರೂ ಧರ್ಮದ ವಿಷಯದಲ್ಲಿ ಗೊತ್ತಾದ ಒಂದೇ ಒಂದು ಅಭಿಪ್ರಾಯವನ್ನಿಟ್ಟು ನಡೆಯಲು ಸಿದ್ಧರಾಗುವರೋ ಆ ದಿವಸವು ಜಗತ್ತಿನ ಶುಭೋದಯದ ದಿನವೆಂದು ತಿಳಿಯಬೇಕು.

ಮಹಾ ದೇವನನ್ನು ತಿಳಿಯುವದು, ಆ ಜ್ಞಾನ ಸಂಬಂಧದಿಂದ ಕಾರ್ಯಗಳನ್ನು ಮಾಡುವದು, ಮತ್ತು ನೀತಿಯಿಂದ ನಡೆವುದರಲ್ಲಿ ಅದನ್ನು ಸಂಬಂಧಿಸಿಕೊಳ್ಳುವದು, ಎಂಬಅರ್ಥದಲ್ಲಿ ಇಲ್ಲಿ ಧರ್ಮ ಶಬ್ದವನ್ನು ಉಪಯೋಗಿಸಿ ಇರುತ್ತದೆ.

ಅಂಥಾ ಧರ್ಮವನ್ನು ತಿಳಿವುದಕ್ಕಾಗಿ ಆಧಾರ ಭೂತವಾದ ಆಚರಣೆ ಯಾವುದೆಂದರೆ ಮನುಷ್ಯನು ನೀತಿಯಲ್ಲಿ ನಡೆವುದು. ಸತ್ಯ, ಅಹಿಂಸೆ, ಅಸ್ತೇಯ, ಭೂತದಯಾ, ಮೊದಲಾದ ಗುಣಗಳು ಇಂಥಾ ನೀತಿಯ ಕಾರ್ಯಗಳಾಗಿರುವವೆಂದು ಅನೇಕರು ಯೋಚಿಸ ಬಹುದು. ಇಂಥಾ ನೀತಿಯ ಆಧಾರದಮೇಲೆ ಅನೇಕ ಮತಗಳೂ ಉಂಟಾಗಿರುತ್ತವೆ.

ಬುದ್ಧನಮತಕ್ಕೆ ಯಾವದು ಆಧಾರ? ಪ್ರತಿಯೊಬ್ಬ ಮನುಷ್ಯನೂ ಸತ್ಯವನ್ನು ಹೇಳಬೇಕು, ಪ್ರಾಣಿಗಳಲ್ಲಿ ದಯೆಯುಳ್ಳವನಾಗಿರಬೇಕು, ಎಂಬಿವೇ ಮೊದಲಾದವುಗಳಲ್ಲವೇ?

ಯೇಸು ಕ್ರಿಸ್ತನಾದರೂ ಕೂಡಾ ಮನುಷ್ಯನು ತನ್ನ ಗುಣಗಳನ್ನು ಉತ್ತಮಪಡಿಸಬೇಕೆಂದು ಅನೇಕ ಮಾದರಿಗಳನ್ನು ಮಾಡಿ ತೋರಿಸಲಿಲ್ಲವೇ?

ಮಹಮ್ಮದ್ ಪೈಗಂಬರನು ತನ್ನ ಅನುಯಾಯಿಗಳು ಪರಸ್ಪರ ಜಗಳಮಾಡುವದು ಯೋಗ್ಯಪಲ್ಲವೆಂದು ಬೋಧಿಸಲಿಲ್ಲವೇ? 'ಇಸ್ಲಾಂ' ಶಬ್ದದ ಅರ್ಥವೇನು? ಶಾಂತಿಯಿಂದ ನಡೆಯಲೆಂಬುದೇ.

ಒಂದೊಂದು ನೀತಿಬೋಧೆಯ ಆಚರಣೆಯಿಂದ ಮನುಷ್ಯನಿಗೆ ಆಗತಕ್ಕ ಫಲಗಳು ಅನೇಕವಾಗಿರುವಲ್ಲಿ ಅನೇಕನೀತಿಗಳ ಬೋಧೆಯನ್ನು ತಿಳಿದುಕೊಂಡು ಮನುಷ್ಯನು ನಡೆಯಲಿಕ್ಕೆ ಪ್ರಾರಂಭಿಸಿದರೆ ಬಹಳ ಉತ್ತಮ ಫಲಗಳನು ಹೊಂದುವನೆಂಬುದು ನಿಶ್ಚಯ.

ಒಂದು ಸತ್ಯದ ವಿಚಾರವನ್ನು ಮಾಡೋಣ:—

ಸತ್ಯ ಒಂದಿದ್ದರೆ ಅದು ಅನೇಕ ದುರ್ಗುಣಗಳನ್ನು ನಾಶಮಾಡುತ್ತದೆ. ಒಬ್ಬನು ಮೋಸಮಾಡಬೇಕೆಂಬ ಇರಾದೆಯುಳ್ಳವನು ಸತ್ಯವನ್ನು ಹೇಳಬೇಕೆಂಬ ದೃಢಸಂಕಲ್ಪವನ್ನು ಮಾಡಿದ್ದಾದರೆ ಅಂಥಾ ಸತ್ಯದ ಬಲದಿಂದ ಆತನ ಮೋಸವು ಹೊರಬೀಳಬಹುದೆಂಬ ಯೋಚನೆ

ಯಿಂದ ಮೋಸವನ್ನೇ ಬಿಟ್ಟುಬಿಡುವನು. ಸುಳ್ಳು ಹೇಳತಕ್ಕವನೊಬ್ಬನು ಸತ್ಯವನ್ನು ಹೇಳಬೇಕೆಂಬ ದೃಢಸಂಕಲ್ಪವನ್ನು ಮಾಡಿದರೆ ಸುಳ್ಳು ತನ್ನಷ್ಟಕ್ಕೆ ತಾನೇ ನಿಂತು ಹೋಗುವದು. ಹೀಗೆಯೇ ಅನೇಕಪ್ರಯೋಜನಗಳಾಗುವವು.

ಇದರಂತೆಯೇ ಅಹಿಂಸೆಎಂಬ ನೀತಿಯೂ ಶ್ರೇಷ್ಠವಾದುದು. ಮನುಷ್ಯನು ಒಂದುಪ್ರಾಣಿಯನ್ನೂ ಕೊಲ್ಲಬಾರದು. ಏಕೆಂದರೆ, ಸಸ್ಯಾಹಾರಿಯಾಗಿ ಜೀವಿಸುವದಕ್ಕೆ ಮನುಷ್ಯನಿಗೆ ಸಾಧ್ಯವಿದೆ. ಹಾಗೆ ಎಷ್ಟೋ ಜನರು ಬದುಕಿದ್ದಾರೆ. ಇಂಥವರು ಏಷ್ಯಾಖಂಡದಲ್ಲಿ ಬಹಳವಾಗಿ ಇದ್ದಾರೆ. ಪ್ರಾಣಿಗಳನ್ನು ಕೊಲ್ಲದೆ ಬದುಕಲಿಕ್ಕಾಗುವ ಸಂಭವವಿಲ್ಲದ ದೇಶ,—ಎಂದು ಹೇಳಲ್ಪಡುವ ಯೂರೋಪಿನಲ್ಲಿಯೂಕೂಡಾ ಕೇವಲ ಸಸ್ಯಾಹಾರಿಗಳನ್ನೇ ಬಹುಜನರನ್ನು ಕಾಣಬಹುದು. ಹೀಗಿರುವ ಸಂಭವದಲ್ಲಿ ಮನುಷ್ಯನು ಪ್ರಾಣಿಗಳನ್ನು ಕೊಂದು ತನ್ನ ಜೀವವನ್ನು ರಕ್ಷಿಸಬೇಕೆಂಬ ತತ್ವವನ್ನು ಸಂಪೂರ್ಣವಾಗಿ ಬಿಟ್ಟುಬಿಡುವದು ಉತ್ತಮವಲ್ಲವೇ?

ಈ ಅಹಿಂಸೆ ಎಂಬ ಒಂದು ನೀತಿಯನ್ನು ಪಾಲಿಸುವದಾದರೆ ಒಬ್ಬ ಮನುಷ್ಯನ ಮನಸ್ಸನ್ನು ನೋಯಿಸುವದೂ ಕೂಡಾ ಅಹಿಂಸೆ ಎಂದು ತಿಳಿಯಬರುವದರಿಂದ ಮನುಷ್ಯರು ಒಬ್ಬರಿಗೊಬ್ಬರು ಬೈಯುವದು ಜಗಳಮಾಡುವದು ಇಂಥಾ ದುರ್ಗುಣಗಳು ಒಮ್ಮಿಂದೊಮ್ಮೆಗೆ ನಿಂತು ಮಾನವಕೋಟಿ ಎಲ್ಲವೂ ಭ್ರಾತೃ ಭಾವದಿಂದ ಇರಲಿಕ್ಕೆ ಅನುಕೂಲವಾಗುವದಿಲ್ಲವೇ?

ಹೀಗೆ ನೀತಿಯ ಬಲದಿಂದಲೇ ಜಗತ್ತನ್ನು ನಾವು ನಡೆಸಿಕೊಂಡು ಹೋಗಬಹುದೇನು?

ಈ ವಿಚಾರವು ಬಹುದೊಡ್ಡಪ್ರಶ್ನೆ.

ಒಂದೇ ನೀತಿಯು ಒಂದೇ ವಿಧವಾಗಿ ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಸಂದರ್ಭಗಳಲ್ಲಿಯೂ ಅನ್ವಯಿಸುತ್ತದೆ, ಎಂ

ಮ ಹೇಳಲಿಕ್ಕಾಗುವದಿಲ್ಲ. ಅಹಿಂಸಾತತ್ತ್ವವನ್ನು ಎಲ್ಲಾಮನುಷ್ಯರೂ ಅವಲಂಬಿಸಿದರೆಂದು ಯೋಚಿಸೋಣ. ಬೆಳೆಸಿದ ಪೈರುಗಳನ್ನು ಹಾಳು ಮಾಡುವದಕ್ಕಾಗಿ ಹಂದಿಗಳ ಹಿಂಡು ಹೆಚ್ಚಾಗಿ ಬಳೆಯುವದಾದರೆ ಮನುಷ್ಯನು ಅವುಗಳನ್ನು ಕೊಲ್ಲದೆ ಇರಬೇಕೆಂಬ ತತ್ತ್ವವು ಒಪ್ಪತಕ್ಕದ್ದಾಗಿ ಪರಿಣಮಿಸುವುದಿಲ್ಲ. ಹಾಗೆ ಪರಿಣಾಮಕ್ಕೆ ಬಾರದೆ ಇರುವದರಿಂದ ಅಹಿಂಸಾ ಎಂಬ ನೀತಿಯನ್ನೇ ಬಿಡಬೇಕಾಗುವದು. ಅಹಿಂಸಾ ನೀತಿಯನ್ನು ಬಿಟ್ಟರೆ ಮಾನವ ಕೋಟಿಯು ಉದ್ಧಾರವೇ ಇಲ್ಲ. ಆದರೆ ಅಹಿಂಸಾ ಎಂಬುದನ್ನು ಮನುಷ್ಯರ ವಿಷಯದಲ್ಲಿ ಕಲ್ಪಿಸಿಕೊಳ್ಳೋಣ, ಪ್ರಾಣಿಗಳ ವಿಷಯದಲ್ಲಿ ಅಲ್ಲ, ಎಂದು ಯೋಚಿಸುವದಾದರೆ ಒಬ್ಬಮನುಷ್ಯನು ಇತರರಿಗೆ ತೊಂದರೆಯನ್ನು ಕೊಡತಕ್ಕವನಾಗಿ ಇದ್ದಾಗ ಅಹಿಂಸಾ ತತ್ವವನ್ನು ಇತರರು ಅವಲಂಬಿಸಿದರೆ ಆವನು ಲೋಕ ಕಂಟಕನಾಗಿ ಪರಿಣಮಿಸುವನು. ಹೀಗಾದರೆ ಜಗತ್ತಿನ ರಕ್ಷಣೆಯು ಹೇಗೆನಡೆಯಬೇಕು?

ಇದಲ್ಲದೆ ಒಂದುಕಾಲದಲ್ಲಿ ಯೋಗ್ಯವೆಂದು ಕಂಡು ಬಂದ ಒಂದು ನೀತಿಯು ಮತ್ತೊಂದು ಕಾಲದಲ್ಲಿ ಅಯೋಗ್ಯವಾಗಿ ಕಾಣಬಹುದು. ಹೆಂಡವನ್ನು ಕುಡಿಯಬಾರದು. ಇದು ಮಾನವ ಕೋಟಿಯನ್ನು ಉದ್ಧಾರಮಾಡುವ ಕಾರ್ಯವು. ಒಬ್ಬ ಮನುಷ್ಯನಿಗೆ ಕಾಹಿಲೆಯಾಗಿ ಹೆಂಡದಿಂದ ಗುಣಪಡುವಂತೆಇದ್ದರೆ ಆಗ ಕುಡಿಸದೆಇರುವದು ತಪ್ಪಲ್ಲವೇ?

ಹೀಗೆ ಬರೀ ನೀತಿಯಿಂದ ಜಗತ್ತಿನ ಜನರನ್ನು ರಕ್ಷಿಸುವದು ಆಗದಕೆಲಸವಾದ್ದರಿಂದ 'ಮತ' ಎಂಬುದನ್ನು ನೀತಿಮಾತ್ರ ಪ್ರಾಧಾನ್ಯವಾಗಿ ಇಟ್ಟುಕೊಳ್ಳಬಾರದು. ಮತವೆಂಬುದು ಮಹಾದೇವ (God) ನನ್ನು ತಿಳಿಯುವಂಥಾದ್ದೂ ಆತಿಳುವಳಿಕೆಯ ದೆಸೆಯಿಂದ ಮನುಷ್ಯನನ್ನು ಕಟ್ಟಲ್ಪಡತಕ್ಕದ್ದೂ ನೀತಿಯೂಕೂಡಾ ಆ ಮಹಾದೇವನಲ್ಲಿ ಇಡುವ ಭಕ್ತಿಯಲ್ಲಿ ಕೂಡಿಕೊಂಡದ್ದೂ ಆಗಿರಬೇಕು.

ಯಾವ ಮನುಷ್ಯನು ಮಹಾದೇವನು (God) ಉಂಟೆಂದು ಭಾವಿಸಿ ಆತನಿಂದ ಈ ಜಗತ್ತು ನಡೆವುದೆಂದೂ ಮನುಷ್ಯನು ಕೇವಲ ನಿಮಿತ್ತಮಾತ್ರದವನೆಂದೂ ಭಾವಿಸುವನೋ ಆ ಮನುಷ್ಯನೇ ಈ ಲೋಕದಲ್ಲಿ ಹುಟ್ಟಿದ್ದಕ್ಕೆ ಸಾರ್ಥಕನೆನಿಸಿಕೊಳ್ಳುವನು.

ಹಾಗೆ ತಿಳಿಯದೆ ಇದ್ದರೆ ಪಶು ಪಕ್ಷಿಗಳು ಹೇಗೆ ತಮ್ಮ ಸುಖದ ಕಡೆ-ಗೆ ಗಮನವನ್ನು ಕೊಡುವವೋ ಹಾಗೆಯೇ ಮನುಷ್ಯನೂ ತನ್ನ ಸುಖಕ್ಕೆ ಮಾತ್ರ ( ಇವನಸುಖವು ಅವುಗಳಿಗಿಂತ ಹೆಚ್ಚಿನದಾಗಿರಬಹುದು ಅರಮನೆ, ವಿದ್ಯುಚ್ಛಕ್ತಿಯದೀಪ, ರೇಡಿಯೋ ಪ್ರಯೋಗ ಇಂಥವುಗಳೆಲ್ಲಾ ಇರಬಹುದು ) ಯೋಚಿಸುವದಾದರೆ ಇವನೂ ದೊಡ್ಡಪಶು ಅಥವಾ ಬುದ್ಧಿಮೇಲ್ಮೆಯುಳ್ಳ ಪಶುವಾಗುವನೇ ಹೊರ್ತು ಮನುಷ್ಯನಾಗಿ ಹುಟ್ಟಿದ್ದರ ನಿಜವಾದ ಫಲವನ್ನು ಪಡೆಯಲಾರನು.

ಒಬ್ಬ ಮನುಷ್ಯನು ದೇವನೇ ಇಲ್ಲ, ಇದ್ದರೆ ಅವನನ್ನು ನನಗೆ ತೋರಿಸಿರಿ, ಎಂದು ಜಂಭ ಕೊಚ್ಚಬಹುದು. ಆದರೆ ಆ ಮನುಷ್ಯನು ತನಗೆ ಮನಸ್ಸಿದೆ ಎಂದು ತಿಳಿಯತಕ್ಕ ಶಕ್ತಿಯುಳ್ಳವನಾಗಿದ್ದರೆ ಆತನಿಗೆ ಆ ಮನಸ್ಸನ್ನು ತೆಗೆದು ತೋರಿಸು, ಇಲ್ಲದಿದ್ದರೆ ನಿನಗೆ ಮನಸ್ಸಿಲ್ಲ ಎಂದು ಹೇಳಿದರೆ ಅವನು ನಾಚಿಕೊಳ್ಳಬಹುದಲ್ಲವೇ ?

ಶಾಸ್ತ್ರಕಾರರು ( Scientists ) ರೇಡಿಯೋವನ್ನು ನಾವು ತಿಳಿದಿದ್ದೇವೆ. ಅದರ ಬಲದಿಂದ ಯಾಂತ್ರಿಕ ( Rabot = Mecha-nical man ) ಮನುಷ್ಯನನ್ನು ನಾವು ಮಾಡುತ್ತೇವೆ. ಆದ್ದರಿಂದ ದೇವನೇ ಇಲ್ಲವೆಂದು ಉಪದೇಶಿಸಬಹುದು. ಆ ರೇಡಿಯೋ ಬಲದಿಂದ ತನ್ನಂತಹ ಎಂದರೆ ತನಗೂ ಯಾಂತ್ರಿಕನಿಗೂ ಏನೂ ವ್ಯತ್ಯಾಸವಿಲ್ಲದಂತೆ ಮಾಡತಕ್ಕ ಶಕ್ತಿ ಇಲ್ಲದವನಾದ್ದರಿಂದ ಹಾಗೆ ಮನುಷ್ಯನನ್ನು ಉಂಟು ಮಾಡತಕ್ಕ ಒಂದು ವಸ್ತುವು ( ಪರಾತ್ಪರ ವಸ್ತುವು ) ಇದೆ ಎಂದು ತಿಳಿಯಬೇಕಲ್ಲವೇ? ಈ ಪರಾತ್ಪರ ವಸ್ತುವೇ ರೇಡಿಯೋವಿಗೂ ಮೂಲವಸ್ತುವು ಎಂದೂ ಅದು ಮಹಾದೇವ ( God ) ಎಂದೂ ತಿಳಿಯಬೇಕಲ್ಲವೇ?

ಹೀಗೆ ಇರುವ ಜ್ಞಾನದಿಂದ ದೇವನು ಉಂಟೆಂದು ತಿಳಿಯುವವನು ರೇಡಿಯೋಗಿಂತಲೂ ಅತಿಶಯವಾದ ಆ ವಸ್ತುವನ್ನು ತನ್ನ ಮನಸ್ಸಿನಲ್ಲಿ ಸೇರಿಸಿದಂತಾಗುವದರಿಂದ ತನ್ನ ಮಾನಸಿಕ ಸ್ಥಿತಿಯನ್ನು ಉನ್ನತಿಗೊಳಿಸಬಹುದಲ್ಲವೇ? ಆದ್ದರಿಂದ ಮಹಾದೇವನ

ವಿಷಯವನ್ನು ಬೋಧಿಸುವ ಮತವು ಯಾವದೋ ಅದು ಮನುಷ್ಯನಿಗೆ ಬಹು ಪ್ರಯೋಜನಕಾರಿಯಾದದ್ದೆಂದು ತಿಳಿಯಬೇಕು.

ಹೀಗೆ ಮಹಾದೇವನನ್ನು ತಿಳಿಯುವದರಿಂದ ನೀತಿಗೆ ಬಾಧಕ ಬರುತ್ತದೆಂದು ಯೋಚಿಸಬಾರದು. ಆ ಮಹಾದೇವನ ತಿಳಿವಳಿಕೆಯಲ್ಲಿಯೇ ನೀತಿಯ ಸಮಾವೇಶವೂ ಆಗುವದರಿಂದ ಇಂಥಾ ಮತ ಬೋಧೆಯೇ ಶ್ರೇಷ್ಠವಾದುದು. ಒಬ್ಬನು ಮಹಾದೇವನಿಂದ ತಾನು ಉಂಟಾಗಿದ್ದೇನೆ ಎಂದೂ ತನ್ನಲ್ಲಿ ಆ ಮಹಾದೇವನು ಇದ್ದಾನೆ ಎಂದೂ ತಿಳಿದರೆ ಆ ಮಹಾದೇವನು ಆನಂದ ರೂಪನಾಗಿರುವದರಿಂದ ತಾನೂ ನಿಜಾನಂದದಲ್ಲಿ ಇರಬೇಕೆಂದು ತಿಳಿಯುತ್ತಾನೆ. ಹೀಗೆ ಆನಂದದಲ್ಲಿ ಇರುವಿಕೆ ಮುಂತಾದ ನೀತಿಗಳು ಸ್ವಾಭಾವಿಕವಾಗಿ ಬರುತ್ತವೆ. ಯೋಚಿಸುವದಾದರೆ ಮಹಾದೇವನು ಸುಳ್ಳು ಹೇಳುವ ರೂಪದವನಲ್ಲವಾದ್ದರಿಂದ ನಾನೂ ಸುಳ್ಳು ಹೇಳಬಾರದೆಂಬ ನೀತಿಯೂ ಅವನಿಗೆ ಸಹಜವಾಗಿ ಉತ್ಪನ್ನವಾಗುತ್ತದೆ. ಹೀಗೆ ತಿಳಿಯುವ ಬೋಧೆಯು ಹಿಂದೂ ಮತದ ಮುಖ್ಯ ಸಾರಾಂಶವಾಗಿದೆ.

ಮಹಾದೇವನ ಮೂಲವನ್ನು ತಿಳಿಯಬೇಕಾದರೆ ಅವನು ಸಾಕಾರನೇ ನಿರಾಕಾರನೇ ಎಂಬ ಪ್ರಶ್ನೆಯು ಹುಟ್ಟುವದು.

ಹಿಂದೂ ಮತದ ಅಭಿಪ್ರಾಯದ ಪ್ರಕಾರ ವಿಷ್ಣು, ಶಿವ ಮೊದಲಾದ ಹೆಸರುಗಳಿಂದ ಕರೆಯಲ್ಪಡತಕ್ಕವರೆಂದು ತಿಳಿಯಲ್ಪಟ್ಟು ಒಬ್ಬೊಬ್ಬರು ಒಂದೊಂದು ವಿಧವಾದ ಆಕಾರವುಳ್ಳವರೆಂದು ಭಾವಿಸಲ್ಪಟ್ಟು ಆಯಾ ಆಕಾರಗಳ ಮೂರ್ತಿಗಳ ಪೂಜೆಯೂ ಹೇಳಲ್ಪಟ್ಟು ಇರುವದರಿಂದ ದೇವ ಎಂಬುವವರು ಅನೇಕರು ಉಂಟೆಂದು ತಿಳಿಯಲಿಕ್ಕೆ ಅವಕಾಶವುಂಟೆಂಬ ಭಾವನೆ ಬರುತ್ತದೆ, ಮತ್ತು ಈ ಭಾವನೆಯು ಸಾಕಾರನಾದ ದೇವನನ್ನು ತಿಳಿಸುತ್ತದೆ, ಎಂಬ ಊಹೆಯೂ ಬರುತ್ತದೆ. ಆದರೆ ಆಯಾ ಹೆಸರಿನವರು ಮನುಷ್ಯರಿಗೆ ಕಾಣಿಸಿಕೊಂಡು ಮಹಾದೇವನ ವಿಷಯದಲ್ಲಿ ಮಾಡಿದ ಬೋಧೆಯು ಮಾನವ ಕೋಟಿಗೆ ಬಹು ಪ್ರಯೋಜನವಾಗಿರುವದೆಂಬ ಕೃತಜ್ಞತೆಯಿಂದ ಈ ಹೆಸರಿನವರನ್ನು ಮಾನವರೇ ಮೊದಲಾದವರು ( ಇಲ್ಲಿ ಮೊದಲಾದ ಎಂಬ ಪದದಿಂದ ಮುನಿ, ಯಕ್ಷ, ರಾಕ್ಷಸ

ದೇವ ಮೊದಲಾದ ಹೆಸರುಗಳಿಂದ ಗುರ್ತಿಸಲ್ಪಡತಕ್ಕ ಕೆಲವು ಪಂಗಡದವರು ಪೂರ್ವದಲ್ಲಿ ಇದ್ದರೆಂದು ಭಾವಿಸಬೇಕು ) ಮಹಾದೇವನಂತೆ ತಿಳಿದರು. ಬೌದ್ಧರು ಬುದ್ಧನನ್ನೂ ಕ್ರೈಸ್ತರು ಕ್ರಿಸ್ತನನ್ನೂ ದೇವನೆಂದು ಹೇಗೆ ತಿಳಿಯುವರೋ ಹಾಗೆ ಹಿಂದೂಗಳೂ ಇವರನ್ನು ದೇವರು ( ದೇವತೆಗಳು ) ಎಂದು ತಿಳಿದಿದ್ದರೆಂದು ನಿಶ್ಚಯಿಸಬಹುದಾಗಿದೆ.

ಹೀಗೆ ಶಿವ ವಿಷ್ಣು ಮೊದಲಾದವರ ಮೂರ್ತಿ ಪೂಜೆಯನ್ನು ಮಾಡುವುದು ನಿರಾಕಾರನಾದ ಮಹಾದೇವನನ್ನು ತಿಳಿಯುವದಕ್ಕೆ ಸಾಧನವೇ ಹೊರತು ಈ ಮೂರ್ತಿ ಪೂಜೆ ಮಾತ್ರವೇ ಹಿಂದೂಗಳ ಮುಖ್ಯ ಧ್ಯೇಯವೆಂದು ಹಿಂದೂ ಶಾಸ್ತ್ರವು ಬೋಧಿಸುವದಿಲ್ಲ. ಕೆಲವು ಉಪನಿಷತ್ತುಗಳು ( ಜಾಬಾಲದರ್ಶನ ಮೊದಲಾದವುಗಳು ) ಕಟ್ಟಿಗೆ, ಕಲ್ಲು ಮೊದಲಾದವುಗಳಿಂದ ಮಾಡಲ್ಪಟ್ಟ ಬೊಂಬೆಗಳ ಮತ್ತು ಚಿತ್ರಗಳ ಪೂಜೆಯನ್ನು ಸಂಪೂರ್ಣವಾಗಿ ನಿಷೇಧಿಸಿ ಇರುತ್ತವೆ.

ಈ ಕಾರಣಗಳಿಂದ ದೇವನನ್ನು ಸಾಕಾರನೆಂದು ತಿಳಿವುದಕ್ಕಿಂತಲೂ ನಿರಾಕಾರ (ಅವಯವಗಳಿಲ್ಲದವನು) ಎಂಬದಾಗಿ ತಿಳಿಯುವದೇ ಶ್ರೇಷ್ಠವೆಂಬ ಅಭಿಪ್ರಾಯವು ಹಿಂದೂ ಮತದಲ್ಲಿ ಇರುತ್ತದೆ ಎಂಬುದನ್ನು ಸರ್ವರೂ ಗ್ರಹಿಸಬೇಕು. ಹೀಗೆ ದೇವನು ನಿರಾಕಾರನೆಂದು ತಿಳಿಯುವದಾದರೆ ಅವನ ಧ್ಯಾನವನ್ನು ಅವನ ಸ್ತೋತ್ರವನ್ನು ಅವನ ಪೂಜೆಯನ್ನು ಹೇಗೆ ಮಾಡಬೇಕು ಎಂಬ ಯೋಚನೆಯು ಹುಟ್ಟುವದು.

ಈ ವಿಷಯವನ್ನು ನಿರ್ಧರಿಸಬೇಕಾದರೆ ಈಗಿನ ಶಾಸ್ತ್ರಕಾರರು ( Modern Scientists ) ಯಾವ ಯಾವ ಅಂಶಗಳನ್ನು ಪರಿಶೋಧಿಸಿರುವರು ಎಂಬುದನ್ನು ಗಣನೆಗೆ ತರಬೇಕಾಗುತ್ತದೆ. ಅವರು ಅಣು ( Atom ) ಎಂಬುದೇ ಮೂಲವೆಂದು ಕೆಲ ವರ್ಷಗಳ ಹಿಂದೆ ತಿಳಿಯುತ್ತಿದ್ದರಾದರೂ ಈಗ ಅಣುವೂ ಕೂಡಾ ಭೇದಿಸಲ್ಪಡಬಹುದೆಂದೂ ಈ ಭೇದಿಸಲ್ಪಟ್ಟ ಭಾಗವು ರೇಣು ( Ion ) ವಿದ್ಯುದ್ರೇಣು ( Electron ) ಎಂಬಿವೇ ಮೊದಲಾದ ಹೆಸರಿನಿಂದ ಕರೆಯಲ್ಪಡುವವೆಂದೂ ಗೊತ್ತು ಮಾಡಿರುತ್ತಾರೆ. ಮತ್ತು ಈ ಭಾಗಗಳು ನಿರಾಕಾರವಾಗಿದ್ದರೂ ದುಂಡಗಿನ ( Round ) ಆಕಾರವಾಗಿ ಕಾಣುವ

ವೆಂದೂ ಆಕಾರವಿಲ್ಲ, ( Shapeless ) ಎಂಬುದೇ ದುಂಡು ಎಂದೂ ಹೇಳುತ್ತಾರೆ. ಇದು ಪ್ರಸಿದ್ಧ ವಿಷಯ.

ಅಂಕಗಣಿತ ಶಾಸ್ತ್ರವಾದರೂ ಒಂದು ಎಂಬ ಲೆಕ್ಕವು ಇರುವದರ ಮೊದಲು ೦ ಸೊನ್ನೆ ( Zero ) ಇತ್ತೆಂದು ಬೋಧಿಸುತ್ತದೆ.

ಇತರರ ಮನಸ್ಸನ್ನು ಸ್ವಾಧೀನಗೊಳಿಸಿಕೊಳ್ಳುವ ( Hyp--notism ) ಶಾಸ್ತ್ರವಾದರೂ ಒಂದು ಸೊನ್ನೆಯನ್ನು ಬರೆದು ಆದರಲ್ಲಿ ಕರೀ ಬಣ್ಣವನ್ನು ತುಂಬಿ ಅದರ ನಿರೀಕ್ಷಣೆ ಮಾಡುವದರಿಂದ ಮನಸ್ಸು ಸ್ಥಿರಕ್ಕೆ ಬಂದು ಅದು ಇನ್ನೊಬ್ಬರ ಮನಸ್ಸನ್ನು ಆಕರ್ಷಿಸುವದಕ್ಕೆ ಸಿದ್ಧವಾಗುತ್ತದೆ ಎಂದು ಹೇಳುತ್ತದೆ.

ಯೋಗ ಶಾಸ್ತ್ರವಾದರೂ ಒಂದು ಗೋಳಾಕಾರವಾದ ಕರೀ ಬಣ್ಣದ ವಸ್ತುವಿನ ದೃಷ್ಟಿಯನ್ನಿಡುವುದು ಯೋಗ ಸಾಧನೋಪಾಯವೆಂದು ಬೋಧಿಸುತ್ತದೆ. ಯೋಗವೆಂದರೆ ಏನು?

ಯೋಗಶ್ಚಿತ್ತ ವೃತ್ತಿ ನಿರೋಧಃ

ಮನಸ್ಸಿನ ವೃತ್ತಿಗಳನ್ನು ತಡೆಯುವದೇ ಯೋಗಸಾಧನೆಯ ಉದ್ದೇಶವು.

ಯುಕ್ಲಿಡನ ಸಿದ್ಧಾಂತ ( ರೇಖಾಗಣಿತ ) ವಾದರೂ ಚುಕ್ಕೆ ( Point . ) ಎಂಬುವದರಿಂದ ಪ್ರಾರಂಭವಾಗುತ್ತದೆ. ಹೀಗೆ ಎಲ್ಲಾ ಶಾಸ್ತ್ರಗಳೂ ೦ ಸೊನ್ನೆ ( Zero ) ಯಿಂದ ಉದ್ಭವಿಸಿ ಇರುವವೆಂದು ತೋರಿಸುವದಕ್ಕೆ ಸಾಕಾದಷ್ಟು ಮಾದರಿಗಳು ನಮಗೆ ದೊರಕುತ್ತವೆ ಈ ಕಾರಣಗಳಿಂದ ಮಹಾದೇವನನ್ನು ತಿಳಿಯುವ ಶಾಸ್ತ್ರ ( Science of Soul ) ವಾದರೂ ೦ ಸೊನ್ನೆ ( Zero ) ಯಿಂದಲೇ ಆರಂಭಿಸಬೇಕಲ್ಲವೇ ?

ಹೀಗೆ ಆರಂಭಿಸಿ ಇರುವದೆಂಬುದನ್ನು ಹಿಂದೂ ಮತ ಶಾಸ್ತ್ರವು ಬೋಧಿಸುತ್ತದೆ.

ಹಿಂದೂಗಳಲ್ಲಿ ಸಾಮಾನ್ಯವಾಗಿ ನಿರಾಕಾರ ಬ್ರಹ್ಮ ಎಂದು ಕರೆಯಲ್ಪಡುವ ವಸ್ತುವೇ ಮಹಾದೇವನೆಂಬ ಭಾವನೆಯುಂಟು, ಎಂಬ ಅಂಶವನ್ನು ಪ್ರೊಫೆಸರ್ ಮ್ಯಾಕ್ಸ್‌ಮುಲ್ಲರ್ ಮೊದಲಾದವರು ಒಡಂಬಟ್ಟಿರುತ್ತಾರೆ ( ಈ ಮ್ಯಾಕ್ಸ್‌ಮುಲ್ಲರರು ಇಂಗ್ಲೆಂಡಿನವರು, ಜರ್ಮನಿಯವರೆಂದು ಹಿಂದಿನ ಸಂಚಿಕೆಗಳಲ್ಲಿ ತಪ್ಪಾಗಿ ನಮೂದಾಗಿರುವದು. ) ಈ ನಿರಾಕಾರ ಬ್ರಹ್ಮವೇ 'ಶೂನ್ಯ, (ಸೊನ್ನೆ = Zero)ಎಂಬ ಹೆಸರಿನಿಂದಲೂ ಕರೆಯಲ್ಪಡುವುದು. ಇಲ್ಲಿಂದಲೇ ದೇವನನ್ನು ತಿಳಿಯುವ ಶಾಸ್ತ್ರವು ಪ್ರಾರಂಭವಾಗಿರುತ್ತದೆ.

ಹೀಗಾದರೇನೇ ಎಲ್ಲಾ ಶಾಸ್ತ್ರಗಳ ಮೂಲವೂ ಎಲ್ಲಾ ವಸ್ತುಗಳ ಮೂಲವೂ ಎಲ್ಲಾ ಕಾರಣಗಳ ಮೂಲವೂ ಎಲ್ಲಾ ಮತಗಳ ಮೂಲವೂ ಒಂದೇ ಆಗಿರುವದೆಂದು ಜಗತ್ತಿನ ಮಾನವರು ನಂಬುವುದಕ್ಕೆ ಅವಕಾಶವಾಗುತ್ತದೆ.

ದೇವನಿಂದಲೇ ಉಂಟಾಗಿರುವ ಈ ಜಗತ್ತನ್ನು ಶಾಸ್ತ್ರ ಶೋಧನ (Scientific research ) ದಿಂದಲ್ಲದೆ ಬರೀ ಮನುಷ್ಯನ ಕಣ್ಣುಗಳಿಂದ ನೋಡೋಣ. ಮಳೆಯ ಹನಿ ದುಂಡಾಗಿದೆ, ಗಿಡದ ಬೊಡ್ಡೆ ದುಂಡಾಗಿದೆ, ಶಾಖಾ ದುಂಡಗಿದೆ, ಬೀಜ ದುಂಡಾಗಿದೆ, ಎಲೆ ದುಂಡಗಿನ ಆಕಾರ, (Round Shaped). ಆಗಿದೆ, ಬೆಟ್ಟ ದುಂಡಗಿನ ಆಕಾರ, ಮನುಷ್ಯನ ಮತ್ತು ಪ್ರಾಣಿಗಳ ಅವಯವಗಳು ದುಂಡಗಿನ ಆಕಾರ, ಹೀಗೆ ದೈವ ನಿರ್ಮಿತವಾದ ಇಡೀ ಜಗತ್ತೇ ಮತ್ತು ಈ ಜಗತ್ತಿನ ಭಾಗಗಳೇ ದುಂಡಿನಿಂದ ತುಂಬಿ ಹೋಗಿರುತ್ತವೆ.

ಇವೆಲ್ಲ ಸಂಗತಿಗಳ ವಿಚಾರದಿಂದ ನಿರಾಕಾರ ವಸ್ತುವಾದ ದೇವನನ್ನು ಸಾಕಾರದಲ್ಲಿ ಮನುಷ್ಯನು ತಿಳಿಯಬೇಕಾದರೆ ಅವನನ್ನು ದುಂಡಗಿನ ಆಕಾರದಲ್ಲಿರುವಂತೆ ತಿಳಿಯುವದೇ ಅತ್ಯುತ್ತಮವಾದ ಮಾರ್ಗವೆಂಬುದನ್ನು ಸುಲಭದಲ್ಲಿ ನಿರ್ಣಯಿಸ ಬಹುದಾಗಿದೆ.

ದೊಡ್ಡದಾಗಿರುವ ಭೂಮಿಯನ್ನು ಹುಡುಗನ ಕೈಲಿಕೊಟ್ಟು ಇದು ಭೂಮಿ ಎಂದು ಪಾಠಮಾಡಿಸಲಿಕ್ಕೆ ಉಪಾಧ್ಯಾಯನಿಗೆ ಹೇಗೆ

ಸಾಧ್ಯವಿಲ್ಲವೋ ಹಾಗೆ ಶೂನ್ಯವಸ್ತುವನ್ನು ಕೈಲಿಕೊಟ್ಟು ಇವನನ್ನು ದೇವನೆಂದು ತಿಳಿ ಎಂದು ಹೇಳುವ ಶಕ್ತಿಯು ಯಾವ ಮನುಷ್ಯನಿಗೂ ಇಲ್ಲ. ಹಿಂದೆಯೂ ಇಲ್ಲ ಈಗಲೂ ಇಲ್ಲ ಮುಂದೆಯೂ ಆಗಲಾರದು. ಆದರೆ ಒಂದು ಚಂಡನ್ನು ಕೈಲಿ ಕೊಟ್ಟು ಇದರಂತೆ ಭೂಮಿ ಇದೆ ಎಂದು ಹುಡುಗನಿಗೆ ಕಲಿಸುವದಕ್ಕೆ ಉಪಾಧ್ಯಾಯನಿಗೆ ಹೇಗೆ ಸಾಧ್ಯವಿದೆಯೋ ಹಾಗೆ ಚಂಡಿನಂತೆ ಗೋಳಾಕಾರವಾದ ವಸ್ತುವನ್ನು ಕೈಲಿ ಕೊಟ್ಟು ಇದರಂತೆ ಜಗತ್ತಿದೆ, ಇದರಂತೆ ನಿರಾಕಾರ ಬ್ರಹ್ಮನಿದ್ದಾನೆ, ಇದರಂತೆ ಮಹಾದೇವನಿದ್ದಾನೆ, ಎಂದು ಬೋಧಿಸುವದಕ್ಕೆ ಶಾಸ್ತ್ರಜ್ಞನಾದ ಮನುಷ್ಯನಿಗೆ ಅವಕಾಶವಿದೆ ಎಂದು ಸುಲಭವಾಗಿ ಎಲ್ಲರೂ ತಿಳಿಯಬಹುದು. ಈ ದುಂಡಾಗಿರುವ ವಸ್ತುವೇ 'ಲಿಂಗ'(Linga)ಎಂದು, ಕರೆಯಲ್ಪಡುವ ವಸ್ತುವು. ಮಹಾದೇವನನ್ನು ಲಿಂಗರೂಪದಲ್ಲಿ ಪೂಜಿಸಬೇಕೆಂದು ವೇದ ಭಾಗಗಳಾದಉಪನಿಷತ್ತುಗಳೂ (ಭಸ್ಮಜಾಬಾಲವೊದಲಾದವು) ಪುರಾಣಗಳೂ (ಲೈಂಗ್ಯ ಮೊದಲಾದವು) ಬೋಧಿಸುತ್ತವೆ

ಇಂಥಾ ರೀತಿಯಲ್ಲಿ ಇರುವ ಲಿಂಗದಲ್ಲಿ ದೃಷ್ಟಿಯನ್ನಿಡುವುದು ಮನುಷ್ಯನ ಮನಸ್ಸನ್ನು ಸ್ಥಿರಗೊಳಿಸುವದಕ್ಕೆ ಸಾಧನವಾಗಿರುತ್ತದೆ. ಎಂಬ ಅಂಶವನ್ನು ಪುನಃ ಹೇಳಬೇಕಾದುದೇ ಇಲ್ಲ. ಈ ಮುಂಚೆಯೇ ಮನಸ್ಸನ್ನು ಸ್ಥಿರೀಕರಣ ಮಾಡುವ ಶಾಸ್ತ್ರ (Yoga & Hypntism) ಮೊದಲಾದವುಗಳನ್ನು ತಿಳಿದವರು ಗೊತ್ತುಮಾಡಿಯೇ ಇರುತ್ತಾರೆ.

ಲಿಂಗರೂಪದಲ್ಲಿ ಮಹಾದೇವನು ಉಂಟೆಂದು ಧ್ಯಾನ ಮಾಡುವುದಕ್ಕೂ ಸ್ತೋತ್ರ ಮಾಡುವುದಕ್ಕೂ ಸಾಧ್ಯವಾಗುತ್ತದಾದ್ದರಿಂದ ನಿರಾಕಾರನಾದ ಮಹಾದೇವನನ್ನು ಧ್ಯಾನ ಸ್ತೋತ್ರ ಮೊದಲಾದವುಗಳಿಗಾಗಿ ಮನುಷ್ಯನು ತನ್ನ ವಶಪಡಿಸಿಕೊಳ್ಳಲಿಕ್ಕೆ ಅತ್ಯುತ್ತಮವಾದ ಮಾರ್ಗವೇ ಲಿಂಗಪೂಜೆ ಲಿಂಗಧ್ಯಾನ ಲಿಂಗಸ್ತೋತ್ರ ಲಿಂಗಭಾವನೆ ಮುಂತಾದವುಗಳು ಎಂಬುದನ್ನು ಎಲ್ಲಾ ಮನುಷ್ಯರೂ ಸುಲಭದಲ್ಲಿ ಗ್ರಹಿಸಿ ಅದರಂತೆ ಆಚರಿಸಬಹುದಾಗಿದೆ.

ಈ ವಿಚಾರವಲ್ಲಿ ನಾವು ಇಷ್ಟಕ್ಕೆ ತೃಪ್ತರಾಗದೆ ಇನ್ನೂ ಕೆಲವು ಹೆಜ್ಜೆಗಳು ಮುಂದಕ್ಕೆ ಹೋಗಬೇಕಾಗಿರುವುದು.

ಉಪಾಧ್ಯಾಯನು ಬಾಲಕನಿಗೆ ತೋರಿಸುವ ಚಂಡು, ಭೂಮಿಯ ಆಕಾರವೇ ಹೊರತು ನಿಜವಾದ ಭೂಮಿಯಲ್ಲ. ನಿಜವಾದ ಭೂಮಿಯಲ್ಲಿ ಗಿಡ ಮರಗಳು ಬೆಳೆಯುವದೇ ಮೊದಲಾದ ಕೆಲಸಗಳು ನಡೆಯುವಂತೆ ಈ ಚಂಡಿನಲ್ಲಿ ನಡೆಯಲಾರವು, ಹಾಗೆಯೇ ಲಿಂಗವು ಮಹಾದೇವನ ಆಕಾರವನ್ನು ತೋರಿಸುವುದೇ ಹೊರತು ಮಹಾದೇವನೇ ಅಲ್ಲ ಆ ಮಹಾದೇವನು ಜ್ಞಾನವುಳ್ಳವನು. ಬುದ್ಧಿಯನ್ನುಉಂಟಾಗಿದ್ದಾನೆ. ಆದರೆ ಬುದ್ಧಿಯೇ ಮಹಾದೇವನಲ್ಲ. (He has wisdom, wisdom is not God) ಎಂದರೆ ಬುದ್ಧಿಯಲ್ಲಿ ಇರುವ ಮೂಲವಸ್ತುಗಳಿಗಿಂತಲೂ ಮಹಾದೇವನಲ್ಲಿ ಇರುವ ಮೂಲವಸ್ತುಗಳು ಹೆಚ್ಚಿನವುಗಳು ಎಂದು ತಾತ್ಪರ್ಯ. ಇಂಥಾ ಮಹಾದೇವನನ್ನು ನಾವು ಎಲ್ಲಿ ಕಾಣಬೇಕು? ಅವನು ಎಲ್ಲಿದ್ದಾನೆ ಎಂಬುದನ್ನು ನಾವು ಪರಿಶೋಧಿಸದಿದ್ದರೆ ನಮಗೆ ಗತ್ಯಂತರವೇ ಇಲ್ಲ.

ಮಹಾದೇವನು ಎಲ್ಲಾ ಕಡೆಯಲ್ಲಿಯೂ ಇದ್ದಾನೆ.ಎಂಬುದು ಎಲ್ಲರೂ ಒಪ್ಪುತಕ್ಕವಿಷಯ. ಆದರೆ ವ್ಯಕ್ತ ಸ್ವರೂಪದಿಂದ ತೋರುವದೆಲ್ಲಿ ಎಂಬುದನ್ನು ಗೊತ್ತುಮಾಡಬೇಕು ಎಲ್ಲ ಗುಣಗಳಲ್ಲಿಯೂ ಎಲ್ಲ ವಿಷಯಗಳಲ್ಲಿಯೂ ಎಲ್ಲ ಕಾರಣಗಳಲ್ಲಿಯೂ ಎಲ್ಲದರಲ್ಲಿಯೂ ಮೇಲಿನವನು ಮಹಾದೇವನು ಎಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುತ್ತದೆ. ಇದರಮೇಲಿಂದ ಈ ಭೂಲೋಕದ ವಸ್ತುಗಳಲ್ಲಿ ಪ್ರಾಣಿಗಳಲ್ಲಿ ಅತ್ಯಂತ ಶ್ರೇಷ್ಠವಾದುದಾವುದೋ ಅದರಲ್ಲಿ ಮಹಾದೇವನ ಇರುವಿಕೆಯ ವಿಶೇಷ ಲಕ್ಷಣಗಳುತೋರಿರುವವೆಂದು ನಾವು ನಿರ್ಣಯಿಸಬಹುದಲ್ಲವೇ?

ಈ ಲೋಕವಲ್ಲಿ ರೇಡಿಯೋ ಅತ್ಯಂತ ಶ್ರೇಷ್ಠವಾದ ವಸ್ತುವೇನು? ರೇಡಿಯೋದಲ್ಲಿ ಮನುಷ್ಯನ ಮನಸ್ಸಿಗೆ ಸಮಾನವಾದ ಮನಸ್ಸನ್ನು ಕಾಣಲಾಗುವದಿಲ್ಲ. ರೇಡಿಯೋ ಸಹಾಯದಿಂದ ಯಾಂತ್ರಿಕ ಮನುಷ್ಯ ( Rabot = Mechanical man ) ನನ್ನು ನಿರ್ಮಿಸಬಹುದಾ

ದಘೂ ಅವನ ಕಾರ್ಯವೂ ಯೋಚನೆಯೂ ಶಾಸ್ತ್ರ ( Science ) ದಲ್ಲಿ ನಿಪುಣನಾದ ಮನುಷ್ಯನ ಬುದ್ಧಿಶಕ್ತಿಗೆ ಸಮಾನವಾಗಲಾರವು. ಪ್ರಾಣಿಗಳಲ್ಲಿಯೂ ಮನುಷ್ಯನ ಬುದ್ಧಿ ಶಕ್ತಿಗೆ ಸಮಾನವಾದ ಪ್ರಾಣಿಯೂ ಯಾವದೂ ಇಲ್ಲ. ಆದ್ದರಿಂದ ಮನುಷ್ಯನಲ್ಲಿ ಮಹಾದೇವನ ಲಕ್ಷಣದ ವಿಶೇಷ ಅಂಶಗಳು ತುಂಬಿಕೊಂಡಿರುವವೆಂದು ನಾವು ಸುಲಭವಾಗಿ ನಿರ್ಧರಿಸಬಹುದು.

ಮನುಷ್ಯನು ದೇವನನ್ನು ನಿರಾಕಾರನೆಂದು ತಿಳಿದು ಅವನನ್ನು ಗುರ್ತಿಸಲಿಕ್ಕಾಗುವದಿಲ್ಲವಾದ್ದರಿಂದ ಬರೀ ಪ್ರಾರ್ಥನೆಗಳನ್ನು ಮಾಡಿದರೆ ಸಾಕೆಂದು ಯೋಚಿಸುವದಾದರೆ ಅವನು ಮಹಾದೇವನಲ್ಲಿ ಸಂಪೂರ್ಣವಾದ ಭ ಕ್ತಿ ಯ ನ್ನು ತೋರಿಸಿದಂತೆ ಆಗುವದಿಲ್ಲ. ಪ್ರಾರ್ಥನೆಯಲ್ಲಿ——ನಾನು ನಿನ್ನನ್ನು ಬೇಡಿಕೊಳ್ಳುತ್ತೇನೆ——ಎಂದು ತನಗೆ ಬೇಕಾದ್ದನ್ನು ಬೇಡುವದರಿಂದ ಮಹಾದೇವನು ಅದನ್ನು ನಡೆಸಿಕೊಡಬಹುದಾದರೂ ಮನುಷ್ಯನು ತನ್ನ ದೇಹವನ್ನು ತನ್ನ ಮನವನ್ನು ತನ್ನ ಭಾವವನ್ನು ಶುದ್ಧಿಪಡಿಸಿಕೊಂಡಂತೆ ಆಗುವದಿಲ್ಲ. ಏಕೆಂದರೆ ಮಹಾದೇವನ ಲಕ್ಷಣವನ್ನು ಅಥವಾ ಮಹಾದೇವನ ಶಕ್ತಿಯನ್ನು ಆಕರ್ಷಣ ಮಾಡಿಕೊಳ್ಳುವಿಕೆಯಿಂದ ಒಬ್ಬ ಮನುಷ್ಯನು ಪರಿಶುದ್ಧನಾದಂತೆ ಬೇಡಿ ಪಡೆಯುವ ವಸ್ತುಗಳಿಂದ ಶುದ್ಧತ್ವವನ್ನು ಪಡೆಯಲಾರನು. ಇದಕ್ಕಾಗಿ ಮನುಷ್ಯನು ತನ್ನ ದೇಹವನ್ನು ಮಹಾದೇವನಿಗೆ ಅರ್ಪಿಸಬೇಕು. ತನ್ನ ಮನವನ್ನು ಮಹಾದೇವನಿಗೆ ಅರ್ಪಿಸಬೇಕು. ತನ್ನ ಭಾವ (Source of mind) ವನ್ನು ಮಹಾದೇವನಿಗೆ ಅರ್ಪಿಸಬೇಕು ಹೀಗೆ ಒಪ್ಪಿಸುವದರಿಂದ ಮಹಾದೇವ ಭಾವನೆಯೇ ಅವನಲ್ಲಿ ತುಂಬಿ ಮನುಷ್ಯನು ಪರಿಶುದ್ಧನಾಗುವನು. ಹೀಗೆ ಮಾಡುವಲ್ಲಿ ತನ್ನ ಪ್ರಾಣವೇ ಪ್ರಾಣಲಿಂಗವಾಗಿಯೂ ಭಾವವೇ ಭಾವಲಿಂಗವಾಗಿಯೂ ಪರಿಣಮಿಸಿ ತಾನು ನಿರಾಕಾರ ಬ್ರಹ್ಮನ ಸ್ಥಿತಿಯನ್ನು ಹೊಂದುವನು.

ಮನುಷ್ಯನು ದುರ್ಗುಣವುಳ್ಳವನು, ಕೆಟ್ಟ ಲಕ್ಷಣವುಳ್ಳವನು, ಇವನು ಎಂದೂ ಮಹಾದೇವನ ಆಕರ್ಷಣ ಸ್ಥಿತಿಯನ್ನು ಹೊಂದಲಾರನು ಎಂದು ಭಾವಿಸಬಾರದು. ನಾವು ಇನ್ನೊಬ್ಬರನ್ನು ಬಯ್ಯುತಕ್ಕ ಬಾ

ಯಿಯಿಂದ ಮಹಾದೇವನನ್ನು ಸ್ತೋತ್ರಮಾಡುತ್ತೇವೆ. ಲೌಕಿಕ ವಿಷಯಗಳ ಸುಖವನ್ನು ಬಯಸಿದಾಗ, ಆ ಬಯಕೆಗೆ ಅಡ್ಡಿ ಮಾಡುವವರನ್ನು ಕಂಡರೆ ನಾವು ಬಯ್ಯುತ್ತೇವೆ. ಆದ್ದರಿಂದ ಇಂಥಾ ದುರ್ಗುಣಗಳು ಪ್ರಪಂಚವನ್ನು ನಂಬುವದರಿಂದ ಬರುತ್ತವೆ, ಎಂದು ತಿಳಿಯಬೇಕು. ಆದರೆ ಅಂತಹ ದೇಹ ಸುಖವನ್ನು ಮುಖ್ಯವೆಂದು ಭಾವಿಸದೆ, ದೇಹವನ್ನೇ ಮಹಾದೇವನಿಗೆ ಒಪ್ಪಿಸಿದರೆ ಮಹಾದೇವನ ಬಯಕೆಗಳು ಯಾವವೆಂದು ನಮ್ಮ ಪೂರ್ವಿಕರು ಬೋಧಿಸಿರುತ್ತಾರೋ ಅಂಥಾ ಬಯಕೆಗಳನ್ನೇ ನಾವು ಹೊಂದಬೇಕಾಗುತ್ತದೆ. ಮಹಾದೇವನಿಗೆ ಬಯಕೆಗಳಿಲ್ಲವೆಂದು ತಿಳಿವರೆ ನಾವು ಬಯಕೆಯನ್ನೇ ಬಿಡಬೇಕಾಗುತ್ತದೆ. ಹೀಗಾದರೆ ಮನಸ್ಸು ಶಾಂತತೆಯನ್ನು ಹೊಂದಿ ಮನುಷ್ಯನು ಪರಿಶುದ್ಧತೆಯನ್ನು ಪಡೆವನು. ಹೀಗೆ ದುರ್ಗುಣಗಳನ್ನು ತಿರುಗಿಸುವದು ಮನುಷ್ಯನಿಗೆ ಸಾಧ್ಯವಾದ ಕೆಲಸವಾಗಿದೆ.

ಇಂಥಾ ಪರಿಶುದ್ಧತೆಯನ್ನು ಪಡೆದವನು ಯೋಗಿ, ಎಂದೂ ಯೋಗಿಯ ಪೂಜೆಯನ್ನು ಮಾಡಿದವನಿಗೆ ಸುಖವು ದೊರಕುತ್ತದೆ, ಎಂದೂ ಹಿಂದೂಮತವು (ಅದ್ವಯ ತಾರಕ ಮೊದಲಾದ ಉಪನಿಷತ್ತು) ಬೋಧಿಸುತ್ತದೆ. ಇದು ಕೇವಲ ಮನುಷ್ಯನ ಪೂಜೆ, ಇದರಲ್ಲಿ ಏನೂ ಪ್ರಯೋಜನವಿಲ್ಲ, ಎಂದು ಭಾವಿಸಬಾರದು. ಒಂದು ಸಾವಿರ ರೂಪಾಯಿಯುಳ್ಳ ಒಬ್ಬ ಮನುಷ್ಯನನ್ನು ಒಂದು ನೂರುರೂಪಾಯಿಯುಳ್ಳ ಮತ್ತೊಬ್ಬನು ಬೇಡಿದರೆ ಅವನು ಇವನಿಗೆ ಕೆಲವು ರೂಪಾಯಿಗಳನ್ನು ಹೇಗೆ ಕೊಡಬಹುದೋ ಹಾಗೆ, ಯೋಗಿಗಳಾದವರು ತಮ್ಮ ಮಹಾದೇವನ ಆಕರ್ಷಣ ಶಕ್ತಿಯನ್ನು ಇತರರಿಗೂ ಕೊಡಬಲ್ಲರು. ಇಂಥ ಯೋಗಿಗಳನ್ನೇ ಜಂಗಮಎಂದೂ ಕರೆಯುತ್ತಾರೆ.

ಪರಿಶುದ್ಧವಾದ ನಡತೆಯುಳ್ಳವರಾಗಿ ದೈವಿಕ ವಿಷಯವನ್ನು ಬೋಧಿಸುವವರನ್ನು ಗುರು ಎಂದು ಕರೆಯುತ್ತಾರೆ ಈ ಗುರುವನ್ನು ನಂಬದೆ ಇರುವ ಹಿಂದೂ ಮನುಷ್ಯನು ಒಬ್ಬನೂ ಇಲ್ಲ. ಗುರುವು ತನ್ನ ಶಕ್ತಿಯಿಂದ ತನ್ನ ಶಿಷ್ಯರನ್ನು ಆಕರ್ಷಿಸುತ್ತಿರುತ್ತಾನೆ. ಬುದ್ಧ, ಕ್ರಿಸ್ತ, ಮೊದಲಾದವರು ಜನರನ್ನು ಆಕರ್ಷಿಸಿದುದೂ ಆದರಿಂದ ಅವರನ್ನು

ದೇವರೆಂದು ಜನರು ಭಾವಿಸಿದುದೂ ನಮಗೆ ತಿಳಿದು ಬಂದೇ ಇರುತ್ತ
ದೆ. ಇದರಂತೆ ನಿರಾಕಾರಬ್ರಹ್ಮ (ಲಿಂಗ) ವನ್ನು ಬೋಧಿಸಿ, ಕೊಡು
ವ ಶಕ್ತಿಯನ್ನು ಹೊಂದಿದವರನ್ನು ಗುರು ಎಂದು ಕರೆಯುತ್ತಾರೆ.

ಹೀಗೆ ಗುರು, ಜಂಗಮ, ನಿರಾಕಾರ ಬ್ರಹ್ಮನೇ ತಾನಾಗಿ
ತನ್ನ ಸ್ವರೂಪವಾದ ಲಿಂಗ, ಎಂದು ಕರೆಯಲ್ಪಡುವ ಮೂವರೂ ಮ
ಹಾದೇವನ ಆಕಾರವನ್ನು ಹೊಂದಿ ಭೂಮಿಯಲ್ಲಿ ತೋರುವ ಸಾಕಾರ
ದೇವರು ಎಂದು ಭಾವಿಸುವದು ಅತ್ಯುತ್ತಮವಾದ ಮಾರ್ಗವು. ಇವ
ರು ಮೂವರೂ ನಿರಾಕಾರಬ್ರಹ್ಮ (ಲಿಂಗ) ರೂಪವು, ಎಂದು ಭಾ
ವಿಸುವದಾದರೆ ನಾವು ಜೀವವುಳ್ಳ ಮಹಾದೇವನನ್ನೇ ನಮ್ಮಎದುರಿಗೆ
ಮೂರು ರೂಪದಲ್ಲಿ ಕಂಡಂತೆ ಆಗುತ್ತದೆ.

ಲಿಂಗವು ತನ್ನ ಪೂಜೆ ಮಾಡುವ ಮನುಷ್ಯನ ಅಳತೆಗೆ ಸರಿಯಾ
ಗಿ ಇಡುವದರಿಂದ ತಾನೂ ಲಿಂಗ(ಬ್ರಹ್ಮ)ವು, ಜಂಗಮ ಅಥವಾ ಗು
ರು ಇವರೂ ಲಿಂಗ(ಬ್ರಹ್ಮ)ವು, ಎಂದು ತಿಳಿಯುವದು ಬಹು ಮು
ಖ್ಯವು. ಈ ದೆಸೆಯಿಂದ ಗುರು ಜಂಗಮ ಪೂಜೆಯಾಗಲೀ ಲಿಂಗ
ಪೂಜೆಯಾಗಲೀ ಮನುಷ್ಯನ ಪೂಜೆ ಎಂದು ಭಾವಿಸಬಾರದು.

ಲಿಂಗವು ನಿರಾಕಾರಬ್ರಹ್ಮದ ರೂಪವುಳ್ಳದ್ದು ಮತ್ತು ಮನುಷ್ಯನ
ರೂಪವುಳ್ಳದ್ದು ಇಷ್ಟುಮಾತ್ರವೇ ಅಲ್ಲ, ಅದು ಪ್ರಕೃತಿ (ಭೂಮಿ) ಯ
ರೂಪವನ್ನೂ ಹೊಂದಿರುತ್ತದೆ, ಆದ್ದರಿಂದ ಲಿಂಗವನ್ನು ನಂಬುವದು
ಎಲ್ಲಾ ವಿಷಯುಗಳಲ್ಲಿಯೂ ಅದ್ವೈತವನ್ನು ಸಾಧಿಸುವ ಮುಖ್ಯ ಯತ್ನವಾ
ಗಿದೆ. ಈಗಿನ ಶಾಸ್ತ್ರಕಾರರೂ(Scientists) ಈ ಪ್ರಪಂಚದಲ್ಲಿ ಒಂದೇ
ವಸ್ತುವಿದೆ ಎಂದು ಏಕ ಮುಖವಾಗಿ ಸಾರುತ್ತಿದ್ದಾರೆ. ಈ ಅಭಿಪ್ರಾ
ಯವನ್ನೇ ಲಿಂಗಧಾರಣೆಯು ಬೋಧಿಸುತ್ತದೆ.

ಸಭಾಸದರೇ,

ಈ ವಿಧದಲ್ಲಿ ಮಹಾದೇವನ ವಿವರವನ್ನು ತಿಳಿಯುವ ವಿಷಯವು ಬಹು ವಿಸ್ತಾರವಾಗಿರುತ್ತದೆ.

ಹೆಚ್ಚುಕಾಲ ತಮ್ಮಗಮನವನ್ನು ಸೆಳೆಯುವದಕ್ಕೆ ಅಂಜಿ ಈ ಹೇಳುವಿಕೆಯನ್ನು ಕಡಿಮೆ ಮಾಡುತ್ತೇನೆ.

ಹೀಗೆ ಗುರು ಲಿಂಗ ಜಂಗಮ ಈ ಮೂವರನ್ನು ಮಹಾದೇವ ರೂಪರೆಂದು ವಿಧಿಸುವದೇ ವೀರಶೈವವು. ಗುರು, ಲಿಂಗ, ಜಂಗಮ ಎಂದು ಮೂರುಭೇದವು ಕಂಡಾಗ್ಯೂ ಇವು ಒಂದು ವಸ್ತುವಿನ ಮೂರು ರೂಪಗಳಾದ್ದರಿಂದ ಮಹಾದೇವನೊಬ್ಬನೇ ಉಂಟೆಂದು ತಿಳಿಯಬೇಕು. ಒಂದು ಪದಾರ್ಥಕ್ಕೆ ಕಠಿಣ ದ್ರವ ವಾಯು ಎಂಬ ಮೂರರೂ ರೂಪಗಳು ಬಂದಾಗ್ಯೂ ಪದಾರ್ಥವು ಹೇಗೆ ಒಂದೇ ಆಗಿರುವದೋ ಹಾಗೆ ಗುರು, ಲಿಂಗ, ಜಂಗಮ ಈ ಮೂರೂ ಒಂದೇ ವಸ್ತುವಾಗಿರುತ್ತವೆ. ಇದು ಹಿಂದೂಮತ್ತದ ತಿಳಿವಳಿಕೆಯ ಒಂದು ಭಾಗವು. ಇದೇ ಮಹಾದೇವನ ತಿಳಿವಳಿಕೆಯ ಕೇವಲ ಸಾರವನ್ನು ಬೋಧಿಸುವ ಭಂಡಾರವು.

ಜಗತ್ತಿನಲ್ಲಿ ಯಾವ ಮತದಲ್ಲಿಯೂ ಕಾಣಲ್ಪಡದೆ ಇರುವ ಶ್ರೇಷ್ಠವಾದ ಮೋಕ್ಷೋಪಾಯವನ್ನು ಇದು ತೋರಿಸುತ್ತದೆ. ಈ ಮತವು ಸತ್ಯ, ಅಹಿಂಸಾ, ಮೊದಲಾದ ಸೂತ್ರಗಳುಳ್ಳದ್ದಾಗಿ ನಿಜವಾದ ಭಕ್ತಿಯನ್ನು ತೋರಿಸುವಂಥಾದ್ದಾಗಿದೆ. ಗಂಡಸು ಮತ್ತು ಹೆಂಗಸರನ್ನು ಸಮಾನ ಭಾವದಿಂದ ಕಾಣುವಂಥಾದ್ದೂ ಎಲ್ಲರೂ ಅನುಸರಿಸುವಂಥಾದ್ದೂ ಆಗಿರುತ್ತದೆ. ಇದರ ತತ್ವವನ್ನು ಕೇವಲ ಬುದ್ಧಿಶಾಲಿಯಾದವನು ಬಹು ವಿಚಾರದಿಂದ ತಿಳಿಯ ಬೇಕಾಗಿದೆ.

ಈ ವೀರಶೈವದ ವಿಷಯಗಳು, ಆಚರಣೆಯ ವಿಷಯಗಳೇ ಮೊದಲಾದವು, ಒಂದಾನೊಂದು ಕಾಲದಲ್ಲಿ ಹಿಮಾಲಯಪರ್ವತದಲ್ಲಿ ( ಕೈಲಾಸ ಎಂಬ ಭಾಗದಲ್ಲಿ ) ನಾಗರಿಕತೆಯುಳ್ಳ ವಿಶೇಷಜ್ಞರಾದ ದೇವ

ರು ( ದೇವತೆಗಳು ) ಋಷಿಗಳು ಮೊದಲಾದವರು ಇದ್ದ ಕಾಲದಲ್ಲಿ ಶಿವನೆಂಬ ದೇವನು ಸರ್ವರ ಉಪಯೋಗಕ್ಕಾಗಿ ಬೋಧಿಸಿದ ಸಂಗತಿಗಳಾಗಿವೆ. ಈ ಅಭಿಪ್ರಾಯವು ಶಿವಾಗಮಗಳು ಎಂಬ ಸಿದ್ಧಾಂತದ ಭಾಗದಿಂದ ಹೊರಬಿದ್ದದ್ದಾಗಿರುತ್ತದೆ.

ಶಿವನಿಂದ ಬೋಧಿಸಲ್ಪಟ್ಟವಾದ್ದರಿಂದ 'ಶೈವ' ಎಂಬ ನಾಮವು ಇದಕ್ಕೆ ಪೂರ್ವಾರಭ್ಯ ಬಂದಿರುತ್ತದೆ. ಭಕ್ತಿಯಲ್ಲಿ ವೀರತ್ವವುಳ್ಳುದಾದ್ದರಿಂದಲೇ ವೀರಶೈವ ಎಂಬ ಅನ್ವರ್ಥಕನಾಮವು ಇದಕ್ಕೆ ಸಲ್ಲುತ್ತದೆ. ಇದರ ಅನುಯಾಯಿಗಳು ದಕ್ಷಿಣ ಇಂಡಿಯಾದಲ್ಲಿ ಬಹಳವಾಗಿ ಇರುತ್ತಾರೆ.



# ಸಾಗರ ತಾಲ್ಲೂಕು ಕೆಳದಿ ಸಂಸ್ಥಾನ ಹಿರೇಮಠ ಪಟ್ಟಾಧಿಕಾರ ಮಹೋತ್ಸವ.



ಇದೇ ಮಾರ್ಗಶಿರ ಶು॥ ೧೧ ಸೋಮವಾರ ಕೆಳದಿ ಸಂಸ್ಥಾನ ಹಿರೇಮಠದ ಪಟ್ಟಾಧ್ಯಕ್ಷರವರಾದ ಶ್ರೀ ರೇವಣಸಿದ್ಧ ಸ್ವಾಮಿಗಳವರು ತಮ್ಮ ಅಧಿಕಾರವನ್ನು ಬಾಗಲಕೋಟೆಯ ಶ್ರೀ ಮಹಾದೇವ ದೇಶಿಕರವರಿಗೆ ವಹಿಸಿ ಕೊಟ್ಟರು.

ಈ ಕಾರ್ಯಕ್ಕೆ ಶ್ರೀಮನ್ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ಸಂಸ್ಥಾನ ಚಿತ್ರದುರ್ಗ ಶ್ರೀಮನ್ ನಿರಂಜನ ಜಗದ್ಗುರು ಸಚ್ಚಿದಾನಂದ ಸ್ವಾಮಿಗಳು ಸಂಸ್ಥಾನ ಅನಂತಪುರ ಶ್ರೀಮನ್ ನಿರಂಜನಮೂರ್ತಿಗಳಾದ ಶಿವಮೂರ್ತಿ ಸ್ವಾಮಿಗಳವರ. ಬಾಗಲಕೋಟೆ ರುದ್ರಮುನಿ ಒಡೆಯರವರು ಶಿರಾಳಕೊಪ್ಪ ಗುತ್ತಲ ಅಗಡಿಮಠ ರುದ್ರಸ್ವಾಮಿಗಳವರು ಕಪ್ಪನಹಳ್ಳಿ ಶಿವಯೋಗಾಶ್ರಮ ಮುಂತಾದ ವಿರಕ್ತ ಮೂರ್ತಿಗಳವರೂ ಘನ ಲಿಂಗ ಚಕ್ರವರ್ತಿಗಳಾದ ಹೊನ್ನಾಳಿ ತೊಗರಸಿ ಮುಂತಾದ ಸಂಸ್ಥಾನ ಮಠ ಪಟ್ಟಾಧ್ಯಕ್ಷರವರೂ ಆ ಪ್ರಾಂತದ ಭಕ್ತ ಮಂಡಳಿ ಶಿಷ್ಯ ಮಂಡಳಿಯವರೂ ಮಠಾಭಿಮಾನಿಗಳೂ ಸೇರಿದ್ದರು.

ಮಾರ್ಗಶಿರ ಶು॥ ೧ ದಿಂದಲೂ ಏಕಾದಶ ರುದ್ರಾಭಿಷೇಕವು ನಡೆದು ಶು॥ ೧೧ ನೇ ಸೋಮವಾರ ದಿನ ಪ್ರಾತಃಕಾಲ ೮ ಘಂಟೆಗೆ ಶ್ರೀ ಮಹಾದೇವ ದೇಶಿಕರವರಿಗೆ ಅಧಿಕಾರವು ಕೊಡಲ್ಪಟ್ಟು ಇವರು ಮಹಾದೇವಸ್ವಾಮಿ ಗುರು ರೇವಣಸಿದ್ಧಸ್ವಾಮಿ ಎಂಬ ಹೆಸರಿನಿಂದ ಕೆಳದಿ ಸಂಸ್ಥಾನ ಮಠದ ಸ್ವಾಮಿಗಳಾದರು. ಇದೇ ದಿನ ಸಾಯಂಕಾಲ ಪಲ್ಲಕ್ಕಿಯಲ್ಲಿ ಇವರ ಮೆರವಣಿಗೆಯೂ ಅತಿ ವೈಭವದಿಂದ ನಡೆಯಿತು.

ರಾತ್ರಿ ೮ ಘಂಟೆಯ ಮೇಲೆ ಮಲೆನಾಡು ಪ್ರಾಂತಿಕ ಸಭೆಯು ಕೂಡಿದ್ದಿತು. ಮ॥ ರಾ॥ ಜಿ. ಶಾಂತವೀರಪ್ಪನವರು ರಿಟೈರ್ಡ್ ಅಸಿಸ್ಟೆಂಟ ಇನ್‌ಸ್ಪೆಕ್ಟರ್ ಜನರಲ್‌ರವರು ಸಿದ್ಧರಾಮಪ್ಪನವರು ರಿಟೈರ್ಡ್ ಪೋಲೀಸ್ ಸುಪರಿಂಟೆಂಡೆಂಟರು ಶಿವಮೊಗ್ಗಾ ಅಡ್ವೋಕೇಟರು ವೇ. ಮೂ. ಸಿದ್ದಯ್ಯನವರು ಮ॥ ರಾ॥ ಬೆಳಗುತ್ತಿ ಲಿಂಗಪ್ಪನವರೇ ಮೊದಲಾದವರು ಇವರಲ್ಲಿ ೫೦ ೫೦ ಶ್ರೀ ಮನ್ ಮಹಾರಾಜರವರ ಶ್ರೇಯಃ ಪ್ರಾರ್ಥನೆಯು ಮಾಡಲ್ಪಟ್ಟ ಮೇಲೆ ವಿದ್ಯಾಭಿವೃದ್ಧಿ, ಮೊದ

ಲಾದ ವಿಷಯಗಳಲ್ಲಿ ಒಳ್ಳೆಯ ಭಾಷಣಗಳಾದವು. ಮ। ರಾ। ಜಿ. ಶಾಂತವೀರಪ್ಪನವರು ವೀರಶೈವ ಮತವು ಬರೀ ದಕ್ಷಿಣ ಇಂಡಿಯಾದಲ್ಲಿ ಮಾತ್ರ ಇದ್ದುದಲ್ಲವೆಂತಲೂ ಇದು ಬಹಳ ಪೂರ್ವ ಕಾಲದ್ದಾಗಿದ್ದು ಹಿಮಾಲಯ ಪ್ರಾಂತದಲ್ಲಿ ಮೊದಲು ಇದ್ದು ಅಲ್ಲಿಂದ ದಕ್ಷಿಣ ಹಿಂದೂ ದೇಶದಲ್ಲಿ ವ್ಯಾಪಿಸಿರುವದೆಂತಲೂ ಬಸವೇಶ್ವರನು ಮಾಡಿದ ಬೋಧೆಯು ವಿಶೇಷ ಮಹತ್ವದ್ದೆಂತಲೂ ಜನರಿಗೆ ಆನಂದಕರವಾಗುವಂತೆ ಭಾಷಣ ಮಾಡಿದರು. ಶ್ರೀ ॥ ॥ ಜಗದ್ಗುರುಗಳವರು ಚಿತ್ರದುರ್ಗ ಇವರು ಪರದೇಶದ ವಿದ್ಯಾಭ್ಯಾಸಕ್ಕಾಗಿ ಒಂದು ಲಕ್ಷ ರೂ. ಫಂಡ್ ಏರ್ಪಡಿಸಿ ಕೊಡುವದಕ್ಕೆ ಸಹಾಯ ಮಾಡತಕ್ಕವರಾಗಿ ಮುಂತಾದ ಸಮಾಜೋದ್ಧಾರಕರವಾದ ಸ್ಫೂರ್ತಿದಾಯಕ ಉಪದೇಶವನ್ನು ಮಾಡಿದರು.

ಈ ದಿನವೂ ಮರುದಿನವೂ ಕೀರ್ತನ ಕೇಸರಿ ಶಿವಮೂರ್ತಿ ಶಾಸ್ತ್ರಿಗಳು ಕೀರ್ತನವನ್ನು ಮಾಡಿದರಾದರೂ ವಿರಕ್ತರ ವಿಷಯದಲ್ಲಿ ತಕ್ಕ ಗೌರವವನ್ನು ಕೊಡದೆ ಇರುವಂತಹ ಕೆಲವು ವಿಷಯಗಳನ್ನು ಹೇಳಿದರೆಂದು ಕೆಲವರ ಆಕ್ಷೇಪಣೆ ಇದ್ದಿತು.

ಈ ಕಾರ್ಯದ ಸತ್ಕಾರಕ ಸಂಘದವರಾದ ಮ। ರಾ। ಕಾಗೋಡು ಶಿವಲಿಂಗಪ್ಪನವರೇ ಮೊದಲಾದವರು ಈ ಕಾರ್ಯವನ್ನು ಅತ್ಯುತ್ತಮ ರೀತಿಯಾಗಿ ನಡೆಸಿದ್ದು ಬಹಳ ಸಂತೋಷಕರವಾದ ವಿಷಯ.

ಶ್ರೀಮನ್ ನಿರಂಜನವರ್ಯ ರುದ್ರಮುನಿ ಒಡೆಯರವರು ಶಿರಾಳಕೊಪ್ಪ ಗುತ್ತಲ ಆಗಡಿ ವಿರಕ್ತಮಠ ಇವರು ಈ ಕಾರ್ಯಕ್ಕೆ ಮೊದಲಿನಿಂದಲೂ ಸಹಾಯಕರಾಗಿದ್ದು ಇವರು ಹಿಂದೆ ಈ ಪ್ರಾಂತ್ಯದಲ್ಲಿ ಅನಂತಪುರದ ಮಠದ ಅಧಿಕಾರ, ಕೂಡಲಿ ಮಠದ ಅಧಿಕಾರ, ಏಕಾದಶರುದ್ರ ಪೂಜೆ ಮುಂತಾದ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿದಂತೆ ಇದನ್ನೂ ನಡೆಸಿದ್ದಕ್ಕಾಗಿ ಈ ಪ್ರಾಂತದವರು ಕೃತಜ್ಞತಾ ಪೂರ್ವಕವಾದ ವಂದನೆಯನ್ನರ್ಪಿಸಬೇಕಾಗಿದೆ.

ಶ್ರೀ ರೇವಣಸಿದ್ಧ ಸ್ವಾಮಿಗಳವರು ತಮ್ಮ ಪೂರ್ವ ವಯಸ್ಸಿನಲ್ಲಿಯೇ ವೈರಾಗ್ಯವನ್ನು ಹೊಂದಿ ಕಾರ್ಯದಕ್ಷರೂ ವಯಸ್ಕರೂ ಆದ ಮಹಾದೇವ ಸ್ವಾಮಿಗಳವರಿಗೆ ಅಧಿಕಾರ ವಹಿಸಿ ಕೊಟ್ಟು ಮಠದ ಮುಂದಿನ ಶ್ರೇಯಸ್ಸನ್ನು ಕೋರಿರುವುದು ವಿಶೇಷ ಸಂಗತಿಯಾಗಿರುತ್ತದೆ.

ತಾ. ೨೯—೧೧—೩೩.

ಓರ್ವ ಕಾರ್ಯಭಾಗಿ.

## ಸದ್ಧರ್ಮ ದೀಪಿಕೆಯ ಸಂಬಂಧದಲ್ಲಿ ಬಂದ ಕೆಲವು ಮಹನೀಯರ ಲೇಖನಗಳು.

ಮ. ರಾ. ಜೇರಿಗೆ ಬಸವಲಿಂಗಪ್ಪನವರು Retired High court Translator, ಇವರು ಹೀಗೆ ಬರೆಯುತ್ತಾರೆ

ಅರಳೇಪೇಟೆ, ಬೆಂಗಳೂರು ಸಿಟಿ.
೧೭—೧೨—೩೩.

ನಿಮ್ಮ ೧೫ ನೆಯ ಸಂಚಿಕೆಯು (ಸದ್ಧರ್ಮ ದೀಪಿಕೆ) ಬಂದು ಸೇರಿತು. ನೀವು ನಮ್ಮ ವೀರಶೈವ ಗ್ರಂಥೋದ್ಧರಣಕ್ಕಾಗಿ ಅತ್ಯಂತವಾಗಿ ಶ್ರಮ ತೆಗೆದುಕೊಳ್ಳುತ್ತಿರುವದು ಸ್ತುತ್ಯವಾದುದಾಗಿರುತ್ತದೆ. ಕೆಲವು ಜನ ವಿದ್ವಾಂಸರ ಅಭಿಪ್ರಾಯಗಳನ್ನು ನೋಡಿ ಮನಸ್ಸಿಗೆ ಬಹಳ ಆನಂದವಾಯಿತು. ಆಗಮಗಳ ಕಾಲ ವಿಚಾರವಾಗಿ ಸತ್ಯಾಂಶವು ನಿಮ್ಮ ಪರಿಶೋಧನದಿಂದ ಇನ್ನೂ ಹೆಚ್ಚಾಗಿ ಹೊರಬೀಳುವದೆಂದು ನಾನು ಭರವಸೆ ಉಳ್ಳವನಾಗಿರುತ್ತೇನೆ. ಅದರೊಳಗೂ ವೀರಶೈವದ ಷಟ್‌ಸ್ಥಲದ ಕಾಲ ನಿರ್ಣಯವು ಹೊರಬೀಳಬಹುದೆಂದು ನಾನು ಬಹಳ ಭರವಸೆ ಉಳ್ಳವನಾಗಿರುತ್ತೇನೆ. .....ನಾನು ನಿಮ್ಮ ಪತ್ರಿಕೆಗೆ ಉತ್ತಮ ಲೇಖನಗಳನ್ನು ಕಳುಹಿಸುವೆನು: ವೀರಶೈವ ಧರ್ಮ ರಕ್ಷಣೆಯ ನಿಮ್ಮ ಉತ್ಕೃಷ್ಟ ಕಾರ್ಯವು ವಿಜಯವಾಗಲೆಂದು ನಾನು ಸಾಂಬಶಿವನನ್ನು ಪ್ರಾರ್ಥಿಸುತ್ತೇನೆ.

ತಮ್ಮ ಮಿತ್ರ,

Sd. J. Basavalingappa
Cotton pet, Bangalore city.

ಈ ಮಹನೀಯರ ಅಭಿಪ್ರಾಯದಂತೆ ವೀರಶೈವ ಧರ್ಮದ ನಿಜಸ್ಥಿತಿಯು ಪ್ರಕಟವಾಗುವ ಸೇವಾ ಕಾರ್ಯವು ಈ ಪತ್ರಿಕೆಯಿಂದ ನಡೆಯಬೇಕೆಂಬುದೇ ಮುಖ್ಯ ಉದ್ದೇಶವು. ಇದಕ್ಕೆ ಸಮಾಜದವರ ಬೆಂಬಲವು ಅತ್ಯವಶ್ಯಕವಾಗಿದೆ. ಈ ಮಹನೀಯರು ಕಳುಹಿಸುವ ಉತ್ತ

ಮ ಲೇಖನಗಳನ್ನು ಪ್ರಕಟಿಸಲು ನಿರೀಕ್ಷಿಸುತ್ತಿರುವೆನು. ಸಮಾಜ ಸು ಧಾರಣೆಯೇ ಮುಖ್ಯ ಉದ್ದೇಶವಾಗಿ ಉಳ್ಳ ನಿಜ ತತ್ವವನ್ನು ಬೋಧಿ ಸುವ ಲೇಖಗಳು ಯಾರಿಂದ ಬಂದರೂ ಬಹಳ ಆದರದಿಂದ ಅಂಗೀಕರಿಸ ಲ್ಪಡುತ್ತವೆ.

ಪ್ರಕಾಶಕ.

---

ವೇ. ಮೂ. ರುದ್ರಯ್ಯನವರು ಪುರಾಣಿಕ, ಮಾಮಲೇದಾರು ಇವರು ಹೀಗೆ ಬರೆಯುತ್ತಾರೆ.

ಮುದ್ದೇಬಿಹಾಳ.
೨೧—೧೧—೩೩.

### ವಿನಂತಿ.

...............

ಸದರ ಪತ್ರಿಕೆಯಲ್ಲಿ ನಿಜಗುಣರ ಗ್ರಂಥಗಳ ವಿವೇಕ ಚಿಂತಾಮಣಿ ಮುಂತಾದ ಆರು ಶಾಸ್ತ್ರಗಳ ಸುಲಭ ಶೈಲಿಯ ಕನ್ನಡ ಟೀಕಾ ಬರೆಯ ಬೇಕು. ಮತ್ತು ವೀರಶೈವ ಮತ ತತ್ವಗಳ ಸುಲಭ ಗ್ರಂಥವಾಗು ವಂಥ ವಿಷಯವನ್ನು ಮತ್ತು ನೀತಿ ಸಂಗ್ರಹ ಗ್ರಂಥವಾಗುವಂಥ ವಿಷ ಯುವನ್ನು ಇನ್ನೂ ವಿಚಾರಿಸಿ ಸಣ್ಣ ಸಣ್ಣ ಗ್ರಂಥಗಳಾಗುವಂಥ ವಿಷ ಯಗಳನ್ನು ಬರಿಯಬೇಕು ಅಂತಾ ಅನಿಸುತ್ತದೆ. ನೀವು ಅನುಭವಿಕ ರಿರುವದರಿಂದ ಮಿ. ಶಿವಯೋಗಪ್ಪ ಶೆಟ್ಟಿ ಮುಂತಾದವರಿಗೆ ಕೇಳಿ ಆಕ ರ್ಷಣವಾಗುವಂತೆ ಬರಿಯಬೇಕು ಅಂತಾ ಬಹು ಜನರ ಅಭಿಪ್ರಾಯ ವದೆ. ನಿಮಗೆ ಯೋಗ್ಯ ತೋರಿದಂತೆ ಮಾಡಬೇಕು.

ಇ. ವಿ.

ವೀರಶೈವರ ನಿಜ ತತ್ವವನ್ನು ಬೋಧಿಸುವ ಗ್ರಂಥಗಳು ಕೈ ಬರಹದಲ್ಲಿ ಸಾವಿರಗಟ್ಟಲೆ ಇವೆ. ಪೂರ್ವಿಕರ ಈ ಮೂಲ ಗ್ರಂಥಗಳೂ ಸಂಗ್ರಹ ಗ್ರಂಥಗಳೂ ಮುದ್ರಣದ ಮುಖವನ್ನೇ ಕಾಣದೆ ಇನ್ನೂ ಅನೇಕವಾಗಿರುತ್ತವೆ. ನಿಜಗುಣರ ಗ್ರಂಥಗಳಲ್ಲಿ ವೀ ರಶೈವರ ವಿಷಯಗಳು ಬಹು ಸ್ವಲ್ಪ ಮಟ್ಟಿಗೆ ಇರುತ್ತವೆ. ಮತ್ತು

ಇವು ಇದು ವರೆವಿಗೆ ಅನೇಕ ಸಾರಿ ಮುದ್ರಣವಾಗಿವೆ. ರಾವ್‌ಸಾಹೇಬ ಫಕೀರಪ್ಪನವರು ಗುರುಬಸಪ್ಪನವರು ಹಳಕಟ್ಟಿ ಇವರು ಪ್ರಕಟಿಸುತ್ತಿರುವ ವೀರಶೈವ ಗ್ರಂಥಗಳ ದೆಸೆಯಿಂದ ಕನ್ನಡದಲ್ಲಿ ವೀರಶೈವರ ಗ್ರಂಥ ಪ್ರಸಾರವೆಂಬ ಜ್ಞಾನ ಸೂರ್ಯನ ಉದಯದ ನಸುಬೆಳಕು ಈಗೀಗ ತೋರುತ್ತಲಿದೆ. ಇನ್ನು ಮುಂದೆ ಆ ಸೂರ್ಯನ ಕಿರಣಗಳು ಸಮಾಜದವರ ಹೃದಯವೆಂಬ ಆಕಾಶದ ತುಂಬಾ ಪ್ರಸಾರವಾಗುವಂತೆ ಮಾಡುವುದು ಅತ್ಯವಶ್ಯಕವಾಗಿದೆ. ಈ ಉದ್ದೇಶಕ್ಕಾಗಿ ಈ ಸದ್ಧರ್ಮ ದೀಪಿಕೆಯಂಥಾ ಶಿವಾನುಭವದಂಥಾ ೧೦ ಪತ್ರಿಕೆಗಳಾದರೂ ಸಾಲವು. ಆದರೆ ನಿಜಗುಣ ಶಿವಯೋಗಿಗಳ ಗ್ರಂಥಗಳ ವಿಷಯದಲ್ಲಿ ಗಮನಕೊಡಬಾರದೆಂಬ ಅಭಿಪ್ರಾಯವಿಲ್ಲ. ಅನುಕೂಲವರಿತು ಅವುಗಳ ವಿವೇಚನೆಯನ್ನೂ ಮಾಡಲಾಗುವುದು.

ನೀತಿ ವಿಷಯಕ ಗ್ರಂಥಗಳನ್ನೂ ಪ್ರಕಟಿಸಬೇಕೆಂಬ ಈ ಮಹನೀಯರ ಅಭಿಪ್ರಾಯವೂ ಲೇಸಾದುದೇ. ಈಗ ಮತದೊಡನೆ ನೀತಿ ಕೂಡಿರುವ ಗ್ರಂಥಗಳು ಪುರಾತನ ದೇವಿಯರ ತ್ರಿವಿಧಿ ಮೊದಲಾದವುಗಳು ಪ್ರಕಟವಾಗುತ್ತಾ ಇವೆ. ಸಾಧ್ಯವಾದಷ್ಟು ರೀತಿಯಲ್ಲಿ ಧರ್ಮ ಜಾಗ್ರುತಿಯನ್ನು ಉಂಟು ಮಾಡುವುದೇ ಈ ಕಾಲದಲ್ಲಿ ಅವಶ್ಯಕವಾದುದರಿಂದಲೂ, ಪೂರ್ವ ಗ್ರಂಥಗಳನ್ನು ಇದ್ದ ರೀತಿಯಲ್ಲಿ ಪ್ರಕಟಿಸುವದರಿಂದಲೂ ಸಮಾಜ ಬಾಂಧವರು ಪೂರ್ವಿಕರ ಧಾರ್ಮಿಕ ಸ್ಥಿತಿಯನ್ನು ತಿಳಿದು ಆನಂದಪಡುವವರಾಗಲಿ ಎಂಬುದೇ ಮುಖ್ಯ ಕೋರಿಕೆಯು.

ಇನ್ನೊಬ್ಬ ಮಹನೀಯರು ಆರೋಗ್ಯದ ವಿಷಯವನ್ನು ಪ್ರಕಟಿಸಬೇಕೆಂದು ಮುಖತಃ ಸೂಚಿಸಿರುವರು. ನಮ್ಮ ಹಿರಿಯರು ಆಚಾರವನ್ನು ಆರೋಗ್ಯದ ದೃಷ್ಟಿಯಿಂದಲೇ ನಡೆಸುತ್ತಿದ್ದರಾದ್ದರಿಂದ ಈಗ ಆ ವಿಷಯಕ್ಕೂ ಗಮನ ಕೊಡಬೇಕಾಗಿದೆ.

ಇದಲ್ಲದೆ ನಮ್ಮ ತಾಯಿನುಡಿಯಾದ ಕನ್ನಡ ಭಾಷಾ ಸೇವೆಯನ್ನೂ ಮಾಡುವ ಕೆಲಸವೂ ಅತ್ಯವಶ್ಯಕವಾದುದಾಗಿದೆ. ಭಾರತ ನಿಘಂಟು ವೈದ್ಯ ನಿಘಂಟು ಮೊದಲಾದ ಪೂರ್ವಿಕರು ರಚಿಸಿದ ಕೆಲವು ಗ್ರಂಥಗಳು ಇನ್ನೂ ಮುದ್ರಣವಾಗದೆ ಉಳಿದಿವೆ.

ಕನ್ನಡದಲ್ಲಿ ಜನರ ತಿಳಿವಳಿಕೆಯನ್ನು ಹೆಚ್ಚಿಸುವ ಕೆಲಸಗಳು ಬಹಳವಾಗಿ ಆಗಬೇಕಾಗಿರುತ್ತವೆ. ಆದರೆ ಜನರಲ್ಲಿ ಓದುವ ಅಭಿರುಚಿಯು ಬಹಳ ಕಡಿಮೆ ಇರುತ್ತದೆ. ಅದನ್ನು ಅವರು ಹೆಚ್ಚಿಸಿಕೊಳ್ಳುತ್ತಾ ಬಂದ ಹಾಗೆಲ್ಲಾ ಇಂಥಾ ಅನೇಕ ವಿಷಯಗಳ ಗ್ರಂಥಗಳೂ ಅನೇಕ ಪತ್ರಿಕೆಗಳೂ ಉದಯವಾಗುವದಕ್ಕೆ ಕಾರಣವು ಉಂಟಾಗುತ್ತದೆ. ಸಮಾಜ ಬಾಂಧವರು ಧಾರ್ಮಿಕ, ಸಾಮಾಜಿಕ, ಆರ್ಥಿಕ, ನೈತಿಕ, ಮುಂತಾದ ವಿಷಯಗಳ ಉನ್ನತಿಯ ಸಂಬಂಧದಲ್ಲಿ ಯಾವುದು ತಮ್ಮ ಮುಂದೆ ಬಂದರೂ ಸಾವಧಾನದಿಂದ ಗ್ರಹಿಸಲಿ — ಅದರ ಸಹಾಯದಿಂದ ಮುಂದೆ ಸಮಾಜ ಸಂಸ್ಕರಣವನ್ನು ಮಾಡಿಕೊಂಡು ಈಗ್ಗಿಂತಲೂ ಅತಿಶಯವಾಗಿ ಸುಖದಿಂದ ಬಾಳಲಿ — ಎಂದು ಆಸೆಯುಂಟು.

ಎಲ್ಲಕ್ಕೂ ಮಹಾದೇವನ ಕೃಪೆಯೇ ಬಹು ಮುಖ್ಯವಾದ್ದರಿಂದ ಅದನ್ನು ಪಡೆಯಲು ಸರ್ವರೂ ಗಮನ ಕೊಟ್ಟರೆ ಎಂತಹ ಅಸಾಧ್ಯವೆಂದು ಯೋಚಿಸುವ ಕೆಲಸಗಳೂ ಕೂಡಾ ಸುಸಾಧ್ಯವಾಗಿ ಪರಿಣಮಿಸಬಹುದಲ್ಲವೇ !

ಪ್ರಕಾಶಕ.

---

# ವೀರಶೈವ ಮಹಾಸಭೆ ಮತ್ತು ಅಸ್ಪೃಶ್ಯತಾ ವಿಚಾರ

ಈ ಹಿಂದೆ ೧೧—೧೨ ನೆಯ ಸಂಚಿಕೆಯಲ್ಲಿ ೧೯೩೩ ನೆಯ ಮೇ ತಿಂಗಳಲ್ಲಿ ಧಾರವಾಡದಲ್ಲಿ ನಡೆದ ಮಹಾಸಭೆಯ ವಿಷಯವಾಗಿ ಬರೆದಾಗ ಮಹಾಸಭೆಯವರು ತಮ್ಮ ಆದಾಯ ಮತ್ತು ವೆಚ್ಚದ ಲೆಕ್ಕದ ವಿವರವನ್ನು ಪ್ರಕಟಿಸಬೇಕೆಂದು ವಿಜ್ಞಾಪಿಸಿದ್ದಕ್ಕೆ ಈ ವರೆವಿಗೂ ಗಮನ ಕೊಟ್ಟಂತೆ ತೋರಲಿಲ್ಲ. ಮಹಾಸಭೆಯು ವೀರಶೈವರೆಲ್ಲರ ಹಿತವನ್ನು ಸಾಧಿಸುವಂಥಾದ್ದಿದ್ದು ಅದರಲ್ಲಿನ ಹಣದ ವ್ಯವಸ್ಥೆಯ ವಿಷಯವನ್ನು ಪ್ರಕಟಿಸುತ್ತಾ ಬಂದರೆ ಜನಸಾಮಾನ್ಯದ ಪ್ರೀತಿಯು ಅದರ ಕಡೆಗೆ ಒಲಿಯುವದಕ್ಕೆ ಹೆಚ್ಚು ಸಹಾಯಕವಾದೀತೆಂದು ಪುನಃ ವಿನಂತಿ.

ಈ ಮಹಾಸಭೆಯಲ್ಲಿ ಆದ ಕೆಲವು ನಿರ್ಣಯಗಳನ್ನು ತಿಳಿದಾಗಲೇ ಒಂದು ವಿಧವಾದ ಯೋಚನೆಯುಂಟಾಗಿದ್ದಿತು. ವೀರಶೈವರಲ್ಲಿ ಮುಂದಾಳುವಾದ ಮಹಾಸಭೆಯು ತನ್ನ ಹಿಂದೆ ಇರುವ ಮತೀಯರನ್ನು ಬಿಟ್ಟು ತಾನೇ ಮುಂದೆ ಹೋಗಿ, ಹಿಂದಿನ ಗಾಡಿಗಳನ್ನು ಹಿಂದೆ ಬಿಟ್ಟು ತಾನೊಂದೇ ಮುಂದೆ ಹೋದ ಕಬ್ಬಿಣದ ಪಟ್ಟಿಯ ದಾರಿಯ (Railway) ಉಗಿಯ ಯಂತ್ರ (Engine)ದಂತೆ ಆಗುತ್ತಿರುವದು ಎಂಬುದೇ ಆ ಯೋಚನೆಯು.

ಇಂಥಾ ಒಂದು ನಿರ್ಣಯವನ್ನು ಉದಾಹರಣೆಗೆ ತೆಗೆದುಕೊಳ್ಳೋಣ.

ವೀರಶೈವ ಮಹಾಸಭೆಯಲ್ಲಿ ಅಸ್ಪೃಶ್ಯತೆಯ ಸಂಬಂಧವಾಗಿ ಈ ಕೆಳಗೆ ಕಂಡಂತೆ ನಿರ್ಣಯವು ಮಾಡಲ್ಪಟ್ಟಿರುತ್ತದೆ.

"ಅಸ್ಪೃಶ್ಯತೆಯು ಸನಾತನ ಹಿಂದೂ ಧರ್ಮಕ್ಕೂ ವೀರಶೈವ ತತ್ವಗಳಿಗೂ ವಿರುದ್ಧವಾದುದೆಂದು ಈ ಮಹಾಸಭೆಯು ಅಭಿಪ್ರಾಯಪಡುತ್ತಾ ಅದನ್ನು ನಿರ್ಮೂಲಗೊಳಿಸಲು ಪ್ರತಿಯೊಬ್ಬ ವೀರಶೈವನೂ ಪ್ರಯತ್ನಪಡುವದು ಅತ್ಯವಶ್ಯಕವಿರುವದೆಂದು ಸೂಚಿಸುತ್ತದೆ."

ಈ ನಿರ್ಣಯವು ಎಷ್ಟು ಮಟ್ಟಿಗೆ ಆಚರಣೆಗೆ ಬರುವುದೋ ನೋಡಬೇಕೆಂದು ಈ ವರೆವಿಗೂ ನಿರೀಕ್ಷಿಸಿದ್ದಾಯಿತು. ಸಮಾಜವೇ ಒಂದು ಕಡೆ, ನಿರ್ಣಯವೇ ಒಂದು ಕಡೆ ಆಗಿದೆ. ಇದಕ್ಕೆ ನಿದರ್ಶನವಾಗಿ ಸುಮಾರು ೧-೨ ತಿಂಗಳಹಿಂದೆ ಹುಬ್ಬಳ್ಳಿಯ ತರುಣಕರ್ನಾಟಕದಲ್ಲಿ 'ತರುಣ ಹೃದಯದ ಕೂಗು, ಎಂಬ ಲೇಖನದಲ್ಲಿ ಮ. ರಾ. ಪಾಟೀಲರವರು ಈ ಸಂಬಂಧದಲ್ಲಿ ಅನೇಕ ಪ್ರಶ್ನೆಗಳನ್ನು ಹಾಕಿರುತ್ತಾರೆ. ಸಮಾಜದ ಮುಂದಾಳುಗಳಿಗೆ ಅಂಗಲಾಚಿ ಬೇಡಿಕೊಂಡಿರುತ್ತಾರೆ. ಒಳಗೊಂದು ಹೊರಗೊಂದು ನಡೆಸುವ ಸಮಾಜದ ಮುಖಂಡರಿಂದ ಸಂಶಯಕ್ಕೊಳಗಾಗಿರುವದಾಗಿ ಹೇಳುತ್ತಾರೆ. ಮಹಾಸಭೆಯಿಂದ ಏನೂ ಪ್ರಯೋಜನವಾಗಲಿಲ್ಲವೆಂದು ಒಡಬಡಿಸಿರುತ್ತಾರೆ.

ವೀರಶೈವ ಮಹಾಸಭೆಯು ಮೇಲಿನ ನಿರ್ಣಯ ಮಾಡುವಾಗ ಈ ವಿಷಯಗಳನ್ನೆಲ್ಲಾ ಆಲೋಚಿಸಿತೇನು ?

ಇನ್ನೂ ಸುಮ್ಮನೆ ಇದ್ದರೆ ಸಮಾಜದಲ್ಲಿ ಅನೈಕ್ಯತಾಭಾವ ತೋರಬಹುದೆಂಬ ಶಂಕೆಯಿಂದ ಕೆಲವು ವಿಷಯಗಳನ್ನು ಇಲ್ಲಿ ಹೇಳಬೇಕಾಗಿದೆ.

ಅಸ್ಪೃಶ್ಯತೆಯ ವಿಷಯದಲ್ಲಿ ವೀರಶೈವ ತತ್ವವು ಏನಿರುತ್ತದೆ!

ವೀರಶೈವರು ಶಿವಾದ್ವೈತವನ್ನು ನಂಬಿದವರು, ಎಂದರೆ:- ಎಲ್ಲ ಅದ್ವೈತಿಗಳಂತೆ ಏಕೋದೇವನು ಎಂದರೆ ದೇವನು ಒಬ್ಬನೇ ಎಂತ ನಂಬತಕ್ಕವರು. ಆದರೆ ಕೆಲವರು ಅದ್ವೈತಿಗಳು ಹೇಳುವಂತೆ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಬ್ರಹ್ಮವೊಂದೇ ನಿಜ, ಜಗತ್ತು ಸುಳ್ಳು, ಎಂದು ಹೇಳತಕ್ಕವರಲ್ಲ. ಬ್ರಹ್ಮನು ನಿರಾಕಾರನೆಂದೂ ಅವನು ಸಾಕಾರನಾಗಿ ಜಗತ್ತಿನ ರೂಪನಾದನೆಂದೂ ಬ್ರಹ್ಮ, ಜಗತ್ತು ಎರಡೂ ಒಂದೇ ವಸ್ತುವಿನ ಬೇರೆ ಬೇರೆ ರೂಪಗಳೆಂದೂ ಹೇಳುವವರಾಗಿದ್ದಾರೆ.

ಈಗ ಶಾಸ್ತ್ರಕಾರರು ( Scientists )ಆಕಾರವಿಲ್ಲವೆಂದು ನಂಬಿರುವ ಎರಡು ವಾಯುಗಳಿಂದ ನೀರು ಉಂಟಾಗಿ ಕಡೆಗೆ ಅದು ನೀರ್ಗಲ್ಲು

ಆಗುತ್ತದೆ, ಎಂದು ಸಿದ್ಧಮಾಡಿಕೊಂಡಿರುವದರಿಂದ ಇದರಂತೆ ನಿರಾಕಾರ ಪರವಸ್ತುವಿನಿಂದ ಸಾಕಾರರೂಪವಾದ ಜಗತ್ತಾಗಿದೆ ಎಂದು ಹೇಳುವದು ನಿಜ ( ಸಹಜ ) ವಾದ ಮಾತೆಂದು ಎಲ್ಲರೂ ಸುಲಭವಾಗಿ ತಿಳಿಯಬಹುದು.

ಹಿಂದೂ ಮತದಲ್ಲಿ ಇರುವ ಧರ್ಮಗಳ ಭಿನ್ನ ಭಿನ್ನ ಆಚರಣೆಗಳು ಆಯಾ ಧರ್ಮದವರು ತಿಳಿದಿರುವ ಮಹಾದೇವನ ವಿಚಾರ, ಜಗತ್ತಿನ ಸೃಷ್ಟಿಯ ವಿಚಾರ, ಇಂಥಾ ಕೆಲವು ಮೂಲ ತತ್ವಗಳನ್ನು ಅವಲಂಬಿಸಿಕೊಂಡು ಏರ್ಪಡಿಸಲ್ಪಟ್ಟಿವೆ. ಸತ್ಯವಾದ ಬ್ರಹ್ಮದ (ಮಹಾದೇವನ ) ಜ್ಞಾನವನ್ನು ಹೊಂದಿ ಮಿಥ್ಯವಾದ ಜಗತ್ತಿನಲ್ಲಿ ಹೇಗೆ ವ್ಯವಹಾರ ಮಾಡಿದರೂ ಅಡ್ಡಿಯಿಲ್ಲವೆಂದು ಹೇಳುವ ಅದ್ವೈತಿಗಳ ಆಚರಣೆಯನ್ನು ವೀರಶೈವಾದ್ವೈತಿಗಳು ಒಪ್ಪುವದಿಲ್ಲ. ಇವರ ತತ್ವದ ಪ್ರಕಾರ ಜಗತ್ತನ್ನು ತನ್ನನ್ನು ಮಹಾದೇವನನ್ನು ಒಂದೇ ರೂಪವಾಗಿ ತಿಳಿದು ನಡೆಯಬೇಕಾದ್ದರಿಂದ ಅಂಥಾ ಆಚರಣೆಗೆ ಸಾಧನವಾದ ಲಿಂಗವನ್ನು ಧರಿಸಿದವನನ್ನು ಮಾತ್ರ ಸಮ್ಯಗ್‌ಜ್ಞಾನಿ ಎಂದೂ, ಶಿವಾದ್ವೈತಿ ಎಂದೂ ಮರಳಿ ಜನ್ಮಕ್ಕೆ ಬಾರದವನು ಎಂದೂ ನಂಬುತ್ತಾರೆ. ಲಿಂಗಧಾರಿಗಳಾಗಿ ಈ ಜ್ಞಾನ ಮತ್ತು ಆಚರಣೆಗಳನ್ನಿಟ್ಟುಕೊಂಡಿರುವವರೆಲ್ಲರನ್ನೂ ಒಂದೇ ಎಂದು ನಂಬುತ್ತಾರೆ.

ಇಂಥಾ ಅದ್ವೈತವಲ್ಲದೆ ಬೇರೆ ಯಾವ ವಿಧವಾದ ಅದ್ವೈತಿಯಾಗಲೀ, ದ್ವೈತಿಯಾಗಲೀ, ಮತದವನಾಗಲೀ, ಧರ್ಮಕ್ಕೆ ಸೇರದ (ಮಹಾದೇವನನ್ನು ತಿಳಿಯದ) ಮನುಷ್ಯನಾಗಲೀ, ಮಹಾದೇವನ ನಿಜಸ್ಥಿತಿಯನ್ನು ತಿಳಿದಿಲ್ಲವಾದ್ದರಿಂದ ಅವನು ಸತ್ತು ಮತ್ತೆ ಮತ್ತೆ ಹುಟ್ಟಬರುವನೆಂದು ಭಾವಿಸಿ ಅವನಿಗೆ ಭವಿ ಎಂದು ಕರೆಯುತ್ತಾರೆ.

ಈ ಕಾರಣದಿಂದಲೇ ಮಹಾನುಭಾವಿಯಾದ ಬಸವೇಶ್ವರನೂ ಕೂಡಾ, ತನ್ನ ವಚನಗಳಲ್ಲಿ ಭವಿ. ಭಕ್ತ ಎಂಬ ಎರಡು ಭೇದಗಳು ಇರುವವೆಂಬುದನ್ನು ಮತ್ತೆ ಮತ್ತೆ ಆಡಿ ತೋರಿಸಿರುತ್ತಾನೆ. ಭವಿಗಳಾದರೂ ಹಾಗೆಯೇ ಇದ್ದು ಕೆಟ್ಟು ಹೋಗಲಿ ಎಂಬದಾಗಿ ಆತನ ಅಭಿ

ಪ್ರಾಯವಿರಲಿಲ್ಲ. ಅವರೂ ಉತ್ತಮವಾದ ಜ್ಞಾನ ಮತ್ತು ಆಚರಣೆಗಳನ್ನು ಹೊಂದಿ ಧನ್ಯರಾಗಲೆಂದು ಬಹಳವಾಗಿ ಹಂಬಲಿಸಿದ್ದಾನೆ. ಹಾಗೆ ಹೊಂದದೆ ಇರತಕ್ಕವರಿಗಾಗಿ ವ್ಯಥೆಪಡುತ್ತಲೂ ಚಿಂತಿಸುತ್ತಲೂ ಕಟ್ಟಕಡೆಯಲ್ಲಿ ಅಳುತ್ತಲೂ ಇದ್ದನೆಂಬುದು ಗೊತ್ತಾಗಿದೆ. ಈ ವಿಧವಾದ ವ್ಯಥೆಯನ್ನು ಕಂಡೇ ಬಸವೇಶ್ವರನು ವ್ಯಸನದಲ್ಲಿ ತನ್ನ ಆಯುಷ್ಯವನ್ನೆಲ್ಲಾ ಕಳೆದನೆಂದು ಕೆಲವರು ಭಾವಿಸುತ್ತಿದ್ದಾರೆ.

ಬಸವೇಶ್ವರನ ಒಂದು ವಚನವು ಹೀಗೆ ಇರುತ್ತದೆ.

(ಪ್ರಾಸಾದಿಯ ಭಕ್ತ ವಚನ ೩)

ಲಿಂಗಪ್ರಸಾದಿಗಳಲ್ಲದವರ ಸಂಗ ಪಂಚ ಮಹಾ ಪಾತಕವೆಂದುದು ಲಿಂಗವಚನ.

ಆಸನೇ ಶಯನೇ ಯಾನೇ ಸಂಪರ್ಕೇ ಸಹ ಭೋಜನೇ ।
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ ।।

ತಾತ್ಪರ್ಯ:–

ಲಿಂಗಾಂಗಿಗಳಲ್ಲದವರ ಒಡನಾಟವು ಮಹಾಪಾತಕ. ಇಂಥವರೊಡನೆ ಕೂತುಕೊಳ್ಳುವುದು ಮಲಗುವುದು ಪ್ರಯಾಣ ಮಾಡುವುದು, ಕೂಡಿಕೊಂಡಿರುವದು, ಊಟಮಾಡುವುದು; ಇವುಗಳನ್ನು ಮಾಡಿದರೆ ದೋಷವು ಬರುತ್ತದೆ.

## ಮತ್ತೊಂದು ವಚನ

( ಮಹೇಶ್ವರಜ್ಞಾನಿ ೧೪೪ )

ಹುಟ್ಟುವಲ್ಲಿ ಭವಿ, ಮರಳಿ ಭಕ್ತನಮಾಡಿ ಪೂರ್ವಾಶ್ರಯವ ಕಳೆದು, ಹೊಂದುವಲ್ಲಿ ಭವಿಯಾಗಿ ಹೋಹರ ಮುಟ್ಟಲಾಗದು ಅವನ ಮುಟ್ಟಿದವ ಮುನ್ನವೇ ಪ್ರೇತಗೇಡಿ.

ಇನ್ನೊಂದು ವಚನ
(ಮಾಹೇಶ್ವರ ಜ್ಞಾನಿ ೧೪೪೪)

ಶರಣ ಸಂಬಂಧವನರಿತಬಳಿಕ ಮರಳಿ ಭವಿಯ ಬೆರೆಸಲಾಗ ದು........ ಅರುಸಿ ಭವಿಯೊಡನುಂಡರೆ, ಭಕ್ತನಲ್ಲ ಕೂಡಲ ಸಂಗಮದೇವಾ

ಈ ವಿಷಯದಲ್ಲಿ ಶಾಸ್ತ್ರವು ಹೇಗಿದೆ?

ಪಾರಮೇಶ್ವರಾಗಮದಲ್ಲಿ:— ವೀರಶೈವನು

ನಾನ್ಯಧರ್ಮೈರ್ನ ಪಾಷಂಡೈರ್ನ ದುರ್ವೃತ್ತೈರ್ನ ಲೋಲುಪೈಃ

.... .... .... .... .... ....

ಸಹೋಪವೇಶಯೇದ್ ಭಾಷೇದಾಶ್ನೀಯಾತ್ ಸಂಗಮಾಚರೇತ್

ತಾತ್ಪರ್ಯ:—

ಇತರ ಧರ್ಮಿಗಳೊಡನೆ, ಪಾಷಂಡರೊಡನೆ, ಕೆಟ್ಟನಡತೆಯು ಳ್ಳವರೊಡನೆ, ವಿಷಯಗಳಲ್ಲಿ ಮಗ್ನರಾಗಿರುವರೊಡನೆ, ಕೂಡಿ ಕೂತುಕೊಳ್ಳಬಾರದು, ಮಾತನಾಡಬಾರದು, ಉಣ್ಣಬಾರದು, ಸಹವಾಸ ಮಾಡಬಾರದು.

ಹೀಗೆ—ಶಾಸ್ತ್ರವೂ ಬಸವೇಶ್ವರನ ವಚನವೂಸಹಾ ಭಕ್ತನಲ್ಲದವನನ್ನು ಮುಟ್ಟಬಾರದೆಂದು ಸಾರುತ್ತಿರುವಲ್ಲಿ ಅಸ್ಪೃಶ್ಯತೆಯು ವೀರಶೈವತತ್ವಕ್ಕೆ ವಿರೋಧವಾಮದೆಂದು ಮಹಾಸಭೆಯು ಹೇಗೆ ನಿರ್ಣಯಮಾಡಿತು? ಹಾಗೆ ನಿರ್ಣಯಿಸಬೇಕಾದರೆ ಯಾವ ಶಾಸ್ತ್ರಪುಸ್ತಕದ ಎಷ್ಟನೇಪುಟ ದ ಎಷ್ಟನೆಪಙ್ಕ್ತಿಯಲ್ಲಿ ಭಕ್ತನು ಭವಿಯನ್ನು ಮುಟ್ಟಬಹುದು ಭವಿ ಯಕೂಡೆಉಣಬಹುದು ಎಂಬದಾಗಿ ಇರುತ್ತದೆ ಎಂಬುದನ್ನು ತೊ ರಿಸಬೇಕಾಗಿದ್ದಿತು. ಹಾಗಾದರೆ ಎಲ್ಲರಿಗೂ ಒಡಂಬಡಿಕೆಯಾಗುತ್ತಿ ತ್ತು.

ಮತಶಾಸ್ತ್ರವು ಒತ್ತಟ್ಟಿಗೆ ಇರಲಿ. ಬಸವೇಶ್ವರನೇ ದೊಡ್ಡವ (ಮಹಿಮ) ನು, ಬಸವೇಶ್ವರನೇ ಸುಧಾರಕನು ಅವನವಾದರಿಯಂತೆ ನಾ ವುನಡೆಯಬೇಕು, ಎಂದು ಹೇಳುವ ಮಹಾಸಭೆಯುವರೇ ಆ ಬಸವೇ ಶ್ವರನ ತತ್ವಗಳಿಗೆ ವಿರುದ್ಧವಾಗಿ ನಡೆಯುಲಿಕ್ಕೆ ಎಂದರೆ ಮನಬಂದಂ ತೆ ಭವಿಗಳೊಡನೆ ಕೂಡಿ ನಡೆಯುಲಿಕ್ಕೆ ಒಡಂಬಟ್ಟಮೇಲೆ ಮಹಾಸ

ಭೆಯು ಧರ್ಮ ಸುಧಾರಣೆ ಮಾಡುತ್ತದೆ ಎಂದು ಒಪ್ಪುವದು ಹೇಗೆ?

ಮತ ಶಾಸ್ತ್ರವನ್ನು ಬಿಟ್ಟು ಬಸವೇಶ್ವರನು ಮುಂದಕ್ಕೆ ಬಂದಿದ್ದಾನೆ ಎಂದು ಕೆಲವರು ತಿಳಿದುಕೊಂಡು ಬಸವೇಶ್ವರನನ್ನು ಹಿಂಬಾಲಿಸುವದಕ್ಕೆ ಯತ್ನಿಸುತ್ತಿರಬಹುದು. ಆದರೆ ಇದೂವರೆವಿಗೆ ದೊರೆದಿರುವ ಆಗಮಗಳು ಸಿದ್ಧಾಂತಶಿಖಾಮಣಿ ಮೊದಲಾದ ಮತಗ್ರಂಥಗಳನ್ನು ನೋಡುವಲ್ಲಿ ಬಸವೇಶ್ವರನು ಅವುಗಳಲ್ಲಿ ಹೇಳಿದಂತೆ ನಡೆದಿರುವನೆಂಬುದನ್ನೂ ಉಪನಿಷತ್ತುಗಳಲ್ಲಿಯೂ ಸಹಾ ಬಸವೇಶ್ವರನ ಬೋಧೆಯು ಒಪ್ಪಲ್ಪಟ್ಟಿರುವದೆಂಬುದನ್ನೂ ನಾವು ತಿಳಿದುಕೊಳ್ಳಲಿಕ್ಕೆ ಬರುವಂತೆ ಇದೆ.

ಇದೆಲ್ಲಾ ಹಾಗಿರಲಿ, ಈ ಮಹಾಸಭೆಯು ಸನಾತನ ಹಿಂದೂಧರ್ಮಕ್ಕೂ ಈ ಅಸ್ಪೃಶ್ಯತೆಯು ವಿರೋಧವಾಗಿದೆ ಎಂದು ನಿರ್ಣಯಿಸಿರುವದು ಸರಿಯಾಗಿದೆಯೇ?

ವೀರಶೈವರು ಪ್ರಕೃತಿ ತತ್ವವನ್ನು ನಂಬಿದವರಲ್ಲವಾದ್ದರಿಂದ ಅಪ್ರಾಕೃತಿಕರೆಂದು ಕರೆಯಲ್ಪಡುತ್ತಾರೆ. ಆದ್ದರಿಂದ ಪ್ರಕೃತಿಯನ್ನು ನಂಬಿದ (ಲೌಕಿಕರಾದ) ಇತರರಿಗೂ ವೀರಶೈವರಿಗೂ ವೈಲಕ್ಷಣ್ಯ (ಭಿನ್ನಾಚರಣೆ) ಇರುವದು ಸಹಜವಾಗಿದೆ. ಸನಾತನರು ಎಂದು ಯಾರನ್ನು ಈ ಸಭೆಯವರು ತಿಳಿದುಕೊಂಡಿದ್ದಾರೋ ಅದು ವ್ಯಕ್ತಪಟ್ಟಿಲ್ಲ. ಅವರನ್ನೂ ಅಪ್ರಾಕೃತಿಕರೆಂದು ತಿಳಿದಿದ್ದರೆ ಅದಕ್ಕಾಗಿ ಬಹಳ ಆಶ್ಚರ್ಯ ಪಡಬೇಕು. ಸನಾತನರು ಪ್ರಕೃತಿ ತತ್ವವನ್ನು ನಂಬಿದವರಲ್ಲಿ ಪೂರ್ವ ಪದ್ಧತಿಯನ್ನು ಅನುಸರಿಸಿದವರಾಗಿದ್ದಾರೆ. ಆದ್ದರಿಂದಲೇ ಅವರು ಅಸ್ಪೃಶ್ಯತೆಗೆ ಪ್ರತಿಭಟಿಸುತ್ತಿದಾರೆ. ಅಸ್ಪೃಶ್ಯವು ಅಪರಿಹಾರ್ಯವು, ಅಸ್ಪೃಶ್ಯರನ್ನು ಉದ್ಧಾರ ಮಾಡಬೇಕೇಹೊರತು ಮುಟ್ಟುವದು ಉದ್ಧಾರವಲ್ಲ ಎಂದು ಬರೆವಣಿಗೆಗಳು ಅವರಿಂದ ಹೊರಬೀಳುತ್ತಲಿವೆ. ಈಗ ಹಾವೇರಿಯಲ್ಲಿಯೇ ಇಂಥಾ ಅಭಿಪ್ರಾಯದ ಪ್ರಕಟನೆಗಳಾಗುತ್ತಿರುವದನ್ನು ನೋಡಬಹುದಾಗಿದೆ. ಇಂಥಾದ್ದರಲ್ಲಿ ಅವರ ಯಾವ ಶಾಸ್ತ್ರಪುಸ್ತಕದಿಂದ ಅಸ್ಪೃಶ್ಯತೆಯು ಸನಾತನ ತತ್ವಕ್ಕೆ ವಿರೋಧವೆಂದು ಮಹಾಸಭೆಯವರು ಕಂಡು ಹಿಡಿದು ಇರುತ್ತಾರೋ ಅದನ್ನೂ ತೋರಿಸಿದ್ದರೆ ಚನ್ನಾಗಿರುತ್ತಿತ್ತು.

ಹೀಗೆ ಮಹಾಸಭೆಯು ತನಗೆ ಗೊತ್ತಿಲ್ಲದ ಅಂಶಗಳಲ್ಲೆಲ್ಲಾ ಪ್ರವೇಶಿಸಿ ನಿರ್ಣಯಮಾಡುತ್ತಿರುವಾಗ ಧರ್ಮದ ಕಟ್ಟಿಗೆ ಒಳಬಿದ್ದವರು ಇವರಹಿಂದೆ ಹೋಗುವರೇ? ಮತ್ತು ಇವರನ್ನು ತಮ್ಮಮುಂದಾಳುಗಳೆಂದು ತಿಳಿಯುವರೇ?

ಪ್ರಕೃತಿತತ್ವದಂತೆ ಅಚರಿಸುವವರು (ಪ್ರಾಕೃತಿಕರು) ಎಂದರೆ ನಾಸು ಮನುಷ್ಯನು, ದೇವನನ್ನು ಪೂಜಿಸಿ ಒಳ್ಳೆಯ ಫಲವನ್ನು ಪಡೆಯಬೇಕು ಎಂಬುವವರು ಆದೇವನ ವಿಷಯಕವಾದ ಜ್ಞಾನವು ಹೆಚ್ಚುಕಡಿಮೆ ಇರುವವರನ್ನು ನೋಡಿ ಭಿನ್ನ ಭೇದಗಳನ್ನು ಕಲ್ಪಿಸಿ ಕೊಂಡಿರುತ್ತಾರೆ.

ಭಗವದ್ಗೀತೆಯಲ್ಲಿ

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ

ತಾತ್ಪರ್ಯ.

ಗುಣಕರ್ಮಗಳನ್ನು ನೋಡಿ ನಾಲ್ಕು ವರ್ಣವು ನನ್ನಿಂದ ಸೃಷ್ಟಿಸಲ್ಪಟ್ಟಿತು, ಎಂದು ಶ್ರೀ ಕೃಷ್ಣನೇ ಹೇಳಿರುತ್ತಾನೆ. ಆದ್ದರಿಂದ ಇವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ ಮೊದಲಾದ ಭೇದಗಳನ್ನು ಕಲ್ಪಿಸಿಕೊಂಡು ಅವರವರು ಆಯಾ ಭೇದಕ್ಕೆ ತಕ್ಕಂತೆ ನಡೆಯಬೇಕೆಂದು ವಿಧಾಯಕ ಮಾಡಿರುತ್ತಾರೆ. ಇಂಥವರು ಅಂತ್ಯಜರನ್ನು ಮುಟ್ಟಬಾರದೆಂದು ಕಲ್ಪಿಸಿದ್ದಾರೆ. ಇದು ಅವರ ಅಭಿಪ್ರಾಯಕ್ಕೆ ಸರಿಯಾದದ್ದೇ ಆಗಿರುತ್ತದೆ.

ಆದರೆ ಅಹಂ ಬ್ರಹ್ಮಾಸ್ಮಿ, ಸೋಹಂ, ಶಿವೋಹಂ (ನಾನು ಶಿವನು) ಎಂಬ ತತ್ವವನ್ನು ತಿಳಿದು ಅದರಂತೆ ಆಚರಿಸುವವರು ಈ ಪ್ರಾಕೃತಿಕರ ಗೋಜಿಗೆ ಹೋಗುವದಿಲ್ಲ. ಯಾಕೆಂದರೆ ತಾನು ಮನುಷ್ಯನಾಗಿದ್ದರೆ ತನಗೆ ಜಾತಿ, ಆಶ್ರಮಗಳುಂಟು, ಮನುಷ್ಯನೇ ಅಲ್ಲದೆ ಬ್ರಹ್ಮಸ್ವರೂಪನಾದಮೇಲೆ ಬ್ರಹ್ಮನಿಗೆ ಜಾತಿ, ಆಶ್ರಮಗಳಿಲ್ಲದ್ದರಿಂದ ತಾನು ಜಾತಿ, ಆಶ್ರಮಗಳಿಗೆ ಸೇರದೆ ಇರುವವನು ಎಂದರೆ ಅವು

ಗಳನ್ನು ಮೀರಿದವನು ಅಥವಾ ಅತಿವರ್ಣ ಅತ್ಯಾಶ್ರಮಿ ಎಂಬದಾಗಿ ಇವರು ತಿಳಿಯುತ್ತಾರೆ. ಈ ನಡತೆಯನ್ನು ಪಾಶುಪತಬ್ರಹ್ಮ ಮೊದಲಾದ ಉಪನಿಷತ್ತುಗಳೂ ಒಪ್ಪುತ್ತವೆ.

ಹೀಗೆ ತಾನು ಮನುಷ್ಯನಲ್ಲ, ಬ್ರಹ್ಮನಾಗಿದ್ದೇನೆ, ಎಂಬದಾಗಿ ತಿಳಿದು ಆಚರಿಸುವವರೇ ಅಪ್ರಾಕೃತಿಕರು ಇವರು ಪ್ರಾಕೃತಿಕರನ್ನೆಲ್ಲಾ ಒಂದು ಗುಂಪಾಗಿ ತಿಳಿದಿರುತ್ತಾರೆ. ಆದ್ದರಿಂದಲೇ ಬಸವೇಶ್ವರನು ತನ್ನ ಒಂದು ವಚನದಲ್ಲಿ

ಮಾಹೇಶ್ವರ ಭಕ್ತ ೭ನೆಯ ವಚನ.

....... ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ
ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ.

ಹೀಗೆಭಕ್ತ (ಅಪ್ರಾಕೃತ) ರೆಲ್ಲಾ ಒಂದು, ಭವಿ (ಪ್ರಾಕೃತಿಕರು) ಎಲ್ಲಾ ಒಂದು ಎಂದು ಹೇಳಿದ್ದಾನೆ.

ಹೀಗೆ ಭವಿಗಳನ್ನೇ ಮುಟ್ಟಬಾರದೆಂದು ಅಪ್ರಾಕೃತಿಕರಾದ ವೀರಶೈವರು ಹೇಳುತ್ತಿರುವಲ್ಲಿ ಅಂತ್ಯಜರ ವಿಷಯವಂತೂ ದೂರಕ್ಕೇ ಉಳಿಯಿತು.

ಈದೆಸೆಯಿಂದಲೇ ಪೂರ್ವದಲ್ಲಿ ವೀರಶೈವರು ಭವಿಗಳ ಒಡನಾಟವನ್ನು ಬಿಟ್ಟಿದ್ದರೆಂದು ತಿಳಿಯುತ್ತದೆ. ಕಬ್ಬಿಣದಪಟ್ಟಿಯಮೇಲೆ ಗಾಡಿಗಳು (Railway Trains) ಓಡಾಡಲಿಕ್ಕೆ ಪ್ರಾರಂಭವಾದಾಗಲೂ ಅನೇಕರು ಅದರಲ್ಲಿ ಕೂಡಲಿಕ್ಕೆ ಒಡಂಬಡದೆ ಎಷ್ಟೋ ವರ್ಷಗಳಕಾಲ ಎತ್ತಿನ ಬಂಡಿಗಳಲ್ಲಿಯೂ ವಾಹನಗಳಲ್ಲಿಯೂ ಪ್ರಯಾಣ ಮಾಡುತ್ತಿದ್ದರೆಂದು ತಿಳಿಯಬರುತ್ತದೆ. ಅದು ಈಗ ಕೆಲವು ನಿರಂಜನ ಮೂರ್ತಿಗಳನ್ನು ಅವಲಂಬಿಸಿಕೊಂಡಿದೆ, ಎಂಬುದೂಕಾಣುತ್ತದೆ.

ಹೀಗೆ ವೀರಶೈವರ ವಿಷಯದ ಧರ್ಮ ತತ್ವವು ಇದ್ದಾಗ್ಯೂ ಒಂದು ವೇಳೆ ಶ್ವಪಚನು ಮುಟ್ಟಿದರೆ ಆಗುವದೇನೆಂಬುದನ್ನು ವೀರಶೈವರ ಗ್ರಂಥಗಳಲ್ಲಿ ನೋಡಬಹುದು. ಶ್ರೀ ಮೊಗ್ಗೆಯ ಮಾಯಿದೇವರು ತಾವು ರಚಿಸಿರುವ ಶತಕತ್ರಯದಲ್ಲಿ ಶಿವಾಧವ ಶತಕದ ೨೬ ನೆಯ ಪದ್ಯದಲ್ಲಿ ಶ್ವಪಚನಿಗೂ ದೈವಕ್ಕೂ ಇರುವ ಭೇದವನ್ನು ನೋಡುವದಾದರೆ ಲೋಕದ ಜನರ ಬುದ್ಧಿಗೆ ಶ್ವಪಚನೇ ಬಲವಾಗಿ ಕಾಣುತ್ತಾನೆ. ಏಕೆಂದರೆ ಲಿಂಗವನ್ನು ಧರಿಸಿದ ಪರಿಶುದ್ಧತೆಯ ಕಡೆಗೆ ಗಮನ ಕೊಡದೆ ಶ್ವಪಚನ ಮುಟ್ಟದಲ್ಲಿ ಅಶುದ್ಧತೆಯ ಭಾವವಿರುವದೆಂದು ಕಲ್ಪಿಸುತ್ತಾನೆ ಎಂದಿರುತ್ತದೆ. ಆದರೆ ಪ್ರಮಾಣ ಗ್ರಂಥವಾದ ಪಾರಮೇಶ್ವರಾಗಮದಲ್ಲಿ

ಚಂಡಾಲ ಸ್ಪೃಷ್ಟ ದೋಷೋಪಿ ಸ್ಮರತೋ ನಶ್ಯತಿ ಕ್ಷಣಾತ್

ತಾತ್ಪರ್ಯ.

ವೀರಶೈವನು ಚಂಡಾಲನನ್ನು ಮುಟ್ಟಿದ ದೋಷವುಳ್ಳವನಾದರೆ ಶಿವಸ್ಮರಣೆ ಮಾಡುವದರಿಂದ ಆ ದೋಷವು ಕ್ಷಣದಲ್ಲಿ ನಾಶವಾಗುತ್ತದೆ.

ಇದರಲ್ಲಿ ಅಪಿ ಶಬ್ದದಿಂದ ಇವನು ಚಂಡಾಲರನ್ನು ಮುಟ್ಟತಕ್ಕದ್ದಲ್ಲ, ಒಂದು ವೇಳೆ ( ಅಕಸ್ಮಾತ್ ) ಮುಟ್ಟಿದರೆ ಶಿವಸ್ಮರಣೆಯಿಂದ ಆ ದೋಷವು ಪರಿಹಾರವಾಗುತ್ತದೆ ಎಂದು ಅಭಿಪ್ರಾಯವಾಗುತ್ತದೆ.

ಅಂತೂ ವೀರಶೈವರು ಚಂಡಾಲನ ಮುಟ್ಟುವಿಕೆಯಿಂದ ಆದ ದೋಷವನ್ನು ತಾವು ಶಿವನ ರೂಪರಾದ್ದರಿಂದ ಶಿವ ಸ್ಮರಣ ಮಾಡಿ ಹೋಗಲಾಡಿಸಿಕೊಳ್ಳುತ್ತಾರೆ. ಲೌಕಿಕರಾದ ಬ್ರಾಹ್ಮಣ ಕ್ಷತ್ರಿಯಾದಿಗಳು ಸ್ನಾನಾದಿ ಪ್ರಾಯಶ್ಚಿತ್ತವ ಮಾಡಿಕೊಳ್ಳುವಂತೆ ಇವರಿಗೆ ಇಲ್ಲ ಎಂಬುದು ವ್ಯಕ್ತವಾಗುತ್ತದೆ.

ಈ ಶಾಸ್ತ್ರದ ಮಾತನ್ನು ಒಂದು ಬದಿಯಲ್ಲಿ ಇಟ್ಟು ಈಗ ವೀರಶೈವರ ವರ್ತನವು ಹೇಗಿದೆ ಎಂಬುದನ್ನು ನೋಡಿದುದಾದರೆ, ಇವರು ಬಹಳ ಮಟ್ಟಿಗೆ ಭವಿಗಳೊಡನೆ ಕೂಡಿ ಕೂತುಕೊಳ್ಳುವುದು, ಮುಟ್ಟುವುದು ಮೊದಲಾದ ವ್ಯವಹಾರಗಳನ್ನು ನಡೆಸುತ್ತಲೇ ಇದ್ದಾರೆ. ದೇಶ ಕಾಲ ಪರಿಸ್ಥಿತಿಯಂತೆ ಆಚಾರಗಳನ್ನು ನಡೆಸಬೇಕೆಂದು ಹಿರಿಯರು ಹೇಳುತ್ತಿರುವಂತೆ ಈಗ ನಡೆಯುತ್ತಿರುವದರಿಂದ ವೀರಶೈವರು ಬ್ರಾಹ್ಮಣಾದಿಗಳನ್ನು ನೋಡುವಂತೆ ಅಸ್ಪೃಶ್ಯರನ್ನೂ ನೋಡಬೇಕು ಎಂಬ ನಿರ್ಣಯವನ್ನು ಮಹಾಸಭೆಯಲ್ಲಿ ಮಾಡಿದ್ದರೆ ಅದು ಎಲ್ಲರಿಗೂ ಒಪ್ಪಿಗೆಯಾದ ತೀರ್ಮಾನವೇ ಆಗುತ್ತಿದ್ದಿತು. ಆದರೆ ವೀರಶೈವ ಮತದ ಉದಾರ ಭಾವವು ಎಷ್ಟಿರುವದೆಂಬುದನ್ನು ಈ ಮಹಾಸಭೆಯವರು ಗಣನೆಗೆ ತಾರದೆ ಇರುವದಕ್ಕಾಗಿ ಬಹಳ ವಿಷಾದಪಡಬೇಕಾಗಿದೆ.

ಸಾಮಾನ್ಯವಾಗಿ ಮನುಷ್ಯನು ತಾನು ಇತರ ಪ್ರಾಣಿಗಳಂತೆ ವ್ಯವಹಾರ ಮಾಡುವ ವರೆವಿಗೂ ಅವನಿಗೆ ವರ್ಣಗಳಿರುತ್ತವೆ. ಆದರೆ ಅಹಂ ಬ್ರಹ್ಮಾಸ್ಮಿ ಶಿವೋಹಂ ಎಂಬ ತತ್ತ್ವವನ್ನು ಅವಲಂಬಿಸಿ ತಾನು ಶಿವ ( ಬ್ರಹ್ಮ ) ನಾದ ಮೇಲೆ ಅವನು ವರ್ಣಗಳ ಗೋಜು ಇಲ್ಲದೆ ಅತಿವರ್ಣಿಯಾಗಿ ಇದ್ದು ಆ ಅತಿವರ್ಣಿಗೆ ಹೇಳಿರುವ ಧರ್ಮಗಳನ್ನು ಪಾಲಿಸುತ್ತಿರಬೇಕೆಂದು ಅನೇಕ ಉಪನಿಷತ್ತುಗಳು ಒಪ್ಪುವಂತೆ ವೀರ ಶೈವರೂ ತಾವು ಶಿವಸ್ವರೂಪರೆಂದು ತಿಳಿದುಕೊಂಡವರಾದ್ದರಿಂದ ತಾವು ವರ್ಣಗಳ ಗೋಜಿನಲ್ಲಿ ಬೀಳದೆ ತಮ್ಮಂತೆ ಶಿವಜ್ಞಾನಿಗಳಾದವರನ್ನು ಎಲ್ಲರನ್ನೂ ಒಂದೇ ಸಮನಾಗಿ ಕಂಡು ಆಚರಿಸತಕ್ಕವರಾಗಿರುತ್ತಾರೆ. ಆದ್ದರಿಂದ ಅಂಥಾ ಅಸ್ಪೃಶ್ಯರನ್ನು ಶಿವಜ್ಞಾನಿಗಳನ್ನಾಗಿ ಮಾಡಿ ಅವರನ್ನು ವೀರಶೈವರನ್ನಾಗಿ ಮಾಡಿ ಬರೀ ಮುಟ್ಟುವದೇಕೆ, ಕೂಡಿ ಉಣ್ಣುವುದೇ ಮೊದಲಾದ ಕೆಲಸಗಳನ್ನೂ ನಡೆಸಬಹುದು. ಇಂಥಾ ಉದಾರವಾದ ಧರ್ಮ ತತ್ತ್ವವನ್ನು ತಮ್ಮಲ್ಲಿ ಇಟ್ಟುಕೊಂಡು ಸಂಕುಚಿತ ಭಾವದಿಂದ ಬರೀ ಮುಟ್ಟುವದಕ್ಕೆ ಮಾತ್ರ ಪ್ರಯತ್ನ ಮಾಡಿದವರಂತೆ ನಟಿಸಿ ಹೊರಗೆ ಅವರನ್ನು ದೂಡುವುದು ಯೋಗ್ಯವೇನು ?

ಬಸವೇಶ್ವರನು ಇದೇ ತತ್ವವನ್ನೇ ಅವಲಂಬಿಸಿ ಕರ್ನಾಟಕವನ್ನೆಲ್ಲಾ ಉದ್ಧರಿಸಲಿಲ್ಲವೇನು ? ಬಸವೇಶ್ವರನ ಕಾಲದಲ್ಲಿ ಪ್ರಯಾಣ ಸೌಕರ್ಯಗಳೇ ಮೊದಲಾದವುಗಳು ಬಹಳ ಕಡಿಮೆಯಾಗಿದ್ದಾಗ್ಯೂ ಇತರ ಧರ್ಮದ ಕಟ್ಟುಗಳು ಬಹಳವಾಗಿ ಇದ್ದಾಗ್ಯೂ ಈ ಧರ್ಮದ ಕಡೆಗೆ ಜನರ ಆಕರ್ಷಣೆಯನ್ನು ಹೇಗೆ ಮಾಡಿದನು ?

ಈಗಿನ ಸ್ಥಿತಿಯು ಹೇಗಿದೆ ? ಧರ್ಮದ ವಿಷಯವನ್ನು ಸ್ವತಂತ್ರವಾಗಿ ಹರಡಬಹುದಾಗಿದೆ. ಹಿಂದೂ ದೇಶದಲ್ಲೆಲ್ಲಾ ಹರಡಬಹುದಾಗಿದೆ. ಭೂಮಿಯು ತುಂಬಾ ಹರಡಬಹುದಾಗಿದೆ. ಪ್ರಯಾಣದ ಸೌಕರ್ಯಗಳಿವೆ. ವರ್ತಮಾನ ಪತ್ರಿಕೆಗಳ ಅನುಕೂಲವಿದೆ- ನಿಜವಾದ ಶ್ರೇಷ್ಠ ತತ್ತ್ವಕ್ಕೆ ಗಮನ ಕೊಡುವ ವಿದ್ಯಾವಂತರಾದ ಜನರೂ ಬಹಳವಾಗಿ ಇದ್ದಾರೆ. ಈ ಕಾಲದ ವಿದ್ಯಾಭ್ಯಾಸದ ಬಲದಿಂದ ಸ್ವಾತಂತ್ರ್ಯಪ್ರಿಯರಾದವರಿಗೆ ವರ್ಣ ಸಂಬಂಧವಾದ ತೊಂದರೆಗಳಿಲ್ಲದೆ ಉದಾರವಾಗಿಯೂ ಸ್ವತಂತ್ರವಾಗಿಯೂ ಸರ್ವರನ್ನೂ ಒಂದೇ ಸಮಾನವಾಗಿ ಕಾಣುವುದಾಗಿಯೂ ಇರುವ ಮತವು ಬೇಕಾಗಿದೆ.

ಇಂಥಾ ಕಾಲದಲ್ಲಿ ನಮ್ಮದು ಬಹಳ ಉದಾರವಾದ ಮತ, ಬಲು ದೊಡ್ಡ ಮತ, ಎಂದು ಹೇಳಿಕೊಳ್ಳುತ್ತಾ ಬೆಚ್ಚಗೆ ಮನೆಗಳಲ್ಲಿ ಕೂತುಕೊಂಡರೆ ಪ್ರಯೋಜನವೇನು ?

ಯಾರು ಉದಾರವಾದ
ಮತದವರು ನಾವು, ಎಂದು ಹೇಳುವರೋ ಅವರು ತಮ್ಮ ಧರ್ಮ ತತ್ತ್ವಗಳಲ್ಲಿರುವ ಉದಾರ ಭಾವವನ್ನು ಒಂದೊಂದಾಗಿ ಹೊರಗೆ ತೆಗೆದು ತೋರಿಸಿ ಇಡೀ ಜಗತ್ತಿನ ಜನರೆಲ್ಲರೂ ಎಚ್ಚರಗೊಳ್ಳುವಂತೆ ತಮ್ಮ ತತ್ತ್ವಗಳನ್ನು ಹಿಂದೀ ಭಾಷೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಬಹು ಜನರು ಮಾತನಾಡತಕ್ಕ ಇತರ ಭಾಷೆಗಳಲ್ಲಿ ಬರೆಸಿ ಪ್ರಕಟಿಸಬಾರದೇ ? ಪ್ರಚಾರಕರನ್ನು ಕಳುಹಿಸಬಾರದೇ ? ಆಗ ಕರ್ನಾಟಕದಲ್ಲಿ ವೀರಶೈವ ಧರ್ಮವನ್ನು ಹರಡುವ ಬಸವೇಶ್ವರನಿದ್ದರೆ ಈಗ ಜಗತ್ತಿನ ತುಂಬಾ ಶ್ರೇಷ್ಠವಾಗಿರುವ ಒಂದೇ ಒಂದು ಧರ್ಮವನ್ನು ಹರಡುವ ಬಸವೇಶ್ವರನು ಬೇಕಲ್ಲವೇ ?

ವೀರಶೈವರು ಇತರರು ಹೇಳುವ ಪದ ( ಹಾಡು ) ಗಳಿಗೆ ಎಂದಿನ ವರೆವಿಗೂ ತಾಳಗಳನ್ನು ಹಾಕುತ್ತಾ ಬರುವರೋ ಅಂದಿನ ವರೆವಿಗೂ ತಮ್ಮ ಜನಾಂಗವು ಮೂಲೆಯಲ್ಲಿಯೇ ಇರುವದೆಂದು ತಿಳಿಯಬೇಕು. ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತಾ ನಿವಾರಣೆ ಮಾಡಬೇಕೆಂದು ಪ್ರಯತ್ನ ಪಟ್ಟರೆ ಅವಕ್ಕೆ ಕೈಚಪ್ಪಾಳೆ ಹೊಡೆದುಕೊಂಡು ಕೂತರೆ ಸಾಲದು.

ಸದ್ಯಕ್ಕೆ ವೀರಶೈವರ ಕರ್ತವ್ಯವೇನು ನಡೆದಿದೆ ? ವೀರಶೈವರೇ' ನೀವು ಅಸ್ಪೃಶ್ಯತಾ ನಿವಾರಣ ಮಾಡಬೇಕು, ಅಸ್ತು. (ಆಗಲಿ) ನೀವು ವಿಜಯನಗರದ ಸ್ಮಾರಕೋತ್ಸವ ಮಾಡಬೇಕು, ಅಸ್ತು. ನೀವು ಕರ್ನಾಟಕದ ಏಕೀಕರಣಕ್ಕೆ ಅನುಕೂಲರಾಗಬೇಕು, ಅಸ್ತು. ನೀವು ಧರ್ಮದಂತೆ ನಡೆಯುವದರ ಕಡೆಗೆ ಗಮನ ಕೊಡಬಾರದು, ಅಸ್ತು. ಹೀಗೆ ಎಲ್ಲಿನ ವರೆವಿಗೂ ಅಸ್ತು ಅಸ್ತು ಎಂದಿರುವರೋ ಅಲ್ಲಿನ ವರೆವಿಗೂ ಇವರು ಅಸ್ತದಲ್ಲಿಯೇ ಇರುವರು.

ವೀರಶೈವರು ತಮ್ಮ ವರ್ಚಸ್ಸನ್ನು ಇಡೀ ಕರ್ನಾಟಕದಲ್ಲಿ ಯಾವದರಲ್ಲಿ ಬೆಳೆಸಿದ್ದಾರೆ ? ವ್ಯಾಪಾರದಲ್ಲಿಯೇ ? ವ್ಯವಸಾಯದಲ್ಲಿಯೇ ? ಕೈಗಾರಿಕೆಯಲ್ಲಿಯೇ ? ಧಾರ್ಮಿಕದಲ್ಲಿಯೇ ? ಏತರಲ್ಲಿ ? ಮೊದಲು ಒಂದು ಬೆರಳನ್ನು ಮಡಿಸಲಿ.

ಇವರು ತಮ್ಮ ತಮ್ಮಲ್ಲಿಯೇ ಒಂದು ಮಹಾಸಭೆಯನ್ನು ಮಾಡುತ್ತಿದ್ದರೆ ಅದೂ ಕುಂಟುತ್ತಾ ಮಲಗುತ್ತಾ ಏಳುತ್ತಾ ಮುಂದೆ ನಡೆದಿದೆ. ಅದರಲ್ಲಿ ಆಗುವ ಅನೇಕ ಶೀವರ್ಮಾನಗಳು ನಡತೆಯಲ್ಲಿ ಬಾರದೆ ಗೋಳಾಡುತ್ತವೆ. ಚಿಕಾಗೋ ಪಟ್ಟಣದ ಸರ್ವ ಧರ್ಮ ಸಮ್ಮೇಳ

ನಕ್ಕೆ ಒಬ್ಬರನ್ನು ಮಹಾಸಭೆಯ ಪರವಾಗಿ ಕಳುಹಿಸಬೇಕೆಂದು ತೀರ್ಮಾನವಾದ್ದನ್ನು ಕೇಳಿ ಎರಡನೆಯ ವಿವೇಕಾನಂದರು ಇಂಡಿಯಾದಿಂದ ಹೊರಡುತ್ತಾರೆಂಬ ಸಂತೋಷವಾಗಿದ್ದಿತು. ಅದು ಕೇಳಿದಾಗಲೇ. ಆ ಸಮ್ಮೇಳನವು ಮುಗಿದೇ ಹೋಯಿತು. ವೀರಶೈವರು ಇಲ್ಲಿಯೇ ಕೂತರು.

ಇವರ ಗತ ವೈಭವವನ್ನು ನೆನೆಸಿಕೊಂಡರೆ ಇವರಿಗೆ ಅಳುವು ಬರುವದಿಲ್ಲವೇ ? ಇವರ ಧಾರ್ಮಿಕ ಸ್ಥಿತಿ ಎಂಥಾದ್ದು ? ಇವರ ರಾಜರೆಂಥವರು ? ಇವರ ರಾಜ್ಯಗಳೆಂಥವು ? ಇವರ ವ್ಯಾಪಾರವೆಂಥದು ? ಊರೂರಿನಲ್ಲಿಯೂ ಇವರು ಅನುಭವಿಸುತ್ತಿದ್ದ ಇಡೀ ಊರಿನ ಮುಂದಾಳುತನವೆಂಥದು ? ಇವರ ಕನ್ನಡ ಭಾಷೆ ಎಂಥದು ?

ಈಗಿನ ವೀರಶೈವರು ಅಂಥಾ ವೈಭವವನ್ನು ಹೇಗೆ ಹೊಂದಲಾದೀತು ಎಂದು ಯೋಚಿಸಬಹುದು. ಈಗ ಕರ್ನಾಟಕದಲ್ಲಿ ನಡೆಯುತ್ತಿರುವ ದೊಡ್ಡ ದೊಡ್ಡ ಕಾರ್ಯಗಳಿಗೆ ದುಡ್ಡು ಕೊಡುವರಾರು ? ಕರ್ನಾಟಕದಲ್ಲಿ ಹೆಚ್ಚು ಜನರುಳ್ಳವರು ಯಾರು ? ಇವರು ತಮ್ಮ ಧಾರ್ಮಿಕ ಲೌಕಿಕ ಕಾರ್ಯಗಳ ಉದ್ಧಾರಕ್ಕೆ ತಮ್ಮಲ್ಲಿ ತಾವು ಪ್ರಯತ್ನ ಮಾಡುವದಿಲ್ಲವೇಕೆ ? ಅವುಗಳೇ ಕ್ರಮ ಕ್ರಮವಾಗಿ ದೊಡ್ಡ ಕಾರ್ಯಗಳಾಗಿ ಪರಿಣಮಿಸಬಹುದಲ್ಲವೇ ?

ತಮ್ಮ ಉದಾರ ಧರ್ಮ ತತ್ವದ ಸ್ಥಿತಿಯನ್ನು ಆಲೋಚಿಸಿ ಮಹಾಸಭೆಯವರು ಅಸ್ಪೃಶ್ಯರಿಗೆ ತಕ್ಕ ಶಿವಜ್ಞಾನವನ್ನು ಕೊಟ್ಟು ಅವರನ್ನು ವೀರಶೈವರನ್ನಾಗಿ ಮಾಡುವದಕ್ಕೆ ತಕ್ಕ ಯತ್ನವನ್ನು ಮಾಡಿದ್ದರೆ ತಮ್ಮ ಧರ್ಮದ ಸಹಜ ಭಾವವನ್ನು ಹೊರಪಡಿಸಿದಂತಾಗುತ್ತಿದ್ದಿತು. ಮಹಾತ್ಮಾ ಗಾಂಧಿಯವರು ಹೇಳಿದ್ದಕ್ಕಿಂತಲೂ ಒಂದು ಹೆಜ್ಜೆ ಮುಂದಕ್ಕೆ ಹೋದಂತೆ ಆಗುತ್ತಿದ್ದಿತು. ಮತ್ತು ಬಸವಣ್ಣನವರನ್ನು ನೆನೆಸುವಂತೆ ಆಗುತ್ತಿದ್ದಿತು.

ಮೊದಲು ಹೇಳಿದಂತೆ ಮ॥ ಪಾಟೀಲರವರು ತರುಣ ಕರ್ನಾಟಕದಲ್ಲಿ ಬರೆದ ಪ್ರಕಾರ ತತ್ತ್ವಕ್ಕೆ ವಿರೋಧವೆಂದು ಈಗ ಅನೇಕರು ಅಸ್ಪೃಶ್ಯರನ್ನು ಮುಟ್ಟುವಂತಿಲ್ಲ, ಇಲ್ಲವೇ ಅಸ್ಪೃಶ್ಯರು ಶುದ್ಧರಾಗಿ ವೀರಶೈವ ಧರ್ಮದಲ್ಲಿ ಕೂಡುವಂತೆ ಇಲ್ಲ. ಹೀಗೆ ನಿರ್ಣಯಗಳು ವ್ಯರ್ಥವಾಗದಂತೆ ಆಲೋಚನೆಯನ್ನು ಮಾಡಿ ಸಮಾಜವು ಸರ್ವಾವಯವಗಳಲ್ಲಿ ಅಭಿವೃದ್ಧಿ ಹೊಂದುವ ಧ್ಯೇಯವನ್ನಿಟ್ಟುಕೊಂಡು ಮಹಾಸಭೆಯವರು, ನಿರ್ಣಯಗಳನ್ನು ಮಾಡಲಿ ಎಂಬುದೇ ಪ್ರಕೃತದ ಪರ್ಯಾಲೋಚನೆಯಾಗಿದೆ.

ಎಂದು ಊಹೆಯಾಗುತ್ತದೆ. ಚಿತ್ರದುರ್ಗದಲ್ಲಿರುವ ಶೂನ್ಯಪೀಠದ ಜಗದ್ಗುರುಗಳ ಒಕ್ಕಣಿಕೆಯಲ್ಲಿ 'ದ್ವಾರಾವತೀ ಶೂನ್ಯ ಸಿಂಹಾಸನಾಧೀಶ್ವರಾಣಾಂ' ಎಂಬ ಒಂದು ಭಾಗವಿರುತ್ತದೆ. ಅಲ್ಲಿ ಹೇಳಿರುವ ದ್ವಾರಾವತಿಯು ಇದೇ ದ್ವಾರಾವತಿಯೇ ಅಥವಾ ಬೇರೆಯೊಂದಿರುವುದೇ ಎಂಬುದನ್ನು ಪರಿಶೋಧಿಸಬೇಕಾಗಿದೆ.

ಕೃತಯುಗದಲ್ಲಿ ಬಾಣಾಸುರನು ಈ ಕುಬಟೂರಿನ ಲಿಂಗವನ್ನು ಪ್ರತಿಷ್ಠಾಪಿಸಿದನೆಂದು ಇದೆ. ಮೈಲಾರದ ಚರಿತ್ರೆ ಎಂಬ ಗ್ರಂಥದಲ್ಲಿ ೬೬ ಕೋಟಿ ರಾಕ್ಷಸರು ದಿತಿ ಎಂಬ ಹೆಂಡತಿಯಲ್ಲಿ ಕಶ್ಯಪನಿಗೆ ಹುಟ್ಟಿದರು, ಇವರಲ್ಲಿ ಹಿರಣ್ಯಕಶ್ಯಪ ಎಂಬ ರಾಕ್ಷಸನಿಗೆ ಪ್ರಹ್ಲಾದನೇ ಮೊದಲಾಗಿ ಐದು ಜನ ಮಕ್ಕಳಾದರು. ಈ ಪ್ರಹ್ಲಾದನಿಗೆ ವಿಲೋಚನ, ಕುಂಭ, ನಿಕುಂಭ ಎಂಬ ಮೂವರು ಮಕ್ಕಳು ಇದ್ದರು. ವಿಲೋಚನನಿಗೆ ಬಲೀಂದ್ರನು (ಬಲಿಚಕ್ರವರ್ತಿಯು) ಇವನಿಗೆ ಮಲ್ಲಾಸುರ, ಮಣಿಕಾಸುರ, ಬಾಣಾಸುರ ಮೊದಲಾಗಿ ೧೦೦ ಮಂದಿ ಮಕ್ಕಳಿದ್ದರು. ಇವರಲ್ಲಿ ಮಣಿಕಾಸುರನನ್ನು ಬ್ಯಾಡಿಗಿಯ ಹತ್ತರ ದೇವರಗುಡ್ಡದಲ್ಲಿಯೂ, ಮಲ್ಲಾಸುರನನ್ನು ಬಳ್ಳಾರಿ ಜಿಲ್ಲಾ ಹೂವಿನಹಡಗಲಿ ತಾ॥ ಮೈಲಾರದಲ್ಲಿಯೂ ಭೈರವ ಮಾರ್ತಂಡನು ಸಂಹರಿಸಿದನೆಂದು ಹೇಳಿರುವದರಿಂದ ಈ ಪ್ರಾಂತದಲ್ಲಿ ಆಗ ರಾಕ್ಷಸರಿದ್ದರೆಂದು ನಿರ್ಣಯವಾಗುತ್ತದೆ. (ಇದಕ್ಕೆ ಉದಾಹರಣೆಯಾಗಿ ದೇವರಗುಡ್ಡದಲ್ಲಿ ಕುದುರೆಯ ಮೇಲೆ ಕೂತುಕೊಂಡ ಮಣಿಕಾಸುರನ ಸಂಹಾರದ ಪ್ರತಿಮೆಯು ಈಗಲೂ ಇದೆ.)

ದೇವರಗುಡ್ಡಕ್ಕೆ ಕುಬಟೂರು ೨೦—೩೦ ಮೈಲು ದೂರವಲ್ಲಿ ಮಾತ್ರ ಇರುವದರಿಂದ ಈ ಮಲ್ಲಾಸುರ ಮಣಿಕಾಸುರರ ತಮ್ಮನಾದ ಬಾಣಾಸುರನೇ ಕುಬಟೂರಿನಲ್ಲಿ ಲಿಂಗವನ್ನು ಸ್ಥಾಪಿಸಿರಬಹುದೆಂದೂ ಹಿರಣ್ಯಕಶ್ಯಪನ ಕಾಲವು ನಾರಸಿಂಹಾವತಾರದ ಕಾಲವಾಗಿದ್ದು ಅವನ ನಾಲ್ಕನೆಯ ತಲೆಯವನೇ ಬಾಣಾಸುರನೆಂದು ತಿಳಿಯುವವರಿಂದ ದೇವತೆಗಳ ಕಾಲದ ಮುಂದಿನ ಕಾಲವೇ ಕೃತಯುಗ ಎಂಬದಾಗಿ ಗಣನೆ ಮಾಡಲ್ಪಟ್ಟಿತೆಂದೂ ನಿಶ್ಚಯಿಸಬಹುದಾಗಿದೆ. "ಇದಲ್ಲದೆ ಪ್ರಹ್ಲಾದನು ಬಳ್ಳಾರಿ ಡಿಸ್ಟ್ರಿಕ್ಟು ಹಿರೇಹಡಗಲಿಯಲ್ಲಿ ಇದ್ದನೆಂದು ಈಚೆಗೆ ಗುರುತಿ

ಸಲ್ಪಟ್ಟಿರುವದೆಂದು ಕೇಳಲ್ಪಡುವ ಸುದ್ದಿಯೂ ಕೂಡಾ ಇದಕ್ಕೆ ಅನುಕೂಲವಾಗಿರುತ್ತದೆ."

ಬಾಣಾಸುರನ ಮಗಳಾದ ಉಷಾದೇವಿಯನ್ನು ಶ್ರೀ ಕೃಷ್ಣನ ಮಗನ ಮಗನಾದ ಅನಿರುದ್ಧನು ಮದುವೆಯಾದನೆಂದು ನಮ್ಮ ಪೂರ್ವಿಕ ಗ್ರಂಥಗಳಲ್ಲಿ ದೊರಕುವುದರಿಂದಲೂ "ಶಿವಾಂಕ" ಎಂಬ ಹೆಸರುಳ್ಳ ಕಲ್ಯಾಣ ಮಾಸಪತ್ರಿಕೆಯವರು ಪ್ರಕಟಿಸಿರುವ ಹಿಂದೀ ಗ್ರಂಥದಲ್ಲಿ ಬಂದಲಖಂಡದಲ್ಲಿ ಉಷಾದೇವಿ ಇದ್ದಳೆಂದು ತಿಳಿಯಬರುವದರಿಂದಲೂ ಈ ಬಾಣಾಸುರನು ದ್ವಾಪರಯುಗದ ಬಾಣಾಸುರನೆಂದೂ ಕೃತಯುಗದ ಬಾಣಾಸುರನಲ್ಲದೆ ಇವನು ಬೇರೆಯವನೆಂದೂ ಊಹೆಯಾಗುತ್ತದೆ.

ಹೀಗಿರುವದರಿಂದ ಶ್ರೀ ರಾಮನ ಕಾಲದಲ್ಲಿ ದಂಡಕಾರಣ್ಯ ಎಂದು ಕರೆಯಲ್ಪಡುತ್ತಿದ್ದ ಈ ಭಾಗದಲ್ಲಿ ಶ್ರೀ ರಾಮನ ಕಾಲಕ್ಕಿಂತಲೂ ಮುಂಚೆ ಅಲ್ಲಲ್ಲಿ ರಾಕ್ಷಸರು ತುಂಬಿಕೊಂಡಿದ್ದರೆಂಬ ಸಂಗತಿಯನ್ನು ನಿಜವೆಂದು ತಿಳಿಯುವದಕ್ಕೆ ಈ ಸಂಗತಿಗಳು ಉದಾಹರಣೆಯಾಗಿ ಇರುವವೆಂದು ನಿರ್ಣಯಿಸಬಹುದಾಗಿದೆ.

ಪುರಾಣದಲ್ಲಿ ಬಾಣಾಸುರನಿಂದ ಈ ಲಿಂಗ ಪ್ರತಿಷ್ಠೆಯಾಯಿತೆಂಬುದನ್ನು ತಿಳಿದು ಹಿರಜೈಟುಗಿದೇವನು ಧರ್ಮ ಮಾಡಿದನೆಂದು ಹೇಳುವದರಿಂದ ಯಾವ ಪುರಾಣದಲ್ಲಿ ಈ ವಿಷಯವಿರುವದೆಂಬುದನ್ನು ಶೋಧಿಸಿದರೆ ಆ ಪುರಾಣವು ಕ್ರಿಸ್ತ ೧೦ ನೆಯ ಶತಮಾನಕ್ಕಿಂತಲೂ ಮುಂಚಿನದೆಂದು ನಿರ್ಧರಿಸಿ, ಅದರೊಳಗಿನ ವಿಷಯಗಳ ಕಡೆಗೆ ಗಮನ ಕೊಡಲಿಕ್ಕೆ ಅವಕಾಶವಾಗುತ್ತವೆ.

ಶಕ ೯೧೩ ಸಾಧಾರಣ ಸಂವತ್ಸರದಲ್ಲಿ ಈ ಶಾಸನವು ಬರೆಯಲ್ಪಟ್ಟದೆ ಎಂದು ತಿಳಿಯುತ್ತದೆ. ಈಗ ೧೮೫೫ ನೆಯ ಶ್ರೀಮುಖ ಸಂವತ್ಸರ ೬೦ ಸಂವತ್ಸರಗಳಲ್ಲಿ ಎಷ್ಟನೆಯದೆಂದು ಗಣನೆ ಮಾಡಿದರೆ ಒಮ್ಮೆ ೬೦ ವರ್ಷಗಳು ಕಳೆದು ಮತ್ತೆ ಮೊದಲನೆಯ ಪ್ರಭವ ಸಂವತ್ಸರವು ಬರುವದರಿಂದ ೬೦ ರ ಅಪವರ್ತ್ಯ ಸಂಖ್ಯೆಯಾದ ೧೮೦೦ ನ್ನು ಬಿಟ್ಟರೆ ಇದು ೫೫ ನೆಯ ವರ್ಷವಾಗುವುದು. ಆದರೆ ಪ್ರಭವದಿಂದ ಎಣಿಸಿದರೆ ಇದು ೭ ನೆಯ ವರ್ಷವಾಗುತ್ತದೆ. ಆದ್ದರಿಂದ ಶಾಲಿವಾಹನ ಶಕೆಯ ೧ ನೆಯ ವರ್ಷವು ಪ್ರಮಾಥಿ ಸಂ॥ ರದಿಂದ ಪ್ರಾರಂಭ

ವಾದಂತೆ ತಿಳಿಯಬರುತ್ತದೆ. ವಿಕ್ರಮ ಶಕೆಯು ಈಗ ೧೯೯೦ ಎಂದು ತಿಳಿಯಬರುವದರಿಂದ ಅದರಲ್ಲಿ ೬೦ ರ ಅಪವರ್ತ್ಯವಾದ ೧೯೮೦ ಹೋದರೆ ೧೦ ಉಳಿಯುತ್ತದೆ. ಆದ್ದರಿಂದ ವಿಕ್ರಮ ಶಕೆಯು ರಕ್ತಾಕ್ಷಿ ಸಂವತ್ಸರದಿಂದ ಆರಂಭವಾಗಿರುವಂತೆ ತೋರುತ್ತದೆ. ಕಲಿಯುಗ ೫೦೩೪ ಎಂದಿರುವದರಿಂದ ಇದರಲ್ಲಿ ೬೦ರ ಅಪವರ್ತ್ಯವಾದ ೪೯೮೦ ನ್ನು ಕಳೆದರೆ ೫೪ ಉಳಿಯುತ್ತದೆ. ಆದ್ದರಿಂದ, ಕಲಿಯುಗದ ೧ನೆಯ ವರ್ಷವೂ ಪ್ರಭವ ಸಂವತ್ಸರವಲ್ಲ. ಇದಲ್ಲದೆ ವರ್ಷದ ಸಂಖ್ಯೆ ಲೆಖ್ಖ ಮಾಡಿದರೆ ಸಾಧಾರಣ ಸಂವತ್ಸರಕ್ಕೆ ಶಾಲಿವಾಹನ ಶಕ ೧೮೫೨ ಇರಬೇಕೆಂದು ತೋರುತ್ತದೆ. ಈ ಹೆಚ್ಚು ಕಡಿಮೆಗೆ ಏನು ಕಾರಣವೆಂಬುದನ್ನೂ ಪ್ರಭವದಿಂದ ೧ ಎಂದು ಲೆಖ್ಖ ಮಾಡುವ ಪದ್ಧತಿಯು ಯಾರ ಕಾಲದಿಂದ ಅಥವಾ ಯಾವ ಕಾಲದಿಂದ ಉಂಟಾಯಿತೆಂಬುದನ್ನು ಪರಿಶೋಧಿಸಬೇಕಾಗಿದೆ.

ಕದಂಬ ಚಕ್ರವರ್ತಿಗಳ (ಸೊರಬದ ತಾ॥ ಚಂದ್ರಗುತ್ತಿಯಲ್ಲಿ ಇದ್ದವರ) ಆಶ್ರಯದಲ್ಲಿದ್ದವರಲ್ಲಿ ದಂಡನಾಯಕನಾದ ಸೋಯಿದೇವನು ಬ್ರಾಹ್ಮಣನಾಗಿದ್ದನೆಂತ ಇದರಿಂದ ತಿಳಿಯುತ್ತದೆ. ಬ್ರಾಹ್ಮಣ ರಾಜ್ಯವು ಮಹಾರಾಷ್ಟ್ರ ಪೇಷ್ವೆಯವರ ಕಾಲದಲ್ಲಿ ಮಾತ್ರವಲ್ಲದೆ ಕದಂಬರ ಕಾಲ (೩ ರಿಂದ ೧೦ ನೆಯ ಶತಮಾನಗಳು) ದಲ್ಲಿಯೂ ಇದ್ದಿತೆಂತಲೂ 'ರಾಜ' ಎಂಬ ಪದದ ತದ್ಭವವಾದ 'ರಾಯ' ಎಂಬ ಪದವು ಬ್ರಾಹ್ಮಣರಿಗೆ ಬರಲಿಕ್ಕೆ ಇದೇ ಕಾರಣವೆಂದೂ ಊಹೆಗೆ ಬರುತ್ತದೆ. ಇಲ್ಲದಿದ್ದರೆ ಉತ್ತರ ಹಿಂದುಸ್ಥಾನದಲ್ಲಿ ಶರ್ಮ ಎಂಬ ಪದವು ಇವರ ಹೆಸರಿನ ಮುಂಭಾಗದಲ್ಲಿ ಉಪಯೋಗಿಸಲ್ಪಡುತ್ತಿದ್ದು ದಕ್ಷಿಣ ದೇಶದಲ್ಲಿ ರಾಯ ಎಂದು ಉಪಯೋಗಿಸಲಿಕ್ಕೆ ಬೇರೆ ಕಾರಣವು ತೋರುವದಿಲ್ಲ."

ಶಿಕಾರಿಪುರದ ತಾಲ್ಲೂಕಿನ ಬೆಳಗಾವಿ (ಬಳ್ಳಿಗಾವೆ=ಬಲಿಪುರ) ಯ ಹೆಸರೂ ಇದರಲ್ಲಿ ಇರುತ್ತದೆ. ಈ ಬೆಳಗಾವಿಯು ಕಲ್ಯಾಣವೆಂದು ಪೂರ್ವದಲ್ಲಿ ಭಾವಿಸಲ್ಪಡುತ್ತಿದ್ದಿತಾದ್ದರಿಂದಲೂ ಈ ಬೆಳಗಾವಿಯಲ್ಲಿ ಬಸವೇಶ್ವರನ ಕಾಲಕ್ಕಿಂತ ಮುಂಚೆಯೇ ಲಿಂಗಧಾರಿಗಳು ಇದ್ದರೆಂದೂ ಈ ಬೆಳಗಾವಿಯ ಸಮೀಪದಲ್ಲಿ ಇದ್ದ ಮುತ್ತಿಗೆ ಎಂಬ ಗ್ರಾಮದಲ್ಲಿ ಇದ್ದ ಮುಕ್ತಾಯಕ್ಕ ಮೊದಲಾದ ಕೆಲವು ವೀರಶೈವರನ್ನು ಪ್ರಭುದೇವರು ಕಲ್ಯಾಣಕ್ಕೆ ಬರುವದಕ್ಕೆ ಮೊದಲೇ ನೋಡಿದ್ದನಾದ್ದರಿಂದ ಈ

ಬೆಳಗಾವಿಯ ಪ್ರಾಂತನಲ್ಲಿದ್ದ ಲಿಂಗಧಾರಕರು ಆ ಮೇಲೆ ಬಹಳವಾಗಿ ಕಲ್ಯಾಣವನ್ನು ತುಂಬಿದರೆಂದೂ ತಿಳಿಯುತ್ತದೆ.

ಮಾರನಾಯಕನ ಬಾಧೆಯು ಮೈಸೂರಿನ ರಾಜ ಮನೆತನದವರಿಗೆ ಉಂಟಾದ ವೇಳೆಯಲ್ಲಿ ದ್ವಾರಾವತಿಯಿಂದ ಯಾದವ ವಂಶದವರಿಬ್ಬರು ಹೋಗಿ ಆ ಬಾಧೆಯನ್ನು ತಪ್ಪಿಸಿದರೆಂಬ ವಿಷಯವು ಮೈಸೂರು ಚರಿತ್ರೆಯಲ್ಲಿ ತಿಳಿಯಬರುತ್ತದೆ. ಆ ದ್ವಾರಾವತಿಯೇ ಇದರಲ್ಲಿ ಕಂಡದ್ದೆಂದು ಹೇಳಬಹುದು.

ಈ ಶಾಸನದಲ್ಲಿ ಕಂಡ ನಾಗರಖಂಡವೆಂಬುದು ಧಾರವಾಡ ಜಿಲ್ಲಾ ತಿಳುವಳ್ಳಿ ಗ್ರಾಮವೆಂಬುವಾಗಿ ಕೇಳಿಕೆಯಲ್ಲಿ ಇದೆ ಇದರ ಶೋಧನೆ ಯನ್ನೂ ಮಾಡಬೇಕಾಗಿದೆ.

ಸರ್ವೇಶ್ವರಶಕ್ತಿದೇವರು ಸಪ್ತಾ ಸತ್ತರಿ ಸ್ಥಾನಾ ಚಾರ್ಯರೆಂಬದಾಗಿ ಬರೆಯಲ್ಪಟ್ಟವೆ. ಬಾಬಾ ಬುಡನ್‌ಗಿರಿಯ ಪ್ರಾಂ ತದಲ್ಲಿ ಪೂರ್ವದಲ್ಲಿ ಎಪ್ಪತ್ತೇಳು ಮಠಗಳು ಎಂಬ ಹೆಸರಿನಿಂದ ಮಠಗಳಿದ್ದವೆಂತಲೂ, ಇವುಗಳಲ್ಲಿ ಈಗಲೂ ವೀರಶೈವ ಮಠಗಳಾಗಿ ಕೆಲವು ಇರುವದಾಗಿಯೂ ತಿಳಿಯಬರುತ್ತದೆ.

ಬಸವೇಶ್ವರನ ತರುವಾಯ ಬರೆಯಲ್ಪಟ್ಟ ವಚನ ಮೊದಲಾದವು ಗಳಲ್ಲಿ ಈ ೭೭ ಮಠಗಳ ಸಮಾಚಾರವು ಎಲ್ಲಿಯೂ ಇಲ್ಲದಿರುವದರಿಂ ದಲೂ ಈ ಶಾಸನದಲ್ಲಿ ಮಾತ್ರ ೭೭ ಸ್ಥಾನಾಚಾರ್ಯರೆಂಬ ಹೆಸರು ತೋರಿಬರುವದರಿಂದಲೂ ಈ ೭೭ ಸ್ಥಾನಗಳು ಇವೇ ಆಗಿರುವ ಪಕ್ಷ ದಲ್ಲಿ ಇವು ಬಸವೇಶ್ವರನಿಗಿಂತ ಪೂರ್ವದಲ್ಲಿ ಇದ್ದ ವೀರಶೈವ ಮಠಗ ಳೆಂತ ನಿರ್ಣಯಿಸಲಿಕ್ಕೆ ಯಾವ ಅನುಮಾನವೂ ತೋರುವದಿಲ್ಲ. ಈ ವಿಷಯವನ್ನೂ ಪರಿಶೋಧಿಸಬೇಕಾಗಿದೆ.

ಎಲ್ಲಾ ಕಡೆಗಳಲ್ಲಿಯೂ ಇರುವ ೧೨ ನೆಯ ಶತಮಾನಕ್ಕೆ ಮುಂ ಚಿನ ಕಾಲವನ್ನು ತೋರಿಸುವ ಶಾಸನಗಳ ವಿವರವನ್ನು ಶೋಧನ ದೃಷ್ಟಿ ಯಿಂದ ಪರೀಕ್ಷಿಸಿದ್ದಾದರೆ ವೀರಶೈವ ಮತದ ಇತಿಹಾಸವನ್ನು ಬರೆಯು ವದಕ್ಕೆ ಅನೇಕ ವಿಷಯಗಳ ಸಹಾಯವಾಗುವದರಲ್ಲಿ ಸಂಶಯವಿಲ್ಲ. ಆದ್ದರಿಂದ ಈ ಕಡೆಗೆ ವೀರಶೈವರು ವಿಶೇಷ ಗಮನವನ್ನು ಕೊಡ ಬೇಕಾಗಿದೆ.

---

# ಕೋಟೀಶ್ವರ ಅಥವಾ ಕೋಟಿಲಿಂಗ.



ಶಾಸನಗಳ ಆಧಾರದಿಂದ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟ ಕೋಟಿ ಲಿಂಗ ಎಂಬ ಹೆಸರುಳ್ಳ ಒಂದು ಲಿಂಗವು ಇರುತ್ತಿತ್ತೆಂದೂ ಇಂಥಾ ಲಿಂಗಗಳು ಪೂರ್ವದಲ್ಲಿ ಕೆಲವರು ಅಸುರರಿಂದ ಸ್ಥಾಪಿಸಲ್ಪಟ್ಟವೆಂದೂ ತಿಳಿಯಬರುತ್ತದೆ.

ಶಿವಮೊಗ್ಗಾ ಡಿಸ್ಟ್ರಿಕ್ಟಿನ ೨೭೬ ನೆಯ ಶಾಸನ.

ಸೊರಬದ ತಾಲ್ಲೂಕು ಕುಬಟೂರಿನಲ್ಲಿ ಇರುವುದು, :—

ಕ್ರಿ. ಶಕ ೧೦೭೦.

...............

ವಚನ

ಆ ಗ್ರಾಮುದ್ಯೆಂದ್ರೀ ಭಾಗದೊಳು

ವೃತ್ತ

ಪದಪಿಂ ಶ್ರೀ ಗಿರಿಜೇಶ್ವರಂ ಸಕಲ ಧರ್ಮಾರ್ಥಮಂ ಪಾಲಿಸ ।
ಲ್ಕಿದು ತಾಂ ಸೇವ್ಯ ಮಿಳಾತಳಾಗ್ರದೊಳೆನುತ್ತುಂ ನೋಡಿ ಕೈಲಾಸದಿಂ ।
ತ್ರಿದಶರ್ ಸಂಯುತನಾಗಿ ಪಾರ್ವತಿಯೊಳಂ ನೇರ್ಪಟ್ಟು ಬಂದಾವಗಂ ।
ಸದಯಂ ಭಾಕ್ತಿಕ ಮಂಗಳಂ ನೆಲಸಿದಂ ಕೋಟೀಶ್ವರಂ ಪ್ರೀತಿಯಿಂ ॥

ಕಂದ

ಆದಿಯ ಕೃತ ಯುಗದೊಳು.... ।
ಭೇದಿಸಿ ಬಾಣಾಸುರಂ ಪ್ರತಿಷ್ಠಾ ವಿಧಿಯಿಂ ॥
ಪಾದರದೆ ರಚಿಸಿದಂ ತ್ರಿ ಜ ।
ಗೋದರನಂ ಪಡೆದನಂತ ಕೋಟೀಶ್ವರನಂ ॥

## ವೃತ್ತ

ಭರದಿನದಂ ವಿಶ್ವಕರ್ಮರ್ಗಂ ಪುದಿದ ಭಕುತಿಯಿಂ ಮಾಡಿದಂ ತಾನೆನಲ್ಕಂ।
ಪಿರಿದುಂ ವೈಚಿತ್ರ್ಯ ಚಿತ್ರಂಗಳೊಳೆ ವಿವಿಧ ಭದ್ರ ಪ್ರಕಾರಂಗಳಿಂದಂ॥
ವರವುದ್ಧೃತ್ ಕಾಂಚನಾನಾವಿಧಮಣಿ ಕಲಶಾನೀಕದಿಂ ಕೂಡೆ ಚಲ್ವಾ।
ಗಿರೆ ತೋರ್ಕುರ್ಗಂ ಕೋಟಿನಾಥಾಹ್ವಯ ಭವ ಭವನಂ ಮೋಕ್ಷವಂ ಚುಂಬಿಸುತ್ತಂ

## ಕಂದ

ಕೆಂದಳಿರಿಂ.... ಕಲ್ಲಿಗಳಿಂ।
ನಂಧನದಿಂ ತಿಳಿಗೊಳಂಗಳಿಂದಳಿ ಕುಳದಿಂ॥
ಬಂದೆಲೆ ಮಾವಿನ ಪುದುವಿಂ।
ಚಂದಂ.... ಆಲಯಂ ಪರಿವೃತದಿಂ॥

## ವಚನ

ಅಂತಸದಳವೆಸೆವ ಅನಂತ ಕೋಟೀಶ್ವರ ತ್ರಿಭುವನೈಕ ರಕ್ಷಾ ಮಣಿಯ ಚರಣ ಸರಸೀರುಹ ಸ್ಮರಣ ಪರಿಣತಾಂತಃಕರಣ ಶೈವಾಗಮ ಪಥಾಚರಣ....ಸಮಯ ಸಮುದ್ಧರಣ ಅಖಂಡಿತ ಪ್ರತಾಪ ದಿವಾಕರ ಕಿರಣ ಪರಮತ ವಾದಿ ಮದ ನಿರಾಕರಣನುಂ ಎನಿಸಿದ ಶ್ರೀಮತ್ ಸರ್ವೇಶ್ವರ ದೇವರ ತಪಃ ಪ್ರಭಾವ ಮೆಂತೆಂದೊಡೆ :—

## ವೃತ್ತ

ಎನಗಿನ್ನಾರ್ ಸಮ ಮೂಜಗಂಗಳೊಳಗೆಂಬಿ......ಶಾಸ್ತ್ರನಂ।
ಗಣೆಯುನಂಬಂ ಮುರಿ.......ಧನುವಂ.......ಚಿತ್ತಿಖೂನಾಂಕಮಂ॥
ಮನದಿಂ ಮುಂ ಪರಿದಿಕ್ಕಿ ಗೆಲ್ಗೂಡತುಳ ಗೆಲ್ಲಂಗೊಂಡನೆಂದೊಡೇಂ।
ಮುನಿ ಸರ್ವೇಶ್ವರ ಶಕ್ತಿ ದೇವರು......ಏ ವಣ್ಣಿಪೆಂ ಬಣ್ಣಿಪೆಂ।

## ವೃತ್ತ

......ದಶ ರುದ್ರರಿಂದೆ ಬಳಿಕಂ......।
.... ಪುಟ್ಟಿದ ನೆಂದೆನಲ್ಕೆ ಬಲುಪುಂ ಸಾಮರ್ಥ್ಯಮುಂ ತೇಜಮುಂ॥
.... ಮಿಗೆ ಕೀರ್ತಿ ಪ್ರಭೆಯುಂ ಸ ವತ್ಸಲತೆಯುಂ ಸರ್ವಜ್ಞ ಸಂ ......
ಬರೆ...... ಯೋಗೀಂದ್ರ ಸರ್ವೇ...... ॥

## ವಚನ

ರಾಜಗುರು ಏಕೋಟಿ ಸಮಯ ಚಕ್ರವರ್ತಿ ಸಪ್ತಾ ಹತ್ತುರಿ ಸ್ಥಾನಾಚಾರ್ಯರಪ್ಪ ಸರ್ವೇಶ್ವರ ಶಕ್ತಿ ದೇವರು ಶ್ರೀವಃವಸಂತ ........ ವರ್ಗಾನೀಕ ಪೂಜಾರ್ಚನೋ ............ ಸುಖದಿಂ ತಪೋ ರಾಜ್ಯಂ ಗೆಯ್ಯುತ್ತಮಿರೆ ........ನೈಕಮಲ್ಲ ಸೋಮೇಶ್ವರ ದೇವಂ ವಿಜಯರಾಜ್ಯಂ ಉತ್ತರೋತ್ತರಾಭಿವೃದ್ಧಿ ಪ್ರವೃದ್ಧ ಮಾನಂ........ ತತ್ ಪಾದ ಪದ್ಮ ಜೀವಿ ಮಹಾಮಾತ್ಯ ಶಿಖಾಮಣಿ ಉದಯಾದಿತ್ಯಂ ಲಂಕೇಶ್ವರನಂತೆ ನೆಗಳ್ದ ಬನವಸೆನಾಡಂ ಬಿಂಕದೊಳ್ ಆಳುತ್ತಮಿರ್ಪಲ್ಲಿ

........ಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಲ ಗುಣ ಸಂಪನ್ನರುಂ ಔಪಾಸನಾಗ್ನಿಹೋತ್ರ ದ್ವಿಜ ದೇವತಾ ಪೂಜಾ ತತ್ಪರ ........ಯಾಜನ ಅಧ್ಯಯನ ........ ರಿಗ್ ಯಜುಸ್ಸಾಮಾಥರ್ವಣ ಚತುರ್ವೇದ ವೇಧಾರ್ಥ ತತ್ವಜ್ಞರುಂ, ಸರಸ್ವತೀ ಕರ್ಣಾವತಂಸರುಂ, ನಿರ್ಮಲ ವಾಚಾ ಪ್ರಚಂಡರುಂ, ........ ಬಾಲ ದಿವಾಕರರುಂ...... ನಾಟಕ, ಇತಿಹಾಸ ಮೀಮಾಂಸ ಭರತ, ಗಣಿತ ವಾತ್ಸ್ಯಾಯನಾದಿ ಸಕಲ ಶಾಸ್ತ್ರ ಪ್ರವೀಣರುಂ ಶ್ರೀಮದನಾದಿ ........ ಬಾಣಾಸುರ ಪ್ರತಿಷ್ಠಿತ ಲಿಂಗ ಶ್ರೀಮತ್ ....... ಪಾದ ಪದ್ಮಾರಾಧಕರುಮಪ್ಪ ಶ್ರೀಮದನಾದಿಯಗ್ರಹಾರ ಕುಪ್ಪಟೂರ ಸಾಸಿರ್ವರುಂ ದೇಶಾಧಿಪತಿಗಳುಂ ಮನ್ನೆಯರುಂ ತಮ್ಮೊಳೇಕಸ್ಥರಾಗಿ ....... ಕೊಟ್ಟ ಸ್ಥಲ ವೃತ್ತಿಯ ಸೀಮಾ ಸಂಜ್ಞೆ ಎಂತೆಂದೊಡೆ :—

## ವೃತ್ತ

ಮುನಿದೆರೆ ಸುಂಕ ಗಾಣ ವಾಣ ವ್ಯೆದೆರೆ ಮನ್ನೆಯ ತಿಪ್ಪೆ ಸುಂಕ ಸಂ।
ಮನಿಸುವ ಭೂರಾಗೂಳ್? ಬಾಳೀವ್ವನಂ ಪಡಿವೇದರ್ ಸಲೆ ಪಾಟಕಾಯ ಮ॥
ತ್ತೈನಿಸ...... . ನವ ಪುತ್ರಿಕವಾದಿಯಾಳುವಂ।
ಜನ ......... ಮನ್ನೆಯರ್ ಸಹಿತ ಬಿಟ್ಟರು ತತ್ಪುರದಲ್ಲಿ ಸಂತತಂ ॥

**ಇವುಗಳ ಸಾರಾಂಶ :—**

ಕುಬಟೂರು ಗ್ರಾಮದ ಪೂರ್ವ ದಿಕ್ಕಿನಲ್ಲಿ ಕೋಟೇಶ್ವರ ದೇವಾಲಯವಿರುತ್ತದೆ. ಕೃತಯುಗದ ಆದಿಯಲ್ಲಿ ಬಾಣಾಸುರನು ಪ್ರತಿ

ಷ್ಠಾವಿಧಿಗೆ ಅನುಸಾರವಾಗಿ ಇಲ್ಲಿ ಅನಂತ ಕೋಟೀಶ್ವರ ಎಂಬ ಲಿಂಗವನ್ನು ಪ್ರತಿಷ್ಠಾಪಿಸಿದನು. ಇದು ಅನಂತ ವೈಭವಗಳಿಂದ ಮೆರೆಯುತ್ತಿದ್ದಿತು.

ಹೀಗೆ ಪ್ರಕಾಶಿಸುವ ಲಿಂಗದ ಸ್ಮರಣೆ ಮಾಡುವದರಿಂದ ಆನಂದ ಪಡುವ ಅಂತಃಕರಣವುಳ್ಳವನಾಗಿ, ಶೈವಾಗಮ ಮಾರ್ಗದ ಆಚರಣೆಯು ಳ್ಳವನಾಗಿ ಸರ್ವೇಶ್ವರದೇವ ಅಥವಾ ಸರ್ವೇಶ್ವರ ಶಕ್ತಿದೇವನೆಂಬವನು ಇದ್ದನು ಈತನು ಕಾಮನ ಬಾಣಗಳಿಗೆ ಒಳಪಟ್ಟವನಲ್ಲ ಎಂದರೆ ಮದು ವೆಯಾದವನಲ್ಲ. ಈತನು ಏಕಾದಶ ರುದ್ರರು ಮುಂತಾದವರಿಂದ ಹುಟ್ಟಿದವನೋ ಎಂಬ ಹಾಗೆ ತೇಜಸ್ಸು ಕೀರ್ತಿಪ್ರಭೆ ಮೊದಲಾದವು ಗಳನ್ನು ಉಳ್ಳವನಾಗಿದ್ದನು ರಾಜಗುರುವಾಗಿ ಏಕ್ಕೋಟಿ ಸಮಯ ಚಕ್ರವರ್ತಿಯಾಗಿ ಎಪ್ಪತ್ತೇಳು ಸ್ಥಳಗಳ ಆಚಾರ್ಯನಾಗಿ ಇದ್ದನು.

ಈತನು ತನ್ನ ತಪಸ್ಸಿನ ಸುಖಸಾಮ್ರಾಜ್ಯವನ್ನು ಮಾಡುತ್ತಿರುವ ಕಾಲವಲ್ಲಿ

ಸೋಮೇಶ್ವರದೇವನೆಂಬ ಚಕ್ರವರ್ತಿಯು ಅನೇಕ ರಾಜ್ಯಗಳನ್ನು ಗೆದ್ದು ರಾಜ್ಯಗಳನ್ನು ಹೆಚ್ಚಿಸುತ್ತಾ ಭೂಮಂಡಲವನ್ನು ಪರಿಪಾಲಿಸುತ್ತಿ ದ್ದನು. ಈತನ ಪಾದ ಕಮಲದಲ್ಲಿ ಜೀವಿಸುವವನಾದ ಎಂದರೆ ಆಶ್ರಯದಲ್ಲಿ ಕೆಲಸ ಮಾಡುವಂಥಾ ಉದಯಾದಿತ್ಯನೆಂಬ ಮಂತ್ರಿ ಶಿಖಾಮಣಿಯು ಬನವಸೆಯ ರಾಜ್ಯವನ್ನು ಪಾಲಿಸುತ್ತಿದ್ದನು.

ಹೀಗೆ ಈತನಾಳುತ್ತಿರುವಲ್ಲಿ

ಜಪ ಸಮಾಧಿ ಶೀಲ ಗುಣ ಸಂಪನ್ನರೂ ಯಜನ ಯಾಜನಾದಿ ಷಟ್ಕರ್ಮನಿರತರೂ ಅಗ್ನಿಹೋತ್ರ ಬ್ರಾಹ್ಮಣ ದೇವತಾ ಪೂಜಾತತ್ಪ ರರೂ ವೇದ ಪಾರಗರೂ ವೇದಾರ್ಥ ತತ್ವಜ್ಞರೂ ಸಾಹಿತ್ಯ ಭೂಷಣರೂ ಇತಿಹಾಸವೇ ಮೊದಲಾದ ಶಾಸ್ತ್ರ ಪ್ರವೀಣರೂ ಕುಬಟೂರಿನ ಕೋಟೀಶ್ವರ ಲಿಂಗ ಪೂಜಕರಾದ ಸಾವಿರ ಬ್ರಾಹ್ಮಣರೂ ದೇಶಾಧಿಪತಿಗಳೂ ಮಾಂಡಲಿಕರೂ ಕೂಡಿಕೊಂಡು ಆ ದೇವಸ್ಥಾನಕ್ಕೆ ಸ್ಥಲವೃತ್ತಿಯನ್ನು ಬಿಟ್ಟುಕೊಟ್ಟರು. ಎಂದರೆ ಕೆಲವು ಸುಂಕಗಳನ್ನು ಕೊಡಲು ಗೊತ್ತುಮಾಡಿಕೊಟ್ಟರು. ತೆರೆದ ಮನೆಯ ಸುಂಕ ವ್ಯಾ ಪಾರ ಸುಂಕ ತಿಪ್ಪೆಯ ಸುಂಕ ಮುಂತಾಗಿ ಈ ಸುಂಕಗಳಿದ್ದುವು.

( ಕಡೆಯ ಪದ್ಯ ನೋಡಿರಿ. )

( ಈ ಸಾರಾಂಶದಲ್ಲಿ ಮಾಂಡಲಿಕರೂ ಎಂತ ಇರುವದನ್ನು ಮಾನ್ಯರೂ ಎಂದು ಓದಬೇಕು. )

ವಚನ

ಅಂತು ಶ್ರೀಮದನಂತಕೋಟಿ ನಾಥಂಗೆ ಯಾ ಪುರಮಂ ಸ್ಥಲ ವೃತ್ತಿಯುಮಂ ಸರ್ವಾಭ್ಯಂತರವಾಗಿ ... ದಯಾದಿತ್ಯ ದಂಡನಾಯಕನು ಕೊಟ್ಟ ........ ಕೇಳ್ದು ಸಾಸಿರ್ವರುಮಂ ತದೀಯ ಸ್ಥಾನಾಚಾರ್ಯರುಮಂ ಕರೆಸೆ ಸೋಮೇಶ್ವರ ಚಕ್ರವರ್ತಿಯ ಸಮೀಪಕ್ಕೆ ವಂದು ಕರಕಮಲ ಮುಕುಳಿತ ...

ವೃತ್ತ

ಕೃತಯುಗದಾದಿ ಲಿಂಗ .... ಕುಪ್ಪಟೂರಿನೊಳ್ ।
ಸತತವನಂತಕೋಟಿ ಗಿರಿಜೇಶ್ವರನುಂ ನೆಲಸಿರ್ಪನಾವಗಂ ॥
ಕ್ಷಿತಿಯೊಳುದರ್ಗ? ಪುಣ್ಯನಿಲಯಂ ನೆರೆ ದೃಷ್ಟ ...... ।
.... ತಿಶಯ ಮಪ್ಪ ಧರ್ಮ ...... ಭೂಪತೀ ॥

ವಚನ

ಎಂದು ಬಿನ್ನಪಂ ಗೆಯ್ಯಲ್ ಅದನೆ ಮನದೆಗೊಂಡು ಸ್ವಸ್ತಿ ಶ್ರೀ ಶಕ ವರ್ಷದ ೯೯೩ — ಸಾಧಾರಣ ಸಂವತ್ಸರದ ಚೈತ್ರದ ಅಮಾವಾಸ್ಯೆ ಆದಿತ್ಯವಾರ .... ತ್ತರಾಯಣ ಸಂಕ್ರಮಣದ ಪುಣ್ಯ ತಿಥಿಯೊಳು ಧಾರಾ ಪೂರ್ವಕದಿಂ —

ವೃತ್ತ

ಧರಣೀ ವಲ್ಲಭ ಸೋಮದೇವ ನೃಪ ಚಕ್ರೇಶಂ ಮನೋರಾಗದಿಂ ।
ಪರಮ ಶ್ರೀಮದನಂತಕೋಟಿ ಭುವನೇಶಂಗಂಗರಂಗಕ್ಕೆ ವಿ ॥
ಸ್ತರ ಧವಳಪಾತ್ರ ಪೌಲ ಮಹಾಪ್ರಸಾದ ಕೂಟಕ್ಕೆ ಬಿ ।
ತ್ತರದಿಂದಂ ಕೆರೆಹಳ್ಳಿಯುಂ ಬೆರಸು ಪುಂಡ ಗ್ರಾಮಮಂ ಕೊಟ್ಟನಂ ॥

ವಚನ

ಅಂತು ಧಾರಾಪೂರ್ವಕದಿಂ ಪುಂಡವರ್ಧನಮಂ ಕೆರೆಹಳ್ಳಿಯಂ..... ಧರ್ಮಮಂ ಸಾಸಿರ್ವರ್ಗಂ ಉದಯಾದಿತ್ಯಂಗಂ ಪ್ರತಿಪಾಲಿಸುವದೆಂದು

ನಿಯಮಿಸಿ ಯಶೋವೃದ್ಧಿಯಂ ಪುಣ್ಯವೃದ್ಧಿಯುಮಂ ಸಾಧಿಸಿ ಕೃತಾರ್ಥನಾದಂ

ಇವುಗಳ ಸಾರಾಂಶ :—

ಹೀಗೆ ಕುಬಟೂರಿನ ಸ್ಥಳದ ವೃತ್ತಿಯನ್ನು ಏನೂ ಉಳಿಸಿಕೊಳ್ಳದಂತೆ ತನ್ನ ಕೈಕೆಳಗಿನ ದಂಡನಾಯಕ ( ಢಣಾಯಕ ) ನಾದ ಉದಯಾದಿತ್ಯನು ಕೋಟಿನಾಥನಿಗೆ ಕೊಟ್ಟನೆಂಬುದನ್ನು ಕೇಳಿ ಸೋಮೇಶ್ವರ ಚಕ್ರವರ್ತಿಯು ಸಾವಿರ ಲಿಂಗ ಪೂಜಕರನ್ನೂ ಆ ಸ್ಥಾನದ ಆಚಾರ್ಯರನ್ನೂ ಕರೆಸಲು

ಅವರು ಕೈ ಮುಗಿದು

ಕೃತಯುಗದ ಆದಿ ಲಿಂಗವು ಕುಪ್ಪಟೂರಿನಲ್ಲಿ ಇದೆ ಅದಕ್ಕೆ ಅತಿಶಯವಾದ ಧರ್ಮ ಮಾಡಿರಿ ಎಂದು ವಿಜ್ಞಾಪಿಸಲು

ಶಾಲಿವಾಹನ ಶಕ ೯೫೩ ರಲ್ಲಿ ಆ ಕೋಟಿಲಿಂಗದ ಅಂಗ ರಂಗ ಮುಂತಾದ ಕಾರ್ಯ ವಿನಿಯೋಗಕ್ಕೆ ಕೆರೆಹಳ್ಳಿಯನ್ನೂ ಪುಂಡ (ಪುಂಡವರ್ಧನ) ಎಂಬ ಗ್ರಾಮವನ್ನೂ ಬಿಟ್ಟುಕೊಟ್ಟನು.

.....................

ಸ್ವಸ್ತಿ ಸಮಧಿಗತ ಪಂಚಮಹಾಶಬ್ದಂ ಮಹಾಮಂಡಲೇಶ್ವರಂ ಜಯಂತಿ ಮಧುಕೇಶ್ವರ ದೇವರ ಲಬ್ಧ ವರಪ್ರಸಾದ ಸಾಹಸೋತ್ತುಂಗ ಸತ್ಯ ರಾಧೇಯ .... ಗತ ವಜ್ರ ಪಂಜರ ಕಾದಂಬ ಕುಲ ಕಮಲ ಮಾರ್ತಂಡ ಕದನಪ್ರಚಂಡನುದ್ದಂಡ ಮಾಂಡಲಿಕ ಗಂಡ ಗರ್ವ ಶುಂಡಾಲ ಮಸ್ತಕ ಪಿಂಡ ಖಂಡನ ಕಂಠೀರವ ಇತ್ಯಾದ್ಯನೇಕ ನಾಮಾ ....

ವೃತ್ತ

:...., ಕಾದಂಬ ಚಕ್ರೇಶ್ವರ ಹರ ..... ಭಾಲನೇತ್ರೋ ।
ದ್ಭಾವಮಂ ಸದ್ವಂಶ ರಾವಮಂ ನಿಜ ಭುಜ ಬಲ ವದ್ವಿಕ್ರಮಂ ವಿಕ್ರಮಾಂಕಂ॥
ಸೋಮ ಪ್ರದ್ಯೋತ ಕೀರ್ತಿ ಪ್ರಕಟಿತ ದಶ ದಿಗ್ ಭಿತ್ತಿ ...... ।
..... ಕಾಮದೇವ ಕ್ಷಿತಿಪತಿ ಗುಣನಾತೀತ ತೇಜಃಪ್ರತಾಪಂ ॥

## ವಚನ

ಅಂತು ಪೊಗಳ್ತೆಗಂ ನೆಗಳ್ತೆಗಂ ನೆಲೆಯಾದ ಕಾದಂಬ ಚಕ್ರೇಶ್ವರ ಕಾಮದೇವ ಮಹೀಭುಜಂ ಗುತ್ತಿಯೊಳ್ (ಚಂದ್ರಗುತ್ತಿ?) .... ತತ್ ಪಾದ ಪದ್ಮೋಪಜೀವಿ ಸಮಸ್ತ ವಸ್ತು ವಿಸ್ತೀರ್ಣ ಘೂರ್ಣಿತಾರ್ಣವ ಗಂಭೀರ ಚತುರ್ವಿಧ ಪುರುಷಾರ್ಥ ಸಾರ ಮಂತ್ರಿ ಮಾಣಿಕ್ಯ ನೀತಿ ಚಾಣಕ್ಯ ನಿಯೋಗ ಯೋಗಂಧರಂ ಪತಿ ಕಾರ್ಯ ಧುರಂಧರ ನಿಯೋಗಾಧಿಪತಿ ಸಕಲ ಲಕ್ಷ್ಮೀ ಪತಿ ವಿವಿಧ ಸಾಹಿತ್ಯ ವಿದ್ಯಾಧರನಖಿಲ ಬುಧ ಜನಾಧಾರ ಭೂದೇವತಾ ಕುಲ ಪವಿತ್ರ ಅಗಣಿತ ಪುಣ್ಯಗಾತ್ರ ನೆನಿಸಿದ ಸೋವಿದೇವ ದಂಡಾಧೀಶ್ವರ ........ ಪ್ರಭಾವೋನ್ನತಿ ಎಂತೆಂದೊಡೆ :—

## ಮಾಲಿನೀ ವೃತ್ತ (ಸಂಸ್ಕೃತ)

ಅಗಳಿ (ಣಿ?) ತ ಗುಣಧಾಮೋ ವಿಪ್ರ ವಂಶೇ ಲಲಾಮಃ ।
ಮೃಗ ಧರ ನಿಭ ಕೀರ್ತಿರ್ ಯಾಚಕಾಧಾರ ಮೂರ್ತಿಃ ॥
ಸು .... ರಿತ ಕೃತ ಪುಣ್ಯಃ ಸಜ್ಜನಾನಾಂ ವರೇಣ್ಯಃ ।
ಮುಗು ..... ಭಾವಃ ಭಾಸತೇ ಸೋಯಿದೇವಃ ॥

## ವೃತ್ತ

ಕುಲದೈವಂ ಗಿರಿಜೇಶನಾದಿ ಕೃತಲಿಂಗಂ ಕೋಟಿನಾಥಾಹ್ವಯಂ ।
ಸಲೆ ತಾನೀಶ್ವರ ಕಾಮ ದೇವ ಮಹಿಪಂ ಕಾದಂಬ ಚಕ್ರೇಶ್ವರಂ ।
ಕುಲವತ್ಯುನ್ನತ ವಿಪ್ರವಂಶಮೆನಲಿಂತೀ ಸ್ವಾಮಿ ದಂಡೇಶನಂ ।
ಗೆಲೆವಂದರ್ ಪೆರರಾರೊ ಭೂತಲದೊಳಂ ನಾಣ್ಗೆಟ್ಟ ದುರ್ಮಂತ್ರಿಗಳ್ ॥

ಪಲಕಾಲಂ ಪರಿಪಟ್ಟು ಪೋದುದಿದು ಜೀರ್ಣೋದ್ಧಾರಮಂ ಮಾಡಿ ಭೂ ।
ತಲದೊಳ್ ಕೀರ್ತಿಯುಮೊಂದನೂನವರ ...... ಸಾಧಿಪೆಂ ॥
ಪಲವರ್ಕೆಂದು ತದೀಯ ದೇವ ಭವನಂ ..... ಬಂದಾದಿ ...... ।
ಪಲವುಂ ಚಿತ್ರ ವಿಚಿತ್ರದಿಂ ರಚಿಸಿದಂ ಸ್ವಾಮೀಶನುದ್ದಾಮನು ।

## ವಚನ

ಅಂತು ಸ್ವಾಮಿದೇವ ದಂಡಾಧಿಪಂ ಶ್ರೀಮದನಂತ ಕೋಟೀಶ್ವರ ದೇವರ ಜೀರ್ಣೋದ್ಧಾರಮಂ ಮಾಡಿ ಸುವರ್ಣ ಕಲಶ ಪ್ರತಿಷ್ಠಾ ........ ದೇವರಂಗ ರಂಗಭೋಗಕ್ಕಂ ನಂದಾವುಲ ಪಾತ್ರ ಪಾವೂಲಕ್ಕಂ ನೈವೇ

ದ್ಯಕ್ಕಂ ಜೀರ್ಣೋದ್ಧಾರಕ್ಕ ವೀ ಧರ್ಮವಾಚಂದ್ರಾರ್ಕ ತಾರಂಬರಂ ಸಲುವಂತು ತನ್ನ ಸ್ವಾಮಿ ದೇವ ಚಕ್ರೇಶ್ವರನನುಮತ್ಯಾದಿ —

### ವೃತ್ತ

ಶ್ರೀ ಸರ್ವೇಶ್ವರ ಶಕ್ತಿದೇವರ ಪದಾಂಭೋಜಂಗಳಂ ಕರ್ಚಿಯಿಂದಾ।
ಸಾಸಿರ್ವರ್ ನೆಗಳ್ತೆ ಯೆಂಬಿನೆಗ ಧಾರಾಪೂರ್ವಕಂ ಕೊಟ್ಟ ಧ ॥
ರ್ಮಾಸಾರಂ ಕಲಿ ಸೋಯಿದೇವ...... ದಂಡಾಧೀಶ್ವರಂ ಸಿಕ್ಷಲಂ।
ಭೂ ಸಾರಂ ಬೆನವೂರ ನುರ್ವಿವನಿತಾ ಶೃಂಗಾರ ಹಾರಾಂಕವಂ ॥

### ವಚನ

ಅಂತು ತನ್ನ ಕುಲಸ್ವಾಮಿಯಪ್ಪ ಅನಂತಕೋಟಿನಾಥಂಗೆ ಜೀರ್ಣೋದ್ಧಾರಮಂ ಮಾಡಿ ಬೆನವೂರ ಸರ್ವಾಭ್ಯಂತರವಾಗಿ ಕಾವ ದೇವರ್ಗೆ ಬಿಡಿಸಿಯನೂನ ಧರ್ಮಮಂ ಸಾಧಿಸಿ ಕೃತಾರ್ಥನಾದಂ

**ಇವುಗಳ ಸಾರಾಂಶ :—**

ಐದು ವಿಧ ವಾದ್ಯಗಳ ಮರ್ಯಾದೆಯನ್ನು ಪಡೆದಿದ್ದ ಜಯಂತಿ ಮಧುಕೇಶ್ವರನಿಂದ ವರ ಪಡೆದು ಸಾಹಸವಂತನಾದ ಕಾದಂಬ ಕುಲಮಣಿಯಾದ ಕಾದಂಬ ಚಕ್ರೇಶ್ವರ ಕಾಮದೇವನೆಂಬುವವನು ಶಿವಮೊಗ್ಗಾ ಡಿಸ್ಟ್ರಿಕ್ಟು ಸೊರಬದ ತಾ॥ ಚಂದ್ರಗುತ್ತಿಯಲ್ಲಿ ರಾಜ್ಯಭಾರ ಮಾಡಿಕೊಂಡಿದ್ದನು.

ಆತನ ಕೈಕೆಳಗೆ ದಂಡನಾಯಕ ( ಮಂತ್ರಿ ) ನಾಗಿ ಸೋಯಿ ( ಸ್ವಾಮಿ ) ದೇವನೆಂಬುವವನಿದ್ದನು. ಇವನು ವಿಶೇಷ ಗುಣಶಾಲಿಯಾಗಿಯೂ ಬ್ರಾಹ್ಮಣ ವಂಶದಲ್ಲಿ ತಿಲಕ ಪ್ರಾಯನಾಗಿಯೂ ಯಾಚಕರಿಗೆ ಆಧಾರನಾಗಿಯೂ ಸಜ್ಜನರಲ್ಲಿ ಶ್ರೇಷ್ಠನಾಗಿಯೂ ಇದ್ದನು.

ಈತನು ಈ ದೇವಾಲಯವು ಬಹಳ ಕಾಲದಿಂದಲೂ ಸಿಥಿಲವಾಗಿ ಬಿದ್ದು ಹೋಗುವಂತಿದೆ ಇದನ್ನು ಜೀರ್ಣೋದ್ಧಾರ ಮಾಡಬೇಕೆಂದು ಆಲೋಚಿಸಿ, ನಂತರ ಹಾಗೆ ಸರಿಪಡಿಸಿ ಕಟ್ಟಿಸಿ ಭಂಗಾರದ ಕಲಶ ಪ್ರತಿಷ್ಠಿಸಿ ದೇವರ ಅಂಗರಂಗ ಭೋಗಕ್ಕೆ ನಂದಾದೀವಿಗೆ ನೈವೇದ್ಯ ಮೊದಲಾದವುಗಳಿಗಾಗಿ ತನ್ನ ಒಡೆಯನಾದ ಕಾಮದೇವನ ಅಪ್ಪಣೆಯನ್ನು ಪಡೆದು ಸರ್ವೇಶ್ವರ ಶಕ್ತಿದೇವರ ಪಾದ ಕಮಲಗಳನ್ನು ತೊಳೆದು ( ಪಾದಪೂಜೆ ಮಾಡಿ ) ಸಾವಿರ ಬ್ರಾಹ್ಮಣರೂ ಪ್ರಸಿದ್ಧಿ ಎಂಬಂತೆ ಧಾರೆ ಎರೆಯುತ್ತಿರಲು, ಒಳ್ಳೆಯ ಗ್ರಾಮವಾದ ಬೆನವೂರು ಸರ್ವಸ್ವವನ್ನು ಧರ್ಮವನ್ನು ಬಿಡಿಸಿ ತನ್ನ ಅಪೇಕ್ಷೆಯನ್ನು ತೀರಿಸಿಕೊಂಡನು.

......................

ಸ್ವಸ್ತಿ ಸಮಧಿಗತ ಪಂಚಮಹಾ ಶಬ್ದಂ ದ್ವಾರಾವತಿಪುರವರಾಧೀಶ್ವರಂ ವಿಷ್ಣು ವಂಶೋದ್ಭವಂ ಯಾದವ ಕುಲ ಕಮಲ ಕಾಲಿಕಾ ವಿಕಾಸ ಭಾಸ್ಕರಂ ಅರಿರಾಯ ಜಗಝಂಪ, ಮಾಳವರಾಯ ಮದನ ತ್ರಿನೇತ್ರ, ಗುಜ್ಜರರಾಯ ಭಯಂಕರಂ, ತೆಲುಂಗರಾಯ ಸ್ಥಾಪನಾ ಚಾರ್ಯ ಇತ್ಯಾದಿ ನಾಮಾವಳಿ ಸಮಲಂಕೃತ ಶ್ರೀಮತ್ ಪ್ರೌಢ ಪ್ರತಾಪ ಚಕ್ರವರ್ತಿ —

ಕಂದ

ವೆಲ್ಲುಗಿ ದೇವ ತನೂಜಂ ।
ಭಿಲ್ಲಮನಾ ಭಿಲ್ಲಮಂಗೆ ಪುಟ್ಟಿದನಧಟಂ ॥
ಬಲ್ಲಿದ ಜೈತುಗಿಯವನಿಂ ।
ಸಲ್ಲಲಿತಂ ಜನಿಸಿ ನೆಗಳ್ದ ಸಿಂಹಣ ಭೂಪಂ ॥

ಅಂತಾ ಸಿಂಹಣ ಪ್ರತಾಪಮೆಂತೆಂದೊಡೆ :—

ವೃತ್ತ

ಛಲದಿಂ ಧಾತ್ರಿಯೊಳುಳ್ಳ ಭೂಭುಜರುಮಂ ದೋರ್ವಿಕ್ರ ಮೋದ್ಯತ್ ಶಿಖೋ ।
ಜ್ವಲನಿಂದಂ ನೆರೆ ಸುಟ್ಟು ವೈರಿ ಲಲನಾ ವೈಧವ್ಯಮಂ ಮಾಡಿ ಕುಂ ॥
ದ ಲತಾಂತೋಜ್ವಲ ಕೀರ್ತಿಯಂ ಮೆರೆದು ಪಾರಾವಾರ ಪರ್ಯಂತ ಮಾ ।
ರ್ತಲೆಯಿಲ್ಲೆಂಬ ನೆಗಳ್ತೆ ವೆತ್ತನತುಳಂ ಶ್ರೀ ಸಿಂಹಣೋರ್ವೀಶ್ವರಂ ॥

ಗಿರಿದುರ್ಗಂ ವನದುರ್ಗಮಾಯ್ದ ಜಲದುರ್ಗಾನೇಕ ದುರ್ಗಂಗಳಂ ।
ಭರದಿಂ ಸುತ್ತಲು ಮುತ್ತಲುಂ ಸುಡಲು ಕಾಡಲ್ಕಿಲ್ಲಮೆಂಬಂತೆ ನಿರ್ ।
ಭರದಿಂ ಸಾಧಿಸಿ ಮೂರು ರಾಯರಧಟಂ ಕಿತ್ತಿಕ್ಕಿ ರಾಜ್ಯಾಂಗನಾ ।
ತರಳಾಪಾಂಗ ಸುಖಾವಲೋಕನದಿನಿರ್ಪಂ ಸಿಂಹಣೋರ್ವೀಶ್ವರಂ ॥

ವಚನ

ಮತ್ತಮಾ ಪ್ರತಾಪ ಲಂಕೇಶ್ವರನೀಶ್ವರ ಸಮಾರಾಧನೋಪಚಾರ ಚಾರು ಚರಿತ ಗುಣಗಣ ಗಣನಾತೀತ ಭುಜ ಬಲ ಪರಾಕ್ರಮ ಕಮಲಯುಗಳ ವಿನಮಿತಾಖಿಲ ರಾಜ ರಾಜ ವಿದ್ಯಾಧರ ಧರಣೀ ಪಾಲ

ಕುಳ ಕಮಳ ಮಾರ್ತಾಂಡನೆನಿಸಿ ವಿಜಯ ರಾಜ್ಯಂ ಉತ್ತರೋತ್ತರಾಭಿ ವೃದ್ಧಿಯಿಂ ಸಲುತ್ತುಮಿರೆ,
ತತ್ ಪಾದ ಪದ್ಮೋಪಜೀವಿ :—

ಕಂದ

ಸಂಗರದೊಳತುಳ ಭುಜ ಬಲ ।
ತುಂಗಂಗೆಣೆಯಾರೋ ಪರಮ ವಿಶ್ವಾಸಿಯೊಳಂ ॥
ಭಂಗ ವಿರಹಿತನು ಬಿರುದರ ।
ಕಂಗಳ ಮುಳ್ಳೆನಿಸಿ ನೆಗಳ್ದನಾ ಹಿರ ಜೈತಂ ॥

ವಚನ

ಅಂತು ನೆಗಳ್ದಾ ಹಿರ ಜೈಟುಗಿ ದೇವ, ಹಿರಿಯ ಬಳ್ಳಿಗಾವೆಯ ನೆಲವೀಡಿನೊಳಿರ್ದು ಜಿಡ್ಡುಲಿಗೆ ಮುಖ್ಯವಾದ ದಕ್ಷಿಣ ದಿಶಾವರಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಲನದಿಂ ಪಾಲಿಸುತ್ತುಮಿರ್ದು

ವೃತ್ತ

ಪೌರಾಣೋಕ್ತದೊಳಾದಿ ಲಿಂಗವಿದು ದಿವ್ಯ ಕ್ಷೇತ್ರವೀ ಧರ್ಮಮಂ ।
ಸಾರಂ ಮಾಡಿಸಿ ಪುಣ್ಯವಂ ನೆರಪುವೆಂ ಪೋಮಾಣ್ ಬಿಡಿಲ್ಲೆಂದು ಗಂ ॥
ಭೀರ ........ ಯ್ ಆಗಲಂತೆ ಪರಮ ಶ್ರೀ ಕೋಟಿನಾಥಂಗೆ ತಾಂ ।
ಧಾರಾಪೂರ್ವಕದಿಂದೆ ಚಿಕ್ಕ ಶಕುನ ಸ್ವಗ್ರಾಮಮಂ ಕೊಟ್ಟಪಂ ॥

ವಚನ

ಅಂತು ಚಿಕ್ಕ ಶಕುನಮಂ ಶ್ರೀ ಕೋಟಿನಾಥಂಗೆ ಯಾಹಿರ ಜೈಟುಗಿ ದೇವಂ ಕೊಟ್ಟು ವಿಶೇಷ ತರಮಪ್ಪ ಗಣ್ಯ ಪುಣ್ಯಮಂ ಸಾಧಿಸಿ ದನಾ ಮಹಾ ಪುರುಷನ ಧರ್ಮಮಂ ಕೇಳ್ದು —

ಕಂದ

ಅರಿ ಬಿರುದ ಮದ ನಿವಾರಣ ।
ಪರಬಲ ವಿಜಯಂ ನಿಜೇಶ ಸಿಂಹಣ ಭೂಮೀ ॥
ಶ್ವರನ ಪರಮ ವಿಶ್ವಾಸಿಯು ।
ನಿರುಪಮ ಪೋಟಾರ ನಾಯಕಂ ಭುಜ ವೀರ್ಯಂ ॥

ವಚನ

ಅಂತೆನಿಸಿದ ಪೋಟಾರನಾಯಕಂ ವೈರಿ ಮಂಡಲಮಂ ದಂಡಧರ ಗ್ರಾಸಮನಿಟ್ಟು ಭುಜ ಬಲ ಪರಾಕ್ರಮಂ ತಿಳುವಳ್ಳಿಯ ನೆಲವೀಡಿನೊಳು ನಾಗರ ಖಂಡಮಂ ಪ್ರತಿಪಾಲಿಸುತ್ತಿರ್ದು —

ಕಂದ

ಕೃತಯುಗದಾದಿಯ ಲಿಂಗಂ ।
ಶೃತಿ ದೂರಂ ಕೋಟಿನಾಥ ಪಾರ್ವತಿ ರಮಣಂ ॥
ಸ್ತುತಿವೆತ್ತಾಶ್ರಯಮೆಂದಾ ।
ಮತಿವಂತಂ ಧರ್ಮ ಬುದ್ಧಿಯಂ ಚಿಂತಿಸಿದಂ ॥

ಅಂತು ನೆನೆದು :—

ಧಾರಾಪೂರ್ವಕದಿಂದಂ ।
ಕಾರುಣ್ಯ ........ ಕೋಟಿನಾಥ ಮಹೇಶಂ ॥
ಗೋರಂತಿರಾಲಹಳ್ಳಿಯ ।
ಸಾರತರಂ ಕೊಟ್ಟು ಧರ್ಮಮಂ ನಿರ್ಮಿಸಿದಂ ॥

ವಚನ

ಅಂತು ಪೋಟಾರ ನಾಯಕಂ ಆಲಹಳ್ಳಿಯಂ ಬಿಟ್ಟು ಇಹತ್ರಿಯ ಸುಖಮಂ ಪರತ್ರಿಯ ಗತಿಯಂ ಪಡೆದಂ

**ಇವುಗಳ ಸಾರಾಂಶ :—**

ಐದು ವಿಧ್ಯ ವಾದ್ಯಗಳ ಬಿರುದುಳ್ಳ ದ್ವಾರಾವತೀ ದೇಶದ ಅಧಿಪತಿಯೂ ವಿಷ್ಣು ವಂಶದಲ್ಲಿ ಉತ್ಪನ್ನನಾದವನೂ ಯಾದವ ಕುಲವನ್ನು ಆನಂದಪಡಿಸುವವನೂ ಶತೃ ರಾಜರನ್ನು ಜಯಿಸಿದವನೂ ಮಾಳವ ರಾಯ ಗುಜ್ಜರ ರಾಯರನ್ನು ಜಯಿಸಿ ತೆಲುಂಗ ರಾಜ್ಯ ಸ್ಥಾಪನೆ ಮಾಡಿದವರಲ್ಲಿ ಮುಖ್ಯನೂ ಆದ ಪ್ರೌಢ ಪ್ರತಾಪ ಚಕ್ರವರ್ತಿ ಸಿಂಹಣನೆಂಬುವವನು ಇದನು. ಇವನು ಪ್ರತಾಪಶಾಲಿಯಾಗಿ ಬಹಳ ಕೀರ್ತಿ

ಯನ್ನು ಪಡೆದಿದ್ದನು. ಈತನು ಈಶ್ವರಾರಾಧಕನಾಗಿ ರಾಜ್ಯಗಳನ್ನು ಗೆದ್ದು ಮುಂದೆ ಮುಂದೆ ಅಭಿವೃದ್ಧಿ ಮಾಡುತ್ತಾ ಇರಲು

ಆತನ ಪಾದ ಕಮಲದಿಂದ ಉಪಜೀವಿಸುವಂಥಾ ಎಂದರೆ ಆತನ ಆಶ್ರಯದಲ್ಲಿ ಇರುವ ಹಿರ ಜೈಟುಗಿ ದೇವ, ( ಸೊರಬದ ತಾಲ್ಲೂಕಿನಲ್ಲಿ ಇರುವ ಹಿರೇಚವಟಿ ಎಂಬ ಗ್ರಾಮವು ಇವನ ಹೆಸರಿನ ನೆನಪಿನದಾಗಿರಬಹುದು. } ಈತನು ಪುರಾಣದಲ್ಲಿ ಹೇಳಿದ ಪ್ರಕಾರ ಇದು ಆದಿ ಲಿಂಗವು ಇದು ದಿವ್ಯ ಕ್ಷೇತ್ರವು, ಇದನ್ನು ಉತ್ತಮ ಪಡಿಸಿ ಪುಣ್ಯವನ್ನು ಸಾಧಿಸುತ್ತೇನೆ ಎಂದು ಆಲೋಚಿಸಿ ಹಾಗೆ ಸರಿಪಡಿಸಿ ಕೋಟನಾಥನಿಗೆ ಚಿಕ್ಕ ಶಕುನ ಗ್ರಾಮವನ್ನು ಬಿಟ್ಟುಕೊಟ್ಟನು.

ಹೀಗೆ ಕೋಟಿನಾಥನಿಗೆ ಜೈಟುಗಿ ದೇವನು ಮಾಡಿದ ಧರ್ಮವನ್ನು ಕೇಳಿ ತಿಳುವಳ್ಳಿ ಎಂಬ ಗ್ರಾಮದಲ್ಲಿ ಇದ್ದು ನಾಗರಖಂಡವನ್ನು ಪಾಲಿಸುತ್ತಾ ಇದ್ದ ಪೋಬಾರ ನಾಯಕನು ಆಲಹಳ್ಳಿ ಎಂಬ ಗ್ರಾಮವನ್ನು ಧರ್ಮಕ್ಕೆ ಕೊಟ್ಟು ಈ ರೋಕದ ಸುಖವನ್ನೂ ಪರಲೋಕದ ಗತಿಯನ್ನೂ ಪಡೆದನು.

....................

ಈ ಹಿಂದೆ ಪ್ರಕಟಿಸಿಸಶಾಸನ ಭಾಗಗಳನ್ನು ನೋಡುವಲ್ಲಿ— ಅನಂತ ಕೋಟೀಶ್ವರ, ಕೋಟಿನಾಥ, ಕೋಟಿಶಿವ ಅಥವಾ ಕೋಟಿಲಿಂಗ ಎಂಬ ಸಮಾನವಾದ ಅರ್ಥವುಳ್ಳ ಹೆಸರಿನಿಂದ ಒಂದು ಲಿಂಗವಿರುತ್ತಿದ್ದಿತೆಂದೂ ಇದಕ್ಕೆ ರಾಜರೇ ಮೊದಲಾದವರಿಂದ ಬಹಳ ಗೌರವವು ಕೊಡಲ್ಪಡುತ್ತಿದ್ದಿತೆಂದೂ ಸ್ಪಷ್ಟವಾಗಿ ತಿಳಿಯಬರುತ್ತದೆ.

ಪ್ರಸಿದ್ಧನಾದ ಹಂಪೆಯ ಹರೀಶ್ವರ ಕವಿಯು (ಈತನು ಬಸವೇಶ್ವರನ ಸಮಕಾಲದವನು) ಪುರಾತನರೇ ಮೊದಲಾದವರ ರಗಳೆಗಳನ್ನು ಬರೆದಿರುತ್ತಾನೆ. ವೀರಶೈವರಲ್ಲಿ ಪೂರ್ವದಲ್ಲಿ ಮಹಿಮರಾದವರ ವಿಷಯಗಳನ್ನೂ ಕನ್ನಡ ಗ್ರಂಥಗಳ ರೂಪವಾಗಿ ಪ್ರಕಟಿಸುವದಕ್ಕೆ ಇವನೇ ಮೊದಲನೆಯ ಕವಿ ಎಂದು ಹೇಳುವುದಕ್ಕೆ ಏನೂ ಅಭ್ಯಂತರವಿಲ್ಲವೆಂದು ತೋರುತ್ತದೆ. ಇವನ ಕಾವ್ಯಗಳನ್ನು ಅನುಸರಿಸಿ ಅನೇಕ ವೀರಶೈವರು ಇವನಿಂದೀಚೆಗೆ ಗ್ರಂಥಗಳನ್ನು ಬರೆದಿರುತ್ತಾರೆ. ವಿರೂಪಾಕ್ಷಸಿದ್ಧನು ಶ್ರೀ ರೇವಣಸಿದ್ಧೇಶ್ವರನ ಬಳಿಗೆ ಬಂದು ಮೂರುಕೋಟಿ ಲಿಂಗಗಳನ್ನು ಮತ್ಸ್ಯಕೇಶ್ವರದಲ್ಲಿ ಪ್ರತಿಷ್ಠೆ ಮಾಡಬೇಕೆಂದು ಕಲ್ಯಾಣದಲ್ಲಿ ಮಾಯಿದೇವಿಯ ಮನೆಯಲ್ಲಿ ಇದ್ದಾಗ ಪ್ರಾರ್ಥಿಸಿಕೊಂಡದ್ದರಿಂದ ಆತನ ಅಪೇಕ್ಷೆಯ ಮೇರೆಗೆ ಹೋಗಿ, ಸ್ಥಾಪಿಸಿಕೊಟ್ಟು ಬಂದನೆಂದು ಹರೀಶ್ವರನ ರಗಳೆಯಲ್ಲಿ ಬರೆದಿರುತ್ತದೆ. ಈ ಕವಿಯ ಗ್ರಂಥವು ಪ್ರಕಟವಾದ ಮೇಲೇನೇ ಶಿವಯೋಗಿಯು ವೀರಶೈವರ ಪ್ರಾಮಾಣ್ಯ ಗ್ರಂಥವಾದ ಸಿದ್ಧಾಂತ ಶಿಖಾಮಣಿ ಎಂಬ ಸಂಸ್ಕೃತ ಗ್ರಂಥವನ್ನು ಬರೆದಿರುತ್ತಾನೆ. ಇದನ್ನು ಸರ್ವ ವೀರಶೈವರೂ ಪ್ರಾಮುಖ್ಯವೆಂದು ತಿಳಿದಿರುತ್ತಾರೆ. ಆದರಂತೆ ರೇವಣ ಸಾಂಗತ್ಯ ಎಂಬ ಗ್ರಂಥದಲ್ಲಿಯೂ ವಿರೂಪಾಕ್ಷಪ್ಪನು ಕೋಟಿಲಿಂಗ ಪ್ರತಿಷ್ಠಾಪನೆಗೆ ಕಾರಣನೆಂದು ಬರೆದಿರುವುದರಿಂದ ಈತನೂ ಪ್ರಾಯಶಃ ಮೇಲೆ ಕಂಡ ಹರಿಹರನ ಕಾವ್ಯವನ್ನೇ ನೋಡಿ ಬರೆದನೆಂದು ತಿಳಿಯಬಹುದಾಗಿದೆ.

ಮೇಲೆ ಕಂಡ ಕುಪಟೂರು ಅಥವಾ ಕುಬಟೂರಿನಲ್ಲಿ ಇರುವ ಕೋಟಿಲಿಂಗವನ್ನು ಬಾಣಾಸುರನು ಪ್ರತಿಷ್ಠೆ ಮಾಡಿದನೆಂದೂ ಈ ರೀತಿ ಪುರಾಣದಲ್ಲಿ ಹೇಳಲ್ಪಟ್ಟಿರುವದನ್ನು ನಂಬಿ ಸೋಯಿದೇವನೇ ಮೊದಲಾದ

ವರು ಉಂಬಳಿಯ ಗ್ರಾಮಗಳನ್ನು ಇದಕ್ಕೆ ಬಿಟ್ಟುಕೊಟ್ಟರೆಂದೂ ತಿಳಿಯಬರುವದರಿಂದ ರಾವಣಾಸುರನು ಪ್ರತಿಷ್ಠಾಪಿಸಿದ ಆರುಕೋಟಿ ಲಿಂಗಗಳು ಇಂಥವುಗಳೇ ಆಗಿರುತ್ತವೆ, ಎಂದು ಹೇಳಲು ಯಾವ ಸಂಶಯವೂ ಬರುವುದಿಲ್ಲ. ಈಗ ಶ್ರೀಶೈಲದಲ್ಲಿ ಕೋಟಿಲಿಂಗವೆಂದು ಕರೆಯಲ್ಪಡುವಂಥ ಒಂದು ಲಿಂಗವು ಇರುವದಾಗಿಯೂ. ಇದು ಬಹಳ ಸಣ್ಣ ಸಣ್ಣ ಲಿಂಗಗಳ ಮಧ್ಯದಲ್ಲಿ ಒಂದು ದೊಡ್ಡ ಲಿಂಗವಿದ್ದು ಒಂದೇ ಲಿಂಗವಾಗಿ ಕಾಣಲ್ಪಡುವಂತೆ ಪ್ರತಿಷ್ಠಾಪಿಸಲ್ಪಟ್ಟದ್ದಾಗಿಯೂ ಇರುತ್ತದೆಂದು ತಿಳಿದು ಬಂದಿರುತ್ತದೆ. ಆದ್ದರಿಂದ ಈ ವಿರೂಪಾಕ್ಷಪ್ಪನು ಪ್ರತಿಷ್ಠೆ ಮಾಡಿಸಿದ ಮೂರು ಲಿಂಗಗಳು ಈ ಕೋಟಿಲಿಂಗಗಳೇ ಎಂದು ಅನುಮಾನವಿಲ್ಲದೆ ಹೇಳಬಹುದು.

ಇದರಂತೆಯೇ ಉಪನಿಷತ್ತುಗಳಲ್ಲಿ ೬೮ ಕೋಟಿ ತೀರ್ಥಗಳುಂಟೆಂದು ಬರೆಯಲ್ಪಟ್ಟಿರುತ್ತದೆ. ಕೆಲವು ಕಡೆಯಲ್ಲಿ ೬೮ ತೀರ್ಥಗಳಿವೆ ಎಂದು ಬರೆದಿರುತ್ತಾರೆ. ಗೋಕರ್ಣ ಕ್ಷೇತ್ರದಲ್ಲಿ ಒಂದು ನೀರಿನ ಗುಂಡಿಗೆ ಕೋಟಿತೀರ್ಥವೆಂದು ಕರೆಯುತ್ತಾರೆಂತಲೂ ಇದರಲ್ಲಿನ ನೀರು ಈಗ ಕೆಟ್ಟು ಹೋಗಿದ್ದಾಗ್ಯೂ ಗೋಕರ್ಣಕ್ಕೆ ಹೋದವರು ಇದರಲ್ಲಿ ಸ್ನಾನ ಮಾಡಲೇಬೇಕೆಂದೂ ಹಾಗೆ ಮಾಡಿದರೆ ಪಾಪ ಪರಿಹಾರವಾಗುತ್ತದೆಂಬ ನಂಬಿಗೆಯಿಂದ ಅನೇಕ ಯಾತ್ರಿಕರು ಇದರಲ್ಲಿ ಸ್ನಾನ ಮಾಡುತ್ತಾರೆಂದೂ ತಿಳಿಯಬರುತ್ತದೆ. ವೀರಶೈವರಿಗೆ ಇಂಥಾ ತೀರ್ಥ ಯಾತ್ರೆಯು ವಿಧಿಸಲ್ಪಟ್ಟಿಲ್ಲವಾದಾಗ್ಯೂ ಕೋಟಿ ಎಂಬ ಶಬ್ದವನ್ನು ಮುಖ್ಯವೆಂಬ ಅರ್ಥದಲ್ಲಿ ಉಪಯೋಗಿಸುತ್ತಿದ್ದರೆಂಬುದಕ್ಕೆ ಕೋಟಿ ತೀರ್ಥ ಎಂಬ ಇದರ ಹೆಸರು ಇಲ್ಲಿ ಉದಾಹರಿಸಲ್ಪಟ್ಟಿದೆ. ಇದಲ್ಲದೆ ಹರೀಶ್ವರನ ಕನ್ನಡ ಗ್ರಂಥಗಳಲ್ಲಿಯೂ ಕೆಲವು ಸಂಸ್ಕೃತ ಗ್ರಂಥಗಳಲ್ಲಿಯೂ ಕೋಟಿ ಎಂಬ ಪದವನ್ನು ಮುಖ್ಯ ಅಥವಾ ಬಹಳ ಎಂಬ ಅರ್ಥದಲ್ಲಿ ಉಪಯೋಗಿಸಿ ಇರುವುದು ತೋರುತ್ತದೆ.

ಹಾಗಲ್ಲದೆ ಇವು ಕೋಟಿ ಸಂಖ್ಯೆಯ ಲಿಂಗಗಳೇ ಎಂದು ಯಾರಾದರೂ ಹೇಳುವದಾದರೆ, ಶ್ರೀ ರಾಮನು ಪ್ರತಿಷ್ಠಾಪಿಸಿದ ಲಿಂಗವು ರಾಮೇಶ್ವರದಲ್ಲಿ ಈಗ ಇರುವಂತೆ, ರಾವಣನು ಸ್ಥಾಪಿಸಿದ ಒಂದು

ಲಿಂಗವು ಗೋಕರ್ಣದಲ್ಲಿ ಈಗ ಇರುವಂತೆ ವಿರೂಪಾಕ್ಷಪ್ಪನು ಸ್ಥಾಪಿಸಿದ ಕೋಟಿ ಸಂಖ್ಯೆಯ ಲಿಂಗಗಳು ಸಿಂಹಳ (ಲಂಕಾ) ದ್ವೀಪದಲ್ಲಿ ಇರುವ ಮತ್ಸ್ಯಕೇಶ್ವರ ಎಂಬ ಊರಿನಲ್ಲಿ ಇರಬೇಕಲ್ಲವೇ ?

ಹಾಗೆ ಧೈರ್ಯವಾಗಿ ಮುಂದೆ ಬಂದು ಕೋಟಿ ಸಂಖ್ಯೆಯ ಲಿಂಗಗಳೇ ಎಂದು ಹೇಳುವವರು ವಿರೂಪಾಕ್ಷಪ್ಪನ ಕಾಲವು ಶ್ರೀ ರಾಮನ ಕಾಲದಷ್ಟು ರಾವಣನ ಕಾಲದಷ್ಟು ಹಳೆಯದಲ್ಲವಾದ್ದರಿಂದಲೂ ಇಷ್ಟು ಬೇಗನೆ ಆ ಲಿಂಗಗಳು ನಾಶವಾಗಲಿಕ್ಕೆ ಪ್ರಳಯ ಮೊದಲಾದ ಬಾಧೆಗಳು ಈಚೆಗೆ ಏನೂ ತೋರದೆ ಇರುವದರಿಂದಲೂ ಈಗ ಆ ಕೋಟಿ ಸಂಖ್ಯೆಯ ಲಿಂಗಗಳನ್ನು ಎಣಿಸಿ ತೋರಿಸಿ ತಮ್ಮ ಹೇಳಿಕೆಯನ್ನು ನಿಶ್ಚಯ ಮಾಡಬೇಕಾಗುವುದು.

---

ಈ ಶಾಸನವು ಕ್ರಿಸ್ತಶಕ ೧೦೭೦ ರಲ್ಲಿ ಬರೆಯಲ್ಪಟ್ಟದ್ದಾದ್ದರಿಂದ ಬಸವೇಶ್ವರನ ಕಾಲಕ್ಕಿಂತ ಇದು ಪೂರ್ವದಲ್ಲಿ ಇದ್ದಂತೆ ಆಯಿತು. ಇದರಿಂದ ಈಗ ತಿಳಿಯಬೇಕಾದ ಕೆಲವು ವಿಶೇಷ ಸಂಗತಿಗಳೂ ಇರುತ್ತವೆ.

೧. ಈ ಮೊದಲು ೨ನೆಯ ಪುಟದ ವಚನದಲ್ಲಿ ತೋರಿಸಿ ಇರುವಂತೆ ಶಿವಾಗಮಗಳು ಈ ಕಾಲಕ್ಕಿಂತಲೂ ಪೂರ್ವದಲ್ಲಿ ಇದ್ದವೆಂತಲೂ ಈ ಶಿವಾಗಮಗಳ ಮಾರ್ಗವನ್ನು ಹಿಡಿದು ನಡೆಯುತಕ್ಕವರು ಎಂಬುದೊಂದು ವಿಶೇಷ ಲಕ್ಷಣವನ್ನು ಪಡೆದವರು ಇದ್ದರೆಂತಲೂ ಇವರಲ್ಲಿ ಸರ್ವೇಶ್ವರ ಶಕ್ತಿದೇವರು ಒಬ್ಬರೆಂತಲೂ ತಿಳಿಯುತ್ತದೆ.

೨. ಈ ಸರ್ವಶಕ್ತಿದೇವರು ಕೋಟಿಲಿಂಗದ ಸ್ಮರಣೆಯನ್ನು ಮಾತ್ರ ಮಾಡತಕ್ಕವರೆಂದೂ ಕುಬಟೂರಿನ ಅಗ್ರಹಾರದ ಸಾಸಿರ್ವರು ಆ ಲಿಂಗದ ಆರಾಧಕರೆಂದೂ ಉದಯಾದಿತ್ಯನ ಧರ್ಮ ಶಾಸನದಲ್ಲಿ ಹೇಳಲ್ಪಟ್ಟಿರುತ್ತದೆ.

೩. ಹೀಗೆ ಶಿವಾಗಮ ಮಾರ್ಗದಲ್ಲಿ ಇದ್ದ ಆ ಸರ್ವಶಕ್ತಿದೇವರು ಸ್ಥಾವರ ಲಿಂಗ ಪೂಜೆಯನ್ನು ಮಾಡದೆ ಇದ್ದಾಗ್ಯೂ ಬ್ರಾಹ್ಮಣನಾದ ಸೋಯಿದೇವನು ಇವರ ಪಾದಂಗಳಂ ಕರ್ಚಿ (ಪಾದ ತೊಳೆದು) ದತ್ತಿಯನ್ನು ಬಿಟ್ಟನೆಂದೂ ಆತನ ಧರ್ಮ ಶಾಸನದಿಂದ ತಿಳಿಯುತ್ತದೆ.

ಪ್ರಭುದೇವ ಬಸವಿದೇವ (ಬಸವೇಶ್ವರ) ಮುಂತಾದವರು ಗುಹೇಶ್ವರ, ಕೂಡಲ ಸಂಗಮದೇವ ಎಂಬ ಸ್ಥಾವರ ಲಿಂಗ ವರ್ತಿಗಳನ್ನು ತಮ್ಮ ವಚನಗಳ ಅಂಕಿತದಲ್ಲಿ ಇಟ್ಟು ಸ್ಮರಣೆ ಮಾಡುತ್ತಿದ್ದಾದರೂ ಈ ಸ್ಥಾವರ ಲಿಂಗಗಳ ಪೂಜೆಯನ್ನು ಮಾಡುತ್ತಿರಲಿಲ್ಲವಾಗಿ ಅವರ ವಚನಗಳಿಂದ ಸ್ಪಷ್ಟವಾಗಿ ತಿಳಿಯಬರುವದರಿಂದಲೂ ಈ ಹಿಂದೆ ಸದ್ಧರ್ಮ ದೀಪಿಕೆಯ ೪—೫ ನೆಯ ಸಂಚಿಕೆಗಳಲ್ಲಿ ಪ್ರಕಟಿಸಿದ ಪ್ರಕಾರ ಶಿಕಾರಿಪುರದ ತಾಲ್ಲೂಕು ಬಳ್ಳಿಗಾವೆಯ ಪಂಚ ಮಠಾಧಿಕಾರಿಗಳಲ್ಲಿ ಒಬ್ಬರಾದ ಸರ್ವೇಶ್ವರ ಪಂಡಿತದೇವ ಎಂಬುವವರು ಈ ಸರ್ವೇಶ್ವರದೇವರೇ ಆಗಿರಬೇಕೆಂತಲೂ ಇವರು ೭೭ ಸ್ಥಾನಾಚಾರ್ಯರಿಂದಿರುವದರಿಂದ ಕುಬಟೂರಿಗೆ ಸುಮಾರು ೧೫ ಮೈಲಿ ದೂರದಲ್ಲಿ ಬಳ್ಳಿಗಾವೆ ಇರುವದರಿಂದ ಅಲ್ಲಿನ ಮಠವು ಇವರಿಗೇ ಸೇರಿರಬಹುದೆಂತಲೂ ಈ ಕಾರಣಗಳಿಂದ ಇವರು ಲಿಂಗಧಾರಿಗಳಾಗಿರಬೇಕೆಂತಲೂ ಊಹೆಯಾಗುತ್ತದೆ.

ಈಗ ವೀರಶೈವರಲ್ಲಿ ಅನೇಕ ಪಟ್ಟಾಧಿಕಾರಿಗಳೂ ಮತ್ತು ನಿರಂಜನಮೂರ್ತಿಗಳೂ 'ದೇವ' ಎಂಬ ಪದವು ಕೊನೆಯಲ್ಲಿ ಉಳ್ಳ ಹೆಸರುಗಳನ್ನು ಉಂಟಾಗಿರುವದೂ ಅವರು ಸ್ಥಾವರ ಲಿಂಗ ಪೂಜೆಯನ್ನು ಮಾಡದೆ ಇರುವುದೂ ಪ್ರಬಲವಾದ ಉದಾಹರಣೆಯಾಗಿರುತ್ತದೆ. ಇದಲ್ಲದೆ ಇವರು ಶಿವಾಗಮಗಳಲ್ಲಿ ಹೇಳಲ್ಪಟ್ಟ ಆಚರಣೆಗಳನ್ನೇ ನಡೆಸುವವರೂ ಆಗಿರುತ್ತಾರೆ. ಎಂತೂ ಆಗಿನ ಕಾಲದಲ್ಲಿ ಬ್ರಾಹ್ಮಣರು ಮತ್ತು ರಾಜರು ಶಿವಾಗಮ ಮಾರ್ಗದಲ್ಲಿ ನಡೆಯತಕ್ಕ ಗುರುಗಳಿಗೆ ಬಹಳ ಗೌರವವನ್ನು ಕೊಟ್ಟು ಅವರನ್ನು ಬಹು ಮುಖ್ಯರೆಂದು ನಂಬಿದ್ದರೆಂಬುದು ಇದರಿಂದ ಸ್ಪಷ್ಟವಾಗಿ ತಿಳಿಯಬರುತ್ತದೆ.

ದ್ವಾರಾವತಿ ಪುರದಲ್ಲಿ ಮಾಳವರಾಜ ಗುರ್ಜರ ರಾಜರನ್ನು ಸೋಲಿಸಿ ತೆಲುಂಗು ರಾಜ್ಯವನ್ನು ಸ್ಥಾಪನೆ ಮಾಡಿದ ವಿಷ್ಣು ವಂಶೋದ್ಭವನಾದ ಯಾದವ ಕುಲ ಭೂಷಣನಾದ ಸಿಂಹಣ ಭೂಪಾಲನು ರಾಜ್ಯಂ ಗೆಯ್ಯುತ್ತಿದ್ದನೆಂದು ಹೇಳಿರುವದರಲ್ಲಿ ದ್ವಾರಾವತಿಪುರ ಎಂಬುದು ಈಗ ಕುಬಟೂರಿನ ಸಮೀಪದಲ್ಲಿ ಇರುವ ದ್ವಾರವಳ್ಳಿ

# ಆದರದಿಂದ ಅಂಗೀಕಾರ



ಈ ಕೆಳಗಿನ ಪುಸ್ತಕಗಳು ಆದರದೊಡನೆ ಅಂಗೀಕರಿಸಲ್ಪಟ್ಟಿರುತ್ತವೆ.

ಪಶು ಮತ್ತು ಪತಿಧರ್ಮ ವಿವೇಕ ಅಥವಾ ಗುಟ್ಟು:-
ಇದನ್ನು ಸಂಗ್ರಹಿಸಿ ಬರೆದವರು ಸದಾಶಿವ ಶಿವಾಚಾರ್ಯರು ಶಿವಯೋಗ ಮಂದಿರ:—

ಬೆಲೆ ನಾಲ್ಕು ಆಣೆ ಇದರಲ್ಲಿ ಹಾನಗಲ್ಲ ಸ್ವಾಮಿಗಳವರ ಭಾವ ಚಿತ್ರವಿದೆ. ಪುಸ್ತಕಗಳು ಗ್ರಂಥಕರ್ತರಲ್ಲಿ ದೊರೆಯುತ್ತವೆ.

ಪಶು ಧರ್ಮ ಸಂಬಂಧವಾದ ಜುಟ್ಟು ಮತ್ತು ಜನಿವಾರ ಮುಂತಾದ ಜಡ ಕರ್ಮಾಂಗಗಳ ಆಚರಣೆಗಳನ್ನು ವೀರಶೈವರು ಬಳಿಕೆಯಲ್ಲಿ ತರಬಾರದೆಂಬುದೇ ಈ ಗ್ರಂಥದ ಮುಖ್ಯ ಬೋಧೆಯು ಇದರಲ್ಲಿ ವೀರಶೈವ ಧರ್ಮದ ಸಹಜವಾದ ಸಂಗತಿಯು ಬೋಧಿಸಲ್ಪಟ್ಟಿರುತ್ತದೆ. ಇದರಲ್ಲಿ—ಧರ್ಮಗಳಲ್ಲಿ ಪಶುಧರ್ಮ ಮತ್ತು ಪತಿಧರ್ಮ ಎಂಬದಾಗಿ ಧರ್ಮಗಳನ್ನು ಎರಡು ವಿಧವಾಗಿ ವಿಂಗಡಿಸಿ ಅಷ್ಟಾವರಣಕ್ಕೆ ಪತಿಧರ್ಮವೆಂದು ಹೇಳಿರುವದರಿಂದ ಪಾಶುಪತ ಧರ್ಮರೂಪವಾಗಿ ಇದನ್ನು ಬೋಧಿಸಿದಂತೆ ಆಗಿದೆ.

ಬಸವೇಶ್ವರನಿಗಿಂತ ಪೂರ್ವದಲ್ಲಿ ಪಾಶುಪತ ಮತವು ವೀರಶೈವ ಮತಕ್ಕೆ ಸರಿ ಹೋಲುತ್ತಿದ್ದಿತು. ವೀರಶೈವಕ್ಕೆ ಪಾಶುಪತ ಎಂದು ಮತ್ತೊಂದು ಹೆಸರಿರುವದಾಗಿ ಆಗಮದಲ್ಲಿಯೂ ಬಂದಿರುತ್ತದೆ. ಆದರೆ ಅಂಗ ಲಿಂಗ ಸಂಗವುಳ್ಳ ವೀರಶೈವರ ಆಚರಣೆಯು ಪಾಶುಪತಕ್ಕಿಂತ ಹೆಚ್ಚಿನ ಸಂಸ್ಕಾರವುಳ್ಳದ್ದಾಗಿದೆ. ಈ ವೀರಶೈವದಲ್ಲಿಯೂ ಇದರಂತೆಯೇ ಈ ವಿಷಯಗಳ ಬೋಧೆಯು ಇರುತ್ತದೆ. ಕ್ರಿಯಾಂಗವಾಗಿ ಜುಟ್ಟು ಜನಿವಾರಗಳು ಬೇಕೆಂದು 'ವೀರಶೈವವು' ವಿಧಿಸುವದಿಲ್ಲ. ಆದ್ದರಿಂದ ಈ ಗ್ರಂಥವು ವೀರಶೈವರಿಂದ ಗ್ರಹಿಸಲ್ಪಡಲಿಕ್ಕೆ ಯೋಗ್ಯವಾಗಿರುತ್ತದೆ.

ನಮ್ಮ ಊರು:—

ಆನಂದಕವಿ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿದ ಶ್ರೀಮನ್ ವೀರಾರ್ಯ ಮಡಿವಾಳಾಚಾರ್ಯ ಕುಲಕರಣಿ ಕುರಗುಂದ ಇವರು ಇದನ್ನು ರಚಿಸಿರುತ್ತಾರೆ. ಇವರು ಶಾಲೋಪಾಧ್ಯಾಯರು.

ಇಂಗ್ಲಿಷ್ ಭಾಷೆಯ ಪದ್ಧತಿಯಂತೆ ಕನ್ನಡಲ್ಲಿ ಗೀತೆಗಳನ್ನು ಉಳ್ಳ ಪುಸ್ತಕವಿದು. ಅಥಣಿ ಶಿವಯೋಗೀಶ್ವರ ಸ್ತೋತ್ರ, ಬ್ರಹ್ಮಚರ್ಯ, ವ್ಯಾಯಾಮಗೀತೆ, ಬಸವೇಶ್ವರ ಸ್ತೋತ್ರ ಮೊದಲಾದ ಹಾಡುಗಳಿವೆ. ಒಂದೊಂದು ಕಾಲಕ್ಕೆ ಒಂದೊಂದು ವಿಷಯವಾಗಿ ಜನರಲ್ಲಿ ಗಾಯನರುಚಿ ಇರುವುದು ಸಹಜವಾಗಿದೆ. ಸುಲಭವಾದ ಶಬ್ದಗಳಿಂದ ಕೂಡಿ ಮನಸ್ಸನ್ನು ಆಕರ್ಷಣ ಮಾಡುವಂಥಾದ್ದಾಗಿದೆ ಮಂಜುಳಸ್ವರದೊಡನೆ ಹಾಡಲಿಕ್ಕೆ ಈ ಕಾಲದ ಜನರಿಗೆ ನಮ್ಮ ಶೋಭೆಯನ್ನು ಬೀರುತ್ತಿರುವದರಿಂದ ಸಂಗ್ರಹಕ್ಕೆ ಯೋಗ್ಯವಾಗಿರುತ್ತದೆ.

ಇದರ ೨ ನೆಯ ಆವೃತ್ತಿಯು ನಮ್ಮಲ್ಲಿಗೆ ಕಳುಹಿಸಲ್ಪಟ್ಟಿರುವದರಿಂದ ಇದು ಜನರಲ್ಲಿ ಎಷ್ಟು ಹೆಚ್ಚಿನ ಆದರವುಳ್ಳದ್ದಾಗಿರುವದೆಂಬುದು ವ್ಯಕ್ತವಾಗುತ್ತದೆ.

ಪ್ರಕಾಶಕ.

ಶ್ರೀಃ

# ಅಭಿನಂದನ ಪತ್ರಿಕೆ

ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವ್ ಬಹದ್ದೂರ್
ಪ್ರಾಚ್ಯವಿದ್ಯಾವೈಭವ, ಮಹಾ ಮಹೋಪಾಧ್ಯಾಯ

## ಶ್ರೀಮಾನ್ ರಾ. ನರಸಿಂಹಾಚಾರ್ಯ

ಎಂ. ಎ., ಎಂ. ಆರ್ ಎ. ಯಸ್. ಅವರ ಸನ್ನಿಧಾನದಲ್ಲಿ

ಕರ್ಣಾಟಕ ಸಾಹಿತ್ಯ ಪರಿಷತ್ತು ತನ್ನ ಪರವಾಗಿಯೂ, ತನ್ನೊಡನೆ ಈ ಅಭಿನಂದನೋತ್ಸವದಲ್ಲಿ ಭಾಗಿಗಳಾಗಿರುವ ಬೆಂಗಳೂರು ಅಮೇಚೂರ್ ನಾಟಕ ಮಂಡಲಿ ಮುಂತಾದ ಕಲಾ ಸಂಸ್ಥೆಗಳ ಪರವಾಗಿಯೂ, ಅಶೇಷ ವಿದ್ವಜ್ಜನರ ಮತ್ತು ದೇಶಭಾಷಾ ಪ್ರೇಮಿಗಳ ಪರವಾಗಿಯೂ ಸಹ ಪ್ರೀತಿ ವಿಶ್ವಾಸಪೂರ್ವಕವಾಗಿ ಮಾಡುವ ವಿಜ್ಞಾಪನೆ.

ಮಹನೀಯರೆ,

ಈಗ್ಗೆ ಸುಮಾರು ಐವತ್ತು ವರ್ಷಗಳ ಹಿಂದೆ ತಾವು ದೇಶಾಭಿಮಾನ ಭಾಷಾಭಿಮಾನಗಳಿಂದ ಪ್ರೇರಿತರಾಗಿ ಕೈಕೊಂಡ ಪವಿತ್ರ ದೀಕ್ಷೆಯು ಸಫಲ

ವಾಗಿ ನೆರವೇರಿ ಬಂದು, ನಮ್ಮ ಶ್ರೀಮನ್ಮಹಾರಾಜರವರ ದಿವ್ಯ ಕಟಾಕ್ಷಕ್ಕೂ ಸಾರ್ವಭೌಮ ಸರಕಾರದವರ ಆದರಣೆಗೂ ವಿದ್ವತ್ ಸಂಸ್ಥೆಗಳ ಗೌರವಕ್ಕೂಪಾತ್ರರಾಗಿ, ತಮಗೆ ಶ್ರೇಷ್ಠವಾದ ಪ್ರಶಸ್ತಿಗಳನ್ನು ಸಂಪಾದಿಸಿ ಕೊಟ್ಟಿರುವುದು ಸಕಲರಿಗೂ ತಿಳಿದ ಸಂಗತಿಯಾಗಿದೆ. ಈ ಪ್ರಶಸ್ತಿಗಳ ಜೊತೆಗೆ ಈಗ 'ಮಹಾಮಹೋಪಾಧ್ಯಾಯ' ಎಂಬ ಬಿರುದು ಹೊಸದಾಗಿ ಸೇರಿರುವ ವಿಷಯದಲ್ಲಿ ಸಮಸ್ತ ಕರ್ಣಾಟಕ ಜನರಿಗೂ ಉಂಟಾಗಿರುವ ಸಂತೋಷಾತಿಶಯವನ್ನೂ ಹೆಮ್ಮೆಯನ್ನೂ ಅರಿಕೆಮಾಡಿಕೊಳ್ಳಲು ಈ ಪರಿಷತ್ತೂ ಅದರೊಡನೆ ಮಿಳಿತವಾಗಿರುವ ಸಂಘಗಳೂ ವಿದ್ವದ್ರಸಿಕ ಸಮಾಜಗಳೂ ಉತ್ಸಾಹಿಗಳಾಗಿವೆ.

ತಮ್ಮ ಇತಿಹಾಸ ಸಂಶೋಧನೆಯೂ ಭಾಷಾಸಾಹಿತ್ಯ ಸೇವೆಯೂ ಪ್ರಾರಂಭವಾದ ಕಾಲದಲ್ಲಿ ಆ ಕಾರ್ಯ ಕ್ಷೇತ್ರಗಳಲ್ಲಿ ಲಭಿಸಬಹುದಾಗಿದ್ದ ಮಹಾಜನ ಪುರಸ್ಕಾರವಾಗಲಿ ಸರ್ಕಾರದ ಮನ್ನಣೆಯಾಗಲಿ ಪ್ರೋತ್ಸಾಹಕಾರಣವಾಗುವಷ್ಟು ಮಟ್ಟಿಗೆ ಇರಲಿಲ್ಲ. ಆದರೂ ತಮ್ಮ ದೀಕ್ಷೆಯ ಧೈರ್ಯ ಸ್ಥೈರ್ಯಗಳ ಪ್ರಭಾವದಿಂದ ಕರ್ಣಾಟಕ ದೇಶದಲ್ಲಿಯೂ ಭರತ ಖಂಡದಲ್ಲಿಯೂ ಮಾತ್ರವೇ ಅಲ್ಲದೆ ನಿಖಿಲ ಪ್ರಪಂಚದ ವಿದ್ವನ್ಮಂಡಲಿಗಳಲ್ಲೆಲ್ಲ ತಮ್ಮ ಖ್ಯಾತಿ ಹರಡುವಂತಾಗಿ ತಮ್ಮ ಉದಾತ್ತ ಧ್ಯೇಯಗಳು ಸಿದ್ಧಿಗೊಂಡಿವೆ.

ದೇಶ ಚರಿತ್ರೆಯ ಸಂಗ್ರಥನ, ಭಾಷಾ ಶಾಸ್ತ್ರ ಶೋಧನೆ, ಶಿಲ್ಪಾದಿ ಕಲಾ ವಿಮರ್ಶೆ ಮತ್ತು ಸರ್ವತೋ ಮುಖವಾದ ಕರ್ಣಾಟಕ ಸಂಸ್ಕೃತಿಯ ಸ್ವರೂಪ ವಿವರಣೆ—ಅವುಗಳಲ್ಲಿ ತಾವು ಹಿಂದಿನ ಪರಿಶೋಧಕರಾದ ಕಾಲ್ಡ್‌ವೆಲ್, ಕಿಟ್ಟೆಲ್, ರೈಸ್, ಮೊದಲಾದ ಪಾಶ್ಚಾತ್ಯ ಪಂಡಿತರ ಮಾರ್ಗವನ್ನು ವಿಸ್ತಾರಗೊಳಿಸಿ ಹೆಚ್ಚು ಪರಿಶೋಧನೆಗಳನ್ನು ನಡೆಸಿ, ಅನೇಕ ಸಂದಿಗ್ಧಾಂಶಗಳನ್ನು ವಿಶದಪಡಿಸಿ ಈ ಬಗೆಯ ವಿಮರ್ಶನ ಕಾರ್ಯದಲ್ಲಿ ಕನ್ನಡಿಗರ ಸಾಮರ್ಥ್ಯಕ್ಕೆ ಆದರ್ಶಪ್ರಾಯರಾಗಿರುವಿರಿ. ಈ ತಮ್ಮ ಕಾರ್ಯದ ಫಲಿತಾಂಶವಾಗಿ ನಮ್ಮ ಜನರಿಗೆ ತಮ್ಮ ಪೂರ್ವಿಕರ ಮೇಲೆಯೂ ತಮ್ಮ ಭಾಷಾಸಾಹಿತ್ಯಗಳ ಮಹತ್ವವೂ ತಿಳುವಳಿಕೆಗೆ ಬಂದು, ಈಗ

ನಮ್ಮ ನಾಡಿನಲ್ಲಿ ಎತ್ತೆತ್ತಲೂ ಒಂದು ಹೊಸ ಚೈತನ್ಯವೂ ಒಂದು ಹೊಸ ಉತ್ಸಾಹವೂ ಒಂದು ಹೊಸ ಜಾಗ್ರತಿಯೂ ಕಾಣಬರುವಂತಾಗಿದೆ.

ಈ ಪುನರುಜ್ಜೀವನಕ್ಕೆ ಕಾರಣವಾದ ಸಂಶೋಧನ ಕಾರ್ಯದಲ್ಲಲ್ಲದೆ, ಕನ್ನಡ ಸಾಹಿತ್ಯರಚನೆಯ ಕಾರ್ಯದಲ್ಲಿಯೂ ತಾವು ಪ್ರಸಿದ್ಧರಾಗಿರುವಿರಿ. ಸಂಸ್ಕೃತ, ತಮಿಳು, ಇಂಗ್ಲಿಷ್ ಮುಂತಾದ ನಾನಾ ಭಾಷೆಗಳಲ್ಲಿ ತಾವು ಪರಿಣತರಾಗಿ, ಆ ಸಾಹಿತ್ಯಗಳಿಂದ ಪಡೆದ ಕಾವ್ಯಾನುಭವದ ಸಾರವನ್ನು ಕನ್ನಡಿಗರಿಗೆ ಉತ್ತಮ ಪ್ರಬಂಧಗಳ ರೂಪದಲ್ಲಿ ದೊರಕಿಸಿ ಕೊಟ್ಟಿರುವಿರಿ; ಮತ್ತು ಕನ್ನಡ ಕವಿಗಳ ವ್ಯಾಪ್ತಿ ವೈವಿಧ್ಯಗಳನ್ನು ಪರಿಶೀಲಿಸಿ ನಮ್ಮ ಸಾಹಿತ್ಯಾಭ್ಯಾಸಿಗಳಿಗೆ ಮಹೋಪಕಾರವನ್ನು ಮಾಡಿರುವಿರಿ; ಜನ ಸಂಸ್ಕೃತಿಗೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿಯೂ ತಾವು ಮಾರ್ಗದರ್ಶಕರಾಗಿ, ಇನ್ನು ಮುಂದೆ ನಡೆಯಬೇಕಾದ ಕಾರ್ಯಕ್ಕೆ ಭದ್ರವಾದ ತಳಹದಿಯನ್ನು ಹಾಕಿರುವಿರಿ. ಹೀಗೆ ನಾನಾ ಕ್ಷೇತ್ರಗಳಲ್ಲಿ ತಾವು ನೆಟ್ಟ ಸಸಿ ಸೊಂಪಾಗಿ ಬೆಳೆದು, ವಿಶಾಲವಾಗಿ ಹರಡಿ ಹೊಸ ಹೊಸ ಬಿಳಲುಗಳನ್ನು ಬಿಟ್ಟುಕೊಂಡು, ಹೊಸ ಹೊಸ ಫಲ ಪುಷ್ಪಗಳಿಂದ ಕೂಡಿ ಮೆರೆಯುತ್ತಿದೆ. ಇದು ತಮ್ಮ ತಪಸ್ಸಿನ ಮಹಿಮೆಯಾಗಿ ಎಲ್ಲರಿಗೂ ಆನಂದದಾಯಕವಾಗಿದೆ.

ಈ ಪರಿಷತ್ತಿನ ಪ್ರತಿಷ್ಠಾಪಕರಲ್ಲಿ ತಾವು ಒಬ್ಬರೆಂಬುದನ್ನೂ ಪರಿಷತ್ತಿನ ಬೆಳವಳಿಗೆಗೆ ತಮ್ಮ ಅಭಿಮಾನ ಶ್ರದ್ಧೆಗಳೂ ತಮ್ಮ ಹೆಸರಿನ ಬಲವೂ ಬೆಂಬಲವೆಂಬುದನ್ನೂ ಈ ಸಂಸ್ಥೆ ಎಂದಿಗೂ ಮರೆಯಲಾರದು.

ಮಹನೀಯರೆ, ತಮ್ಮ ಬಹುಮುಖವಾದ ಪಾಂಡಿತ್ಯ ಮತ್ತು ದೇಶಭಾಷಾ ವಾತ್ಸಲ್ಯಗಳ ಜೊತೆಗೆ ಮಿಳಿತವಾಗಿರುವ ಸಂಗೀತಾದಿ ಲಲಿತಕಲಾಭಿರುಚಿ, ಸರಸ ವಾಕ್ಚತುರತೆ, ಗುಣಗ್ರಹಣಪರತೆ ಮತ್ತು ತಮ್ಮ ಸೌಜನ್ಯ, ಸೌಲಭ್ಯ, ಮೈತ್ರಿ, ಭಗವದ್ಭಕ್ತಿ, ಶಿಷ್ಟಾಚಾರ ಸಂಪನ್ನತೆ—ಈ ಸದ್ಗುಣಗಳು ತಮ್ಮನ್ನು ಸರ್ವರಿಗೂ ಪ್ರಿಯರನ್ನಾಗಿಯೂ ಮಾನ್ಯರನ್ನಾಗಿಯೂ ಮಾಡಿವೆ. ತಮಗೆ ಭಗವಂತನು ಆಯುರಾರೋಗ್ಯಗಳನ್ನೂ ಸಕಲ ಸೌಭಾಗ್ಯ ಸೌಖ್ಯಗಳನ್ನೂ ಕರುಣಿಸಿ, ತಮ್ಮಿಂದ ಕ

ನ್ನಡ ನಾಡಿಗೆ ಚಿರಕಾಲ ಸೇವೆ ನಡೆಯುವಂತೆ ಮಾಡಲೆಂದು ಈ ಪರಿಷತ್ತು ಪ್ರಾರ್ಥಿಸುತ್ತದೆ.

ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಬೆಂಗಳೂರು ನಗರ. ೩೧ನೆಯ ಮಾರ್ಚಿ, ೧೯೩೪.

ಇಂತು
ಕರ್ಣಾಟಕ ಸಾಹಿತ್ಯ ಪರಿಷತ್ತಿನ
ವಿಜ್ಞಾಪನೆ.

# ಬಳ್ಳಾರಿಯು ಕರ್ಣಾಟಕವು, ಆಂಧ್ರವಲ್ಲ

ಲೇಖಕರು:— ಕರ್ಣಾಟಕ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯವರು.

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ೧೯೩೪ ನೆಯ ಮಾರ್ಚಿ ೩೧ರ ಅಧಿವೇಶನದಲ್ಲಿ ಈ ಕೆಳಗೆ ಕಾಣಿಸಿರುವ ಅರ್ಥವುಳ್ಳ ನಿರ್ಣಯವನ್ನು ಇಂಗ್ಲೀಷು ಭಾಷೆಯಲ್ಲಿ ಅಂಗೀಕರಿಸಿತು.

"ರಾಯರ ಸೀಮೆ" (ರಾಯುಲ ಸೀಮೆ) ಎಂದು ಪ್ರಸಿದ್ಧವಾಗಿರುವ ಬಳ್ಳಾರಿ ಜಿಲ್ಲೆ ಮೊದಲಾದ ಕನ್ನಡ ಪ್ರದೇಶಗಳನ್ನು ಆಂಧ್ರ ವಿಶ್ವವಿದ್ಯಾ ನಿಲಯದ ಅಧೀನಕ್ಕೆ ಒಳಪಡಿಸಲು ರಾಜ್ಯ ಶಾಸನದ ಅನುಮತಿಯನ್ನು ಸಂಪಾದಿಸುವುದಕ್ಕಾಗಿ ಈಗ ಪುನಃ ಯತ್ನಗಳು ನಡೆಯುತ್ತಿರುವುದನ್ನು ನೋಡಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಭೀತಿಪಟ್ಟು ಕಳವಳಗೊಂಡಿದೆ. ಮದರಾಸು ಅಧಿಪತ್ಯದ ಯಾವ ಯಾವ ಪ್ರದೇಶಗಳಲ್ಲಿ ಕನ್ನಡವು ಬಹು ಜನದ ಮುಖ್ಯ ವ್ಯವಹಾರ ಭಾಷೆಯಾಗಿದೆಯೋ ಅಂಥಾ ಪ್ರದೇಶಗಳ ಮೇಲೆ ಆಂಧ್ರ ವಿಶ್ವ ವಿದ್ಯಾ ನಿಲಯಕ್ಕೆ ಅಧಿಕಾರವನ್ನು ಕೊಡತಕ್ಕದ್ದಲ್ಲವೆಂದು ಈ ಕಾರ್ಯನಿರ್ವಾಹಕ ಮಂಡಲಿಯು ಪ್ರತಿಭಟಿಸುತ್ತದೆ. ಕರ್ಣಾಟಕ ಜನರು ಬಳ್ಳಾರಿ ಜಿಲ್ಲೆಯೂ ಅನಂತಪುರ ಮೊದಲಾದ ಇತರ ಜಿಲ್ಲೆಗಳ ಅನೇಕ ಭಾಗಗಳೂ ತಮ್ಮ ನಾಡಿಗೆ ಸೇರಿದುವೆಂದು ಬಹುಕಾಲದಿಂದ ವಾದಿಸುತ್ತಾರೆ. ಅವರ ಈ ಹಕ್ಕನ್ನು ದೇಶದ ಪೂರ್ವ ಚರಿತ್ರೆಯೂ ಸದ್ಯಃಸ್ಥಿತಿಯೂ ಒಂದೇ ರೀತಿಯಾಗಿ ಸಮರ್ಥಿಸುತ್ತಿವೆ. ಬಳ್ಳಾರಿಯ ಬಳಿ ಇರುವ ಹಂಪೆಯು ಕರ್ಣಾಟಕ ರಾಜ್ಯವಾದ ವಿಜಯನಗರ ಸಾಮ್ರಾಜ್ಯದ ಮಹಾರಾಜಧಾನಿಯಾಗಿತ್ತು. ಆ ಪ್ರದೇಶವು ಈಗಲೂ ಕರ್ಣಾಟಕ ಜನರಿಗೆ ಐತಿಹಾಸಿಕ ಸಂದರ್ಭಸ್ಮರಣೆಗಳಿಂದ ತುಂಬಿಕೊಂಡಿದೆ. ಭಾರತಜನಪದ ಮಹಾಸಭೆಯು (ಇಂಡಿಯನ್ ನ್ಯಾಷನಲ್ ಕಾಂಗ್ರೆಸ್) ಮೇಲ್ಕಂಡ ಕನ್ನಡಿಗರ ಹಕ್ಕಿಗೆ ಸಂಬಂಧಪಟ್ಟ

ಎಲ್ಲ ವಿವರಗಳನ್ನೂ ಎಲ್ಲಸಂಗತಿಗಳನ್ನೂ ಕುರಿತು ಕೂಲಂಕಷವಾಗಿ ಆ ಸ್ಥಳದಲ್ಲಿಯೇ ವಿಚಾರ ನಡೆಸಿ ಅದರ ಫಲಿತಾಂಶವಾಗಿ ಬಳ್ಳಾರಿಯು ಕನ್ನಡ ಪ್ರಾಂತಕ್ಕೆ ಸೇರತಕ್ಕದ್ದೆಂದು ತೀರ್ಮಾನ ಮಾಡಿದೆ. ಕಾಂಗ್ರೆಸ್ ಮಹಾಸಭೆಯು ಆ ರೀತಿ ಭಾಷಾ ಪ್ರಾಬಲ್ಯವನ್ನನುಸರಿಸಿ ಮಾಡಿದ ಪ್ರಾಂತವಿಭಾಗದ ತತ್ವವು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೆ ಸಮ್ಮತವಾಗಿದೆ. ಅದರಂತೆ ಈ ಮಂಡಲಿಯು ಬಳ್ಳಾರಿ ಜಿಲ್ಲೆಯೂ ಮತ್ತು ಮದ್ರಾಸು ಆಧಿಪತ್ಯದಲ್ಲಿ ಕನ್ನಡ ಮಾತಾಡುವವರು ಹೆಚ್ಚಾಗಿರುವ ಇತರ ಪ್ರದೇಶಗಳೂ ಆಂಧ್ರ ವಿಶ್ವವಿದ್ಯಾನಿಲಯದ ಅಧಿಕಾರಕ್ಕೆ ಒಳಪಡಕೂಡದೆಂದೂ ಅವು ಆಂಧ್ರ ದೇಶದ ಭಾಗವೆಂದು ಯಾವರೀತಿಯಲ್ಲೂ ಪರಿಗಣಿತವಾಗಬಾರದೆಂದೂ ಅಭಿಪ್ರಾಯ ಪಡುತ್ತದೆ. ಕೆಲವು ವರ್ಷಗಳ ಕೆಳಗೆ ಮದ್ರಾಸು ಶಾಸನ ಸಭೆಯಲ್ಲಿ ಇದೇ ವಿಚಾರವು ಚರ್ಚೆಗೆ ಬಂದಾಗ ಕನ್ನಡಿಗರ ಹಕ್ಕನ್ನು ಮದರಾಸು ಸರಕಾರವು ಒಪ್ಪಿಕೊಂಡು, ಮೇಲೆ ಕಾಣಿಸಿರುವ ಪ್ರದೇಶಗಳನ್ನು ಆಂಧ್ರ ವಿಶವಿದ್ಯಾ ನಿಲಯದ ಅಧಿಕಾರಕ್ಕೆ ಬಿಟ್ಟುಕೊಡಲಾಗದೆಂದು ತೀರ್ಮಾನಿಸಿತು. ಈಗಲೂ ಮದರಾಸು ಸರಕಾರವೂ ಮದರಾಸಿನ ಶಾಸನ ಸಭೆಯೂ ಕನ್ನಡ ಪ್ರಾಂತದಮೇಲೆ ಆಂಧ್ರರು ಮಾಡುತ್ತಿರುವ ಆಕ್ರಮಣ ಪ್ರಯತ್ನವನ್ನು ನಿಗ್ರಹಿಸಬೇಕೆಂದೂ, ಮೇಲೆ ಹೇಳಿರುವ ಕನ್ನಡ ಪ್ರದೇಶಗಳು ಅಲ್ಲಿಯ ಜನರಿಗೆ ಈಗಿಗಿಂತ ಸಮರ್ಪಕವಾದ ಬೇರೊಂದು ಏರ್ಪಾಡು ಆಗುವವರೆಗೂ ಮದರಾಸು ವಿಶ್ವವಿದ್ಯಾನಿಲಯದ ಅಧಿಕಾರದಲ್ಲಿಯೇ ಇರುವಂತೆ ಮಾಡಬೇಕೆಂದೂ ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಪ್ರಾರ್ಥಿಸುತ್ತದೆ.

---

# ಕರ್ಣಾಟಕ ಸಾಹಿತ್ಯ ಪರಿಷತ್ತು

ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಬೆಂಗಳೂರು ಸಿಟಿ

---

## ಕನ್ನಡ ಗ್ರಂಥ ಪ್ರದರ್ಶನ.

೧. ಕನ್ನಡ ಸಾಹಿತ್ಯವು ವರ್ಷೇ ವರ್ಷೇ ಹೇಗೆ ಅಭಿವೃದ್ಧಿಯಾಗುತ್ತಿರುವುದೆಂಬುದನ್ನು ಮಹಾಜನರಿಗೆ ಪ್ರತ್ಯಕ್ಷಗೊಳಿಸಬೇಕೆಂಬ ಉದ್ದೇಶದಿಂದಲೂ ಹೊಸ ಗ್ರಂಥಗಳಿಗೆ ಪ್ರಸಿದ್ಧಿ ದೊರಕಿಸಬೇಕೆಂಬ ಉದ್ದೇಶದಿಂದಲೂ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು, ೧೯೩೩ನೆಯ ಮೇ ತಿಂಗಳಲ್ಲಿ ಸುಮಾರು ಭಾನುವಾರ ೭ನೆಯ ತಾರೀಖಿನಿಂದ ಶನಿವಾರ ೧೩ನೆಯ ತಾರೀಖಿನ ವರೆಗೂ ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರದಲ್ಲಿ ಒಂದು ಪುಸ್ತಕ ಪ್ರದರ್ಶನವನ್ನು ನಡೆಸಬೇಕೆಂದು ನಿಶ್ಚಯಿಸಿದೆ. ಪ್ರದರ್ಶನವು ಆ ಒಂದು ವಾರವೆಲ್ಲ ಕ್ಲುಪ್ತ ಕಾಲಗಳಲ್ಲಿ ಮಹಾಜನರಿಗಾಗಿ ತೆರೆದಿರುವುದು.

ತಾರೀಖುಗಳನ್ನು ಯಾವ ಕಾರಣಗಳಿಂದಲಾದರೂ ಬದಲಾಯಿಸಬೇಕಾಗಿ ಬಂದರೆ ಪತ್ರಿಕೆಗಳ ಮೂಲಕ ತಿಳಿಸಲಾಗುವುದು].

೨. ಈ ಪ್ರದರ್ಶನದಲ್ಲಿ ೧೯೦೧ನೆಯ ಇಸವಿ ಜನವರಿ ೧ನೆಯ ತಾರೀಖಿನಿಂದ ಈಚೆಗೆ ಪ್ರಕಟವಾದ ಎಲ್ಲ ಕನ್ನಡ ಪುಸ್ತಕಗಳಿಗೂ ಸ್ಥಳವುಂಟು. ಪುಸ್ತಕಗಳು ಪೂರ್ತಿಯಾಗಿಲ್ಲದಿದ್ದರೆ ಸ್ವಲ್ಪ ಭಾಗವಲ್ಲಾದರೂ ಕನ್ನಡದಲ್ಲಿರಬೇಕು. ಎಲ್ಲ ಪುಸ್ತಕಗಳೂ ೧೯೩೩ನೆಯ ಇಸವಿ ಏಪ್ರಿಲ್ ೧೫ರೊಳಗಾಗಿ ಪರಿಷತ್ತಿನ ಕಾರ್ಯಾಲಯಕ್ಕೆ ಬಂದಿರಬೇಕು.

೩. ಪುಸ್ತಕಗಳ ವಿಷಯವು ಯಾವುದಾದರೂ ಆಗಿರಬಹುದು. ಪ್ರದರ್ಶನ ಸಮಿತಿಯು ಪುಸ್ತಕಗಳನ್ನು ವಿಷಯಾನುಸಾರ ಜಾತಿ ಜಾತಿಯಾಗಿ ವಿಂಗಡಿಸಿ ಆಯಾ ಜಾತಿಗೆ ಗೊತ್ತಾದ ಸ್ಥಳದಲ್ಲಿರಿಸಲು ಅಧಿಕಾರವುಳ್ಳದ್ದಾಗಿರುತ್ತದೆ. ಸ್ಥೂಲವಾಗಿ ಜಾತಿಗಳು ಈ ಕೆಳಗೆ ಕಾಣಿಸಿರುವಂತೆ ಇರುವುವು.

(೧) ಪದ್ಯ ಕಾವ್ಯ, (೨) ನಾಟಕ, (೩) ಸಣ್ಣ ಕಥೆ, (೪) ಕಾದಂಬರಿ, (೫) ಚರಿತ್ರೆ, (೬) ಜೀವನ ಚರಿತ್ರೆ, (೭) ಪ್ರಕೃತಿ ವಿಜ್ಞಾನ, (೮) ಸಮಾಜ ವಿಜ್ಞಾನ, (೯) ಮತಾಚಾರ, (೧೦) ಸಾಹಿತ್ಯ ಮೀಮಾಂಸೆ (೧೧) ಶಾಲಾ ಪುಸ್ತಕಗಳು, (೧೨) ಸಂಕೀರ್ಣವರ್ಗ.

೪. ಪ್ರತಿಯೊಂದು ಪುಸ್ತಕದ ಜೊತೆಯಲ್ಲಿಯೂ ಅವನ್ನು ಕುರಿತ ಮುಖ್ಯ ವಿವರಗಳನ್ನು ಸೂಚಿಸುವ ಪಟ್ಟಿಯೊಂದು ಇರತಕ್ಕದ್ದು. ವಿವರಗಳು ಈ ರೀತಿ :—

(i) ಪುಸ್ತಕದ ಹೆಸರು. (ii) ಪುಸ್ತಕದ ಅಡ್ಡಹೆಸರೇನಾದರೂ ಇದ್ದರೆ ಅದು (iii) ವಿಷಯ. (iv) ಗ್ರಂಥ ಜಾತಿ. (v) ಗ್ರಂಥ ಲೇಖಕರ ಹೆಸರು ವಿಳಾಸ. (vi) ಗ್ರಂಥ ಪ್ರಕಟನ ಕರ್ತರ ಹೆಸರು, ವಿಳಾಸ. (vii) ಮೊದಲು ಪ್ರಕಟನವಾದ ತಾರೀಖು (viii) ಈಗಿನದು ಎಷ್ಟನೆಯ ಆವೃತ್ತಿ. (ix) ಈಗಿನ ಆವೃತ್ತಿಯ ತಾರೀಖು. (x) ಬೆಲೆ,= ಉತ್ತಮ ಪ್ರತಿ. (xi) ಬೆಲೆ,—ಸಾಮಾನ್ಯ. ಪ್ರತಿ. (xii) ವಿಶೇಷಾಂಶಗಳು (ಪುಸ್ತಕಕ್ಕೆ ದೊರೆತಿರುವ ಬಹುಮಾನ ಇತ್ಯಾದಿ ಏನಾದರೂ ಇದ್ದರೆ ಅದು).

೫. ಒಂದೇ ಪುಸ್ತಕವು ಎರಡು ಮೂರು ತೆರಗಳಲ್ಲಿ ಪ್ರಕಟವಾಗಿದ್ದರೆ ಪ್ರತಿಯೊಂದು ತೆರದ ಪ್ರತಿಯೂ ಒಂದೊಂದು ಇರಬೇಕು.

೬. ಪ್ರದರ್ಶನವು ಮುಗಿಯುವವರೆಗೂ ಅಲ್ಲಿರತಕ್ಕ ಪುಸ್ತಕ ಪ್ರತಿಗಳನ್ನು ಅಲ್ಲಿಂದ ಯಾರೂ ತೆಗೆದುಕೊಂಡು ಹೋಗತಕ್ಕದ್ದಲ್ಲ. ಪುಸ್ತಕಗಳಿಗೆ ಸಂಬಂಧಪಟ್ಟ ಹಸ್ತಪತ್ರಿಕೆಗಳನ್ನು ಪ್ರಕಟನ ಕರ್ತರು ಕಳುಹಿಸಿದರೆ ಅವುಗಳನ್ನು ಪ್ರೇಕ್ಷಕರಲ್ಲಿ ಹಂಚಲು ಏರ್ಪಾಟು ಮಾಡಲಾಗುವುದು. ಪ್ರೇಕ್ಷಕರು ಯಾರಾದರೂ ಪುಸ್ತಕವನ್ನು ಕೊಂಡುಕೊಳ್ಳಲು ಬಯಸಿದಲ್ಲಿ ಅವರ ಹೆಸರು ವಿಳಾಸಗಳನ್ನು ಗುರುತು ಮಾಡಿಕೊಂಡು ಪ್ರಕಟನ ಕರ್ತರಿಗೆ ತಿಳಿಸಿ ಮಾರಾಟಕ್ಕೆ ಅನುಕೂಲ ಮಾಡಲಾಗುವುದು.

೭. ಪ್ರದರ್ಶನ ಮುಗಿದ ಬಳಿಕ ಮಾರದೆ ಉಳಿದಿರುವ ಗ್ರಂಥಗಳನ್ನು ಪ್ರಕಟನ ಕರ್ತರಿಗೆ ಪರಿಷತ್ತಿನ ಖರ್ಚಿನಿಂದ ವಾಪಸು ಕಳುಹಿಸಲಾಗುವುದು. ಅವನ್ನು ಪರಿಷತ್ತಿನ ಸರಸ್ವತೀ ಭಂಡಾರಕ್ಕೆ ಉಚಿತವಾಗಿ ಕೊಟ್ಟರೆ ಕೃತಜ್ಞತೆಯೊಡನೆ ಸ್ವೀಕರಿಸಲಾಗುವುದು.

೮. ಎಲ್ಲ ಸಂದಿಗ್ಧ ವಿಚಾರಗಳಲ್ಲಿಯೂ ಪರಿಷತ್ತು ಯುಕ್ತ ತೋರಿದಂತೆ ತೀರ್ಮಾನಿಸಿ ಪ್ರದರ್ಶನವು ಯಶಸ್ವಿಯಾಗಿ ಸಾರ್ಥಕವಾಗಲು ತಕ್ಕ ಏರ್ಪಾಟುಗಳನ್ನು ನಡೆಸುವುದು.

೯. ಈ ಪ್ರದರ್ಶನ ಸಮಾರಂಭಕ್ಕೆ ಎಲ್ಲ ಗ್ರಂಥ ಲೇಖಕರೂ ಸಂಪಾದಕರೂ ಪ್ರಕಟನ ಕರ್ತರೂ ಸಹಾಯವಾಗಬೇಕೆಂದು ಪರಿಷತ್ತು ಬೇಡುತ್ತದೆ. ತನಗೆ ದೊರೆತ ಸಹಾಯವನ್ನು ಪರಿಷತ್ತು ಕೃತಜ್ಞತೆಯಿಂದ ಪ್ರಕಾಶಪಡಿಸುವುದು.

೧೦ ಪ್ರಕಟನ ಕರ್ತರಿಗೂ ವಾಚಕರಿಗೂ ಪರಸ್ಪರ ಪರಿಚಯವನ್ನೂ ಸಹಾನುಭೂತಿಯನ್ನೂ ಬೆಳಸಿ, ಸಾಹಿತ್ಯಾಭಿವೃದ್ಧಿಯು ಹೇಗೆ ಸರ್ವತೋಮುಖವಾಗಿ ನಡೆಯುತ್ತಿರುವುದೆಂಬುದನ್ನೂ ಪುಸ್ತಕಗಳ ಒಳಮೈ ಹೊರಮೈಗಳೆರಡೂ ಹೇಗೆ ಕ್ರಮೇಣ ಉತ್ತಮವಾಗುತ್ತಿರುವುದೆಂಬುದನ್ನೂ ಮಹಾಜನಗಳ ಅವಗಾಹನೆಗೆ ತಂದು, ಸಾಹಿತ್ಯ ಪ್ರಚಾರಕ್ಕೆ ಅವರ ಸಹಕಾರವನ್ನು ಹೆಚ್ಚಾಗಿ ಸಂಪಾದಿಸಿ ಕೊಡಬೇಕೆಂಬುದು ಈ ಪ್ರದರ್ಶನದ ಉದ್ದೇಶ, ಈ ಸಲ ಪ್ರಕಟನ ಕರ್ತರೂ ಮಹಾಜನರೂ ಸಹಕರಿಸಿ ಈ ಪ್ರದರ್ಶನವನ್ನು ಯಶಸ್ವಿಯನ್ನಾಗಿ ಮಾಡಿದರೆ, ಮುಂದೆ ಆಗಾಗ ಇಂಥ ಏರ್ಪಾಡು ನಡೆಸಬೇಕೆಂದು ಪರಿಷತ್ತು ಆಶೆಯಿಟ್ಟುಕೊಂಡಿದೆ.

ಮೇಲೆ ೮ನೆಯ ಪ್ರಕರಣದಲ್ಲಿ ಕಾಣಿಸಿರುವ ವಿವರಗಳನ್ನು ತಿಳಿಸುವಬಗ್ಗೆ ದರಖಾಸ್ತು ನಮೂನೆಯನ್ನು ಅಚ್ಚುಮಾಡಿಸಿಟ್ಟಿದೆ. ಪ್ರಕಟನ ಕರ್ತರು ತಾವು ಎಷ್ಟು ಪುಸ್ತಕಗಳನ್ನು ಕಳುಹಿಸುವರೆಂಬುದನ್ನು ದಯಮಾಡಿ ತಿಳಿಸಿದರೆ, ಅವರಿಗೆ ಅಷ್ಟು ಆ ದರಖಾಸ್ತು ನಮೂನೆಗಳನ್ನು ಕಳುಹಿಸಲಾಗುವುದು.

ಎಲ್ಲ ವಿವರಗಳನ್ನೂ ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿದುಕೊಳ್ಳಬಹುದು. :—

ವ್ಯವಸ್ಥಾಪಕರು, ಸಾಹಿತ್ಯ ಪ್ರದರ್ಶನ ಸಮಿತಿ,
ಕರ್ಣಾಟಕ ಸಾಹಿತ್ಯ ಪರಿಷತ್ತು,
ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಬೆಂಗಳೂರು ಸಿಟಿ.

# ಕರ್ಣಾಟಕ ಸಾಹಿತ್ಯ ಪರಿಷತ್ತು

## ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ, ಬೆಂಗಳೂರು ಸಿಟಿ.

---

### ವಿರಾಮ ಕಾಲದಲ್ಲಿ ಆಧುನಿಕ ವಿಚಾರೋಪನ್ಯಾಸಗಳು

೧. ಉಪಾಧ್ಯಾಯರುಗಳಿಗೂ ಇತರ ಸಾರ್ವಜನಿಕ ವಿಚಾರನಿಷ್ಠರಿಗೂ ಆಧುನಿಕ ಪ್ರಪಂಚದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಅನುಕೂಲಪಡಿಸಿಕೊಡಬೇಕೆಂಬ ಉದ್ದೇಶದಿಂದಲೂ, ಅಂಥಾ ವಿಷಯಗಳನ್ನು ಕುರಿತು ಕನ್ನಡದಲ್ಲಿ ಸಾರ್ವಜನಿಕವಾಗಿ ಮಾತನಾಡುವ ಪದ್ಧತಿಯನ್ನು ಪ್ರೋತ್ಸಾಹಿಸುವ ಉದ್ದೇಶದಿಂದಲೂ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಮುಂದಿನ ಬೇಸಗೆಯ ರಜಾ ಕಾಲದಲ್ಲಿ—ಎಂದರೆ ೧೯೩೪ನೆಯ ಮೇ ತಿಂಗಳಲ್ಲಿ, ಸುಮಾರು ೬ನೆಯ ತಾರೀಖು ಭಾನುವಾರದಿಂದ ೧೨ನೆಯ ತಾರೀಖು ಶನಿವಾರದ ವರೆಗೆ—ಒಂದು ವಾರ ಕನ್ನಡದಲ್ಲಿ ಕೆಲವು ಪ್ರಕೃತೋಪಯುಕ್ತ ವಿಷಯಗಳಮೇಲೆ ಪ್ರಸಿದ್ಧ ಪಂಡಿತರಿಂದ ಉಪನ್ಯಾಸಗಳನ್ನು ಕೊಡಿಸಬೇಕೆಂದು ನಿಶ್ಚಯಿಸಿದೆ.

[ಯಾವ ಕಾರಣದಿಂದಲಾದರೂ ತಾರೀಖುಗಳನ್ನು ಬದಲಾಯಿಸಬೇಕಾಗಿ ಬಂದಲ್ಲಿ, ಅವನ್ನು ಪತ್ರಿಕೆಗಳ ಮೂಲಕ ತಿಳಿಸಲಾಗುವುದು.]

೨. ಈ ಉಪನ್ಯಾಸಗಳಿಗೆ ಕನ್ನಡ ನಾಡಿನ ಮಾಧ್ಯಮಿಕ (ಮಿಡ್ಲ್) ಮತ್ತು "ನಾರ್ಮಲ್" ಪಾಠಶಾಲೆಗಳ ಎಲ್ಲ ಉಪಾಧ್ಯಾಯರುಗಳೂ ಹೈಸ್ಕೂಲುಗಳ ಪಂಡಿತರುಗಳೂ ಉಚಿತವಾಗಿ ಬರಬಹುದು. ಹೀಗೆ ಬರಲು ಇಷ್ಟಪಡುವವರು ತಾವು ಉಪಾಧ್ಯಾಯರು ಅಥವಾ ಪಂಡಿತರು ಎಂಬುದನ್ನು ತಿಳಿಸುವ ಪರಿಚಯ ಪತ್ರವನ್ನು ತಮ್ಮ ಪಾಠಶಾಲೆಯ ಮುಖ್ಯಾಧಿಕಾರಿಯಿಂದ (ಹೆಡ್ ಮಾಸ್ಟರ್ ಅಥವಾ ಇನ್‌ಸ್ಪೆಕ್ಟರಿಂದ) ಪಡೆದು ತಂದಿರಬೇಕು.

೩. ಪರಿಷತ್ಸದಸ್ಯರಲ್ಲದ ಇತರರಿಗೆ ಉಪನ್ಯಾಸ ವಾರಕ್ಕೆ ಒಟ್ಟು

ತಲಾ ಒಂದು ರೂಪಾಯಿಯಂತೆ ಟಿಕೇಟ್ ಮೂಲಕ ಪ್ರವೇಶಾಧಿಕಾರ ದೊರೆಯುವುದು.

೪. ಉಪನ್ಯಾಸ ವಾರದಲ್ಲಿ ಕಾರ್ಯಕ್ರಮವು ಸಾಮಾನ್ಯವಾಗಿ ಈ ರೀತಿ ಇರುವದು.

ಬೆಳಿಗ್ಗೆ ೮-೩೦—೧೦-೩೦ . . ಉಪನ್ಯಾಸ ಪ್ರಶ್ನೋತ್ತರಗಳು.
ಮಧ್ಯಾಹ್ನ ೩—೫ . . ಕಾವ್ಯಪಠನ.
ಸಾಯಂಕಾಲ ೫-೩೦--೭-೩೦ ಉಪನ್ಯಾಸ, ದೀಪ ಚಿತ್ರಪ್ರದರ್ಶನ

೫. ಉದ್ದೇಶದಲ್ಲಿರುವ ಉಪನ್ಯಾಸಗಳ ವಿಷಯಗಳನ್ನು ಕೆಳಗೆ ಕಾಣಿಸಿದೆ:—

(೧) ಕಾವ್ಯ ಸ್ವರೂಪ (ಕರ್ಣಾಟಕ ಮತ್ತು ಆಂಗ್ಲೇಯ)
(೨) ಕನ್ನಡದಲ್ಲಿ ಹೊಸ ಸಾಹಿತ್ಯದ ರೀತಿ
(೩) ಜೀವ ಶಾಸ್ತ್ರ (Science of Life)
(೪) ಭೌತ ಮತ್ತು ಅಧ್ಯಾತ್ಮ ವಿಚಾರಗಳು
(೫) ಪರಿಣಾಮವಾದ (Evolution)
(೬) ಅಂತರ ರಾಷ್ಟ್ರೀಯ ಸೌಹಾರ್ದ (Inter-Nationalism)
(೭) ಇಂಡಿಯಾದೇಶದ ಸಂಯುಕ್ತ ರಾಜ್ಯ ರಚನೆ (Indian Federation)
(೮) ಪ್ರಪಂಚದ ಈಗಿನ ಬಡತನ
(೯) ಭಾಷಾ ಶಾಸ್ತ್ರ
(೧೦) ಮನಶ್ಶಾಸ್ತ್ರ
(೧೧) ಹಿಂದೂ ದರ್ಶನಗಳು
(೧೨) ಹೊಯ್ಸಳ ವಾಸ್ತು ಶಿಲ್ಪ
(೧೩) ಕಾಳಿದಾಸನ ಕವಿತ್ವ
(೧೪) ಹೊಸ ಪ್ರಪಂಚದಲ್ಲಿ ಸ್ತ್ರೀಯರ ಕರ್ತವ್ಯ

(ಉಪನ್ಯಾಸಗಳ ಹೆಸರುಗಳೂ, ವಿಷಯಗಳೂ ಇತರ ವಿವರಗಳೂ ಅನುಕೂಲಾನುಸಾರ ಬದಲಾವಣೆಯಾಗಬಹುದು.)

೬. ಈ ಉಪನ್ಯಾಸಗಳಿಗೆ ಬರಲಿಷ್ಟವುಳ್ಳವರು ೧೯೩೪ನೆಯ ಇಸ್ವಿ ಏಪ್ರಿಲ್ ೩೦ನೆಯ ತಾರೀಖಿನೊಳಗಾಗಿ ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಬೇಕು. ಆ ತಾರೀಖಿನಿಂದಾಚೆಗೆ ಬರೆಯುವವರಿಗೆ ಪ್ರವೇಶ ದೊರೆತೀತೆಂದು ಭರವಸೆ ಕೊಡಲಾಗುವುದಿಲ್ಲ.

೭. ಪರಸ್ಥಳದಿಂದ ಬರತಕ್ಕವರು ಭೋಜನ ವಸತಿಗಳನ್ನು ಬಯಸುವ ಪಕ್ಷದಲ್ಲಿ ಆ ವಿಷಯವನ್ನು ತಮ್ಮ ದರಖಾಸ್ತಿನಲ್ಲಿ ತಿಳುಹಿಸಿ ತಲೆಯೊಂದಕ್ಕೆ ವಾರಕ್ಕೆಲ್ಲ ಒಂದು ರೂಪಾಯಿ ಎಂಟಾಣೆಯಂತೆ ಆ ದರಖಾಸ್ತಿನೊಂದಿಗೆ ಕಳುಹಿಸಿದರೆ ಸಾಧ್ಯವಾದಮಟ್ಟಿಗೂ ಅವರಿಗೆ ಅನುಕೂಲಪಡಿಸಲಾಗುವುದು.

೮. ಈ ಉಪನ್ಯಾಸೋತ್ಸವಗಳಿಗೆ ಮಹಾಜನರು ಬಹು ಸಂಖ್ಯೆಯಲ್ಲಿ ದಯಮಾಡಿಸಿ, ಪ್ರಸಿದ್ಧ ವಿದ್ವಾಂಸರ ಉಪನ್ಯಾಸಾದಿಗಳಿಂದ ಜ್ಞಾನ ಲಾಭ ಪಡೆದು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉದ್ದೇಶವನ್ನು ಈಡೇರಿಸಬೇಕೆಂದು ಪ್ರಾರ್ಥನೆ.

ಈ ಸಲದ ಪ್ರಯತ್ನವು ಚೆನ್ನಾಗಿ ನೆರವೇರಿದರೆ, ಮುಂದೆ ಇಂಥಾ ಏರ್ಪಾಟನ್ನು ಇನ್ನೂ ವಿಸ್ತಾರವಾದ ರೀತಿಯಲ್ಲಿ ವರ್ಷ ವರ್ಷವೂ ನಡೆಸಬೇಕೆಂದು ಯೋಚನೆಯುಂಟು.

ವ್ಯವಸ್ಥಾಪಕರು, ಆಧುನಿಕ ವಿಚಾರೋಪನ್ಯಾಸ ಸಮಿತಿ,
ಕರ್ಣಾಟಕ ಸಾಹಿತ್ಯ ಪರಿಷತ್ತು,
ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ,
ಬೆಂಗಳೂರು ಸಿಟಿ.

# ಉತ್ತರ ಹಿಂದುಸ್ಥಾನದಲ್ಲಿಯ
# ಶ್ರೀ ವೀರಶೈವರ ಮಠಗಳು

— ೦ —

(ಲೇಖಕರು:- ಶ್ರೀ ಗುರುಲಿಂಗ ದೇವರು ಬೆಳಗಾಂವ)
ವಾಸಸ್ಥಳ ಕಾಶಿ.

ಜಗತ್ತಿನಲ್ಲಿ ತೋರುತ್ತಿದ್ದ ಸಮಾಜಗಳೆಲ್ಲವು ಊರ್ಜಿತಾವಸ್ಥೆಯನ್ನು ಹೊಂದಬೇಕಾದರೆ ಆಯಾಯ ಸಮಾಜಗಳಲ್ಲಿ ಅವತರಿಸುತ್ತಿರುವ ಸತ್ಪುರುಷರಿಗೆ ಅವಶ್ಯವಾಗಿ ರಾಜಾಶ್ರಯು ಬೇಕಾಗುವದು. ಆದುದರಿಂದಲೇ ಅವರ ಸಮಾಜದ ಪ್ರಸಾರಣೆಯ ಕಾರ್ಯವು ಎಲ್ಲಭಾಗಗಳಲ್ಲಿಯೂ ಅವ್ಯಾಹತವಾಗಿ ನಡೆಯಬಲ್ಲದು. ಮತ್ತು ಇದಲ್ಲದೆ ಕೆಲವು ಕಡೆಗಳಲ್ಲಿ ರಾಜರೇ ಈ ಪವಿತ್ರಕಾರ್ಯಗಳನ್ನು ಕೈಕೊಂಡು ಕೆಲಸ ಮಾಡುತ್ತಿದ್ದ ರೂಢಿಯಾದರೂ ಕಂಡು ಬರುವದು. ಅಂಥ ಸಮಯದಲ್ಲಿ ಆ ಸಮಾಜವು ಸರ್ವಾಂಗ ಸುಂದರವಾಗಿ ಶೋಭೆಗೊಳ್ಳುವುದರಲ್ಲಿ ಸಂದೇಹವೇ?

ಬೌದ್ಧ ಧರ್ಮದ ತತ್ವಗಳು ಆತನಕಾಲಕ್ಕೆ ಜಗತ್ತಿನಲ್ಲಿ ಅಷ್ಟೇನು ವ್ಯಾಪಿಸಿರಲಿಲ್ಲ. ಆದರೆ ಆ ಧರ್ಮವನ್ನು ಸ್ವೀಕರಿಸಿದ ಸಮ್ರಾಟ್ ಅಶೋಕನ ಕಾಲಕ್ಕೆ ಮಾತ್ರ ಅವು ವ್ಯಾಪಿಸಿ ಏಸಿಯಾಖಂಡವೆಲ್ಲ ಆತನ ಧರ್ಮದ ಅನುಯಾಯಿಗಳನ್ನಾಗಿ ಮಾಡಿದವೆಂಬುದು ಇತಿಹಾಸಜ್ಞರಿಗೆ ಅರಿದ ಸಂಗತಿಯೇಸರಿ.

ಇವರಂತೆಯೇ ನಮ್ಮ ವೀರಶೈವ ಸಮಾಜವು ೧೨ ನೆಯ ಶತಮಾನದ ಮಧ್ಯಭಾಗದಲ್ಲಿ ಆಗಿಹೋದ ಬಿಜ್ಜಳರಾಜನ ಮಂತ್ರಿಗಳಾದ ಕಲ್ಯಾಣದ ಶ್ರೀ ಬಸವೇಶ್ವರರ ಸಹಾಯದಿಂದಲೇ ಬೆಳೆದು ಕರ್ನಾಟಕ ದೇಶದ ಎಲ್ಲಕಡೆಗಳಲ್ಲಿ ತಮಿಳು, ತೆಲಗು, ಮತ್ತು ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಬೆಳಗುತ್ತಲಿದ್ದಿತು. ಶ್ರೀ ಬಸವೇಶ್ವರರು ಹೋದ ತರುವಾಯು ವೀರಶೈವ ಮತದ ಪರಿಸ್ಥಿತಿಯು ವಿಪರೀತವಾದುದರಿಂದ

೨೦೦—೩೦೦ ವರ್ಷಗಳವರೆಗೆ ಇನ್ನಾವ ಅನ್ಯ ಅರಸರ, ಅಥವಾ ಮಂತ್ರಿಗಳ ಆಶ್ರಯವು ಈ ಸಮಾಜಕ್ಕೆ ದೊರೆಯದಿದ್ದರೂ ಆಗಾಗ್ಗೆ ಅನ್ಯಮತೀಯರಿಂದ ಬರತಕ್ಕ ಆಕ್ರಮಣಗಳನ್ನು ತಡೆಯುತ್ತ ಶ್ರೀ ಬಸವೇಶ್ವರರ ಅನುಯಾಯಿಗಳು ಈ ಸಮಾಜದ ಮತ ಪ್ರಸಾರಣೆಯ ಕಾರ್ಯವನ್ನು ನಡೆಸುತ್ತಲಿದ್ದರೆಂಬುದು ಆ ಕಾಲದಲ್ಲಿ ಬರೆದ ಗ್ರಂಥಗಳಿಂದ ಗೋಚರವಾಗುವದು.

೧೬ನೇ ಶತಮಾನದ ಆರಂಭದಲ್ಲಿ ವೀರಶೈವ ಮತಾವಲಂಬಿಗಳಾದ ಕೆಳದಿಯ ಶ್ರೀ ಸದಾಶಿವನಾಯಕರು ಶ್ರೀ ಕೃಷ್ಣರಾಯರ ಕಾಲದಲ್ಲಿ ತಮ್ಮ ತಂದೆಯಾದ ಭದ್ರಪ್ಪನಾಯಕರಂತೆ ವಿಜಯನಗರದ ಪಾಳ್ಯಗಾರರಾಗಿ ರಾಜಧಾನಿಯಾದ ಇಕ್ಕೇರಿಯಲ್ಲಿ ರಾಜ್ಯವಾಳಲಾರಂಭಿಸಿದರು. ಇವರ ಕಾಲದಿಂದ ಈ ವೀರಶೈವ ಸಮಾಜಕ್ಕೆ ಮತ್ತೆ ರಾಜಾಶ್ರಯವು ದೊರೆಯಲುಪಕ್ರಮಿಸಿತೆಂಬ ಸಂಗತಿಯು ಸ್ಮರಣದಲ್ಲಿ ಇಡತಕ್ಕದ್ದಾಗಿದೆ.

ಇವರ ತರುವಾಯ ಇವರ, ದೊಡ್ಡ ಸಂಕಣ್ಣನಾಯಕರೆಂಬ ಹಿರಿಯಮಕ್ಕಳು ಕ್ರಿ ಶ. ೧೫೪೬ ರಿಂದ ರಾಜ್ಯವನ್ನಾಳಲುಪಕ್ರಮಿಸಿದರು. ಇವರು ಯೋಗ್ಯರೀತಿಯಲ್ಲಿ ಪ್ರಜಾ ಪಾಲನ ಕಾರ್ಯವನ್ನು ಕೈಕೊಂಡು ತಮ್ಮ ರಾಜ್ಯವನ್ನು ಬೆಳಸಿದ್ದಲ್ಲದೆ ವೀರಶೈವ ಸಮಾಜದಲ್ಲಿ ಮಠಗಳನ್ನೂ ಬೆಳಸಿದರು. ದೊಡ್ಡಸಂಕಣ್ಣ ನಾಯಕರಿಗೆ ತಮ್ಮ ಅಂತ್ಯ ಸಮಯದಲ್ಲಿ ಎಂದರೆ ಸುಮಾರು ಕ್ರಿ ಶ. ೧೫೫೫ ರಲ್ಲಿ ಯಾತ್ರೆಮಾಡಬೇಕೆಂಬ ಇಚ್ಛೆಯುಂಟಾದ್ದರಿಂದ ಸನ್ಯಾಸಿಯ ವೇಷಧಾರಿಗಳಾಗಿ ಅನೇಕ ಜಂಗಮರೊಡನೆ ತೀರ್ಥ ಕ್ಷೇತ್ರಗಳ ದರ್ಶನಗಯ್ಯುತ್ತ ಉತ್ತರದಿಕ್ಕಿಗೆ ಹೊರಟು ಕ್ರಮವಾಗಿ ದಿಲ್ಲಿಗೆ ಬಂದು ತಲ್ಪಿದರು.

ದಿಲ್ಲಿಯಲ್ಲಿ ಅಂಕುಶಖಾನನೆಂಬೊಬ್ಬ ವಜೀರನು ಖಡ್ಗದ ಕಲೆಯಲ್ಲಿ ತನ್ನಷ್ಟು ಚತುರರು ಯಾರೂ ಕಾಣಲಾರರೆಂಬ ಅಹಂಕಾರದಿಂದ "ಯಾರಾದರೂ ಖಡ್ಗದ ವಿಷಯದಲ್ಲಿ ಚತುರರಾಗಿದ್ದರೆ ಅವರು ನಾನು ಕಟ್ಟಿಸಿದ ಖಡ್ಗವನ್ನು ಬಿಚ್ಚಿಸಿ ನನ್ನೊಡನೆ ಯುದ್ಧಕ್ಕೆ ಬರಬಹುದಾಗಿ'' ಸಾರಿ ಬಿಡುಮಳ್ಳ ತನ್ನ ಖಡ್ಗವನ್ನು ದಿಲ್ಲಿಯ ಮಹಾದ್ವಾರದ ಮೇಲ್ಗಡೆಯಲ್ಲಿ ಕಟ್ಟಿಸಿದ್ದನು. ಸಂಕಣ್ಣನಾಯಕರು ದಿಲ್ಲಿ

ನಗರವನ್ನು ಪ್ರವೇಶಿಸಿದ ಕಾಲದಲ್ಲಿ, ಮಹಾದ್ವಾರದ ಮೇಲ್ಭಾಗದಲ್ಲಿ ಕಟ್ಟಿದ ಬಿರುದಿನ ಖಡ್ಗವನ್ನು ಕಂಡು ಅಲ್ಲಿನ್ನ ದ್ವಾರಪಾಲಕರಿಗೆ "ಇದೇನು" ಎಂದು ಕೇಳಲು ಅವರು ಇದ್ದ ಸಂಗತಿಯನ್ನು ಸಂಕಣ್ಣ ನಾಯಕರಿಗೆ ಅರುಹಿದರು. ಅದನ್ನು ಕೇಳಿ ವೀರಶ್ರೇಷ್ಠರಾದ ಸಂಕಣ್ಣನಾಯಕರು ಸೈರಿಸದೆ ಅಂಕುಶಖಾನನ ಅಹಂಕಾರವನ್ನು ಮುರಿಯಬೇಕೆಂಬ ಉದ್ದೇಶದಿಂದ ಅಲ್ಲಿ ಕಟ್ಟಿದ ಖಡ್ಗವನ್ನು ಜಿಚ್ಚಿಸಿದರು. ಈ ಸಂಗತಿಯನ್ನು ಸೇವಕರಿಂದ ಕೇಳಲು ಹುಮಾಯೂನ್ ಬಾದಶಹರು ತಮಗೆ ವೈರಿಯಾದ ಅಂಕುಶಖಾನನ ಗರ್ವವನ್ನು ನಾಶಮಾಡಿಸಲೇ ಬೇಕೆಂಬ ಬಯಕೆಯು ಬಹುದಿವಸಗಳಿಂದ ಮನಸಲ್ಲಿದ್ದದ್ದರಿಂದಲೂ, ಅದು ತಮಗೆ ತೀರ ಅಸಾಧ್ಯವೆಂದು ತಿಳಿದುಬಂದದ್ದರಿಂದಲೂ, ಅಂಥವನ ಅಳಿಗಾಲವು ಈಗ ತಾನೇ ಸಮೀಪಿಸಿತೆಂಬುದಾಗಿ ಬಹಳೇ ಉತ್ಸಾಹದಿಂದ ಆ ಯತಿಯ ವೇಷದಲ್ಲಿ ಇದ್ದ ಸಂಕಣ್ಣ ನಾಯಕರನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿದರು. ಆ ಬಳಿಕ ಎಲ್ಲ ವಜೀರರೊಡನೆ ಆಲೋಚಿಸಿ ಇವರೀರ್ವರ (ಸಂಕಣ್ಣ ಅಂಕುಶಖಾನರ) ಯುದ್ಧವು ಸಾಮಾಜಿಕರ ಎದುರಿನಲ್ಲಿ ಸಾಗಲೆಂಬುದಾಗಿ ತೀರ್ಮಾನಿಸಲು ಬಾದಶಹರ ತೀರ್ಮಾನದಂತೆ ಎಲ್ಲವೂ ಸಿದ್ಧವಾಗಲು ಉಭಯರ ಖಡ್ಗಯುದ್ಧವು ಪ್ರಾರಂಭವಾಯಿತು. ಇವರೀರ್ವರ ಖಡ್ಗದ ವಿಷಯದಲ್ಲಿಇರುವ ಕುಶಲತನವು ಮಹದಾಶ್ಚರ್ಯವನ್ನುಂಟು ಮಾಡುವದಾಗಿದ್ದುದರಿಂದ ಅಲ್ಲಿನೆರದವರೆಲ್ಲರು ಆಶ್ಚರ್ಯದಿಂದ ಕೂಡಿದರೆಂಬುದನ್ನು ಬೇರೆಹೇಳಬೇಕಾದುದೇನೂ ಇಲ್ಲ. ಖಡ್ಗಕಲೆಯಲ್ಲಿ ತೀರ ಬಲ್ಲಿದರಾದ ಸಂಕಣ್ಣನಾಯಕರು ನೋಡುನೋಡುವಷ್ಟರಲ್ಲಿಯೇ "ನಾಗರಮುರಿ" ಎಂಬ ತಮ್ಮ ಖಡ್ಗದಿಂದ ಆ ಅಂಕುಶಖಾನನ ಟೊಂಕವನ್ನು ಸೀಳಿ ಎರಡು ಭಾಗ ಮಾಡಿದರೂ ಇಷ್ಟಕ್ಕಿದ್ದಹಾಗೆಯೇ ತೋರುವ ಅಂಕುಶಖಾನನ ಟೊಂಕವನ್ನು ಕಂಡು ಸಂಕಣ್ಣನವರ ಖಡ್ಗದಅನುಭವವು ಬಹಳೇ ಮಹತ್ವದ್ದಾಗಿದೆ ಎಂದು ನಂಬಿ ಸಭಿಕರೆಲ್ಲರು ಸೋಜಿಗಗೊಂಡರು. ಹುಮಾಯೂನ್ ಬಾದಶಹರಂತೂ ಇವರ ಶಸ್ತ್ರದಸಾಹಸವನ್ನುನೋಡಿ ಮತ್ತಿಷ್ಟು ಸೋಜಿಗಗೊಂಡು ಸಂಕಣ್ಣನಾಯಕರನ್ನು ಆದರದಿಂದ ಬರಮಾಡಿಕೊಂಡು ತಮ್ಮಬಳಿಯಲ್ಲಿಯೇ ಉಚ್ಚಾಸನದಲ್ಲಿ ಕುಳ್ಳಿರಿಸಿ ಅವರ ಅನುಯಾಯಿಗಳಿಂದ ಅವರ ಸಾದ್ಯಂತ ಚರಿತ್ರವನ್ನುಕೇಳಿ "ಸದಾಶಿವನಾಯಕರ ಮಕ್ಕಳಾಗಿದ್ದರಿಂದಲೇ ಈ

ತರಹದ ಯುದ್ಧ ಚಾತುರ್ಯವು ಸಾಧಿಸಿರುವದೆಂಬುದಾಗಿ ಕೊಂಡಾಡಿದರು. ಅಮೇಲೆ

ಬಿರುವಮ್ ಹರಿತಚ್ಛಾಯ ಪತಾಕಮ್ ಕೇತನಂ ದದೌ
ಬಹುದ್ರವಿಣದಮ್ ದೇಶಂ ಸ್ವದೇಶಾಭ್ಯಂತರೆ ದದೌ
ವಾಸಾಂಸಿ ಚ ವಿಚಿತ್ರಾಣಿ ನೂತ್ನಾನ್ಯಾಭರಣಾನಿ ಚ

"ಬಿರುಪನ್ನು, ಹಸರುಬಣ್ಣದ ನಿಶಾನಿಯನ್ನು, ತನ್ನ ರಾಜ್ಯದಲ್ಲಿಯ ಒಳ್ಳೇ ಸಂಪತ್ತುಳ್ಳ ದೇಶವನ್ನು ತರತರಹದ ಬಟ್ಟೆಗಳನ್ನು ಮತ್ತು ಹೊಸ ಒಡವೆಗಳನ್ನು ಅರ್ಪಿಸಿದನು." ಎಂಬುದಾಗಿ "ಶಿವತತ್ವರತ್ನಾಕರ"ದ ಆನೆಯ ಕಲ್ಲೋಲವರ್ಣನೆಯ ತರಂಗದಿಂದಲೂ "ಕೆಳದಿನೃಪವಿಜಯ" ಗ್ರಂಥದಿಂದಲೂ ಸ್ಪಷ್ಟವಾಗಿ ಕಂಡುಬರುವದು.

ಆಬಳಿಕ ಸಂಕಣ್ಣನಾಯಕರು "ತೀರ್ಥಯಾತ್ರೆಗಾಗಿಯೇ ಹೊರಟ ಈಗ ನಾನು ಈ ಆಭರಣಗಳನ್ನು ಸ್ವದೇಶಕ್ಕೆ ಒಯ್ಯುವದು ಅಯೋಗ್ಯವಾದದ್ದರಿಂದ ನೀವು ಕೊಟ್ಟ ಈ ಒಡವೆಗಳನ್ನು ನಿಮ್ಮ ರಾಷ್ಟ್ರದಲ್ಲಿಯೇ ಜಂಗಮರ ತೃಪ್ತಿಗಾಗಿ ಸಲ್ಲುವ ಹಾಗೆ ಏರ್ಪಡಿಸಿ ಹೋಗುವೆನು. ಆದರೆ ಅದರಂತೆ ಆಯಾಯ ಸ್ಥಳಗಳಲ್ಲಿ ಮಠಗಳನ್ನು ಕಟ್ಟಿಸಲು, ಮತ್ತು ಆಯಾಯ ಸ್ಥಳಗಳಲ್ಲಿ ಭೂಸ್ವಾಸ್ಥ್ಯಗಳನ್ನು ಹಾಕಿಸಿಕೊಡಲು ಮಾತ್ರ ದೊರೆಗಳ ಅಪ್ಪಣೆಯು ದೊರೆಯಬೇಕಾಗಿ ಕೇಳಿಕೊಳ್ಳಲು ದಿಲ್ಲೀಶ್ವರರು ಅವರ ಇಚ್ಛೆಯಂತೆ ದಿಲ್ಲಿ, ಆಗ್ರಾ, ಪ್ರಯಾಗ, ಕಾಶೀ, ಗಯಾ, ಈ ಸ್ಥಾನಗಳಲ್ಲಿರತಕ್ಕ ತಮ್ಮ ಅಧಿಕಾರಿಗಳಿಗೆ ಅಪ್ಪಣೆಯನ್ನೀಯಲು ಆ ಪ್ರಕಾರವಾಗಿ ದಿಲ್ಲಿಯಲ್ಲಿ "ಚಾವಲಕೀಮುಂಡಿ" ಎಂಬ ಓಣಿಯಲ್ಲಿ ಒಂದು ಸುಂದರವಾದ ಮಠದ ನಿರ್ಮಾಣವನ್ನು ಮಾಡಿಸಿ ಅಲ್ಲಿ ಒಬ್ಬ ಜಂಗಮರನ್ನಿಟ್ಟರು. ಇದೇ ರೀತಿಯಾಗಿ ಆಗ್ರಾ ಪ್ರಯಾಗ (ದಾರಾಗಂಜ)ಗಳಲ್ಲಿಯೂ ಏರ್ಪಡಿಸಿ ಮುಂದೆ ಶ್ರೀಕ್ಷೇತ್ರ ಕಾಶಿಗೆ ತಮ್ಮ ಪ್ರಯಾಣವನ್ನು ಬೆಳೆಸಿದರು. ಕಾಶಿಯಲ್ಲಿ ಗಂಗೆ, ಮಣಿಕರ್ಣಿಕೆ ತೀರ್ಥಗಳ ಸ್ನಾನವಾದಬಳಿಕ ಶ್ರೀ ವಿಶ್ವನಾಥ ಅನ್ನಪೂರ್ಣೆ ಮೊದಲಾದ ದೇವತೆಗಳ ದರ್ಶನಾಶೀರ್ವಾದಗಳನ್ನು ಪಡೆದು ಪಂಚಕ್ರೋಶ ಯಾತ್ರೆಯನ್ನು ಮುಗಿಸಿ, ಬಂದು ಕಾಶಿಯಲ್ಲಿ ಮಠವನ್ನು ನಿರ್ಮಿಸಲೇ ಬೇಕೆಂಬ ಆ

ಲೋಚನೆಯಿಂದ ಅಲ್ಲಿ ಕೆಲವು ದಿವಸಗಳ ಮಟ್ಟಿಗೆ ವಾಸಮಾಡುತ್ತಿದ್ದರು

ಶ್ರೀ ಸಂಕಣ್ಣನಾಯಕರು ಬಂದ ಸುಮಾರು ೩೭೧ ವರ್ಷಗಳ ಪೂರ್ವದಲ್ಲಿಯೇ ಶೀಲವಂತನಾಯಕರೆಂಬವರು (ಕಲಕೇತ ಬ್ರಹ್ಮಯ್ಯನವರು) ತಮ್ಮ ಉದ್ದೇಶಗಳ ಸಾಧನೆಗಾಗಿ ಶ್ರೀಶೈಲದಿಂದ ಕಾಶಿಗೆ ದಯಮಾಡಿಸಿದ್ದರು. ಈ ಕಲಕೇತ ಬ್ರಹ್ಮಯ್ಯನವರು ಶ್ರೀ ಬಸವೇಶ್ವರರ ಶಿವಾನುಭವ ಮಂಟಪದಲ್ಲಿ ಭೃಂಗಿ ಎಂಬ ಗಣಶ್ರೇಷ್ಠನು ಪ್ರತಿಪಾದಿಸಿದ ಎಲ್ಲ ದರ್ಶನಗಳ ಮತಗಳನ್ನು ಖಂಡಿಸಿ ಕೊನೆಗೆ ಶ್ರೀ ವೀರಶೈವ ಮತದ ತತ್ವಗಳನ್ನು ಆ ಭೃಂಗೀಶ್ವರನಿಗೆ ಉಪದೇಶಿಸಿದ ಪ್ರಸ್ತಾವದ ವರ್ಣನೆಯು ಶ್ರಿ ಮರಿತೋಂಟದಾರ್ಯರ "ವೀರಶೈವಾನಂದಚಂದ್ರಿಕೆ" ಎಂಬ ಗ್ರಂಥದವಾದಕಾಂಡದ ೧೦ ನೆಯ ಪ್ರಕರಣದ ಆದಿಯಲ್ಲಿ

ಕಲಕೇತಬ್ರಹ್ಮನಾಮ್ನಾ ಪುರಾಶೀಲವತಾಸ್ಫುಟಂ
ಸ್ಥಾಪಿತಂ ಬಸವೇಶಾದಿ ಪ್ರಮಥಾನಾಂ ಸಭಾಂತರೇ
ಗುರುವರ್ಯತ್ವಯಾ ಪ್ರೋಕ್ತ ಮಷ್ಟಾವರಣ ವೈಭವಮ್ ॥

"ಹಿಂದೆ ಬಸವಾದಿ ಪ್ರಮಥರ ಸಭೆಯಲ್ಲಿ ಕಲಕೇತ ಬ್ರಹ್ಮಯ್ಯನೆಂದು ಹೆಸರಾದ ಶೀಲವಂತ ನಾಯಕರು ಸ್ಪಷ್ಟವಾಗಿ ಸ್ಥಾಪಿಸಿದ ಅಷ್ಟಾವರಣಗಳ ವೈಭವವನ್ನೇ ತಾವು ಈಗ ಚನ್ನಾಗಿ ಪ್ರತಿಪಾದಿಸಿದಿರಿ" ಎಂಬುದನ್ನು ಕೆಳದಿಯ ಅರಸರಾದ ಎರಡನೆಯ ಬಸವಪ್ಪನಾಯಕರು ತಮ್ಮ ಗುರುಗಳಾದ ಡಂಬಳದ ಶ್ರೀ ಮರಿತೋಂಟದಾರ್ಯರಿಗೆ ನಿವೇದಿಸಿರುವರು.

ಈ ರೀತಿಯಾಗಿ ಉಲ್ಲೇಖವಿರುವುದರಿಂದ, ಮತ್ತು ಮುಂದೆ ಆಯಾಯ ಪ್ರಕರಣದ ಆದಿಯಲ್ಲಿ ಭೋ ಶೀಲವತಾಂವರ, ಭೋ ಶೀಲವದ್ವರ್ಯ, ಶೀಲವಂತನಾಯಕ ಎಂಬುದಾಗಿ ಗ್ರಂಥಕರ್ತರು ಸಂಬೋಧಿಸಿದ್ದರಿಂದ ಕಲಕೇತ ಬ್ರಹ್ಮಯ್ಯನವರೇ ಶೀಲವಂತನಾಯಕರಾಗಿ ಪ್ರಸಿದ್ಧರಾಗಿದ್ದರೆಂಬುದಕ್ಕೆ ಸಂದೇಹವಿಲ್ಲ. ಈ ಕಲಕೇತ ಬ್ರಹ್ಮಯ್ಯನವರೇ ಮೊದಲಾದವರು ಶ್ರೀಶೈಲದಲ್ಲಿಯ ಕದಳೀ ವನದಲ್ಲಿ ಶ್ರೀ [illegible]

ಅಂತರ್ಧಾನರಾದ ಮೇಲೆ ಆ ಮುಂಚೆಯೇ ನಡೆದ ಶ್ರೀಪ್ರಭುದೇವರ ಅಪ್ಪಣೆಯ ಮೇರೆಗೆ ಆಯಾಯ ದೇಶಗಳನ್ನು ಸಂಚರಿಸುತ್ತ, ತಮ್ಮ ಮತದ ತತ್ವಗಳನ್ನು ಜನರಲ್ಲಿ ಬೋಧಿಸುತ್ತ ಮತ್ತು ತಮ್ಮ ಅನಂತ ಪವಾಡಗಳನ್ನು ತೋರಿಸುತ್ತ ಅನೇಕ ಮಠಮಾನ್ಯಗಳನ್ನು ಸಂಪಾದಿಸಿದ್ದರೆಂಬುದು ಅವರವರ ಚರಿತ್ರೆಗಳಮೇಲಿಂದ ಕಂಡುಬರುತ್ತದೆ. ಇವರಲ್ಲಿ ಒಬ್ಬರಾದ ಈ ಕಲಕೇತಬ್ರಹ್ಮಯ್ಯನವರೇ ಕಾಶಿಗೆ ಬಂದರೆಂಬುದಾಗಿ ಹಿಂದೆಹೇಳಿದೆ. ಇವರು ಕಾಶಿಗೆ ಬಂದಕಾಲದಲ್ಲಿ ಕನೋಜ ಮತ್ತು ಕಾಶೀ ಅರಸನಾದ ಜಯಚಂದ್ರ ನರೇಂದ್ರನೇ ರಾಜ್ಯವನ್ನು ಆಳುತ್ತಿದ್ದನು. ಇವನು ಚಂದ್ರದೇವನ ಮೊಮ್ಮಗನಾದ ಗೋವಿಂದ ಚಂದ್ರನ ಮೊಮ್ಮಗನು.

ಚಂದ್ರದೇವನು ೧೧ನೆಯ ಶತಮಾನದ ಕಡೆಯ ಭಾಗದಲ್ಲಿ ಕನೋಜದಲ್ಲಿ, ಪರಿಹರವಂಶವನ್ನು ನಷ್ಟಮಾಡಿ ಗಹರವಾರ (ಗಡವಾಲ)ವಂಶವನ್ನು ಸ್ಥಾಪಿಸಿ ಹೋದನು. ಈತನ ತರುವಾಯ ಈತನ ಮೊಮ್ಮಗನಾದ ಗೋವಿಂದಚಂದ್ರನು ೧೨ನೆಯ ಶತಮಾನದ ಆದಿಯಿಂದ ಎಂದರೆ ಕ್ರಿ. ಶ. ೧೧೧೪ರಿಂದ ೧೧೬೦ರ ವರೆಗೆ ಕನೋಜನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಕನೋಜದಲ್ಲಿಯೇ ರಾಜ್ಯವಾಳಿದನು. ಇವನ ರಾಜ್ಯವು ಕಾಶಿಯನ್ನು, ಮತ್ತು ಅಯೋಧ್ಯೆ ದಿಲ್ಲಿಗಳ ಕೆಲವು ಭಾಗಗಳನ್ನು ಒಳಕೊಂಡಿದ್ದಿತು ಮೇಲಿಂದ ಮೇಲೆ ಕಾಶಿಯಮೇಲೆ ಮಹಮ್ಮದೀಯರ ಬಲವಾದ ಆಕ್ರಮಣವಾಗುವ ಸಂಭವವಿದ್ದಿತು. ಆದರೂ ಗೋವಿಂದಚಂದ್ರನು ಗುಜರಾಥದಲ್ಲಿ ಶ್ರೀ ಸೋಮನಾಥನ ಸುಲಿಗೆಯಾದಂತೆ ಕಾಶಿಯಲ್ಲಿ ಆಗಗೊಡಬಾರದಾಗಿ ಕಾಶಿಯನ್ನು ಒಳ್ಳೇ ಜಾಗರೂಕತೆಯಿಂದ ರಕ್ಷಿಸುತ್ತಿದ್ದನು. ಗೋವಿಂದಚಂದ್ರನು ಶ್ರೇಷ್ಠ ವೀರರಾಜನಾದ ಪ್ರಯುಕ್ತ ಇವನ ಕಾಲದಲ್ಲಿ ಮುಸಲ್ಮಾನರು ಕಾಶಿಯಲ್ಲಿ ಕಾಲಿಡಲು ಸಮರ್ಥರಾಗಲಿಲ್ಲ. ಈತನ ತರುವಾಯ ಜಯಚಂದ್ರ ನರೇಂದ್ರನೆಂಬ ಈತನ ಮೊಮ್ಮಗನು ಕನೋಜದ ಅರಸನಾಗಿಯೇ ಆಳಲಾರಂಭಿಸಿದನು. ಈತನು ತನ್ನ ರಾಜ್ಯವನ್ನು ಮಾಳವದೇಶದಿಂದ ಚೀನ

ದೇಶ ವರೆಗೆ ಹರಡಿಸಿದ್ದನೆಂಬುದು ಆತನ ಶಾಸನಗಳಿಂದ ವಿದಿತವಾಗುವದು.

ಇವನು ದಿಲ್ಲಿಯಲ್ಲಿ ಆಳುತ್ತಿದ್ದ ತೋಮರ ವಂಶದ ಅರಸನಾದ ಅನಂಗಪಾಲನ ಹಿರಿಯಮಗಳ ಮಗನಾಗಿದ್ದನು. ಅನಂಗಪಾಲನು ತನಗೆ ಗಂಡು ಮಕ್ಕಳಿಲ್ಲದ್ದರಿಂದ ತನ್ನ ಚಿಕ್ಕಮಗಳ ಮಗನಾದ ಚವ್ಹಾಣ ವಂಶದ ಪೃಥ್ವೀರಾಜನನ್ನು ದತ್ತಕವಾಗಿ ತೆಗೆದುಕೊಂಡು ಕ್ರಿ. ಶ. ೧೧೭೦ರಲ್ಲಿ ದಿಲ್ಲಿ ಪ್ರಾಂತವನ್ನು ಅಜಮೀರಿಗೆ ಸೇರಿಸಿದನು. ಇದರಿಂದ ಜಯಚಂದ್ರನಿಗೂ ಪೃಥ್ವೀರಾಜನಿಗೂ ಪರಸ್ಪರ ವಿರೋಧವು ಬೆಳೆಯಿತು. ಮುಂದೆ ಕ್ರಿ. ಶ. ೧೧೭೫ರಲ್ಲಿ ಪೃಥ್ವೀರಾಜನು ಜಯಚಂದ್ರನರೇಂದ್ರನ ಮಗಳಾದ ಸಂಯೋಗಿತೆಯನ್ನು ಅವಳ ಸ್ವಯಂವರದಲ್ಲಿ ಅವಳ ಅನುಮತಿಯಿಂದ ಎತ್ತಿಕೊಂಡು ಹೋಗಿ ಲಗ್ನವಾದನು. ಇದರಿಂದ ಜಯಚಂದ್ರನಿಗೆ ಅಪಾರ ದುಃಖವುಂಟಾಗಿ ಕೊನೆಯುವರೆಗೂ ಪೃಥ್ವೀರಾಜನ ಶತ್ರುವಾಗಿಯೇ ಉಳಿಯಬೇಕಾಯಿತು ಈ ಎಲ್ಲ ಕಾರಣಗಳಿಂದ ಇವನು ಕಡೆಗೆ ಕ್ರಿ. ಶ. ೧೧೮೫-೮೭ರ ಸುಮಾರಕ್ಕೆ ಕಾಶಿಯನ್ನು ತನ್ನ ಎರಡನೆಯ ರಾಜಧಾನಿಯನ್ನಾಗಿ ಮಾಡಿಕೊಂಡನು. ಈ ಸಂಗತಿಯು ಇತಿಹಾಸದಮೇಲಿಂದಲೂ, ಮತ್ತು ಕಾಶಿಯ ಸುತ್ತ ಮುತ್ತಲೂ, ದೊರೆತಿರುವ ಕೆಲವು ಶಿಲಾಶಾಸನಗಳ ಮೇಲೆ ಬರೆದ "ಜಯಚಂದ್ರ ಕಾಶೀನರೇಶ"ಎಂಬ ಹೆಸರಿನ ಮೇಲಿಂದಲೂ ಸಿದ್ಧವಾಗುವದು. ಮಹಮ್ಮದ್ ಘೋರನು ಈ ಜಯಚಂದ್ರ ನರೇಂದ್ರನನ್ನು ಕ್ರಿ. ಶ. ೧೧೯೪ ರಲ್ಲಿ "ಚಂದಾವರ" ಕಾಳಗದಲ್ಲಿ ಸೋಲಿಸಿ ಆತನ ರಾಜಧಾನಿಯಾದ ಕಾಶಿಯನ್ನು ಸೂಲಿಗೆ ಮಾಡಿದನು. (ಈ ಇಸವಿಯು ಹಿಂದೂ ಚರಿತ್ರೆಯ ಇಸವಿಗೆ ಸಂಹೋಲುತ್ತದೆ.)

ಈ ಮೇಲೆ ಹೇಳಿದ ಜಯಚಂದ್ರ ನರೇಂದ್ರನಿಂದಲೇ ಕಾಶಿಗೆ ಬಂದ ಕುಲಕೇತ ಬ್ರಹ್ಮಯ್ಯನವರು (ಶೀಲವಂತ ನಾಯಕರು) ಕಾಶಿಯಲ್ಲಿ ಹರಿಕೇಶವಾನಂದ ವನವನ್ನು ಹೊಂದಿ, ಅಲ್ಲಿ ಸುಂದರವಾದ ಮಠವನ್ನು ನಿರ್ಮಿಸಿದ್ದರೆಂಬ ಮತ್ತು ಅದು ಈಗ ಮುಸಲ್ಮಾನರ ಸ್ವಾಧೀನದಲ್ಲಿಂ

ಟೆಂಬ ಸುದ್ದಿಯನ್ನು ಸಂಕಣ್ಣನಾಯಕರು ಅಲ್ಲಿಯ ಬಲ್ಲಿದ ವೃದ್ಧರಿಂದ ಕೇಳಲು ಕಾಶಿಯಲ್ಲಿ ಮಠವನ್ನು ನಿರ್ಮಿಸಬೇಕೆಂಬ ತಮ್ಮ ಆಲೋಚನೆಗೆ ಮತ್ತಿಷ್ಟು ಬಲ ದೊರೆದಂತಾಗಿ ಆ ಹರಿಕೇಶವನಾನಂದ ವನವನ್ನು ಪುನಃ ವಶಮಾಡಿಕೊಂಡು ಅದರ ನಾಲ್ಕೂ ದಿಕ್ಕುಗಳಲ್ಲಿ ಶಾಸನಗಳನ್ನು ಬರೆಯಿಸಿ ಮಧ್ಯದಲ್ಲಿ ಸುಂದರವಾದ ಮಠವನ್ನು (ಈಗಿರುವ ಜಂಗಮವಾಡೀ ಮಠ) ಕಟ್ಟಿಸಿ ಆ ಮಠಕ್ಕೆ ಧರ್ಮಾರ್ಥವಾಗಿ ಆ ಮಠದ ನೈಋತ್ಯ ದಿಕ್ಕಿನಲ್ಲಿರುವ ಒಂದು ಗ್ರಾಮವನ್ನು ಜಂಗಮಪುರ ( ಈ ಸ್ಥಾನವನ್ನು ಕಾಶಿ ಹಿಂದು ವಿಶ್ವವಿದ್ಯಾಲಯದವರು ಹಿಂದಿನ ಶ್ರೀ ಶಿವಲಿಂಗ ಸ್ವಾಮಿಗಳಿಂದ ಕ್ರಯಕ್ಕೆ ತೆಗೆದುಕೊಂಡು ತಮ್ಮ ವಿದ್ಯಾಲಯಕ್ಕೆ ಸೇರಿಸಿಕೊಂಡಿರುವರು) ವೆಂಬ ಹೆಸರಿನಿಂದ ಉಂಬಳಿಯಾಗಿ ಹಾಕಿಕೊಟ್ಟ ಸ್ಥಿರ ಶಾಸನವನ್ನು ಬರೆಯಿಸಿ ಆ ಮೇಲೆ ಪುನಃ ಕಾಶಿಯಲ್ಲಿ ಜಂಗಮಮೂರ್ತಿಗಳಿರುವಂತೆ ವ್ಯವಸ್ಥೆಯನ್ನು ಮಾಡಿದರು, ಎಂಬ ಅಭಿಪ್ರಾಯವಾದರೂ ಶಿವತತ್ವ ರತ್ನಾಕರದಲ್ಲಿ ಈ ಕೆಳಗೆ ಬರೆದಂತೆ ಉಲ್ಲೇಖಿಸಿದ್ದಾಗಿದೆ.

ವಿತೀರ್ಣಂ ತೇನ ತಂ ದೇಶಂ ಕಾಶ್ಯಾ ಮೀಶ್ವರ ತುಷ್ಟಯೇ
ಮಠ ದೇವಾಲಯಾರಾಮ ಧರ್ಮಾರ್ಥಂ ವಿನ್ಯಯುಂಕ್ತ ತಮ್॥

"ಬಾದಶಹನಿಂದ ದೊರೆತ ಆ ದೇಶವನ್ನೆಲ್ಲ ಈಶ್ವರ ಪ್ರೀತ್ಯರ್ಥವಾಗಿ ಕಾಶಿಯಲ್ಲಿ ಮಠ ದೇವಾಲಯಗಳನ್ನು ನಿರ್ಮಿಸಿ ಧರ್ಮಾರ್ಥವಾಗಿ (ಜಂಗಮರ ತೃಪ್ತಿಗಾಗಿ) ಕೊಟ್ಟನು" ( ಪ್ರಭು ದೇವರ ಕಾಲದ ತರುವಾಯ ಈ ಕಾರ್ಯವು ನಡೆದಿದೆ ಎಂಬುದು ಇವುಗಳ ಹೋಲಿಕೆಯಿಂದ ದ ಪ ಡುತ್ತದೆ.)

ಈ ಮೇಲಿನ ಎಲ್ಲ ಸಂಗತಿಗಳ ವಿಷಯಕ್ಕೆ ಕೆಳದೀ ನೃಪವಿಜಯದ ೫೯ನೆಯ ಪುಟದಲ್ಲಿ ಸವಿಸ್ತಾರವಾದ ಉಲ್ಲೇಖವಿರುವುದರಿಂದ ಅದನ್ನೇ ಇಲ್ಲಿ ವಾಚಕರ ಸ್ಮರಣೆಗಾಗಿ ಈ ಕೆಳಗೆ ಬರೆದದ್ದಾಗಿದೆ.

"ಪಿಂತೆ ಬಹುಕಾಲದೊಳ್ ಶ್ರೀಶೈಲದೊಳ್ ನಂದೀಶ್ವರಾಂಶೀಭೂತನಾಗುದಿಸಿದ ವೀರಶೈವ ಶಿರೋಮಣಿಯಪ್ಪ ಶೀಲವಂತ ನಾಯಕನೆಂಬ

ಕಾರಣ ಪುರುಷನೈತಂಗು ಮೊರಸನೆರಂಕೆಗಳಂ ಮಾಡಿಕೊಂಡು ಪಾರಿಪವಾಡಂಗಳಂ ಮೆರೆದು ಜಯಚಂದ್ರ ನರೇಂದ್ರನಂ ಮೆಚ್ಚಿಸಿ ದಶಾಶ್ವಮೇಧದ ಘಟ್ಟದ ಪಶ್ಚಿಮ ದಿಕ್ಕಿನೊಳೆಸೆವ ಹರಿಕೇಶವಾನಂದ ಕಾನನವಂ ಪಡೆದಾ ಭೂಮಿಯೊಳ್ ಮಠವಂ ಕಟ್ಟಿಸಿ ತನ್ಮಠದೊಳ್ಮಲ್ಲಿಕಾರ್ಜುನ ದೇವರೆಂಬ ಜಂಗಮಂಗೆ ( ಜಂಗಮ ಮೂರ್ತಿಗೆ ) ಪಟ್ಟಮಂ ಕಟ್ಟಿಸಿ, ತನ್ನೊಡನೈದಿದ ಶಿಷ್ಯರ್ಕಳನಲ್ಲಿರಿಸಿ ತಾನಾ ಮಠ ಮಧ್ಯಸ್ತಂಭಾಗ್ರದೊಳ್ಯೋಗಾರೂಢನಾಗಿ ಕುಳ್ಳಿರ್ದಂತರ್ಧಾನವನೈದಲ್ ಬಳಿಕಿತ್ತಂ ಪಲವುವತ್ಸರಂಗಳ್ಪೋಗಲೊಡನೆ ಜಯಚಂದ್ರ ನರೇಂದ್ರನ ವಂಶಾಗತರೆಲ್ಲಂ ಧರ್ಮ ಸಂತಾನವಂ ಪಡೆಯಲಾಗಿ ಬಳಿಕಿತ್ತಂ ಮ್ಲೇಂಛರ್ಕಳ್ಬರ್ಚಿ ತತ್ಸ್ಥಳವನಾಕ್ರಮಿಸಿರಲವರ್ಕಳಂ ಪಾರೆದೆಗೆಸಿ ಸಂಕಣ್ಣನಾಯಕಂ ತಾನಾಸ್ಥಾನವಂ ಸಂಪಾದಿಸಿ ಚತುರ್ಗಡಿಗಳೊಳ್ ಶಿಲಾ ಸ್ಥಾಪನಮಂ ರಚಿಸಿ ಜಂಗಮಗಾಟಿ (ಜಂಗಮವಾಟಿ) ಯೆಂದು ಪೆಸರಿಟ್ಟು ತನ್ಮಧ್ಯದೊಳತಿ ಮನೋಹರಮಾದ ಮಠವಂ ನಿರ್ಮಾಣಂಗೈಸಿ ತದ್ಧರ್ಮಾರ್ಥವಾ ಮಠ ನಿಋತಿದಿಶಾಪ್ರಾಂತದೊಳ್ ಜಂಗಮ ಪುರವೆಂಬ ಗ್ರಾಮಮಂ ಬಿಡಿಸಿ ಸ್ಥಿರ ಶಾಸನಮಂ ಬರೆಯಿಸಿ ಜಂಗಮ ಮೂರ್ತಿಗಳ್ಗೆ ಶಿವಾರ್ಪಣಂಗೈದು ಮತ್ತಮದಲ್ಲದೆ ಪಂಚಮಠಮಂ ಕಟ್ಟಿಸಿ ಶಿವಜಂಗಮಕ್ಕೆ ಶಿವಾರ್ಪಣಂಗೈದು ಪ್ರೌಢರುಗಳಪ್ಪ ಶಿಲ್ಪಿಗಳಂ ಬರಿಸಿ ತತ್ಕಾಶೀ ಕ್ಷೇತ್ರದೊಳೊಪ್ಪುವ ಕಪಿಲಾಧಾರಾತೀರ್ಥ ಮಾನಸಸರೋವರ ಗಂಧರ್ವಸಾಗರವೆಂಬ ತೀರ್ಥಂಗಳಂ ಶಿಲಾಮಯವನಾಗಿಸಿ ಜೀರ್ಣೋದ್ಧಾರಮಂ ರಚಿಸಿ, ಮತ್ತವೈಯಪ್ಪನೆಂಬ ಸೇನಬೋವನ ಮುಖದಿಂ ಕರ್ದಮೇಶ್ವರ ನರ್ಮದೇಶ್ವರ ಭೀಮಚಂಡಿಕೆ ವೃಷಭಧ್ವಜೇಶ್ವರ ದೇವಸ್ಥಾನಂಗಳಂ ಜೀರ್ಣೋದ್ಧಾರಮಂ ರಚಿಸಿ ಸ್ವಪುತ್ರ ವೆಂಕಟಪ್ಪನಾಯಕರ ಹೆಸರಲ್ಲಿ ಶಿಲಾಶಾಸನಮಂ ಬರೆಸಿ ಶಾಶ್ವತಮಾಸ ಧರ್ಮಕೀರ್ತಿ ಸುಕೃತಂಗಳನಾರ್ಜಿಸಿ ಬಳಿಕ್ಕಾವಾರಾಣಸೀ ಕ್ಷೇತ್ರದೊಳಂದತಿ ಮನೋಹರಮಾದ ಸ್ಥೂಲ ಲಿಂಗಮಂ ಸಂಪಾದಿಸಿಕೊಂಡನಂತರದೊಳ್ ''

ಈ ಮೇಲೆ ಕಾಣಿಸಿದ ವಿಷಯಗಳಿಂದ ಕ್ರಿ. ಶ. ೧೫೪೬ ರಿಂದ ೧೫೫೮ ರವರೆಗೆ ಆಳಿಹೋದ ಕೆಳದೀ ವಂಶದ ಶ್ರೀ ದೊಡ್ಡ ಸಂಕಣ್ಣನಾಯಕರ ಕಾಲದಲ್ಲಿಯೇ ಕಾಶಿಯಲ್ಲಿ (ಈ ಜಂಗಮವಾಡಿ ಮಠವು) ಮಠವು ಪುನಃ ಹುಟ್ಟಿತೆಂಬುದು ಶಿಲಾಶಾಸನದಿಂದ ಸಿದ್ಧವಾಗುವದು.

ಆ ಬಳಿಕ ಈ ಹಿಂದೆ ಹೇಳಿದಂತೆ ಜಂಗಮವಾಡೀ ಮಠದ ನಿರ್ಮಾಣವಾದ ಮೇಲೆ ಕೆಲವು ಜಂಗಮ ಮೂರ್ತಿಗಳನ್ನಿಟ್ಟು ಅಲ್ಲಿಯ ವ್ಯವಸ್ಥೆಗಾಗಿ ಐಯಪ್ಪ ಸೇನಬೋಗನನ್ನು ನಿಯಮಿಸಿ ಮುಂದೆ ಸಂಕಣ್ಣನಾಯಕರು ಗಯಾದ ಕಡೆಗೆ ತಮ್ಮ ಪ್ರವಾಸವನ್ನು ಬೆಳೆಸಿದರು ಗಯೆಯಲ್ಲಾದರೂ ಒಂದು ಮಠವನ್ನು ಕಟ್ಟಿಸಿ, ಅದರ ಕೆಳಗಾದರೂ ಭೂಸ್ವಾಸ್ಥ್ಯವನ್ನು ಕೊಡಿಸಿ ಅಲ್ಲಿ ಜಂಗಮ ಮೂರ್ತಿಗಳನಿಟ್ಟರು. ಈ ರೀತಿಯಾಗಿ ದಿಲ್ಲಿ ಬಾದಶಹರಾದ ಹುಮಾಯೂನರ ಆಜ್ಞೆಯ ಮೇರೆಗೆ ಧಿಲ್ಲಿ, ಆಗ್ರಾ, ಪ್ರಯಾಗ, ಕಾಶೀ, ಗಯಾ, ಸ್ಥಾನಗಳಲ್ಲಿ ಕ್ರಮವಾಗಿ ಮಠಗಳನ್ನು ಕಟ್ಟಿಸಿ, ಭೂಮಿಯನ್ನು ಬಿಡಿಸಿ, ಅವುಗಳ ವ್ಯವಸ್ಥೆಗಾಗಿ ಜಂಗಮ ವ್ಯಕ್ತಿಗಳನ್ನು ಇಟ್ಟು ನೇಪಾಳ ಕೇದಾರಗಳಿಗೆ ಹೋಗಿ ಅಲ್ಲಿಯಾದರೂ ಮೇಲಿನಂತೆ ತಮ್ಮ ಸಾಮರ್ಥ್ಯದಿಂದ ಮಠಮಾನ್ಯಗಳ ವ್ಯವಸ್ಥೆಯನ್ನು ಮಾಡಿ ಮುಂದೆ ಹರಿದ್ವಾರ ಕಾಶ್ಮೀರಗಳ ಕಡೆಗೆ ಹೋಗಿ, ಅಲ್ಲಿರುವ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿ ಸ್ವದೇಶಕ್ಕೆ ಬಂದು ತಲ್ಪಿದರು. ಈ ವಿಷಯವು ಕೆಳದೀ ನೃಪ ವಿಜಯ, ಶಿವತತ್ವ ರತ್ನಾಕರ ಗ್ರಂಥಗಳಿಂದ ತಿಳಿದು ಬರುವದು.

ಭರತಖಂಡದ ಉತ್ತರ ದಿಕ್ಕಿನಲ್ಲಿರುವ ವೀರಶೈವರ ಮಠಗಳು ಯಾವ ಕಾಲದಲ್ಲಿ ಯಾರಿಂದ ಸ್ಥಾಪಿತವಾದವೆಂಬ ವಿಷಯವು ಸಾಮಾನ್ಯವಾಗಿ ಈ ಮೇಲಿನ ವಿಷಯಗಳಿಂದ ವಾಚಕರಿಗೆ ಈ ಮುಂಚೆಯೇ ವಿದಿತವಾಗದೆ ಇರದು.

ಉತ್ತರ ಭಾಗದ ಮಠಗಳೆಲ್ಲವೂ ಕಾಶಿಯಲ್ಲಿರುವ ಸ್ವಾಮಿಗಳ ಅಧೀನದಲ್ಲಿಯೇ ಪೂರ್ವದಲ್ಲಿದ್ದವೆಂಬುದು ಕೇಳುವುದರಲ್ಲಿದೆ. ಹಾಗಾದಾಗ್ಯೂ ಈ ವಿಷಯದಲ್ಲಿ ಈ ಮಠದ ಸ್ವಾಮಿಗಳಲ್ಲಿ ಪ್ರಬಲ ಪ್ರಮಾಣಗಳೇನಾದರೂ ಉಂಟೆಂಬುದಕ್ಕೆ ನಮಗೆ ಯಾವ ಪ್ರಮಾಣವೂ ದೊರೆತಿರುವದಿಲ್ಲ. ಆದರೂ ಪ್ರಯಾಗದ (ದಾರಾಗಂಜ) ಮಠವು ಮಾತ್ರ ಈಗಾದರೂ ಇವರ / ಅಧೀನದಲ್ಲಿರುವದು ಕಂಡುಬರುತ್ತದೆ. ದಿಲ್ಲಿ, ಆಗ್ರಾಗಳಲ್ಲಿರುವ ಮಠಗಳು ಲುಪ್ತವಾದ ಕಾರಣ, ಗಯೆಯಲ್ಲಿಯ ಮಠವು ಬ್ರಾಹ್ಮಣರ ವಶವಾಗಿರುವ ಕಾರಣ, ಮತ್ತು ನೇಪಾಳದ ಮಠವು ಸ್ವತಂತ್ರವಾಗಿರುವ ಕಾರಣ ಅವು ಕಾಶೀಮಠದ ಅಧೀನವಾಗಿದ್ದವೋ ಅಥವಾ

ಇಲ್ಲವೋ ಎಂಬುದು ಹೆಚ್ಚು ವಿಚಾರಿಸಿ ನೋಡಿದಲ್ಲಿ ಯಥಾರ್ಥ ಸಂಗತಿಯು ಕಂಡುಬರುವದು. ನೇಪಾಳದ ಮಠವು (ನೇಪಾಳ ರಾಜ್ಯದ ಭಾತಗಾಂವವೆಂಬ ನಗರದಲ್ಲುಂಟು.) ರಾಜಾಶ್ರಯದಲ್ಲಿದ್ದು ಅಲ್ಲಿಯ ರಾಜರಿಂದ ಅದಕ್ಕೆ ವರ್ಷಕ್ಕೆ ನೇಪಾಳದ ೬-೭ ಸಾವಿರ ರೂಪಾಯಿಗಳ ಆದಾಯವುಂಟು. ಈ ನೇಪಾಳದ ಮಠದ ವಿಷಯದಲ್ಲಿ ನಮಗೆ ಅಲ್ಲಿಗೆ ಹೋದಾಗ ಅನೇಕ ಐತಿಹಾಸಿಕ ಸಂಗತಿಗಳು ದೊರೆತಿವೆ. ಅವುಗಳನ್ನು ಸಮಯಾನುಸಾರವಾಗಿ ಪ್ರಕಟಿಸುವೆವು.

ಕೇದಾರದ ಮಠವಂತೂ ಈಗಲೂ ಪ್ರಸಿದ್ಧವಿದೆ. ಆದರೆ ಅಲ್ಲಿಯ ಮತ್ತು ಕಾಶೀ ಮಠದಲ್ಲಿಯ ಶಾಸನಗಳ ಮೇಲೆ ಕೆಳದಿ ರಾಜರ ಹೆಸರುಗಳೇ ಕಾಣದಿದ್ದುದರಿಂದ ಈ ಮೇಲೆ ಬರೆದಂತೆ ಕೆಳದಿ ನೃಪ ವಿಜಯದ ಸಂಗತಿಯು ಸತ್ಯವೋ ಅಥವಾ ಶಾಸನಗಳಲ್ಲಿ ಬರೆದ ಸಂಗತಿಯು ಸತ್ಯವೋ ಎಂಬುದನ್ನು ನಿಶ್ಚಯಿಸಲು ವಿಶೇಷ ಪರಿಶ್ರಮವು ಅತ್ಯವಶ್ಯಕವಾಗಿದೆ.

ಕಾಶೀ ಜಂಗಮವಾಡೀ ಮಠದಲ್ಲಿ "ಜಯನಂದ ಕಾಶೀ ನರೇಶ" ಎಂಬ ಹೆಸರಿನ ಒಂದು ಕೋರಾ ಕಾಗದದ ಶಾಸನವು ದೊರೆತಿರುವುದು. ಆ ಶಾಸನವು ಇತಿಹಾಸದ ನಿಯಮಗಳಿಗೆ ಒಳಪಡದಿದ್ದುದರಿಂದ ಅದು ಪ್ರಾಮಾಣಿಕವೆಂದು ನಮಗೆ ನಂಬಲು ಬರುವಂತಿಲ್ಲ. ಆದುದರಿಂದ ಅದರ ವಿಷಯವಾಗಿ ಈಗ ವಿಚಾರಿಸುವದು ಬೇಡ. (ಇದು ಜಯಚಂದ ಕಾಶೀನರೇಶ ಎಂದಿರುವದಾಗಿದ್ದರೆ ಈತನ ಕಾಲಕ್ಕೆ ಇದರಲ್ಲಿನ ವಿಷಯಗಳ ಹೋಲಿಕೆಯು ಸರಿಯಾಗಬೇಕಾಗಿದ್ದಿತು.)

ಈ ರೀತಿಯಾಗಿ ಭರತಖಂಡದ ಉತ್ತರಭಾಗದಲ್ಲಿ ಶ್ರೀ ದೊಡ್ಡ ಸಂಕಣ್ಣನಾಯಕರು ಮಾಡಿದ ಅವಿಶ್ರಾಂತ ಪರಿಶ್ರಮವೇ ಉತ್ತರದಲ್ಲಿ ಪುನಃ ವೀರಶೈವ ಧರ್ಮ ತತ್ವಗಳ ಪ್ರಸಾರಣೆಗೆ ಕಾರಣವಾಯಿತೆಂಬುವುದರಲ್ಲಿ ಯಾವ ಸಂಶಯವೂ ಇಲ್ಲ. ಅವರ ತರುವಾಯ ಅವರ ವಂಶದವರೇ ಈ ಮಠಗಳ ವ್ಯವಸ್ಥೆಯನ್ನು ಮಾಡಿಸುತ್ತಿದ್ದರೆಂಬುದು ಅವರ ಚರಿತ್ರಗಳಿಂದ ಕಂಡುಬರುವದು.

## —: ಮಕ್ಕಳ ಶಿಕ್ಷಣ ಪಟವು: —

ಇದನ್ನು ಹುಬ್ಬಳ್ಳಿಯಲ್ಲಿ ಇರುವ ಬಾಸೆಲ್ ಮಿಷನ್ ಕ್ರೈಸ್ತ ಮಿಷನೆರಿಯುವರಾದ ಚನ್ನಪ್ಪನವರು ಉತ್ತಂಗಿ ಇವರು ಇಂಗ್ಲೀಷು ಭಾಷೆಯಿಂದ ಕನ್ನಡಕ್ಕೆ ರೂಪಾಂತರಿಸಿ ಇರುತ್ತಾರೆ. ಇದು ಎಚ್. ಸಿ. ಉತ್ತಂಗಿ. ಹುಬ್ಬಳ್ಳಿ ಮತ್ತು ಕರ್ಣಾಟಕ ಸಾಹಿತ್ಯ ಮಂದಿರ ಧಾರವಾಡ, ಇವರಲ್ಲಿ ದೊರೆಯುತ್ತವೆ.

ಇದೊಂದು ದೊಡ್ಡಪಟವು. ಮಕ್ಕಳು ಹುಟ್ಟಿದಂದಿನಿಂದ ೨೧ ವರ್ಷಗಳ ವರೆವಿಗೆ ಅವರಿಗೆ ಶಾರೀರಿಕ, ಮಾನಸಿಕ, ನೈತಿಕ, ಔದ್ಯೋಗಿಕ, ಸಾಮಾಜಿಕ ವಿಷಯುಗಳಲ್ಲಿ ಆಗಬೇಕಾದ ಶಿಕ್ಷಣವು ಇದರಲ್ಲಿ ಹೇಳಲ್ಪಟ್ಟದೆ.

ಇದು ಅಮೇರಿಕ ಖಂಡದ ಪೇರೆಂಟ್ಸ್ ಅಸೋಸಿಯೇರ್ಷ (ಮಾತಾ ಪಿತರ ಸಂಘ) ದವರಿಂದ ಇಂಗ್ಲೀಷಿನಲ್ಲಿ ಪ್ರಕಟಿಸಲ್ಪಟ್ಟದ್ದರ ಭಾಷಾಂತರ. ಪಾಶ್ಚಾತ್ಯ ಪದ್ಧತಿಯಂತೆ ಲೌಕಿಕ ಕಾರ್ಯಗಳಲ್ಲಿ ವಿಚಕ್ಷಣತೆಯನ್ನು ಪಡೆಯುಲಿಕ್ಕೆ ಇದರ ಸಹಾಯುವು ಅವಶ್ಯಕವಾಗಿದೆ. ಇದರ ಜೊತೆಯಲ್ಲಿ ಹಿಂದೂ ಪದ್ಧತಿಯ ಪ್ರಕಾರ ಮಹಾದೇವನನ್ನು ತಿಳಿಯುವ ವಿಷಯುವಾದ ಧಾರ್ಮಿಕದಲ್ಲಿ ಮಕ್ಕಳು ಹೇಗೆ ಸಿದ್ಧರಾಗಬೇಕೆಂಬುದನ್ನು ಪ್ರತ್ಯೇಕ ವಿವರಿಸಿದ್ದರೆ ಚನ್ನಾಗಿರುತ್ತಿತ್ತು.

೧೫ ವರ್ಷದಮೇಲೆ ಧಾರ್ಮಿಕ ಸಂಬಂಧವಾದ ಅಭಿರುಚಿ ಇದ್ದರೆ ಆ ವಿಷಯುವಾಗಿ ಮಾತನಾಡು ಎಂಬ ಬೋಧೆಯು ನೈತಿಕದಲ್ಲಿ ತೋರುತ್ತದೆ. (ಅಭಿರುಚಿ ಇಲ್ಲದಿದ್ದರೆ ಹೇಳಬೇಕಾದುದೇ ಇಲ್ಲ.) ಮತ್ತು ಗುಡಿಗೆ ಹೋಗುವದು ಎಂಬ ವಾಕ್ಯಗಳೇ ಮೊದಲಾದವು ನೈತಿಕದಲ್ಲಿ ದೊರಕುತ್ತವೆ. ಆದರೆ ಧಾರ್ಮಿಕ ಜ್ಞಾನಾಭಿವೃದ್ಧಿಯಲ್ಲಿ ಇಷ್ಟು ಮಾತ್ರವೇ ಸಾಲದು. ಹಿಂದೂ ಜನರು ಈ ವಿಷಯದಲ್ಲಿ ಬಹಳ ಮುಂದೆ ಹೋಗಿರುತ್ತಾರೆ. ಅದ್ದರಿಂದ ಇದನ್ನು ಓದುವವರು ಈ ಕಡೆಗೆ ವಿಶೇಷ ಗಮನ ಕೊಟ್ಟಾರೆಂದು ನಂಬಬೇಕಾಗಿದೆ.

———

# ಸದ್ಧರ್ಮ ದೀಪಿಕೆಯ ವಿಷಯದಲ್ಲಿ ಮಹನೀಯರ ಅಭಿಪ್ರಾಯಗಳು, ಮತ್ತು ಪತ್ರಿಕಾ ವಿಷಯ.



ಮ. ರಾ. ಶ್ರೀ. ರುಪ್ರಪ್ಪನವರು, ಎಂ. ಎ. ಎಲ್ ಎಲ್. ಬಿ. ಮುನ್ಸಿಫರವರು ಮಂಡ್ಯ, ಮೈಸೂರು ಡಿಸ್ಟ್ರಿಕ್ಟ್. ಇವರು ಹೀಗೆ ಬರೆದಿರುತ್ತಾರೆ. :—

"ತಾವು ಸದ್ಧರ್ಮ ಮಾಸಪತ್ರಿಕೆಯನ್ನು ವಿಚಕ್ಷಣೆಯಿಂದ ಹೊರಡಿಸುತ್ತಿರುವುದು ಸ್ತುತ್ಯವಾದ ಕೆಲಸ. ವೀರಶೈವ ಪುರಾತನ ಗ್ರಂಥಗಳನ್ನು ಹೊರಗೆಡವುತ್ತಿರುವುದನ್ನು ನೋಡಿದರೆ ಸಮಾಜವು ತಮಗೆ ಚಿರಕೃತಜ್ಞವಾಗಿರಬೇಕು. ತಮ್ಮ ಭಾಷಾಸರಣಿಯೂ ವಿಷಯ ಪ್ರತಿಪಾದನೆಯೂ, ಬಹಳ ಚನ್ನಾಗಿವೆ. ತಮ್ಮ ಹಸ್ತದಿಂದ ಷಟ್ಸ್ಥಲ ವಿಚಾರದಲ್ಲಿಯೂ ಮೂವತ್ತಾರು ತತ್ವಗಳ ವಿಚಾರದಲ್ಲಿಯೂ ಒಂದೆರಡು ಲೇಖಗಳನ್ನು ನೋಡಬೇಕೆಂಬ ಕುತೂಹಲವಿದೆ. ತಮಗೆ ವಿರಾಮವಾದಾಗ್ಗೆ ಬರೆಯಿರಿ.

( ಈ ಮಹನೀಯರ ಅಭಿಪ್ರಾಯದಂತೆ ಷಟ್‌ಸ್ಥಲ ಮತ್ತು ತತ್ತ್ವಗಳ ವಿಷಯಗಳನ್ನು ಅನುಕೂಲವಾದಾಗ ಪ್ರಕಟಿಸಬೇಕೆಂಬ ಯೋಚನೆಯು ಇರುತ್ತದೆ )

ಮತ್ತು ಕರ್ಣಾಟಕ ಸಾಹಿತ್ಯ ಪರಿಷತ್‌ಪತ್ರಿಕೆಯಲ್ಲಿ ಪ್ರಾಚ್ಯ ದೇಶದ ಮುಖ್ಯವಾಗಿ ಭರತ ಖಂಡದ, ಭಾಷೆ ಸಾಹಿತ್ಯ ಚರಿತ್ರೆ ಸಂಸ್ಕೃತಿ ಮೊದಲಾದವುಗಳ ಮೇಲೆ ಇತರ ಪತ್ರಿಕೆಗಳಲ್ಲಿ ಈಚಿಗೆ ಪ್ರಕಟವಾಗಿ ಬಂದಿರುವ ಮುಖ್ಯ ಲೇಖನಗಳಲ್ಲಿ

"ಸದ್ಧರ್ಮ ದೀಪಿಕೆಯ ೧೬-೧೭ನೆಯ ಸಂಚಿಕೆಗಳಲ್ಲಿ ಜ್ಯೋತಿರ್ಮಯ ಶಾಂಭವಜ್ಞಾನ ದೀಕ್ಷಾಬೋಧೆ, ಶಿವಯೋಗ ದರ್ಪಣ, ಸಿದ್ಧೇಶ್ವರ ವಚನ, ವಾಗದ್ವೈತ ನಿರಸನ ತ್ರಿವಿಧಿ, ಮತ್ತು ಕೋಟೇಶ್ವರ ಅಥವಾ ಕೋಟಲಿಂಗ ಎಂಬ ಗ್ರಂಥ ಭಾಗಗಳು" ಇರುವವೆಂದು ಬರೆಯಲ್ಪಟ್ಟಿರುತ್ತದೆ.

ಇವುಗಳನ್ನು ನೋಡಿದರೆ ಹಿಂದೂ ದೇಶದ ಮುಖ್ಯ ವಿದ್ಯೆಯಲ್ಲಿ ಪ್ರಕಟವಾಗದಿರುವ ಅಂಶಗಳನ್ನು, ವೀರಶೈವ ಧರ್ಮವನ್ನು, ಮತ್ತು ಕನ್ನಡ ಭಾಷೆಯ ಉನ್ನತಿಯ ಗ್ರಂಥಗಳನ್ನು ಪ್ರಕಟಪಡಿಸಬೇಕೆಂಬ ಈ ಪತ್ರಿಕೆಯ ಉದ್ದೇಶಕ್ಕೆ ಈಗಲೀಗ ಪ್ರಾರಂಭದೆಸೆಯೊದಗಿರುವುದು, ಎಂಬುದು ವಾಚಕರ ಸಮೂಹಕ್ಕೆ ವೇದ್ಯವಾಗದೆ ಇರುವದಿಲ್ಲ.

ಈ ಮಾಸಪತ್ರಿಕೆಯನ್ನು ನಡೆಸುವದರಲ್ಲಿ ಸುಮಾರು ಎರಡು ವರ್ಷಗಳಲ್ಲಿ ಉಂಟಾಗಿರುವ ಅನುಭವದ ದೆಸೆಯಿಂದ ಕೆಲವು ವಿಷಯಗಳನ್ನು ವಾಚಕ ಮಹನೀಯರಲ್ಲಿ ವಿಜ್ಞಾಪಿಸಿಕೊಳ್ಳುವುದು ಅವಶ್ಯಕವಾಗಿದೆ.

ಈಗ ಪತ್ರಿಕೆಯನ್ನು ನಡೆಸುವ ಖರ್ಚಿಗೆ ತಕ್ಕಷ್ಟು ಉತ್ಪತ್ತಿಯನ್ನಾದರೂ ಚಂದಾದಾರರಿಂದ ಹೊಂದುತ್ತಾ ಇಲ್ಲ. ಚಂದಾದಾರರನ್ನು ಮೊದಲು ಗೊತ್ತುಮಾಡುವದಕ್ಕಾಗಿ ಬೇರೆ ಸ್ಥಳಗಳಿಗೆ ಪ್ರಯಾಣಮಾಡದೆ ಅವಸರದಲ್ಲಿ ಈ ಪತ್ರಿಕೆಯನ್ನು ಹೊರಡಿಸಿದ್ದಾಗಿದೆ. ಈಗಲಾದರೂ ಗ್ರಂಥಗಳನ್ನು ಬರೆಯುತ್ತಾ ಮಹಾದೇವನ ಧ್ಯಾನಮಾಡುತ್ತಾ ಇರಬೇಕೆಂಬ ಇಷ್ಟವಿದೆಯೇ ವಿನಾ ಚಂದಾದಾರರಿಗೋಸ್ಕರ ತಿರುಗಿ ದ್ರವ್ಯ ಸಂಪಾದನೆ ಮಾಡಬೇಕೆಂಬ ಸಂಕಲ್ಪವಿಲ್ಲ. ಆದ್ದರಿಂದ ಇತರ ಕೆಲಸಗಳಲ್ಲಿ ದುಡಿದ ಹಣವನ್ನು ಈ ಕೆಲಸಕ್ಕೆ ತಂದು ಹಾಕಿ ನಡೆಸುವುದು ಬಹಳ ಕಷ್ಟವಾಗಿರುತ್ತದೆ. ಈ ದೆಸೆಯಿಂದಲೇ ಈಚೆಗೆ ಸಂಚಿಕೆಗಳು ಸಾವಕಾಶವಾಗಿ ಹೊರಟಿರುತ್ತವೆ. ಯಾರಾದರೂ ಮಹನೀಯರು ಈ ಪತ್ರಿಕೆಯ ಕಾರ್ಯಾಲಯದಲ್ಲಿ ಬಹು ಮಿತವ್ಯಯದಿಂದ ವೆಚ್ಚ ಮಾಡುತ್ತಿರುವ ಹಣವನ್ನು ಎಂದರೆ ತಿಂಗಳಿಗೆ ಸುಮಾರು ೬೦–೭೦ ರೂಪಾಯಿಗಳನ್ನು ಕೊಡುವುದಾದರೆ ಅವರಿಗೆ ಈಗ ಪ್ರಕಟವಾಗುತ್ತಿರುವ ಐನೂರು ಮಾಸಪತ್ರಿಕೆಗಳನ್ನು ಕೊಡಬಹುದು. ಅವರು ಈಗಿನ ವರ್ಗಣಿದಾರರಿಂದ ಬರುವ ಹಣವನ್ನೂ ತೆಗೆದುಕೊಂಡು ಪ್ರಚಾರದ ವ್ಯವಸ್ಥೆಯನ್ನು ತಾವೇ ಮಾಡಿಕೊಳ್ಳಬಹುದು. ಒಂದುವೇಳೆ ಅವರು ೧೦೦೦ ಪ್ರತಿಗಳನ್ನು ಅಥವಾ ಹೆಚ್ಚು ಪ್ರತಿಗಳನ್ನು ಮುದ್ರಣ ಮಾಡಿಸುವದಾದರೆ ಹೆಚ್ಚು ತಗಲಬಹುದಾದ ಖರ್ಚನ್ನು ತೆಗೆದುಕೊಂಡು ಅಷ್ಟೂ ಪತ್ರಿಕೆಗಳನ್ನು ಅವರಿಗೆ ಕೊಡಬಹುದು. ಈ ಮೂಲಕ ಅವರು ಲಾಭವನ್ನೂ ಹೊಂದಬಹುದು. ಇಷ್ಟು ವ್ಯವಸ್ಥೆಯನ್ನು ಯಾರಾದರೂ ಮಾಡಿದರೆ ಈ ಪತ್ರಿಕೆಯು ಮಾಡಬೇಕೆಂದಿರುವ ಸಮಾಜ ಸೇವೆಗೆ ಅವರು ಸಹಾಯಕರೆಂದು ತಿಳಿದು ಬಹಳವಾಗಿ ಸಂತೋಷಪಡುವದಲ್ಲದೆ ಸಹಾಯಕರ ಹೆಸರನ್ನೂ ಪ್ರಕಟಪಡಿಸುವೆನು. ಅಥವಾ ಬೇರೆ ವಿಧದಿಂದಲಾದರೂ ಸಹಾಯವು ಬೇಕಾಗಿದೆ. ಶಿವಶರಣರ ಕಾಯಕದ ಪದ್ಧತಿಯಂತೆ ಪುಸ್ತಕಗಳು ಮಾಸಿಕ ಪತ್ರಗಳು ಮೊದಲಾದವುಗಳ ರೂಪದಲ್ಲಿ ಸಹಾಯ ಮಾಡಿದವರಿಗೆ ಪ್ರತಿಫಲವನ್ನು ಅರ್ಪಿಸುವದಕ್ಕೆ ಸಿದ್ಧನಾಗಿದ್ದೇನೆ.

# ಮೈಸೂರ್ ಸ್ಟಾರ್.

ಮೈಸೂರ್ ಸ್ಟಾರ್ ಪತ್ರಿಕೆಯು ಶಾಶ್ವತವಾದ ವಿರಾಮವನ್ನು ಪಡೆಯಿತು. ( ಅದರ ಪ್ರಕಟನೆಯು ನಿಲ್ಲಿಸಲ್ಪಟ್ಟಿತು. ) ಎಂಬ ವಿಷಯವನ್ನು ಅದರ ೧೯೩೪ ನೆಯ ಮೇ ೨೬ ನೆಯ ಸಂಚಿಕೆಯಿಂದ ತಿಳಿದು ಬಹಳ ವ್ಯಸನಪಡಬೇಕಾಗಿದೆ.

೪೭ ವರ್ಷಗಳಿಂದ ದೇಶ ಸೇವೆ ಮಾಡಿದ ಈ ಪತ್ರಿಕೆಗೆ ಅಂಚೆಯ ಸೌಲಭ್ಯವು ದೊರಕದೆ ಇರುವದು ಬಹಳ ವಿಷಾದಕರವಾದ ಸಂಗತಿಯಾಗಿದೆ.

ಈ ಪತ್ರಿಕೆಯಲ್ಲಿ ವ್ಯವಹಾರದಲ್ಲಿಯೂ ರಾಜಕೀಯದಲ್ಲಿಯೂ ಧಾರ್ಮಿಕದಲ್ಲಿಯೂ ಮಹತ್ತರವಾದ ಸಂಗತಿಗಳು ಆಗಾಗ ಪ್ರಕಟಿಸಲ್ಪಟ್ಟದರಿಂದ ಜನರು ನಿಜವಾದ ಏಳಿಗೆಯ ಕಡೆಗೆ ಗಮನ ಕೊಟ್ಟು ಅದರಂತೆ ನಡೆಯಲಿಕ್ಕೆ ಮಾರ್ಗವನ್ನು ತೋರಿಸಿಕೊಟ್ಟಂತಾಗಿರುತ್ತಿದ್ದಿತು. ರಾಜಧಾನಿಯ ಮುನಿಸಿಪಲ್ ಆಢಳಿತದಲ್ಲಿ ಯೋಗ್ಯವಾಗಿ ವ್ಯವಸ್ಥೆಯಾಗುವಂತೆ ಬಹಳ ಪ್ರಕಟನೆಗಳಿರುತ್ತಿದ್ದವು.

ವೀರಶೈವರ ವಿಷಯದಲ್ಲಿ ಈ ಪತ್ರಿಕೆಯು ಮಾಡಿರುವ ಉಪಕಾರವು ಅಷ್ಟಿಷ್ಟೆಂದು ವಿವರಿಸಲಿಕ್ಕೆ ಸಾಧ್ಯವಾಗುವಂತಿಲ್ಲ. ಕೈ. ವಾ. ಯಜಮಾನ ವೀರಸಂಗಪ್ಪನವರು ೧೯೦೧ ನೆಯ ಇಸವಿಯ ಜನ ಪರಿಗಣಿತೆಯಲ್ಲಿ ಶೂದ್ರರೆಂದು ಭಾವಿಸಲ್ಪಟ್ಟ ವೀರಶೈವ ಜನಾಂಗವನ್ನು ಶೂದ್ರರಲ್ಲವೆಂದು ತೋರಿಸುವದಕ್ಕೆ ಈ ಪತ್ರಿಕೆಯ ಮೂಲಕವಾಗಿ ಬಹಳ ಸಾಹಸ ಮಾಡಿದರು. ವೀರಶೈವವು ಜ್ಞಾನ ಬ್ರಾಹ್ಮಣ್ಯ ತತ್ವವುಳ್ಳದು ಎಂಬುದನ್ನು ತೋರಿಸುವದಕ್ಕೆ ದೀರ್ಘಕಾಲ ಪ್ರಯತ್ನ ಮಾಡಿದರು. ಕೈ। ವಾ॥ ಪಿ. ಆರ್. ಕರಿಬಸವಶಾಸ್ತ್ರಿಗಳವರೊಡನೆ ಕೂಡಿಕೊಂಡು ಅಚ್ಚಿನ ಗ್ರಂಥದ ಮುಖವನ್ನೇ ಕಾಣದಿದ್ದ ವೀರಶೈವರಿಗೆ ಅನೇಕ ಗ್ರಂಥಗಳನ್ನು ಓದುವಂತೆ ಮಾಡಿಟ್ಟರು. ಇವರನ್ನು ವೀರಶೈವ ಜನಾಂಗವು ಎಂದೂ ಮರೆಯುವಂತಿಲ್ಲ. ಇವರ ತರುವಾಯ ಮ॥ ರಾ॥ ವಿರೂಪಾಕ್ಷಯ್ಯನವರಾದರೂ ವೀರಶೈವ ಮಹಾಸಭೆ ಮೊದಲಾದವುಗಳ ವಿಷಯದಲ್ಲಿ ಚನ್ನಾಗಿ ಬರೆಯುತ್ತಾ ವೀರಶೈವ ಸಮಾಜದಲ್ಲಿ ಧರ್ಮ ಜಾಗ್ರತೆಯನ್ನುಂಟು ಮಾಡಿದರು. ವಿರಕ್ತ ವರ್ಗದ ಮೇಲೆ ಗುರುವರ್ಗದ ಪಂಚಾಚಾರ್ಯ ಪ್ರಭಾ ಪತ್ರಿಕೆ ಎಂಬ ಪ್ರಚಂಡ ಮಾರುತವು ಬೀಸಿದಾಗ್ಯೆ ದೊಡ್ಡ ಪರ್ವತವಾಗಿ ಎದುರು ನಿಂತು ಆ ಮಾರುತವು ಬಹಳವಾಗಿ ಬೀಸದಂತೆ ತಡೆದಿತು.



ಈ ' ಮೈಸೂರ್ ಸ್ಟಾರ್ ' ಪತ್ರಿಕೆಯು ಅಸ್ತಂಗತವಾದುದು ವೀರ

ಶೈವರ ದೌರ್ಭಾಗ್ಯವೇ ಸರಿ. ಇನ್ನಾದರೂ ವೀರಶೈವರು ಈ ಪತ್ರಿಕೆಯ ಪುನರುಜ್ಜೀವನ ಮಾಡಲಿಕ್ಕೆ ತಕ್ಕ ಸಹಾಯಗಳನ್ನು ಮಾಡಿ ಸಂಪಾದಕರವರಿಗೆ ಪ್ರೋತ್ಸಾಹಿಸಬೇಕೆಂದೂ ಸರಕಾರದವರೂ ಈ ಪತ್ರಿಕೆಗೆ ಅಂಚೆಯ ಸೌಲಭ್ಯವನ್ನು ಒದಗಿಸಿಕೊಡಲು ಹಿಂಜರಿಯಬಾರದೆಂದೂ ಪ್ರಾರ್ಥಿಸುತ್ತೇವೆ.

---

## ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ.

ಕನ್ನಡಿಗರೆಲ್ಲರನ್ನೂ ಒಂದುಗೂಡಿಸಿ ನನ್ನ ಮಕ್ಕಳೆಂದು ಸಾಕುತ್ತಿರುವುದು ಕನ್ನಡ ಭಾಷೆಯು ಎಂಬುದು ಕನ್ನಡಿಗರೆಲ್ಲರಿಗೂ ತಿಳಿದ ವಿಷಯವೇ.

ಕನ್ನಡ ಭಾಷೆಯ ಅಭಿವೃದ್ಧಿ ಸುಧಾರಣೆ ಇವುಗಳಿಗಾಗಿ ಏರ್ಪಡಿಸಲ್ಪಟ್ಟಿರುವ ಕರ್ಣಾಟಕ ಸಾಹಿತ್ಯ ಪರಿಷತ್ತಿನಿಂದ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯು ತ್ರೈಮಾಸಿಕವಾಗಿ ಹೊರಡುತ್ತಿರುವುದೂ ಪ್ರಸಿದ್ಧವಾದ ವಿಷಯವೇ.

ಸುಮಾರು ೧॥ ಕೋಟಿ ಕನ್ನಡಿಗರ ಸಂಖ್ಯೆ ಇದ್ದು ಈ ಪತ್ರಿಕೆಗೆ ೧೨೫ ಮಂದಿಗಿಂತ ಹೆಚ್ಚು ಚಂದಾದಾರರಿಲ್ಲ ಎಂಬುದನ್ನು ತಿಳಿದು ಬಹಳ ವ್ಯಸನಪಡಬೇಕಾಗಿದೆ. ವೀರಶೈವರ ಜನಸಂಖ್ಯೆ ಸುಮಾರು ೩೫ ಲಕ್ಷ. ಇವರೆಲ್ಲರ ತಾಯಿಮಾತು ಕನ್ನಡ. ಬಸವೇಶ್ವರನು ಕನ್ನಡದ ಅಭಿಮಾನಿ. ಗ್ರಂಥಗಳನ್ನು ಕನ್ನಡದಲ್ಲಿ ಬರೆಯಿಸಿದವನು, ಬರೆದವನು. ಹೀಗಿದ್ದೂ ಬಸವೇಶ್ವರನ ಅನುಯಾಯಿಗಳು ಎಂದು ಹೇಳುವುದನ್ನು ಪ್ರಕಟಪಡಿಸಲಿಕ್ಕಾದರೂ ಇವರು ಕನ್ನಡದ ಅಭಿಮಾನಿಗಳಾಗಿ ಇರಬೇಕಲ್ಲವೇ ? ಅಂಥಾ ಅಭಿಮಾನಿತೆಯನ್ನು ವೀರಶೈವರು ಇನ್ನು ಮುಂದಾದರೂ ತೋರಿಸಿ ಈ ಪತ್ರಿಕೆಗೆ ಹೆಚ್ಚು ಜನರು ಚಂದಾದಾರರಾಗುವರೆಂದು ನಿರೀಕ್ಷಿಸುತ್ತೇವೆ.

ಉಳಿದ ಕನ್ನಡಿಗರಲ್ಲಿ ಅನುಕೂಲಸ್ಥರಾದವರು ತಮ್ಮ ನಡೆತಾಯಿಗೆ ವೆಚ್ಚ ಮಾಡುವಂತೆ ಈ ನುಡಿತಾಯಿಗಾಗಿ ವರ್ಷಕ್ಕೆ ಈ ಪತ್ರಿಕೆಯ ಚಂದಾ ರೂಪವಾಗಿ ನಾಲ್ಕು ರೂಪಾಯಿಗಳನ್ನು ವೆಚ್ಚ ಮಾಡುವ ಅಭಿಮಾನಶಾಲಿಗಳಾಗುವರೆಂದು ನಂಬಿ ನಿರೀಕ್ಷಿಸುತ್ತೇವೆ.

ಪತ್ರಿಕಾ ಚಂದಾದಾರರಲ್ಲದ ಈ ಪರಿಷತ್ತಿನ ಸಾಮಾನ್ಯ ಸದಸ್ಯರಿಗೆ ಮೇಲೆ ಕಂಡ ತ್ರೈಮಾಸಿಕದ ಸಂಗ್ರಹ ಪ್ರತಿಯೊಂದನ್ನು ಕಳುಹಿಸುವರು. ಅಂಥಾ ಸದಸ್ಯರಾಗಿಯಾದರೂ ಕನ್ನಡ ಮಾತೆಯನ್ನು ಪೋಷಿಸಬೇಕಾದುದು ಕನ್ನಡಿಗರ ಅವಶ್ಯ ಕರ್ತವ್ಯವಾಗಿರುವದು.

# ವೀರಶೈವರು ಧಾರ್ಮಿಕ ವಿಷಯದಲ್ಲಿ ಮಾಡಬೇಕಾಗಿರುವ ಮಹತ್ಕಾರ್ಯಗಳು.

## ೧ ಶಿವಾಗಮಗಳನ್ನು ಪ್ರಕಟಿಸುವದು.

ಯಾವ ಜನಾಂಗವೇ ಆಗಲಿ ತನ್ನ ಧಾರ್ಮಿಕ ವಿಷಯಗಳನ್ನು ಸಕಲರೂ ತಿಳಿಯುವಂತೆ ಗ್ರಂಥಗಳ ರೂಪವಾಗಿ ಪ್ರಕಟಿಸಿದ ವಿನಾ ಅದರ ನಿಜ ತತ್ವಗಳು ಹೊರಬೀಳುವದಿಲ್ಲ. ವೀರಶೈವರಲ್ಲಿ ಇಂಥಾ ಪ್ರಕಟನೆಗಳಿಲ್ಲದೆ ಇರುವದರಿಂದಲೇ ಧಾರ್ಮಿಕ ಸಂಬಂಧದಲ್ಲಿ ಅನೈಕಮತ್ಯತೆಯುಂಟಾಗಿರುವದು. ವೀರಶೈವರು ತಮ್ಮ ಧರ್ಮವು ಕಾಮಿಕಾದಿ ವಾತೂಲಾಂತವಾದ ಇಪ್ಪತ್ತೆಂಟು ಶಿವಾಗಮಗಳಲ್ಲಿ ಹೇಳಲ್ಪಟ್ಟಿರುವದಾಗಿ ಈಚೆಗೆ ರಚಿಸಲ್ಪಟ್ಟ ಸಂಗ್ರಹ ಗ್ರಂಥಗಳಿಂದ ತಿಳಿಯುತ್ತಾರೆ. ಆದರೆ ಈ ಆಗಮಗಳು ಎಲ್ಲಿವೆ? ಅವುಗಳಲ್ಲಿ ವೀರಶೈವ ಧರ್ಮವು ಏನು ಹೇಳಲ್ಪಟ್ಟಿರುವದು? ಅವುಗಳನ್ನು ಪರಿಶೋಧಿಸಿ ನೋಡಬೇಕು, ಎಂಬ ಯೋಚನೆಯುಳ್ಳವರು ಬಹು ವಿರಳರೆಂದು ಯೋಚಿಸಬೇಕಾಗಿದೆ.

ಕಾಶ್ಮೀರದ ಸರಕಾರದವರು ಕೆಲವು ಆಗಮಗಳನ್ನು ಪ್ರಕಟಿಸುತ್ತಿರುವರು. ಇವರಲ್ಲಿ ಶಿವಾಗಮಗಳುಂಟೇ ಎಂಬುದನ್ನು ಪರಿಶೋಧಿಸಬೇಕಾಗಿದೆ. ಮತ್ತು ಬಂಗಾಳಾ ರಾಯಲ್ ಏಷ್ಯಾಟಿಕ್ ಸೊಸೈಟಿಯ ಪ್ರಧಾನ ಸದಸ್ಯರೂ ಅಧಿಕಾರಿಗಳೂ ಆಗಿದ್ದ ಮಹಾ ಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿ M. A. D. Lit I. C. E. ಯವರು ನೇಪಾಳದಲ್ಲಿ ಶಿವಾಗಮ ಗ್ರಂಥಗಳು ಅಖಂಡವಾಗಿರುವವೆಂದು ಬರೆದಿರುತ್ತಾರೆ. ಆಗಮಸ್ವರೂಪ

ದೇಶ ಕಾಲ ಇವುಗಳ ವಿಚಾರಗಳಿಂದ ಭಾರತೀಯರ ಸಂಶೋಧನ ಕಾರ್ಯಗಳಿಗೆ, ತುಂಬಾ ಸಹಾಯವಿರುವದಾಗಿ ತಿಳಿಯಬಂದಿದೆ. ಈ ಆಗಮಗಳಲ್ಲಿ ಒಂದು ಬಾಲ್ಕ್ (ಬಾಕ್ಟ್ರಿಯಾ = ಅಫಗಾಣಿಸ್ತಾನದ) ಪ್ರಾಂತದಿಂದ ನೇಪಾಳಕ್ಕೆ ಬಂದಿದೆಯಂತೆ. ಇವುಗಳನ್ನು ವೀರಶೈವರು ಬರೆದು ತರಿಸುವದಕ್ಕೆ ಪ್ರಯತ್ನ ಮಾಡುವದು ಅತ್ಯವಶ್ಯಕವಾಗಿರುತ್ತದೆ.

ಪೂರ್ವಿಕ ಮಹನೀಯರು ಅಚ್ಚಿನ ಸೌಲಭ್ಯಗಳಿಲ್ಲದ ಕಾಲದಲ್ಲಿ ಬಹು ಕಷ್ಟಪಟ್ಟು ಓಲೆಗರಿಯಪ್ರತಿಗಳನ್ನು ಬರೆದು ಅಥವಾ ಬಹಳ ಹಣಕೊಟ್ಟು ಬರೆಸಿ ಗ್ರಂಥಗಳನ್ನು ಪ್ರಚಾರಪಡಿಸುತ್ತಿದ್ದರು. ಈಗಿನ ಮಹನೀಯರು ಇಂಥಾ ಮುಖ್ಯ ಲೇಖನಗಳನ್ನು ಬರೆಯಿಸಿ ಅವುಗಳನ್ನು ಅಚ್ಚುಮಾಡಿಸಿ ಧರ್ಮೋದ್ಧಾರ ಮಾಡುವದರ ಮೂಲಕ ಶಿವನ ಸೇವೆಯನ್ನು ಮಾಡಿ ಧನ್ಯರಾಗುವದು ಶ್ರೇಷ್ಠಕಾರ್ಯವು.

ಜ್ಞಾನಪ್ರಸಾರ ಕಾರ್ಯವು ಶ್ರೇಷ್ಠವಾದ ಧರ್ಮವೆಂದು ಚನ್ನಬಸವಣ್ಣನವರೇ ಮೊದಲಾದ ಶಿವಶರಣರ ಅಭಿಪ್ರಾಯವಿರುವದು. ವೀರಶೈವರು ಇಂಥಾ ಜ್ಞಾನಪ್ರಸಾರಣ ಕಾರ್ಯಕ್ಕೆ ಮುಂದಾಳುಗಳಾಗಿ ಕಾರ್ಯ ನಡಿಸಬಾರದೇ? ವೇದ ಉಪನಿಷತ್ತು ಮೊದಲಾದವುಗಳನ್ನು ಇದುವರೆಗೆ ಮುದ್ರಿಸಿದಂತೆ ಆಗಮಗಳು ಮುದ್ರಿಸಲ್ಪಟ್ಟಿಲ್ಲ. ಇವು ವೀರಶೈವರ ಹಕ್ಕಿನ ಗ್ರಂಥಗಳಾಗಿ ಪರಿಣಮಿಸಿ ಇವೆ. ತಮ್ಮ ಮೂಲಗ್ರಂಥಗಳನ್ನೇ ತಾವು ಪ್ರಕಟಿಸದೆ ಇರುವದು ವೀರಶೈವರಿಗೆ ಒಂದು ಕೊರತೆಯಲ್ಲವೆ?

ಇಂಥಾ ಮುಖ್ಯ ಕೊರತೆಗಳನ್ನು ಮುಚ್ಚಿಟ್ಟುಕೊಂಡು ಲೌಕಿಕರಲ್ಲಿ ಹೆಮ್ಮೆಪಡೆಯಬೇಕೆಂದು ವೀರಶೈವ ಮತವು ಶ್ರೇಷ್ಠವಾದದ್ದೆಂದು ಹೇಳುತ್ತಿರುವವರು, ಆ ಹೇಳಿಕೆಗೆ ಏನು ಪ್ರಮಾಣಗಳನ್ನು ಒದಗಿಸುವರು? ಆದ್ದರಿಂದ ಇದೊಂದು ಮುಖ್ಯಕಾರ್ಯವೆಂದು ಮೊದಲು ನಡೆಸಬೇಕಾಗಿದೆ.

ವೀರಶೈವವು ಜಗತ್ತಿಗೆಲ್ಲಾ ಬೇಕಾದ ಧರ್ಮವಾದಾಗ್ಯೂ ಇಂಥಾ ಪ್ರಕಟನೆಗಳು ಇಲ್ಲದ್ದರಿಂದ ಒಂದು ವಿಶಿಷ್ಟ (ಕೆಲವರಿಗೆ ಬೇಕಾದ) ಮತವಾಗಿ ಪರಿಣಮಿಸಿ ಇದೆ. ಈ ಕೊರತೆಯನ್ನು ಪರಿಹಾರಮಾಡಲು ಮಹನೀಯರು ಈಗಲೇ ಯತ್ನಿಸಬಾರದೇ?

---

## ೨ ಕಾಶಿಯ ವಿಶ್ವವಿದ್ಯಾಲಯದ ಮೂಲಕ ವೀರಶೈವ ಗ್ರಂಥಗಳ ಬೋಧೆಗೆ ಏರ್ಪಾಡು ಮಾಡುವದು.

ಕಾಶಿಯಲ್ಲಿರುವ ಹಿಂದೂ ವಿಶ್ವವಿದ್ಯಾಲಯದಲ್ಲಿ ಯಾವ ಮತದವರಾದರೂ ತಮ್ಮ ಮತತತ್ವಗಳನ್ನು ಬೋಧಿಸಲಿಷ್ಟಪಟ್ಟು ಅದಕ್ಕೆ ಪಂಡಿತರನ್ನು ನೇಮಿಸುವದೇ ಮೊದಲಾದ ಖರ್ಚುಗಳಿಗಾಗಿ ಬಡ್ಡಿಯು ಉತ್ಪನ್ನವಾಗುವಷ್ಟು ಮೂಲ ಧನವನ್ನು ನಿಧಿಯಾಗಿ ಒಪ್ಪಿಸಿದರೆ ಅದರ ಸಹಾಯದಿಂದ ಆಯಾ ಮತ ಬೋಧೆಯನ್ನು ಮಾಡಲು ಏರ್ಪಡಿಸುತ್ತಾರಾಗಿ ತಿಳಿಯಬರುತ್ತದೆ.

ಆದ್ದರಿಂದ ಅಲ್ಲಿ ವೀರಶೈವರು ಧರ್ಮಬೋಧೆ ನಡೆಸುವುದಕ್ಕಾಗಿ ಒಂದು ನಿಧಿಯನ್ನೇರ್ಪಡಿಸಿ ಕೊಟ್ಟು ಅಲ್ಲಿ ಕಲಿಸಲ್ಪಡಬೇಕಾದ ವೀರಶೈವ ಗ್ರಂಥಗಳನ್ನೂ ತೋರಿಸಿದರೆ ಆ ಬೋಧೆಯು ನಡೆಯುತ್ತದೆ. ಆಮೂಲಕ ವೀರಶೈವ ತತ್ವವು ಜಗತ್ತಿಗೆಲ್ಲಾ ತಿಳಿಯುವದಕ್ಕೆ ಅವಕಾಶವಾಗುತ್ತದೆ. ಸಂಸ್ಕೃತ ವಿದ್ಯಾರ್ಥಿಗಳೂ ಕಾಶಿಯಲ್ಲಿ ಬಹಳ. ಹಿಂದೂದೇಶದಲ್ಲಿ ಕಾಶಿಯು ಬಹು ಪುರಾತನಕಾಲದಿಂದಲೂ ವಿದ್ಯೆಗೆ ಪ್ರಸಿದ್ಧವಾದಸ್ಥಾನ. ಇಂಥಾ ಪ್ರಸಿದ್ಧ ಸ್ಥಳದಲ್ಲಿ ಪ್ರಸಿದ್ಧ ವಿದ್ಯೆಯಾದ ವೀರಶೈವ ತತ್ತ್ವ ಬೋಧೆಯನ್ನು ನೆಲೆಗೊಳಿಸುವಕಾರ್ಯವನ್ನು ವೀರಶೈವರು ಮಾಡುವದು ಬಹಳ ಒಳ್ಳೆಯ ಕಾರ್ಯವಾಗಿರುತ್ತದೆ.

---

## ಧಾರ್ಮಿಕ ವರ್ತಮಾನಗಳು.

ಅಮೇರಿಕಾ ಖಂಡದ ಚಿಕಾಗೋ ಪಟ್ಟಣದಲ್ಲಿ ಸರ್ವ ಧರ್ಮ ಸಮ್ಮೇಳನವು ನಡೆದುದು ಈ ಹಿಂದೆಯೇ ವಾಚಕರಿಗೆ ತಿಳಿದ ವಿಷಯವಾಗಿದೆ. ಧರ್ಮವಿಷಯದಲ್ಲಿ ಹಿಂದೂ ದೇಶವು ಬಹಳ ಮುಂದಿರುವುದು ಎಂಬುದನ್ನು ತಿಳಿದವರಾಗಿ ಅಂಥಾ ಸರ್ವ ಧರ್ಮ ಸಮ್ಮೇಳನವನ್ನು ಹಿಂದೂ ದೇಶದಲ್ಲಿಯೇ ನಡೆಸಬೇಕೆಂದು ಅಮೇರಿಕೆಯ ಜನರು ಆಲೋಚಿಸಿಕೊಂಡಿರುವದಾಗಿ ತಿಳಿಯಬರುತ್ತದೆ. ವೀರಶೈವರೂ ಈ ಕಾಲದಲ್ಲಿ ತಮ್ಮ ಧರ್ಮದ

ವಿಷಯದ ವಿವರವನ್ನು ಈ ಸಮ್ಮೇಳನದಲ್ಲಿ ಸರಿಯಾದ ರೀತಿಯಲ್ಲಿ ತೋರಿಸುವದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡುವರೆಂದು ನಿರೀಕ್ಷಿಸುತ್ತೇವೆ.

ವೀರಶೈವ ಮಹಾಸಭೆಯು ಧಾರವಾಡದಲ್ಲಿ ಎರಡನೆಯ ಸಾರೆ ನಡೆದದ್ದರಿಂದ ಈಚೆಗೆ ಯಾವ ಯೋಜನೆಯನ್ನೂ ಮಾಡದೆ ಕೂತುಕೊಂಡಿರುವಂತೆ ಕಾಣುತ್ತದೆ. ಮುಂದಿನ ಮಹಾಸಭೆಯು ತನ್ನ ನಿರ್ಣಯಗಳನ್ನು ರೂಢಿಯಲ್ಲಿ ( ಅನುಲಿನಲ್ಲಿ ) ತರಲಿಕ್ಕೆ ಬೇಕಾದ ಪೂರ್ವ ಸಿದ್ಧತೆಗಳನ್ನು ಮೊದಲೇ ಮಾಡಿಕೊಂಡು ಆಮೇಲೆ ಸೇರುವದು ಉತ್ತಮವಾಗಿರುತ್ತದೆ.

ಮಹಾಸಭಾ ಸ್ಟ್ಯಾಂಡಿಂಗ್ ಕಮೀಟಿಯವರು ಬಾಗಲಕೋಟೆಯಲ್ಲಿ ಕೂಡುವರೆಂದು ವರ್ತಮಾನವಿದೆ. ಹೀಗೆ ಕೂಡಿದಾಗ ಆದ ನಿರ್ಣಯಗಳು ಬೇಗನೆ ಪ್ರಕಟವಾಗಲೆಂದು ಹಾರೈಸುತ್ತೇವೆ.

---

### ಶ್ರೀಜಗದ್ಗುರು ಗಂಗಾಧರಸಂಸ್ಕೃತ ಕಾಲೇಜು ಹುಬ್ಬಳ್ಳಿ.
### ಇದರ ಎರಡನೆಯ ವಾರ್ಷಿಕ ವರದಿ.

—o—

ಈ ವರದಿಯು ಈ ತಿಂಗಳಲ್ಲಿ ಪ್ರಕಟಿಸಲ್ಪಟ್ಟಿರುತ್ತದೆ. ಈ ವಿದ್ಯಾಲಯದಲ್ಲಿ ಕಳೆದ ವರ್ಷ ೭೪ ವಿದ್ಯಾರ್ಥಿಗಳಿದ್ದು ಈ ವರ್ಷ ಹನ್ನೊಂದು ವಿದ್ಯಾರ್ಥಿಗಳು ಹೆಚ್ಚಾಗಿರುವದಾಗಿಯೂ ಸರಕಾರದವರು ಗ್ರ್ಯಾಂಟ ಕೊಡುವಬಗ್ಗೆ ಇದನ್ನು ಮಂಜೂರ ಮಾಡಿಕೊಂಡಿರುವದಾಗಿಯೂ ವಿದ್ಯಾರ್ಥಿಗಳಿಗೆ ಮತ ಗ್ರಂಥಗಳು, ಹಿಂದಿ, ಇಂಗ್ಲಿಷ, ಸಂಸ್ಕೃತ ಈ ವಿಷಯಗಳನ್ನು ಕಲಿಸುತ್ತಿರುವದಾಗಿಯೂ ಮತಗ್ರಂಥಗಳಿಗಾಗಿ ಉಚ್ಚ ತರಗತಿಗಳಲ್ಲಿ ಪಾರಮೇಶ್ವರಾಗಮ ಮತ್ತು ವೀರಶೈವಧರ್ಮ ಶಿರೋಮಣಿ ಎಂಬ ಸಂಸ್ಕೃತ ಗ್ರಂಥಗಳು ಪಠ್ಯ ಗ್ರಂಥಗಳಾಗಿರುವದಾಗಿಯೂ ತಿಳಿಯಬರುತ್ತದೆ. ಇವೆಲ್ಲವೂ ಸ್ತುತ್ಯ ಕಾರ್ಯಗಳಾಗಿವೆ. ಸದರೀ ವರದಿಯಲ್ಲಿ ಅಪೇಕ್ಷಿಸಿರುವ ಪ್ರಕಾರ ಭಕ್ತರೂ ಈ ವಿದ್ಯಾಲಯಕ್ಕೆ ಸೇರಿ ವ್ಯಾಸಂಗ ಮಾಡುವದು ಒಳ್ಳೆಯದು.

ಈ ವಿದ್ಯಾಲಯವು ಇನ್ನೂ ಅಭಿವೃದ್ಧಿ ದೆಸೆಯನ್ನು ಹೊಂದಲಿ ಎಂದು ಹಾರೈಸುತ್ತೇವೆ.

---

# ಕನ್ನಡ ಸಾಹಿತ್ಯ ಸಮ್ಮೇಳನ

## ರಾಯಚೂರಿನಲ್ಲಿ, ಡಿಸೆಂಬರ್ ಕಡೆಯಲ್ಲಿ

---

೨೦ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನವು ಹೈದರಾಬಾದು ಸಂಸ್ಥಾನದಲ್ಲಿರುವ ರಾಯಚೂರು ನಗರದಲ್ಲಿ ೧೯೩೪ನೆಯ ಡಿಸೆಂಬರ್ ೨೮, ೨೯, ೩೦ನೆಯ ತಾರೀಖು (ಶುಕ್ರವಾರ, ಶನಿವಾರ, ಭಾನುವಾರ) ಗಳಲ್ಲಿ ನಡೆಯುವಂತೆ ಏರ್ಪಾಡಾಗಿದೆ. ಅಲ್ಲಿಯ ಪ್ರಸಿದ್ಧ ವಕೀಲರಾದ ಶ್ರೀಮಾನ್ ಗುಡಿಹಾಳ ಹನುಮಂತರಾವ್ ದೇಶಪಾಂಡೆ ಅವರ ನೇತೃತ್ವದಲ್ಲಿ ಸ್ವಾಗತ ಮಂಡಲಿ ಏರ್ಪಟ್ಟು ಸಮ್ಮೇಳನಕ್ಕೆ ಬೇಕಾದ ಅನುಕೂಲತೆಗಳನ್ನು ಸಂಭ್ರಮದಿಂದ ಸಿದ್ಧಗೊಳಿಸುತ್ತಿದೆ.

ಸುಪ್ರಸಿದ್ಧ ಸಾಹಿತಿಗಳಾದ ಮಂಗಳೂರಿನ ಶ್ರೀಮಾನ್ ಪಂಜೆ ಮಂಗೇಶರಾವ್, ಬಿ. ಎ. ಎಲ್. ಟಿ. ಅವರು ಅಧ್ಯಕ್ಷಸ್ಥಾನವನ್ನು ವಹಿಸಲು ದಯವಿಟ್ಟು ಒಪ್ಪಿರುತ್ತಾರೆ.

ಸಮ್ಮೇಳನದಲ್ಲಿ ಪ್ರಬಂಧಗಳನ್ನೋದಬೇಕೆಂಬದಾಗಲಿ, ನಿರ್ಣಯಗಳನ್ನು ಸೂಚಿಸಬೇಕೆಂದಾಗಲಿ, ಕೀರ್ತನೆ ಕಾವ್ಯವಾಚನ ನಾಟಕ ಮೊದಲಾದವುಗಳನ್ನು ನಡೆಯಿಸಬೇಕೆಂದಾಗಲಿ, ಅಥವಾ ಆ ಕಾಲದಲ್ಲಿ ಬೇರೆ ಸಭೆ ಪ್ರದರ್ಶನ ಮೊದಲಾದವುಗಳನ್ನು ಸೇರಿಸಬೇಕೆಂದಾಗಲಿ ಇಷ್ಟ ಪಡುವವರು ತಮ್ಮ ಉದ್ದೇಶವನ್ನು ೧೯೩೪ರ ಅಕ್ಟೋಬರ್ ೩೧ರೊಳಗಾಗಿ ಬೆಂಗಳೂರಲ್ಲಿರುವ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯವರಿಗಾಗಲಿ ಅಥವಾ ರಾಯಚೂರಿನಲ್ಲಿರುವ ಸ್ವಾಗತ ಮಂಡಲಿಯ ಕಾರ್ಯದರ್ಶಿಯವರಿಗಾಗಲಿ ತಿಳಿಯಪಡಿಸಬೇಕೆಂದು ಕೋರಿದೆ. ಈ ಬಗ್ಗೆ ಏರ್ಪಟ್ಟಿರುವ ನಿಯಮಗಳನ್ನು ಈ ಕೆಳಗೆ ಕೊಟ್ಟಿದೆ.

ನಿಜಾಂ ಕರ್ನಾಟಕದಲ್ಲಿರುವ ನಮ್ಮ ಭಾಷಾಬಂಧುಗಳು ಈ ಸಮ್ಮೇಳನವು ಅತ್ಯಂತ ಯಶಸ್ವಿಯಾಗಿ ನಡೆಯಬೇಕೆಂದು ಆಶೆಪಟ್ಟುಕೊಂಡು

ಉತ್ಸಾಹದಿಂದ ಏರ್ಪಾಡುಗಳನ್ನು ನಡಸುತ್ತಿದ್ದಾರೆ. ಸಮಸ್ತ ಕರ್ಣಾಟಕದ ನಾನಾಭಾಗಗಳಲ್ಲಿಯ ದೇಶಭಕ್ತರೂ, ಭಾಷಾಭಿಮಾನಿಗಳೂ, ಸಾಹಿತ್ಯೋಪಾಸಕರೂ, ಕಲಾಭಿಜ್ಞರೂ ಸಮ್ಮೇಳನಕ್ಕೆ ಬರುವರೆಂದು ರಾಯಚೂರಿನ ಸ್ವಾಗತ ಮಂಡಲಿಯು ನಿರೀಕ್ಷಿಸಿಕೊಂಡಿದೆ. ಕನ್ನಡ ನಾಡಿನ ಎಲ್ಲ ಪ್ರಾಂತಗಳಿಂದಲೂ ಮಹಾಜನರು ತಂಡೋಪತಂಡವಾಗಿ ರಾಯಚೂರಿಗೆ ದಯಮಾಡಿ ಬಂದು, ಸಮ್ಮೇಳನ ಕಾರ್ಯದಲ್ಲಿ ಭಾಗಿಗಳಾಗಿ, ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ಬೆಂಬಲಕೊಡಬೇಕೆಂದು ಕರ್ಣಾಟಕ ಸಾಹಿತ್ಯ ಪರಿಷತ್ತು ಮನಃಪೂರ್ವಕವಾಗಿ ಪ್ರಾರ್ಥಿಸುತ್ತದೆ.

## ನಿಯಮಗಳು.

೧೬. (ಅ) ಸಮ್ಮೇಳನದಲ್ಲಿ ಪ್ರಬಂಧಗಳನ್ನೋದಲಿಚ್ಛಿಸುವವರೂ ನಿರ್ಣಯಗಳನ್ನು ಸೂಚಿಸಲಿಚ್ಛಿಸುವವರೂ ಆ ಸಂಗತಿಗಳನ್ನು ಅಕ್ಟೋಬರ್ ೩೧ರೊಳಗಾಗಿ ಕಾರ್ಯ ನಿರ್ವಾಹಕ ಮಂಡಲಿಗಾಗಲಿ ಸ್ವಾಗತ ಮಂಡಲಿಗಾಗಲಿ ಬರೆದು ತಿಳಿಸಿರಬೇಕು.

(ಆ) ಸ್ವಾಗತ ಮಂಡಲಿಯು ತನ್ನಲ್ಲಿಗೆ ಬಂದ ಇಂಥಾ ದರಖಾಸ್ತುಗಳನ್ನು ತನ್ನ ಶಿಫಾರಸುಗಳೊಡನೆ ನವಂಬರು ೧೦ರೊಳಗಾಗಿ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ಕಳುಹಿಸತಕ್ಕದ್ದು.

೧೭. ಸಮ್ಮೇಳನ ಕಾಲದಲ್ಲಿ ನಾಟಕವಾಡಬೇಕೆಂದಿರುವ ನಾಟಕ ಸಂಘಗಳೂ, ಕಾವ್ಯ ವಾಚನ ಮಾಡಲಿಚ್ಛಿಸುವ ಗಮಕಿಗಳೂ, ಕೀರ್ತನಕಾರರೂ, ಉಪನ್ಯಾಸಕರೂ, ಇಂಥ ಇತರ ಸಾಹಿತ್ಯ ಸೇವಕರೂ ಸಹ ಅಕ್ಟೋಬರು ತಿಂಗಳು ೩೧ರೊಳಗಾಗಿ ತಾವು ಉದ್ದೇಶಿಸಿರುವ ಕಾರ್ಯ ವಿವರವನ್ನು ಸ್ವಾಗತ ಮಂಡಲಿಗೆ ಅಥವಾ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ತಿಳಿಸಿರಬೇಕು. ಆ ತಾರೀಖಿನ ತರುವಾಯ ಬರುವ ದರಖಾಸ್ತುಗಳನ್ನು ಆ ಮಂಡಲಿಗಳು ಗಮನಕ್ಕೆ ತೆಗೆದುಕೊಳ್ಳಬೇಕಾದ್ದಿಲ್ಲ. ಸ್ವಾಗತ ಮಂಡಲಿಯು ತನ್ನಲ್ಲಿಗೆ ಬಂದ ಇಂಥಾ ದರಖಾಸ್ತುಗಳನ್ನು ತನ್ನ ಶಿಫಾರಸ್ಸುಗಳೊಡನೆ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ನವಂಬರು ೧೦ರೊಳಗಾಗಿ ಕಳುಹಿಸಿರಬೇಕು.

೧೮. ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಇನ್ನಾವ ಸಭೆ, ಸಮ್ಮೇಳನ, ಪ್ರದರ್ಶನ ಮೊದಲಾದ ಸಮಾರಂಭಗಳನ್ನಾದರೂ ನಡೆಯಿಸಬೇಕೆಂದು ಇಷ್ಟಪಡುವ ಸಂಸ್ಥೆಗಳೂ ಅಕ್ಟೋಬರ್ ೩೧ರೊಳಗಾಗಿ ತಮ್ಮ ಉದ್ದೇಶವನ್ನು ಸ್ವಾಗತ ಮಂಡಲಿಗೂ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೂ ಸಹ ಕಳುಹಿಸಿರಬೇಕು. ಅವುಗಳ ದರಖಾಸ್ತುಗಳೂ ಮೇಲಿನ ದರಖಾಸ್ತುಗಳಂತೆಯೇ ವ್ಯವಸ್ಥೆಯಾಗತಕ್ಕದ್ದು.

೧೯. ಪ್ರಬಂಧಗಳನ್ನೋದಲಿಚ್ಛಿಸುವವರು ತಮ್ಮ ದರಖಾಸ್ತಿನೊಡನೆ ತಮ್ಮ ಪ್ರಬಂಧದ ಸಂಗ್ರಹ ಲೇಖವನ್ನು ಕಳುಹಿಸಿರಬೇಕು. ಈ ಸಂಗ್ರಹ ಲೇಖವು ಪ್ರಬಂಧದ ಮುಖ್ಯಾಂಶಗಳನ್ನು ಮಾತ್ರ—ಎಂದರೆ ಅದರಲ್ಲಿ ಚರ್ಚಿತವಾಗಿರುವ ಪ್ರಶ್ನೆಗಳನ್ನು ಮತ್ತು ಪ್ರತಿಪಾದಿತವಾಗಿರುವ ಸಿದ್ಧಾಂತಗಳನ್ನು ಮಾತ್ರ—ಸೂಚಿಸುವುದಾಗಿ ಕೈಬರಹದಲ್ಲಿ ಎರಡು ಪುಟಗಳನ್ನು ಮೀರದೆ ಇರಬೇಕು.

೨೦ ನಿರ್ಣಯಗಳನ್ನು ಸೂಚಿಸಲಿಚ್ಛಿಸುವವರು ತಮ್ಮ ನಿರ್ಣಯವಾಕ್ಯಗಳನ್ನು ಬರೆದು ಕಳುಹಿಸತಕ್ಕದ್ದು.

೨೧. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಈ ಪ್ರಬಂಧ ಸಂಗ್ರಹಗಳನ್ನೂ ನಿರ್ಣಯ ಸೂಚನೆಗಳನ್ನೂ ನೋಡಿ ಅವಕ್ಕೆ ತಕ್ಕ ಕಾಲಾವಕಾಶವನ್ನು ಗೊತ್ತುಪಡಿಸುವ ಕೆಲಸವನ್ನು ಒಂದು ಉಪಸಮಿತಿಗೆ ವಹಿಸಬಹುದು. ಆ ಉಪಸಮಿತಿಯ ಶಿಫಾರಸ್ಸಿನ ಮೇರೆಗೆ, ಅಥವಾ ತಾನಾಗಿ, ಯಾವ ಪ್ರಬಂಧಕ್ಕಾಗಲಿ ನಿರ್ಣಯ ಸೂಚನೆಗಾಗಲಿ ಅವಕಾಶ ದೊರೆಯದೆಂದು ಹೇಳುವ ಅಧಿಕಾರವು ಕಾರ್ಯನಿರ್ವಾಹಕ ಮಂಡಲಿಗೆ ಇರುತ್ತದೆ.

೨೨. ಮೇಲಿನ ೧೬, ೧೭, ೧೮ನೆಯ ನಿಯಮಗಳಿಗೆ ಸಂಬಂಧಪಟ್ಟಂತೆ ಬಂದ ದರಖಾಸ್ತುಗಳನ್ನು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಪರ್ಯಾಲೋಚಿಸಿ ತನ್ನ ತೀರ್ಮಾನಗಳನ್ನು ನವಂಬರು ೩೦ರೊಳಗಾಗಿ ಆಯಾ ದರಖಾಸ್ತುದಾರರಿಗೆ ತಿಳಿಯಪಡಿಸತಕ್ಕದ್ದು.

ವಿಷಯುವ ವಿವರವನ್ನು ಈ ಸಮ್ಮೇಳನದಲ್ಲಿ ಸರಿಯಾದ ರೀತಿಯುಲ್ಲಿ ತೋರಿಸುವದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡುವರೆಂದು ನಿರೀಕ್ಷಿಸುತ್ತೇವೆ.

ವೀರಶೈವ ಮಹಾಸಭೆಯು ಧಾರವಾಡದಲ್ಲಿ ಎರಡನೆಯು ಸಾರೆ ನಡೆದದ್ದರಿಂದ ಈಚೆಗೆ ಯಾವ ಯೋಜನೆಯನ್ನೂ ಮಾಡದೆ ಕೂತುಕೊಂಡಿರುವಂತೆ ಕಾಣುತ್ತದೆ. ಮುಂದಿನ ಮಹಾಸಭೆಯು ತನ್ನ ನಿರ್ಣಯಗಳನ್ನು ರೂಢಿಯುಲ್ಲಿ ( ಆಚರಣಿನಲ್ಲಿ ) ತರಲಿಕ್ಕೆ ಬೇಕಾದ ಪೂರ್ವ ಸಿದ್ಧತೆಗಳನ್ನು ಮೊದಲೇ ಮಾಡಿಕೊಂಡು ಆಮೇಲೆ ಸೇರುವದು ಉತ್ತಮವಾಗಿರುತ್ತದೆ.

ಮಹಾಸಭಾ ಸ್ಟ್ಯಾಂಡಿಂಗ್ ಕಮೀಟಿಯವರು ಬಾಗಲಕೋಟೆಯಲ್ಲಿ ಕೂಡುವರೆಂದು ವರ್ತಮಾನವಿದೆ. ಹೀಗೆ ಕೂಡಿದಾಗ ಆದ ನಿರ್ಣಯಗಳು ಬೇಗನೆ ಪ್ರಕಟವಾಗಲೆಂದು ಹಾರೈಸುತ್ತೇವೆ.

---

## ಶ್ರೀಜಗದ್ಗುರು ಗಂಗಾಧರಸಂಸ್ಕೃತ ಕಾಲೇಜು ಹುಬ್ಬಳ್ಳಿ. ಇದರ ಎರಡನೆಯ ವಾರ್ಷಿಕ ವರದಿ.

——೦——

ಈ ವರದಿಯು ಈ ತಿಂಗಳಲ್ಲಿ ಪ್ರಕಟಿಸಲ್ಪಟ್ಟಿರುತ್ತದೆ. ಈ ವಿದ್ಯಾಲಯದಲ್ಲಿ ಕಳೆದ ವರ್ಷ ೭೪ ವಿದ್ಯಾರ್ಥಿಗಳಿದ್ದು ಈ ವರ್ಷ ಹನ್ನೊಂದು ವಿದ್ಯಾರ್ಥಿಗಳು ಹೆಚ್ಚಾಗಿರುವದಾಗಿಯೂ ಸರಕಾರದವರು ಗ್ರ್ಯಾಂಟ ಕೊಡುವಬಗ್ಗೆ ಇದನ್ನು ಮಂಜೂರ ಮಾಡಿಕೊಂಡಿರುವದಾಗಿಯೂ ವಿದ್ಯಾರ್ಥಿಗಳಿಗೆ ಮತ ಗ್ರಂಥಗಳು, ಹಿಂದಿ, ಇಂಗ್ಲಿಷ, ಸಂಸ್ಕೃತ ಈ ವಿಷಯಗಳನ್ನು ಕಲಿಸುತ್ತಿರುವದಾಗಿಯೂ ಮತಗ್ರಂಥಗಳಿಗಾಗಿ ಉಚ್ಚ ತರಗತಿಗಳಲ್ಲಿ ಪಾರಮೇಶ್ವರಾಗಮ ಮತ್ತು ವೀರಶೈವಧರ್ಮ ಶಿರೋಮಣಿ ಎಂಬ ಸಂಸ್ಕೃತ ಗ್ರಂಥಗಳು ಪಠ್ಯ ಗ್ರಂಥಗಳಾಗಿರುವದಾಗಿಯೂ ತಿಳಿಯಬರುತ್ತದೆ. ಇವೆಲ್ಲವೂ ಸ್ತುತ್ಯ ಕಾರ್ಯಗಳಾಗಿವೆ. ಸದರೀ ವರದಿಯಲ್ಲಿ ಅಪೇಕ್ಷಿಸಿರುವ ಪ್ರಕಾರ ಭಕ್ತರೂ ಈ ವಿದ್ಯಾಲಯಕ್ಕೆ ಸೇರಿವ್ಯಾಸಂಗ ಮಾಡುವದು ಒಳ್ಳೆಯದು.

ಈ ವಿದ್ಯಾಲಯವು ಇನ್ನೂ ಅಭಿವೃದ್ಧಿ ದೆಸೆಯನ್ನು ಹೊಂದಲಿ ಎಂದು ಹಾರೈಸುತ್ತೇವೆ.

———

# ಕನ್ನಡ ಸಾಹಿತ್ಯ ಸಮ್ಮೇಳನ

## ರಾಯಚೂರಿನಲ್ಲಿ, ಡಿಸೆಂಬರ್ ಕಡೆಯಲ್ಲಿ

---

೨೦ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನವು ಹೈದರಾಬಾದು ಸಂಸ್ಥಾನದಲ್ಲಿರುವ ರಾಯಚೂರು ನಗರದಲ್ಲಿ ೧೯೩೪ನೆಯ ಡಿಸೆಂಬರ್ ೨೮, ೨೯, ೩೦ನೆಯ ತಾರೀಖು (ಶುಕ್ರವಾರ, ಶನಿವಾರ, ಭಾನುವಾರ) ಗಳಲ್ಲಿ ನಡೆಯುವಂತೆ ಏರ್ಪಾಡಾಗಿದೆ. ಅಲ್ಲಿಯ ಪ್ರಸಿದ್ಧ ವಕೀಲರಾದ ಶ್ರೀಮಾನ್ ಗುಡಿಹಾಳ ಹನುಮಂತರಾವ್ ದೇಶಪಾಂಡೆ ಅವರ ನೇತೃತ್ವದಲ್ಲಿ ಸ್ವಾಗತ ಮಂಡಲಿ ಏರ್ಪಟ್ಟು ಸಮ್ಮೇಳನಕ್ಕೆ ಬೇಕಾದ ಅನುಕೂಲತೆಗಳನ್ನು ಸಂಭ್ರಮದಿಂದ ಸಿದ್ಧಗೊಳಿಸುತ್ತಿದೆ.

ಸುಪ್ರಸಿದ್ಧ ಸಾಹಿತಿಗಳಾದ ಮಂಗಳೂರಿನ ಶ್ರೀಮಾನ್ ಪಂಜೆ ಮಂಗೇಶರಾವ್, ಬಿ. ಎ. ಎಲ್. ಟಿ. ಅವರು ಅಧ್ಯಕ್ಷಸ್ಥಾನವನ್ನು ವಹಿಸಲು ದಯವಿಟ್ಟು ಒಪ್ಪಿರುತ್ತಾರೆ.

ಸಮ್ಮೇಳನದಲ್ಲಿ ಪ್ರಬಂಧಗಳನ್ನೋದಬೇಕೆಂಬದಾಗಲಿ, ನಿರ್ಣಯಗಳನ್ನು ಸೂಚಿಸಬೇಕೆಂದಾಗಲಿ, ಕೀರ್ತನೆ ಕಾವ್ಯವಾಚನ ನಾಟಕ ಮೊದಲಾದವುಗಳನ್ನು ನಡೆಯಿಸಬೇಕೆಂದಾಗಲಿ, ಅಥವಾ ಆ ಕಾಲದಲ್ಲಿ ಬೇರೆ ಸಭೆ ಪ್ರದರ್ಶನ ಮೊದಲಾದವುಗಳನ್ನು ಸೇರಿಸಬೇಕೆಂದಾಗಲಿ ಇಷ್ಟ ಪಡುವವರು ತಮ್ಮ ಉದ್ದೇಶವನ್ನು ೧೯೩೪ ರ ಅಕ್ಟೋಬರ್ ೩೧ರೊಳಗಾಗಿ ಬೆಂಗಳೂರಲ್ಲಿರುವ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯವರಿಗಾಗಲಿ ಅಥವಾ ರಾಯಚೂರಿನಲ್ಲಿರುವ ಸ್ವಾಗತ ಮಂಡಲಿಯ ಕಾರ್ಯದರ್ಶಿಯವರಿಗಾಗಲಿ ತಿಳಿಯಪಡಿಸಬೇಕೆಂದು ಕೋರಿದೆ. ಈ ಬಗ್ಗೆ ಏರ್ಪಟ್ಟಿರುವ ನಿಯಮಗಳನ್ನು ಈ ಕೆಳಗೆ ಕೊಟ್ಟಿದೆ.

ನಿಜಾಂ ಕರ್ಣಾಟಕದಲ್ಲಿರುವ ನಮ್ಮ ಭಾಷಾಬಂಧುಗಳು ಈ ಸಮ್ಮೇಳನವು ಅತ್ಯಂತ ಯಶಸ್ವಿಯಾಗಿ ನಡೆಯಬೇಕೆಂದು ಆಶಿಸಟ್ಟುಕೊಂಡು

ಉತ್ಸಾಹದಿಂದ ಏರ್ಪಾಡುಗಳನ್ನು ನಡಸುತ್ತಿದ್ದಾರೆ. ಸಮಸ್ತ ಕರ್ಣಾಟಕದ ನಾನಾಭಾಗಗಳಲ್ಲಿಯ ದೇಶಭಕ್ತರೂ, ಭಾಷಾಭಿಮಾನಿಗಳೂ, ಸಾಹಿತ್ಯೋಪಾಸಕರೂ, ಕಲಾಭಿಜ್ಞರೂ ಸಮ್ಮೇಳನಕ್ಕೆ ಬರುವರೆಂದು ರಾಯಚೂರಿನ ಸ್ವಾಗತ ಮಂಡಲಿಯು ನಿರೀಕ್ಷಿಸಿಕೊಂಡಿದೆ. ಕನ್ನಡ ನಾಡಿನ ಎಲ್ಲ ಪ್ರಾಂತಗಳಿಂದಲೂ ಮಹಾಜನರು ತಂಡೋಪತಂಡವಾಗಿ ರಾಯಚೂರಿಗೆ ದಯಮಾಡಿ ಬಂದು, ಸಮ್ಮೇಳನ ಕಾರ್ಯದಲ್ಲಿ ಭಾಗಿಗಳಾಗಿ, ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ಬೆಂಬಲಕೊಡಬೇಕೆಂದು ಕರ್ಣಾಟಕ ಸಾಹಿತ್ಯ ಪರಿಷತ್ತು ಪುನಃಪೂರ್ವಕವಾಗಿ ಪ್ರಾರ್ಥಿಸುತ್ತದೆ.

## ನಿಯಮಗಳು.

೧. (ಅ) ಸಮ್ಮೇಳನದಲ್ಲಿ ಪ್ರಬಂಧಗಳನ್ನೋದಲಿಚ್ಛಿಸುವವರೂ ನಿರ್ಣಯಗಳನ್ನು ಸೂಚಿಸಲಿಚ್ಛಿಸುವವರೂ ಆ ಸಂಗತಿಗಳನ್ನು ಅಕ್ಟೋಬರ್ ೩೧ರೊಳಗಾಗಿ ಕಾರ್ಯ ನಿರ್ವಾಹಕ ಮಂಡಲಿಗಾಗಲಿ ಸ್ವಾಗತ ಮಂಡಲಿಗಾಗಲಿ ಬರೆದು ತಿಳಿಸಿರಬೇಕು.

(ಆ) ಸ್ವಾಗತ ಮಂಡಲಿಯು ತನ್ನಲ್ಲಿಗೆ ಬಂದ ಇಂಥಾ ದರಖಾಸ್ತುಗಳನ್ನು ತನ್ನ ಶಿಫಾರಸುಗಳೊಡನೆ ನವಂಬರು ೧೦ರೊಳಗಾಗಿ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ಕಳುಹಿಸತಕ್ಕದ್ದು.

೨. ಸಮ್ಮೇಳನ ಕಾಲದಲ್ಲಿ ನಾಟಕವಾಡಬೇಕೆಂದಿರುವ ನಾಟಕ ಸಂಘಗಳೂ, ಕಾವ್ಯ ವಾಚನ ಮಾಡಲಿಚ್ಛಿಸುವ ಗಮಕಿಗಳೂ, ಕೀರ್ತನಕಾರರೂ, ಉಪನ್ಯಾಸಕರೂ, ಇಂಥ ಇತರ ಸಾಹಿತ್ಯ ಸೇವಕರೂ ಸಹ ಅಕ್ಟೋಬರು ತಿಂಗಳು ೩೧ರೊಳಗಾಗಿ ತಾವು ಉದ್ದೇಶಿಸಿರುವ ಕಾರ್ಯ ವಿವರವನ್ನು ಸ್ವಾಗತ ಮಂಡಲಿಗೆ ಅಥವಾ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ತಿಳಿಸಿರಬೇಕು. ಆ ತಾರೀಖಿನ ತರುವಾಯ ಬರುವ ದರಖಾಸ್ತುಗಳನ್ನು ಆ ಮಂಡಲಿಗಳು ಗಮನಕ್ಕೆ ತೆಗೆದುಕೊಳ್ಳಬೇಕಾದ್ದಿಲ್ಲ. ಸ್ವಾಗತ ಮಂಡಲಿಯು ತನ್ನಲ್ಲಿಗೆ ಬಂದ ಇಂಥಾ ದರಖಾಸ್ತುಗಳನ್ನು ತನ್ನ ಶಿಫಾರಸ್ಸುಗಳೊಡನೆ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ನವಂಬರು ೧೦ರೊಳಗಾಗಿ ಕಳುಹಿಸಿರಬೇಕು.

೧೮. ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಇನ್ಯಾವ ಸಭೆ, ಸಮ್ಮೇಳನ, ಪ್ರದರ್ಶನ ಮೊದಲಾದ ಸಮಾರಂಭಗಳನ್ನಾದರೂ ನಡೆಯಿಸಬೇಕೆಂದು ಇಷ್ಟಪಡುವ ಸಂಸ್ಥೆಗಳೂ ಅಕ್ಟೋಬರ್೩೧ರೊಳಗಾಗಿ ತಮ್ಮ ಉದ್ದೇಶವನ್ನು ಸ್ವಾಗತ ಮಂಡಲಿಗೂ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೂ ಸಹ ಕಳುಹಿಸಿರಬೇಕು. ಅವುಗಳ ದರಖಾಸ್ತುಗಳೂ ಮೇಲಿನ ದರಖಾಸ್ತುಗಳಂತೆಯೇ ವ್ಯವಸ್ಥೆಯಾಗತಕ್ಕದ್ದು.

೧೯. ಪ್ರಬಂಧಗಳನ್ನೋದಲಿಚ್ಛಿಸುವವರು ತಮ್ಮ ದರಖಾಸ್ತಿನೊಡನೆ ತಮ್ಮ ಪ್ರಬಂಧದ ಸಂಗ್ರಹ ಲೇಖವನ್ನು ಕಳುಹಿಸಿರಬೇಕು. ಈ ಸಂಗ್ರಹ ಲೇಖವು ಪ್ರಬಂಧದ ಮುಖ್ಯಾಂಶಗಳನ್ನು ಮಾತ್ರ—ಎಂದರೆ ಅದರಲ್ಲಿ ಚರ್ಚಿತವಾಗಿರುವ ಪ್ರಶ್ನೆಗಳನ್ನು ಮತ್ತು ಪ್ರತಿಪಾದಿತವಾಗಿರುವ ಸಿದ್ಧಾಂತಗಳನ್ನು ಮಾತ್ರ—ಸೂಚಿಸುವುದಾಗಿ ಕೈಬರೆಹದಲ್ಲಿ ಎರಡು ಪುಟಗಳನ್ನು ಮೀರದೆ ಇರಬೇಕು.

೨೦ ನಿರ್ಣಯಗಳನ್ನು ಸೂಚಿಸಲಿಚ್ಛಿಸುವವರು ತಮ್ಮ ನಿರ್ಣಯವಾಕ್ಯಗಳನ್ನು ಬರೆದು ಕಳುಹಿಸತಕ್ಕದ್ದು.

೨೧. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಈ ಪ್ರಬಂಧ ಸಂಗ್ರಹಗಳನ್ನೂ ನಿರ್ಣಯ ಸೂಚನೆಗಳನ್ನೂ ನೋಡಿ ಅವಕ್ಕೆ ತಕ್ಕ ಕಾಲಾವಕಾಶವನ್ನು ಗೊತ್ತುಪಡಿಸುವ ಕೆಲಸವನ್ನು ಒಂದು ಉಪಸಮಿತಿಗೆ ವಹಿಸಬಹುದು. ಆ ಉಪಸಮಿತಿಯ ಶಿಫಾರಸ್ಸಿನ ಮೇರೆಗೆ, ಅಥವಾ ತಾನಾಗಿ, ಯಾವ ಪ್ರಬಂಧಕ್ಕಾಗಲಿ ನಿರ್ಣಯ ಸೂಚನೆಗಾಗಲಿ ಅವಕಾಶ ದೊರೆಯುದೆಂದು ಹೇಳುವ ಅಧಿಕಾರವು ಕಾರ್ಯನಿರ್ವಾಹಕ ಮಂಡಲಿಗೆ ಇರುತ್ತದೆ.

೨೨. ಮೇಲಿನ ೧೬, ೧೭, ೧೮ನೆಯ ನಿಯಮಗಳಿಗೆ ಸಂಬಂಧಪಟ್ಟಂತೆ ಬಂದ ದರಖಾಸ್ತುಗಳನ್ನು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಪರ್ಯಾಲೋಚಿಸಿ ತನ್ನ ತೀರ್ಮಾನಗಳನ್ನು ನವಂಬರು ೩೦ರೊಳಗಾಗಿ ಆಯಾ ದರಖಾಸ್ತುದಾರರಿಗೆ ತಿಳಿಯಪಡಿಸತಕ್ಕದ್ದು.

ಈ ವಿಚಾರಕ್ಕೆ ಸಂಬಂಧಪಟ್ಟ ನಿಯಮಗಳು ಇನ್ನೂ ಕೆಲವು ಇವೆ. ಅವುಗಳನ್ನು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ೧೯೩೪ನೆಯ ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ ಕೊಟ್ಟಿರುವ ಅನುಬಂಧದಲ್ಲಿ(ಪುಟ xi–xx) ಕಾಣಬಹುದು.

ಸಮ್ಮೇಳನಕ್ಕೆ ಸಂಬಂಧಪಟ್ಟ ಇತರ ಅಂಶಗಳನ್ನು ವರ್ತಮಾನ ಪತ್ರಿಕೆಗಳ ಮೂಲಕವೂ ಇತರ ವಿಧಗಳಲ್ಲಿಯೂ ಕ್ರಮೇಣ ಪ್ರಕಟಪಡಿಸಲಾಗುವುದು.

| | |
|---|---|
| ಕರ್ಣಾಟಕ ಸಾಹಿತ್ಯ ಪರಿಷತ್ತು,<br>ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ,<br>ಚಾಮರಾಜಪೇಟೆ, ಬೆಂಗಳೂರುಸಿಟಿ. | ಸಿ. ಕೆ. ವೆಂಕಟರಾಮಯ್ಯ,<br>ಎಂ. ಎ., ಎಲ್ ಎಲ್. ಬಿ.,<br>ಗೌರವ ಕಾರ್ಯದರ್ಶಿ. |

# ಈಗಿನ ಸಂಗತಿಗಳು.

## ಆರ್ಯ ಸಮಾಜವೂ ವೀರಶೈವ ಮತವೂ

---

ಆರ್ಯ ಸಮಾಜದವರೊಬ್ಬರು ಹುಬ್ಬಳ್ಳಿಯಲ್ಲಿ ವ್ಯಾಖ್ಯಾನ ಮಾಡುತ್ತಾ ಮಾಡುತ್ತಾ ವೀರಶೈವಮತವನ್ನು ಅಸಹ್ಯಕರವಾಗಿರುವಂತೆ ದೂಷಿಸಿದರೆಂದೂ ಇವರ ಮೇಲೆ ಮಾನ ನಷ್ಟದ ದಾವಾ ಮಾಡಬೇಕಾಗಿದೆ ಎಂದೂ ಮುಂತಾಗಿ ಹುಬ್ಬಳ್ಳಿಯ ಪ್ರಸಿದ್ಧ ವಕೀಲರಾದ ಮ. ರಾ. ಪಾವಟೆ ಸಿದ್ಧರಾಮಪ್ಪನವರು ತರುಣಕರ್ಣಾಟಕ ಪತ್ರದಲ್ಲಿ ಇದೇ ಅಕ್ಟೋಬರ್ ತಿಂಗಳ ಆದಿಭಾಗದಲ್ಲಿ ಪ್ರಕಟಪಡಿಸಿರುತ್ತಾರೆ.

ಇದೇ ವ್ಯಾಖ್ಯಾತರು ಧಾರವಾಡದಲ್ಲಿ ವ್ಯಾಖ್ಯಾನ ಮಾಡುವಾಗ್ಯೆ ಸಿದ್ದಿಕ್ ಚನ್ನಬಸವನ ಬೋಧೆಗೆ ಒಳಗಾಗಿ ವೀರಶೈವರು ಕೆಟ್ಟು ಹೋಗುತ್ತಿದ್ದಾರೆ ಎಂದು ಹಿಂದೂಗಳು ಹೇಗೆ ಪರರ ಬೋಧೆಗೆ ಒಳಗಾಗಿ ಹಿಂದೂ ಧರ್ಮವನ್ನು ಬಿಡುವದು ಶ್ರೇಷ್ಠವಲ್ಲವೆಂದೂ ವೀರಶೈವರು ತಮ್ಮ ಧರ್ಮದಲ್ಲಿ ತಾವು ಇರುವುದು ಉತ್ತಮವೆಂದೂ ಬೋಧಿಸಿದರೆಂತಲೂ ತಿಳಿಯಬರುತ್ತದೆ.

ಇದಲ್ಲದೆ ಕೆಲವರು ವೀರಶೈವರಿಗೆ ಈ ವ್ಯಾಖ್ಯಾತರು ಆರ್ಯ ಧರ್ಮದಲ್ಲಿ ಇರುವ ಶ್ರೇಷ್ಠತರವಾದ ನಡತೆಗಳು ವೀರಶೈವರಲ್ಲಿ ಇಲ್ಲ. ಹಾಗಿದ್ದರೆ ಅವುಗಳನ್ನು ತೋರಿಸಿಕೊಡಿರಿ, ಇಲ್ಲವಾದರೆ ಆರ್ಯ ಸಮಾಜವೇ ಶ್ರೇಷ್ಠವೆಂದು ಹೇಳಿ ನಮ್ಮ ಮತಕ್ಕೆ ಸೇರಿಕೊಳ್ಳಿರಿ, ಎಂದು ಬಲವತ್ತರವಾಗಿ ಹೇಳಿ ಕೆಲವರನ್ನು ಆರ್ಯ ಸಮಾಜಕ್ಕೆ ಸೇರಿಸಿಕೊಂಡರೆಂದು ತಿಳಿಯುತ್ತದೆ.

ಈ ವ್ಯಾಖ್ಯಾತರಿಗೆ ಹುಬ್ಬಳ್ಳಿಯಲ್ಲಿ ವೀರಶೈವಮತವನ್ನು ತಿರಸ್ಕರಿಸಿ ಅದೇ ವೀರಶೈವಮತವೇ ಇದ್ದ ಹಾಗೆ ಇರಲಿ ಎಂಬ ಭಾವನೆಯನ್ನು ಧಾರವಾಡದಲ್ಲಿ ತೋರಿಸಲಿಕ್ಕೆ ಕಾರಣವೇನೆಂಬುದು ತಿಳಿಯದಾಗಿದೆ.

ಈಗಿನ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುವ ತರುಣರು ವೀರಶೈವ ಮತದ ತಾತ್ವಿಕ ವಿಷಯಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಇವರ

ಗೊಡ್ಡು ಬೆಸರಿಕೆಗೆ ಅಂಜಿ ಧರ್ಮಭ್ರಷ್ಟರಾಗಿ ಹೋಗುವಂತೆ ತಿಳಿಯುತ್ತದೆ.

ವೀರಶೈವಮತವು ಹಿಂದೂ ಧರ್ಮದಲ್ಲಿ ಬೋಧಿಸಲ್ಪಟ್ಟ ಶ್ರೇಷ್ಠವಾದ ಅಂಶಗಳನ್ನೇ ಒಳಗೊಂಡಿರುತ್ತದೆಯಲ್ಲದೆ ಇಡೀ ಪ್ರಪಂಚವೇ ಇದನ್ನು ಅನುಸರಿಸುವಷ್ಟು ಸ್ವಾತಂತ್ರ್ಯತೆಯುಳ್ಳದ್ದಾಗಿಯೂ ಮಹಾದೇವನನ್ನು ತಿಳಿಯುವದಕ್ಕೆ ಅತ್ಯಂತ ಶ್ರೇಷ್ಠವಾದ ಮಾರ್ಗವುಳ್ಳದ್ದಾಗಿಯೂ ಸರ್ವರನ್ನೂ ಸಮಭಾವದಿಂದ ಕಾಣುವ ತತ್ವವನ್ನು ಬೋಧಿಸತಕ್ಕದ್ದಾಗಿಯೂ ಈಗಿನ ಶಾಸ್ತ್ರಕಾರರು ( Scientists ) ಒಂದೇ ವಸ್ತುವಿನಿಂದಲೇ ಜಗತ್ತಾಗಿದೆ ಎಂದು ಬೋಧಿಸುವಂತೆ ಆ ಒಂದೇ ವಸ್ತುವೇ ಪರಬ್ರಹ್ಮವೆಂದು ಬೋಧಿಸಲ್ಪಡುವಂತಹ ಹಿಂದೂಧರ್ಮದ ಮುಖ್ಯ ಬೋಧೆಯಾದ ಅದ್ವೈತ ತತ್ವವನ್ನೇ ಅವಲಂಬಿಸಿದುದಾಗಿಯೂ ನಿರಾಕಾರನಾದ ಮಹಾದೇವ ( God ) ನನ್ನು ನಂಬಬೇಕೆಂಬ ತತ್ವವುಳ್ಳದಾಗಿಯೂ ಇದೆ.

ಈ ವೀರಶೈವಮತವು ಯಾವ ವಿಧದಲ್ಲಿಯೂ ಆರ್ಯ ಸಮಾಜದವರ ಮೂಲ ಸೂತ್ರದ ನಡತೆಯ ಅಭಿಪ್ರಾಯಗಳಿಗೆ ಕೊರತೆಯುಳ್ಳದು ಎನಿಸಿಕೊಂಡಿರುವದಿಲ್ಲ. ಸದರೀ ವ್ಯಾಖ್ಯಾತರು ಈ ಮತದ ಕೊರತೆಗಳನ್ನು ಕುರಿತು ನಮಗೆ ಬರೆದಲ್ಲಿ ನಾವು ಅವರಿಗೆ ತಕ್ಕ ಸಮಾಧಾನವನ್ನು ಸಾಧ್ಯವಾದ ಮಟ್ಟಿಗೆ ಕೊಡಲು ಯತ್ನಿಸುವೆವು.

ಒಂದು ಮತದ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೆ ಅದನ್ನು ಒಮ್ಮೆಗೇನೇ ತಿರಸ್ಕಾರಮಾಡಿ ಆರ್ಯ ಸಮಾಜಕ್ಕೆ ಸೇರಿರಿ ಎಂದು ಜನರಿಗೆ ಬೋಧಿಸುವದು ಆರ್ಯ ಸಮಾಜದವರಿಗೆ ಭೂಷಣವಲ್ಲ. ಈ ವ್ಯಾಖ್ಯಾತರ ಈ ನಡತೆಯನ್ನು ನಾವು ಸಂಪೂರ್ಣವಾಗಿ ನಿಷೇಧಿಸುತ್ತೇವೆ.

ವೀರಶೈವ ತರುಣರಾದರೂ ತಮ್ಮ ಮತ ತತ್ವವನ್ನು ಚನ್ನಾಗಿ ಬಲ್ಲವರಲ್ಲಿ ವಿಚಾರಮಾಡಿ ಆ ತತ್ವಗಳನ್ನು ತಿಳಿದ, ಅವು ಸುಮಾರಾಗಿ ಕಂಡರೆ ಆಗ ಮತಾಂತರ ಪ್ರವೇಶ ಮಾಡಬಹುದು. ಹಾಗಿಲ್ಲದೆ ತಮಗೆ ತಿಳಿಯುವ ಮಾತ್ರಕ್ಕೆ ಇತರರಿಗೆ ಮರುಳಾಗಿ ತಮ್ಮ ಧರ್ಮವನ್ನು ಬಿಡುವದರಿಂದ ಮಹಾದೇವ ( God ) ನನ್ನು ತಿಳಿದು ಆ ಸುಖವನ್ನು

ಅನುಭವಿಸಬೇಕಾಗುವುದೇ ಇರುವ ಕೊರತೆಯನ್ನು ಹಾಗೆ ಬಿಡುವವರು ಅನುಭವಿಸು ತ್ತಾರೆಯೇ ಹೊರತು ಇತರರನ್ನಾಗಲೀ ಅಥವಾ ವೀರಶೈವಮತವನ್ನಾ ಗಲೀ ಕೆಡಿಸಿದಂತೆ ಆಗುವದಿಲ್ಲ. ಆದ್ದರಿಂದ ಈ ವಿಷಯದಲ್ಲಿ ಎಚ್ಚರಿಕೆ ಯುಳ್ಳವರಾಗಿದ್ದು ನಡೆಯಲಿ, ಎಂದು ಅವರಿಗೆ ಆಗ್ರಹ ಪೂರ್ವಕವಾಗಿ ಸೂಚಿಸುತ್ತೇವೆ.

ಸಧ್ಯದಲ್ಲಿ ಒಂದು ವಿಷಯವನ್ನು ತೆಗೆದುಕೊಳ್ಳೋಣ.

ಈ ಆರ್ಯ ಸಮಾಜದವರು ಶಿಖಾ ಜನಿವಾರವನ್ನು ಧಾರಣೆಮಾಡಬೇ ಕೆಂದು ಹೇಳುತ್ತಾರೆಂಬುದು ಪ್ರಸಿದ್ಧವಾದ ವಿಷಯ

ಈ ಶಿಖಾ ಜನಿವಾರಗಳು ಬ್ರಹ್ಮಜ್ಞಾನಿಯಾದವನಿಗೆ ಬೇಕಾಗಿಲ್ಲ, ಎಂಬದಾಗಿ ಬ್ರಹ್ಮೋಪನಿಷತ್ತಿನಲ್ಲಿ

ಸ ಶಿಖಾಂ ವಪನಂಕೃತ್ವಾ ಬಹಿಃ ಸೂತ್ರಂ ತ್ಯಜೇದ್ ಬುಧಃ

ಯದಕ್ಷರಂ ಪರಂ ಬ್ರಹ್ಮ ತತ್ ಸೂತ್ರ ಮಿತಿ ಧಾರಯೇತ್

ಈ ಶ್ಲೋಕವು ಹೇಳಲ್ಪಟ್ಟಿದೆ.

ಇದರ ಅರ್ಥವೇನೆಂದರೆ

ಪಂಡಿತನಾದವನು (ಬ್ರಹ್ಮಜ್ಞಾನಿಯಾದವನು) ಶಿಖೆಯನ್ನು ಬೋಳಿಸಿ ಹೊರಗಿನ ಜನಿವಾರವನ್ನು ಕಿತ್ತು ಬಿಡಬೇಕು. ಅಕ್ಷರನಾದ ಪರಬ್ರಹ್ಮನನ್ನು ಸೂತ್ರವೆಂಬದಾಗಿ ಧಾರಣಮಾಡಬೇಕು.

ಇದಕ್ಕೆ ಈ ಆರ್ಯ ಸಮಾಜದವರು ಏನು ಹೇಳುವರು?

ಶಿಖಾ ಜನಿವಾರಗಳನ್ನು ತೆಗೆದು ಹಾಕದೆ ಇರುವದರಿಂದ ಇವರ ಹಿಂದೂ ಧರ್ಮದ ಒಂದು ಶಾಸ್ತ್ರ ಭಾಗಕ್ಕೆ ಕೊರತೆಯುಳ್ಳವರಾದಂತೆ ಆಗುವದಿಲ್ಲವೇ? ಇದಲ್ಲದೆ ಶಿಖಾ ಸೂತ್ರಗಳಿದ್ದವರೇ ಅದನ್ನು ತೆಗೆದುಹಾ ಕಬೇಕೆಂದು ಇದರಲ್ಲಿ ಹೇಳಿರುವಾಗ ಇವುಗಳಿಲ್ಲದಂಥಾ ಬ್ರಹ್ಮಜ್ಞಾನಿಯು ಶಿಖಾಸೂತ್ರಗಳುಬೇಕೆಂದು ಹೇಳುವ ಈ ಆರ್ಯ ಸಮಾಜವನ್ನು ಹಿಂದೂ ಧರ್ಮದ ಅತ್ಯಂತ ಹೆಚ್ಚಿನ ತಿಳಿವಳಿಕೆಗಿಂತಲೂ ಕಡಿಮೆಯಾದ ಸ್ಥಿತಿಯುಳ್ಳ ದ್ದೆಂದು ಹೇಳಲು ಏನು ಅಡ್ಡಿ ಇದೆ?

ವೀರಶೈವರಾದವರೂ ಅಕ್ಷರನಾದ ಪರಬ್ರಹ್ಮನೇ ಲಿಂಗ ಎಂದು ತಿಳಿ ದುಕೊಂಡು ಅದನ್ನು ಧಾರಣೆ ಮಾಡಿರುವದರಿಂದ ಶಿಖಾ ಜನಿವಾರಗಳನ್ನು

ಧಾರಣೆ ಮಾಡಿದವರಿಗಿಂತ ಹೆಚ್ಚಿನ ತತ್ವವುಳ್ಳ ಈ ಉಪನಿಷತ್ತಿಗೆ ಅನುಸಾರವಾಗಿ ನಡೆಯುವವರೆಂದು ಹೇಳಲಿಕ್ಕೆ ಬರುವದಿಲ್ಲವೇ?

ಲಿಂಗವನ್ನು ಬ್ರಹ್ಮ ಎಂದು ತಿಳಿದುಕೊಂಡಿರುವದರಿಂದಲೂ ಆ ನಿರಾಕಾರ ಬ್ರಹ್ಮನು ಮೂರ್ತಿರೂಪನಲ್ಲದುದರಿಂದಲೂ. ವೀರಶೈವರ ಲಿಂಗ ಪೂಜೆಯು ಮೂರ್ತಿಪೂಜೆಯಲ್ಲ ಹೀಗೆ ಹೇಳಲಿಕ್ಕೆ ಇನ್ನೂ ಅನೇಕ ಕಾರಣಗಳಿವೆ.

ಇದರಂತೆ ಈ ಆರ್ಯ ಸಮಾಜ ಮತ್ತು ವೀರಶೈವಮತದ ವಿಷಯವಾಗಿ ಆಗಾಗ ಕೆಲವು ವಿಷಯಗಳನ್ನು ಈ ಪತ್ರಿಕೆಯಲ್ಲಿ ಬರೆಯಬೇಕೆಂದಿರುವೆವು.

ವೀರಶೈವರೂ ವೀರಶೈವತರುಣರೂ ಇವುಗಳಿಗೆ ಹೆಚ್ಚು ಗಮನ ಕೊಡಬೇಕಾಗಿ ಅಪೇಕ್ಷಿಸುತ್ತೇವೆ.

ಈ ವ್ಯಾಖ್ಯಾನ ಮಾಡಿದವರು ಪಂಜಾಬ್‌ದೇಶವಲ್ಲಿರುವ ಲಾಹೋರ್ ಪಟ್ಟಣದ ಶ್ರೀಮಂತರಾದ ಠಾಕೂರ್ ಕೃಷ್ಣಚಂದ್ರರವರೆಂದು ತಿಳಿಯುತ್ತದೆ. ಇವರಿಗೆ ವೀರಶೈವ ತತ್ವವು ತಿಳಿಯದೆಂಬುದು ಸಹಜವಾಗಿದೆ

ಆರ್ಯ ಸಮಾಜವನ್ನು ಬೆಳೆಯಿಸಿ ಆ ಮೂಲಕ ಹಿಂದೂ ಧರ್ಮವನ್ನು ಬೆಳೆಯಿಸುವ ಬಗ್ಗೆ ಇವರು ತಮ್ಮ ಹಣವನ್ನು ವೆಚ್ಚಮಾಡಿ ಇಡೀ ಭೂಮಿಯಲ್ಲೆಲ್ಲಾ ಸಂಚರಿಸುತ್ತಾ ಇದ್ದಾರೆಂದು ತಿಳಿಯುತ್ತದೆ.

ಇವರು ತಮ್ಮ ದೃಷ್ಟಿಯ ಪ್ರಕಾರ ಆರ್ಯಸಮಾಜವು ಶ್ರೇಷ್ಠವೆಂದು ತಿಳಿದಿರುವುದರಿಂದ ಹೀಗೆ ಅದರ ಬೆಳೆವಣಿಗೆಯ ಕೆಲಸವನ್ನು ಮಾಡುತ್ತಿದ್ದಾರೆ. ವೀರಶೈವರೇ ಶ್ರೇಷ್ಠರೆಂದು ತಿಳಿದಿರುವ ವೀರಶೈವ ಶ್ರೀಮಂತರು ತಮ್ಮ ಧರ್ಮದ ಅಭಿವೃದ್ಧಿಗಾಗಿ,—ಈ ಅಭಿವೃದ್ಧಿ ಒತ್ತಟ್ಟಿಗೆ ಇರಲಿ—ತಮ್ಮ ಧರ್ಮದ ಅವನತಿಯಾಗದಂತೆ ಇರುವವಕ್ಕಾಗಿ, ಮತ್ತು ತಮ್ಮ ಧರ್ಮದ ಗ್ರಂಥಗಳು ಹೊರಬಿದ್ದು ಅದರ ಜ್ಞಾನವು ಎಲ್ಲರಿಗೂ ಉಂಟಾಗುವದಕ್ಕಾಗಿ, ಏನು ಮಾಡಿದ್ದಾರೆಂದು ಗಣನೆ ಮಾಡುವದಕ್ಕೆ ಹೋದರೆ ಹೇಳಲು ನಮಗೆ ನಾಚಿಕೆಯು ಬರುತ್ತದೆ.

ಇನ್ನು ಮೇಲಾದರೂ ವೀರಶೈವ ಶ್ರೀಮಂತರು ಧರ್ಮದ ವಿಷಯದಲ್ಲಿ ಇಂಥಾ ಮಹನೀಯರ ಅನುಕರಣವನ್ನು ಮಾಡಬಾರದೇ ?

# ಶ್ರೀ ೧೦೮ ಬಾಳೆಹಳ್ಳಿ ಸ್ವಾಮಿಗಳವರ ಸನ್ನಿಧಿಯಲ್ಲಿ

# ಬಹಿರಂಗ ವಿಜ್ಞಾಪನಾ ಪತ್ರ.



ಬೆಂಗಳೂರಿನ ಪ್ರಜಾಬಂಧು ಪತ್ರಿಕೆಯಲ್ಲಿ ಮೇ ತಾರೀಖು ೯-೧೦ ೧೧ ರಲ್ಲಿ " ತಮಗೆ ಕೆಲವರು ಪ್ರಸಿದ್ಧಪತ್ರ ಮುಖೇನ ಕಳುಹಿಸಿದ ಪ್ರಶ್ನೆಗಳಿಗೆ ಉತ್ತರಗಳು " ಎಂಬಲೇಖನವನ್ನು ಶಿಕಾರಿಪುರದ ಕೆಲವರು ಪ್ರಕಟಿಸಿದ್ದಾರೆಂದು, ಯಾರೋ ಒಬ್ಬರು ವಿನಂತಿ ಪತ್ರವನ್ನು ವೀರಶೈವರಿಗೆ ಬಹಿರಂಗವಾಗಿ ಪ್ರಕಟಿಸಿರುತ್ತಾರೆ. ತಾವು ಈ ಅಧಿಕಾರಕ್ಕೆ ಬಂದಮೇಲೆ ಮೊದಲು ಶಿವಮೊಗ್ಗಾ ಡಿಸ್ಟ್ರಿಕ್ಟಿನ ಸಂಚಾರಕ್ಕೆ ಹೊರಟಿದ್ದಿರಿ, ಸದರಿ ಪತ್ರಿಕೆಯಲ್ಲಿ ಪ್ರಕಟವಾಗಿರುವ ಪ್ರಶ್ನೆಗಳೇ ಶಿಕಾರಿಪುರದ ಭಕ್ತರು ತಮಗೆ ಪ್ರಥಮತಃ ಮಾಡಿದ ಪ್ರಶ್ನೆಗಳಾಗಿವೆ. ಈ ಪತ್ರದ ಲೇಖಕನೇ ಶಿಕಾರಿಪುರದ ಭಕ್ತರ ಪರವಾಗಿ ತಮಗೆ ರಿಜಿಸ್ಟರ್ ಪತ್ರದ ಮೂಲಕ ಕಳುಹಿಸಿದವನು. ಈ ಪ್ರಶ್ನೆಗಳಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಪೂರ್ವದವರ ಪದ್ಧತಿ ಮತ್ತು ತತ್ವಗಳಿಗೆ ವಿರುದ್ಧವಾದ ಆಚರಣೆಗಳು ತಮ್ಮಲ್ಲಿವೆ ಎಂದು, ಅದುವರೆಗಿನ ತಮ್ಮ ವರ್ತನೆಗಳಿಂದ ಭಕ್ತರಿಗೆ ತಿಳಿದುಬಂದದ್ದರಿಂದ ಈ ಪ್ರಶ್ನೆಗಳನ್ನು ತಮ್ಮ ಸಮ್ಮುಖದಲ್ಲಿ ಕೇಳಲಿಕ್ಕೆ ಬಂದರು. ಆಗ ತಾವು ಕೋಪವನ್ನು ಪ್ರಕಟಿಸಿದ್ದರ ದೆಸೆಯಿಂದಲೂ, ಗಲಭೆಗೆ ಅವಕಾಶವಾಗುವಂತೆ ಕಂಡುಬಂದದ್ದರ ದೆಸೆಯಿಂದಲೂ, ಸದರಿ ಭಕ್ತರು ಒಂದು ಸಂಘವನ್ನು ಮಾಡಿ, ಈ ಕೆಲಸ ಮಾಡಲು ಅಧಿಕಾರ ಕೊಟ್ಟ ಪ್ರಕಾರ, ಈ ಪ್ರಶ್ನೆಗಳು ತಮಗೆ ಪತ್ರದ ಮೂಲಕ ಕಳುಹಿಸಲ್ಪಟ್ಟಿದ್ದವು. ಈ ಪ್ರಶ್ನೆಗಳಿಗೆ ಉತ್ತರಗಳು ಇದೂವರೆವಿಗೆ ತಮ್ಮಿಂದ ದೊರೆತಿರುವದಿಲ್ಲ.

ತಾವು ಈ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಟ್ಟು ಭಿನ್ನ ಸ್ಥಿತಿಗೆ ಹೋಗುವ ಭಕ್ತರನ್ನು ಒಂದುಗೂಡಿಸುತ್ತಾರೆಂದು ಇದು ವರೆವಿಗೂ ಸುಮಾರು ಎಂಟು ವರ್ಷಗಳ ಕಾಲ ನಿರೀಕ್ಷಿಸಿದ್ದಾಯಿತು. ಆದಾಗ್ಯೂ ಏನೂ ಪ್ರಯೋಜನವಾಗಲಿಲ್ಲ.

ಈ ಉತ್ತರಗಳು ಶಿಕಾರಿಪುರದ ಕೆಲವು ಭಕ್ತರಿಂದ ಆಗಲೇ ಕೊಡಲ್ಪಟ್ಟಿದ್ದವು, ಮತ್ತು ಇಪ್ಪತ್ತೊಂದು ಪ್ರಶ್ನೆಗಳೂ ಮಾಡಲ್ಪಟ್ಟಿದ್ದವು. ಅವಕ್ಕೆ ಉತ್ತರವಾಗಿ ಜಂಗಮಾಧಿಕ್ಯ ಎಂಬ ಗ್ರಂಥವು ಹುಟ್ಟಿದೆ. ಅದರಲ್ಲಿ ಮೇಲ್ಕಂಡ ವಿಷಯಗಳ ನಿಜತತ್ವ ವಿಮರ್ಶೆ ಇದೆ. ಅದಕ್ಕೆ ತಮ್ಮಿಂದಾಗಲಿ ಬೇರೆ ಯಾರಿಂದಾಗಲೀ ಪ್ರತ್ಯುತ್ತರವು ಈ ವರೆಗೂ ಕೊಡಲ್ಪಟ್ಟಿಲ್ಲ. ಮೊದಲಿನ ಉತ್ತರಗಳೇ ಈಗ ಹೊರಗೆ ಬರುತ್ತಾ ಇವೆ. ಆಗಲಿ, ಮತ್ತೊಮ್ಮೆ ಇವುಗಳ ವಿಷಯ ವಿಚಾರಮಾಡೋಣ.

ಈ ಒಂಬತ್ತು ಪ್ರಶ್ನೆಗಳು ಸಮಾಜದ ಹಿತವನ್ನು ಮಾಡುವ ಸಾಧನಗಳಿರುವದರಿಂದ ಇವುಗಳಿಗೆ ತಾವು ಸರಿಯಾದ ಉತ್ತರಗಳನ್ನು ಕೊಟ್ಟು ಭಕ್ತರನ್ನು ಸಮಾಧಾನ ಮಾಡದೇ ಇರುವದರ ದೆಸೆಯಿಂದಲೇ ಇದು ವರೆವಿಗೂ ಸಮಾಜದಲ್ಲಿ ತಾವು ಹೋದಲ್ಲೆಲ್ಲಾ ಅನೈಕ ಮತ್ಯವಾಗಿ ಕೊನೆಗೆ ಬೆಂಗಳೂರಿಗೆ ಬರುವುದಕ್ಕೆ ಮುಂಚಿಯೇ ಪೂರು ಪ್ರಶ್ನೆಗಳ ಉತ್ತರವನ್ನು ತರಿಸಿಕೊಳ್ಳಬೇಕೆಂದು ಅಲ್ಲಿನ ಭಕ್ತರು ಹಟ ಹಿಡಿಯಲಿಕ್ಕೆ ಕಾರಣವಾಯಿತೆಂದು ಸಂದೇಹವಿಲ್ಲದೆ ಊಹಿಸಬಹುದು.

ಶಿಕಾರಿ ಪುರದವರ ಉತ್ತರಗಳೇ ಬೆಂಗಳೂರಿಗೆ ತಾವು ಬಂದಾಗ ಬೆಂಗಳೂರಿನಲ್ಲಿ ಪ್ರಕಟಿಸಲ್ಪಡಬೇಕಾಗಿದ್ದರೆ ತಾವೂ ಇದೇ ಅಭಿಪ್ರಾಯವುಳ್ಳವರೆಂಬ ಊಹೆಯುತೋರಿ ಬರುತ್ತಲಿದ್ದರು. ಇದೂ ವರೆವಿಗೆ ಭಕ್ತರಲ್ಲಿಯ ಅನೈಕ ಮತ್ಯವು ಹೆಚ್ಚಾಗಿ ಬೆಳೆದು ೧೯೨೭ ರಲ್ಲಿ ಪ್ರಕಟಿಸಿದ ಜಂಗಮಾಧಿಕ್ಯದಲ್ಲಿಯೇ ಐಕಮತ್ಯವಾಗಲಿ ಎಂಬ ನನ್ನ ಕೋರಿಕೆಯು ನೆರವೇರದೆ ಸಮಾಜವು ಕೆಟ್ಟುಹೋಗುತ್ತಿರುವುದಲ್ಲಾ ಎಂಬ ದುಃಖವು ಈ ಲೇಖಕನಿಗೆ ಬಹಳವಾಗಿ ಇದ್ದರೂ ಇದೂ ಒಂದು ಸಾರೆ ತಮ್ಮಲ್ಲಿ ಬಹಿರಂಗವಾಗಿ ವಿಜ್ಞಾಪಿಸಿಕೊಂಡಿದ್ದಾ

ಗಿದೆ. ಈ ಕೆಳಗಿನ ಅವೇ ಒಂಭತ್ತು ವಿಷಯುಗಳನ್ನು ತಾವು ಪರ್ಯಾಲೋಚಿಸಿ ಉತ್ತರಗಳನ್ನು ಪ್ರಕಟಿಸಿ ಸಮಾಜಕ್ಕೆ ಸಮಾಧಾನವನ್ನುಂಟುಮಾಡೋಣ ವಾಗಬೇಕೆಂದು ಬೇಡುತ್ತೇನೆ. ಶಿಕಾರಿಪುರದವರ ಉತ್ತರಗಳ ವಿಮರ್ಶೆಯು ಈ ಕೆಳಗೆ ಮಾಡಲ್ಪಟ್ಟಿರುತ್ತದೆ.

## ೧ನೆಯ ಪ್ರಶ್ನೆಯ ವಿಷಯ.

ವೀರಶೈವರಿಗೆ ಇರುವ ಅಷ್ಟಾವರಣದಲ್ಲಿ ಹೇಳಲ್ಪಟ್ಟ "ಜಂಗಮ" ಎಂಬುವವರು ಯಾರು ಎಂಬ ವಿಷಯಕ್ಕೆ ಗುರುಸ್ಥಲದ ಚರಮೂರ್ತಿ ಸ್ವಾಮಿಗಳವರೇ ಅಷ್ಟಾವರಣಾಂತರ್ಗತ ಜಂಗಮರಾಗುತ್ತಾರೆ. ಆದ್ದರಿಂದಲೇ ಸ್ಥಿರಚರಪಟ್ಟಾಧಿಕಾರವು ಧರ್ಮದಲ್ಲಿ ಅನಾದಿಯಿಂದಲೂ ಬಂದಿರುವುದು, ಸರ್ವರಿಗೂ ಗೋಚರವೇ ಇದೆ. ಉಭಯರೂ ಪರಸ್ಪರ ಅಭೇದದಿಂದ ಆಚರಿಸುವುದೂ ಪ್ರಸಿದ್ಧವೇ ಇರುತ್ತದೆ ತಸ್ಮಾತ್ ಈ ಜಂಗಮವು ವಿರಕ್ತನಿಗೆ ಅನ್ವಯಿಸುವುದಿಲ್ಲ.———ಇತ್ಯಾದಿ ಉತ್ತರಗಳು ವೀರಶೈವ ಧರ್ಮಕ್ಕೆ ವಿರೋಧವನ್ನು ತೋರಿಸತಕ್ಕವುಗಳಾಗಿವೆ.

ಪರಬ್ರಹ್ಮನಿಗೆ ಸಕಲ ಸಕಲನಿಷ್ಕಲ ನಿಷ್ಕಲ ಎಂಬುದಾಗಿ ಮೂರು ರೂಪಗಳುಂಟು. ಇವುಗಳಲ್ಲಿ ಸಕಲತತ್ವವೇ ಗುರು, ಸಕಲನಿಷ್ಕಲ ತತ್ವವೇ ಲಿಂಗ, ನಿಷ್ಕಲತತ್ವವೇ ಜಂಗಮ ಹೀಗೆ ಆ ಮೂರು ತತ್ವಗಳನ್ನು ವಿಭಾಗಿಸಿ ಗುರು, ಲಿಂಗ, ಜಂಗಮ, ಎಂಬ ಮೂರು ರೂಪಗಳನ್ನು ಆ ತತ್ವಗಳ ಸಾಕಾರ ಮೂರ್ತಿಗಳಾಗಿ ಭಾವಿಸಿ ಅವರನ್ನು ಪೂಜಿಸಬೇಕೆಂದು ವೀರಶೈವರ ಅಷ್ಟಾವರಣದಲ್ಲಿ ಸೇರಿಸಿರುತ್ತಾರೆ.

ಸಕಲ ರೂಪವು ಇಂದ್ರಿಯಗಳಿಗೆ ಗೋಚರಿಸುವುದಾಗಿವೆ. ಈ ತತ್ವ ಮೂರ್ತಿಯೇ ಗುರುವು ಆದ್ದರಿಂದಲೇ ಗುರುವು ಪ್ರತ್ಯಕ್ಷವಾಗಿ ನೊದಲು ಬೇಕು. ಈ ಗುರುವು ಶಿಷ್ಯನ ಚಿತ್ಕಲೆಯಿಂದ ಲಿಂಗವನ್ನು ತೆಗೆದು ಒಳಗೆ ಮತ್ತು ಹೊರಗೆ ಇದು ಲಿಂಗವೆಂದು ಕೊಡುವುದರಿಂದ ಲಿಂಗವು ಸಕಲ ನಿಷ್ಕಲ ರೂಪವಾಗಿರುವುದು. ಇದು ಶಿಷ್ಯನ ಅಂತರಂಗದಲ್ಲಿಯೂ, ಬಹಿರಂಗದಲ್ಲಿಯೂ, ಇರುವದು. ಇದು ಎರಡನೆಯ ರೂಪವು

ಮತ್ತೊಂದು ನಿಷ್ಕಲ ರೂಪವು. ಇದರ ಪ್ರತಿರೂಪವೇ ಜಂಗಮವು. ನೀರ್ಗಲ್ಲು, ನೀರು, ನೀರಾವಿ (ಉಗಿ) ಇವುಗಳುಒಂದೇ ವಸ್ತುವಿನ ರೂಪಗಳಾಗಿದ್ದಾಗ್ಯೂ ಗುಣ ಕರ್ಮಗಳಲ್ಲಿ ಇವು ಭಿನ್ನ ಲಕ್ಷಣ ಗಳನ್ನು ಹೊಂದಿರುತ್ತವೆ. ಉಗಿಯು ಉಗಿಯ ಗಾಡಿಯನ್ನು ನಡೆಸಲಿಕ್ಕೆ ಬರುವಂತೆ, ನೀರ್ಗಲ್ಲು ಹಾಕಿ ನಡೆಸಲಿಕ್ಕೆ ಬರುವದಿಲ್ಲ. ನೀರನ್ನು ಕುಡಿದು ತೃಪ್ತಿಪಡುವಂತೆ ಉಗಿಯನ್ನು ಕುಡಿದು ತೃಪ್ತಿ ಪಡಲಾಗುವದಿಲ್ಲ. ನೀರ್ಗಲ್ಲನ್ನು ವೆಟ್ಟಿಗೆಗಳಲ್ಲಿಟ್ಟು ತೆಗೆದುಕೊಂಡು ಹೋಗುವಂತೆ, ನೀರನ್ನು ತೆಗೆದುಕೊಂಡು ಹೋಗಲಾಗುವದಿಲ್ಲ, ಇದಕ್ಕೆ ಮುಚ್ಚಳದ ಪಾತ್ರೆಯೇಬೇಕು. ಇದರಂತೆ ಗುರುವಿನ, ಲಿಂಗದ, ಜಂಗಮದ ಉಪಯೋಗವು ಭಕ್ತನಿಗೆ ಬೇರೆ ಬೇರೆ ವಿಧದಲ್ಲಿ ಇದೆ. ಇವರು ಮೂವರೂ ಮಾಡುವ ಕೆಲಸಗಳು ಬೇರೆ ಬೇರೆ ಇವೆ. ಗುರುವು ಶಿಷ್ಯನ ಹವ್ಯ ಕವ್ಯ ಗಳನ್ನು ನೆರವೇರಿಸತಕ್ಕವನು. (ಶುಭಾಶುಭ ಕಾರ್ಯ ಗಳಲ್ಲಿ ಪುರೋಹಿತನಂತಿದ್ದು ಸಹಾಯ ಮಾಡುವವನು.) ಲಿಂಗವು ಯಾವಾಗಲೂ ಜೊತೆಯಲ್ಲಿದ್ದು ತನ್ನನ್ನು ಧರಿಸಿದಾತನು ಶಿವನೆಂಬ ಜ್ಞಾನವನ್ನುಂಟುಮಾಡುವುದು. ಜಂಗಮವು ಶಿವ ಜ್ಞಾನ ವನ್ನು ಹೇಗೆ ಹೊಂದಬೇಕೆಂಬುದನ್ನು ವಿವರವಾಗಿ ಬೋಧಿಸುವುದು. ಹೀಗಿರುವದರಿಂದ ಗುರು, ಲಿಂಗ, ಜಂಗಮವು ಒಂದೇ ವಸ್ತುವಿನ ರೂಪಗ ಳಾದಾಗ್ಯೂ ಅವರ ಉಪಯೋಗಗಳ ದೆಸೆಯಿಂದ ಭಿನ್ನರಾಗಿದ್ದಾರೆ. ಜಂಗ ಮನಿಂದ ಆಗತಕ್ಕ ಜ್ಞಾನವೆಂಬ ಉಪಕಾರವು ಹೆಚ್ಚಿನದಾಗಿರುವದರಿಂದ ಶಿಷ್ಯನಿಗೆ ಗುರು, ಲಿಂಗ, ಜಂಗಮಗಳಲ್ಲಿ ಜಂಗಮವು ಹೆಚ್ಚಿನದು ಎಂಬ ಭಾವನೆ ಇರಬೇಕೆಂದು, ವೀರಶೈವ ತತ್ವವು ಬೋಧಿಸುತ್ತದೆ.

ಗೋತ್ರ ಸೂತ್ರವುಳ್ಳ ಸ್ಥಿರಪಟ್ಟಾಧಿಕಾರಿಗಳು ಗುರುಗಳೆಂತಲೂ ಅವರ ಅನುಜ್ಞೆಯಲ್ಲಿರುವ ಅದೇ ಗೋತ್ರ ಸೂತ್ರವುಳ್ಳ ಚರಮೂರ್ತಿ ಗಳು ಜಂಗಮವೆಂತಲೂ ಆಗುವದಾದರೆ ಇವರ ಉಪಯೋಗವು ಬೇರೆ ಬೇರೆ ವಿಧವಾಗಿ ಆಗುವದು ಹೇಗೆ? ಹೀಗಿದ್ದರೆ ಅಷ್ಟಾವರಣಗಳಲ್ಲಿ ಗುರುವನ್ನೂ ಜಂಗಮವನ್ನೂ ಬೇರೆ ಬೇರೆ ಏಕೆ ಸೇರಿಸಬೇಕಾಗಿತ್ತು? ಆದ್ದರಿಂದ ಈ ಉತ್ತರವು ತತ್ವಕ್ಕೆ ವಿರುದ್ಧವಾಗಿದೆ.

ಹೀಗೆ ಗುರು ಲಿಂಗ ಜಂಗಮರಲ್ಲಿ ಭಿನ್ನಮಾಡಿದ್ದರಿಂದ ಶಿವಾದ್ವೈತಕ್ಕೆ ಬಾಧಕ ಬರುವದಿಲ್ಲ. ಮಾವಿನ ಬೀಜ ಒಂದರಿಂದಲೇ ಒಂದು ಮಾವಿನ ಮರವಾಗಿದೆ. ಅದರಲ್ಲಿ ಬೇರು ಎಲೆ ಕಾಯಿ ಹಣ್ಣುಗಳಾಗಿವೆ. ಬೇರಿನಿಂದಾಗುವ ಕೆಲಸವು ಎಲೆಯಿಂದಾಗುವದಿಲ್ಲ. ಎಲೆಯಿಂದಾಗುವ ಕೆಲಸವು ಕಾಯಿಯಿಂದ ಆಗುವದಿಲ್ಲ. ಇವುಗಳಲ್ಲಿ ಹಣ್ಣೇ ಹೆಚ್ಚಿನದೆಂದು ಜನರು ಭಾವಿಸುತ್ತಾರೆ. ಒಟ್ಟಿನಲ್ಲಿ ಎಲ್ಲಾ ಭಾಗಗಳೂ ಹಣ್ಣಾಗಲಿಕ್ಕೆ ಅನುಕೂಲವಾಗಿವೆ. ಆ ಹಣ್ಣು ಅವ್ಯಕ್ತ ರೂಪದಿಂದ ಬೇರು ಎಲೆಗಳನ್ನೂ ತನ್ನಲ್ಲಿ ಇರಿಸಿಕೊಂಡಿರುವದು. ಹಾಗೆಯೇ ಗುರು, ಲಿಂಗ ಜಂಗಮ ಇವರಲ್ಲಿ ಪ್ರತಿಯೊಂದೂ ಜಂಗಮವಾಗಬಲ್ಲುದು, ಜಂಗಮವು ಇವರನ್ನು ಅವ್ಯಕ್ತರೂಪದಲ್ಲಿ ಒಳಗೊಂಡಿರುವುದು, ಎಂಬಲ್ಲಿ ಶಿವಾದ್ವೈತ ಸಿದ್ಧಿಯೇ ಹೊರತು ಈ ಭಿನ್ನ ರೂಪಗಳೆಲ್ಲ ಒಂದೇ ಎಂದು ತಿಳಿಯಬಾರದು. ಹಾಗೆ ತಿಳಿಯುವದಾದರೆ ಲಿಂಗವೂ ಗುರುವೂ ಒಂದೇ ಆದ್ದರಿಂದ ಲಿಂಗವೊಂದೇ ಸಾಕು, ಗುರುವೇ ಬೇಡವೆಂದು ಹೇಳಬಹುದು. ಆದ್ದರಿಂದಲೇ ಈ ಗುರುವರ್ಗ ವಿರಕ್ತವರ್ಗದ ಚಳವಳಿಯಲ್ಲಿ ನಮಗೆ ಲಿಂಗವೊಂದೇ ಸಾಕು, ಉಳಿದವರಿಬ್ಬರೂ ಬೇಡವೆಂದು ಕೆಲವರು ಹೇಳುತ್ತಿದ್ದಾರೆ. ಹೀಗೆ ಅದ್ವೈತದ ಕ್ರಿಯೆಯನ್ನಾಚರಿಸಿದರೆ ಯಾವ ವ್ಯವಹಾರವೂ ಘಟಿಸುವದಿಲ್ಲ.

ಆದ್ದರಿಂದ ಗುರುಸ್ಥಲದ ಪಟ್ಟಾಧಿಕಾರಿಗಳಂತೆ ಗೋತ್ರ ಸೂತ್ರವುಳ್ಳವರಾಗಿದ್ದು ಅವರ ಆಜ್ಞಾಧಾರಕರಾಗಿ ವರ್ತಿಸುವ ಚರಮೂರ್ತಿಗಳು ಅಷ್ಟಾವರಣದೊಳಗಿನ ಜಂಗಮರು ಎಂದೂ ಆಗಲಾರರು. ಜಂಗಮಕ್ಕೆ ಬೇರೆ ಲಕ್ಷಣವೂ ಕೆಲಸವೂ ಇರಲಿಕ್ಕೆಬೇಕು.

ಸಿದ್ಧಾಂತ ಶಿಖಾಮಣಿಯಲ್ಲಿ ಜಂಗಮ ಮಹತ್ವದ ವಿಷಯಕ್ಕೆ ಹೀಗೆ ಬರೆಯಲ್ಪಟ್ಟಿರುತ್ತದೆ.

"ಗುರು ಶಿಷ್ಯ ಸಮಾರೂಢಲಿಂಗ ಮಾಹಾತ್ಮ್ಯ ಸಂಪದಃ
ಸರ್ವಂ ಚಿದ್ರೂಪ ವಿಜ್ಞಾನಾತ್ ಜಂಗಮಾಧಿಕ್ಯಮುಚ್ಯತೆ"

ಗುರು ಶಿಷ್ಯರು ಸೇರಿ ಪಡೆದ ಲಿಂಗದ ಮಹಿಮಾಸಂಪತ್ತಿಗಿಂತಲೂ

ಸಮಸ್ತವನ್ನೂ ಜ್ಞಾನ ( ಪರಬ್ರಹ್ಮ ) ರೂಪವಾಗಿ ತಿಳಿಯುವುದರ ದೆಸೆಯಿಂದ ಜಂಗಮವೇ ಅಧಿಕ್ಯವು.

ಇದು ರೇಣುಕರೇ ಹೇಳಿದ್ದಲ್ಲವೇ?

ಮತ್ತು ಇದೇ ಜಂಗಮ ಮಹತ್ವ ಸ್ಥಲದಲ್ಲಿ ಶಿವಯೋಗಿಯೇ ಜಂಗಮ ಎಂದು ಹೇಳಲ್ಪಟ್ಟಿರುತ್ತವೆ. ಪ್ರಣವ ರೂಪಿಗಳೇ ಜಂಗಮ ರೂಪವೆಂದು ವೀರಶೈವ ಶಾಸ್ತ್ರಗಳೆಲ್ಲಾ ಕೂಗಿ ಸಾರುತ್ತಿರುವಲ್ಲಿ ತಾವು ಪಂಚಾಕ್ಷರಗಳಲ್ಲಿ ಒಂದೊಂದು ಅಕ್ಷರದ ಶಾಖೆಯನ್ನು ಹೊಂದಿರುವವರೂ ಮುಂದೆ ೬ನೆಯ ಉತ್ತರದಲ್ಲಿ ಹೇಳುವಂತೆ, ಒಂದೊಂದು ಗೋತ್ರ ಸೂತ್ರಕ್ಕೆ ಅಧಿಕಾರಿಗಳಾಗಿ ಇದ್ದವರೂ ಜಂಗಮರೆಂದು ಹೇಳುವದು ಅನ್ಯಾಯವಲ್ಲವೇ? ಪಂಚಾಕ್ಷರವನ್ನು ಒಳಗೊಂಡದ್ದೆಂದು ಶಾಸ್ತ್ರದಲ್ಲಿ ಪ್ರಸಿದ್ಧವಾದ ಪ್ರಣವ ಮಂತ್ರರೂಪಿಗಳಾದ ( ಮೂಲ ಪ್ರಣವದ ಅಧಿಕಾರಿಗಳಾದ ) ವಿರಕ್ತರು ಗೃಹಸ್ಥರಾದ ಮಠದಯ್ಯನವರ ಶಿಷ್ಯರೆಂದು ಪಂಚಾಚಾರ್ಯರು ಸರ್ಕ್ಯೂಲರ್ ಹೊರಡಿಸಿರುವದು, ಎಷ್ಟು ಅನ್ಯಾಯದ ಕೆಲಸ ?

ವೀರಶೈವಧರ್ಮವು ಬಹು ಸೂಕ್ಷ್ಮವಾಗಿ ಇರುತ್ತದೆ. ಇತರ ಪ್ರಾಕೃತಿಕ ಮತಗಳಂತೆ ಗುರು ಶಿಷ್ಯ ಹೀಗೆ ಇಬ್ಬರಿಂದ ಕೂಡಿರುವ ಭಿನ್ನ ತತ್ವವುಳ್ಳದ್ದಾಗಿ ಈ ಧರ್ಮವಿರುವದಿಲ್ಲ. ಸರ್ವರೂ ಸಮನಾದ ಹಕ್ಕು ಬಾಧ್ಯತೆಯುಳ್ಳವರಾಗಿರುವದೇ ಈ ಮತದ ತತ್ವ. ಭಕ್ತನಿಗೆ ಗುರು ಲಿಂಗ ಜಂಗಮರುಂಟು. ಗುರುವಿಗೆ ಗುರು ಲಿಂಗ ಜಂಗಮರುಂಟು. ಜಂಗಮಕ್ಕೆ ಗುರು ಲಿಂಗ ಜಂಗಮರುಂಟು. ಯಾರೂ ದೊಡ್ಡವರಲ್ಲ. ಆದ್ದರಿಂದ ತಾವು ಜಂಗಮರನ್ನು ಪೂಜ್ಯ ಭಾವದಿಂದ ಕಾಣುವದೇ ಅವಶ್ಯಕವಾದ ಕರ್ತವ್ಯವು. ಸ್ಥಿರಪಟ್ಟಾಧಿಕಾರಿಯೇ ಗುರುವು. ಗೋತ್ರ ಸೂತ್ರವುಳ್ಳ ಅವರ ಆಜ್ಞಾಧಾರಕರಾದ ಚರಮೂರ್ತಿಯೇ ಜಂಗಮ, ಹೀಗೆ ಬೋಧಿಸುತ್ತಿರುವವರಿಗೆ ತಾವು ಯಾವ ಪ್ರತೀಕಾರವನ್ನೂ ಮಾಡದೆ ಅದೇ ನಿಜವೆಂದು ಮರಳಿ ಮರಳಿ ಉತ್ತರ ಕೊಡಿಸುತ್ತಾ ಇರುವದನ್ನು ನೋಡಿದರೆ ವೀರಶೈವರಲ್ಲಿ ಶ್ರೇಷ್ಠರಾದ ವಿರಕ್ತ ( ಜಂಗಮ )ರನ್ನು ಪಾತಾಳಕ್ಕೆ ತುಳಿದುಬಿಡಬೇಕೆಂಬ ತಮ್ಮಿಷ್ಟ

ಯವು ಹೊರಬೀಳುವದಿಲ್ಲವೇ? ತಮ್ಮ ಪೂರ್ವದ ಗುರುಗಳು ಚಿತ್ರದುರ್ಗದ ಸ್ವಾಮಿಗಳಿಗೆ ಪ್ರಣವ ಸ್ವರೂಪಿಗಳೆಂದು ಬಿನ್ನಹ ಪತ್ರ ಬರೆದಿದ್ದಾರೆ ೬ ನೆಯ ವಿಷಯದಲ್ಲಿ ಕಂಡ ಪತ್ರದಲ್ಲಿ ಇದರ ವಿವರವಿರುತ್ತದೆ ಅದನ್ನು ಈಗ ಅಳಿಸಿ ಬಿಡುವಿರೇನು?

ಇವಲ್ಲದೆ ಶರಭರಾಜ ಶರ್ಮಾ ಎಂಬುವವರು ಅಷ್ಟಾವರಣದೊಳಗಿ ಜಂಗಮರು ವಿರಕ್ತರೇ ಆಗಿರುತ್ತಾರೆ ಎಂಬುದಕ್ಕೆ ಸನ್ಯಾಸಾಶ್ರಮ ವಿವರ್ಶ ಸ್ಥಿರೀಕರಣ ಖಂಡನ ಎಂಬ ಒಂದು ಗ್ರಂಥವನ್ನು ಬರೆದಿದ್ದಾರೆ. ಅದಕ್ಕೆ ತಾವು ಖಂಡಿಸಿದಂತೆ ಯಾವ ಗ್ರಂಥವೂ ಹೊರಬಿದ್ದಿಲ್ಲ.

## ೨ ನೆಯ ಪ್ರಶ್ನೆಯ ವಿಷಯ.

ಪೀಠದವರು ವಿರಕ್ತರ ಪಾದ ಪೂಜೆಯನ್ನು ಮಾಡುವ ಪದ್ಧತಿ ಇದೆಯೋ ಇಲ್ಲವೇ ಎಂಬ ಪ್ರಶ್ನೆಗೆ

ನಿರಾಭಾರಿ ವೀರಶೈವರು ಅಲ್ಲಮನ ಸಾಂಪ್ರದಾಯಕರಲ್ಲ, ಚನ್ನಬಸವಣ್ಣನ ಪಟ್ಟಕ್ಕೆ ಹೊಂದಿದವರಲ್ಲ. ಈಗಿನ ವಿರಕ್ತರ ಆಚರಣೆಗೂ, ನಿರಾಭಾರಿ ವೀರಶೈವರಿಗೂ ಈ ವಿರಕ್ತರಿಗೂ, ಏನೂ ಸಂಬಂಧವಿಲ್ಲ. ಇವರು ಅರ್ವಾಚೀನರಿರುತ್ತಾರೆ. ಕಾರಣ ಬಾಳೆಹಳ್ಳಿ ಪೀಠಾಧಿಕಾರಿಗಳು ವಿರಕ್ತಪಾದಪೂಜೆಯನ್ನು ಮಾಡಿಕೊಳ್ಳುವ ಪದ್ಧತಿಯು, ಇದೆಯೋ ಇಲ್ಲವೇ ಎಂದು ಕೇಳುವದು ಸರಿಯಲ್ಲ. ಗುರುಗಳು ಶಿಷ್ಯರನ್ನು ಪೂಜಿಸುವ ಸಂಪ್ರದಾಯವು ಯಾವ ವೈದಿಕ ಮತಗಳಲ್ಲಿಯೂ ಇರುವದಿಲ್ಲವೆನ್ನುವದನ್ನು ಸರ್ವರೂ ಗ್ರಹಿಸತಕ್ಕದ್ದು. ಎಂಬ ಉತ್ತರವು ಸಾಧುವಾದುದೇನು? ಹಾಗಾದರೆ ಈಗ ನಿರಾಭಾರಿ ವೀರಶೈವರು ಯಾರು? ಅವರು ಇಲ್ಲವೇ ಇಲ್ಲವೋ ಏನು? ಇದು ಒತ್ತಟ್ಟಿಗಿರಲಿ. ತಮ್ಮ ಹಿಂದಿನ ಗುರುಗಳು ಇವರಲ್ಲಿ ಪೂಜ್ಯರೆಂದು ನಡೆದುಕೊಂಡ ಉದಾಹರಣೆಗಳು ತೋರಿಬರುವದರಿಂದ ಅವರಿಗೆ ತಾವು ಏನು ಮಾಡುವಿರಿ? ( ೬ ನೆಯ ವಿಷಯದಲ್ಲಿ ಇದರ ವಿವರವಿದೆ ) ಈಗ ಏಕೆ ಭಿನ್ನವಾಗಿ ಹೇಳುವಿರಿ. ಈ ಬದಲಾವಣೆಗೆ ಕಾರಣವೇನು?

## ೩ ನೆಯ ಪ್ರಶ್ನೆಯ ವಿಷಯ

ವಿವಾಹಾದಿ ಕಾರ್ಯಗಳಲ್ಲಿ ಕಲಶಗಳು ಆರು ಇರಬೇಕೇ ಐದು ಇರ ಬೇಕೇ ಎಂಬ ಪ್ರಶ್ನೆಗೆ

ಮಂತ್ರಶೂನ್ಯವಾದ ಕಲಶ (೬ ನೆಯ ಕಲಶ) ವನ್ನು ಹೂಡು ವುದು ಶಾಸ್ತ್ರ ಸಮ್ಮತವಲ್ಲ, ಎಂಬೀ ಉತ್ತರವು ಭಕ್ತರಿಗೆ ಸಮಾಧಾನ ಪಡಿಸುವದೇನು? ಸಿದ್ಧಾಂತ ಶಿಖಾಮಣಿಯಲ್ಲಿ ಪಂಚಾಕ್ಷರೀ ಸ್ಥಲ ಎಂದ್ಯ ಶಿರೋ ಲೇಖ ಬರೆದು ಅದರಲ್ಲಿ ೬ನೆಯದಾದ ಮೂಲ ಪ್ರಣವವನ್ನು ಏಕೆ ಸೇರಿಸಿರುವರು? ಹಾಗೆಯೇ ಐದು ಕಲಶಗಳಲ್ಲಿ ನಕಾರಾದಿಯಾಗಿ ಐದು ಮಂತ್ರ ಬೀಜಗಳನ್ನು ಸ್ಥಾಪಿಸುವದಾದರೆ ೬ ನೆಯದಾದ ಮೂಲಪ್ರಣ ವವನ್ನೆಲ್ಲಿ ಸ್ಥಾಪಿಸಬೇಕು? ಇವಕ್ಕಾಗಿಯೇ ಪಂಚಕಲಶಗಳನ್ನು ಮಧ್ಯ ಚೌಕದಲ್ಲಿ ಇಟ್ಟು ಇದಕ್ಕೆ ಆಧಾರವಾಗಿ ಮೂಲ ಪ್ರಣವವ ಬರೆದ ಉದಕ, ಅಥವಾ ಮೂಲಪ್ರಣವ ಮೂಸದ ಪಾದೋದಕವುಳ್ಳ (ಗಾಂಗೇಯ) ಕಲಶವ ನ್ನು ಸ್ಥಾಪಿಸದಿದ್ದರೆ ಶಿಷ್ಯರಿಗೆ ಷಡಕ್ಷರ ಸಂಬಂಧವು ಹೇಗೆ ಆಗುತ್ತದೆ? ಮುಖ್ಯವಾದ ೬ನೆಯಕಲಶವು ಮಂತ್ರವಿಲ್ಲದುದೆಂದು ಶಾಸ್ತ್ರಪರಿಚಯವಿಲ್ಲದ ಭಕ್ತರಿಗೆ ಹೀಗೆ ತಿಳಿಸುವದು ಉತ್ತಮವೇ? ಅದರಲ್ಲಿಯೂ ಮಂತ್ರವಿದೆ.

## ೪ ನೆಯ ಪ್ರಶ್ನೆಯ ವಿಷಯ.

ಭಕ್ತರು ಮಠಸ್ಥರಂತೆ ಅನುಗ್ರಹ ಮೊದಲಾದವುಗಳನ್ನು ಹೊಂದ ಬಹುದೇ? ಎಂಬ ಪ್ರಶ್ನೆಗೆ

ತಮ್ಮ ಗೋತ್ರ ಸೂತ್ರಕ್ಕನುಸರಿಸಿ ಗುರುಸ್ಥಲದವರಿಂದೆ ದೀಕ್ಷಾಪೂ ರ್ವಕ ಅನುಗ್ರಹ ಮೊದಲಾದವುಗಳನ್ನು ಹೊಂದಲಿಕ್ಕೆ ಭಕ್ತರು ಅರ್ಹರೇ ಇರುತ್ತಾರೆ. ಗುರುಸ್ಥಲದವರಿಗೆ ಪಂಚಮುದ್ರೆಗಳಿದ್ದಂತೆ ಭಕ್ತರಿಗೆ ಗುರು ತ್ವಾಧಿಕಾರ ಚಿನ್ಹಗಳಾದ ದಂಡ, ವಗೈರೆ ಪಂಚಮುದ್ರೆಗಳಿರುವದಿಲ್ಲ. ಈ ಉತ್ತರದಿಂದ ಭಕ್ತರು ಗುರುತ್ವ ಜಂಗಮತ್ವಗಳನ್ನು ಹೊಂದಲಿಕ್ಕೆ ಬರು ವದಿಲ್ಲವೆಂದಾಗುತ್ತದೆ. ರೂಢಿಯಲ್ಲಿ ಎಷ್ಟೋ ಜನ ಭಕ್ತರು ಗುರುಗಳಾ ಗಿಯೂ ಜಂಗಮರಾಗಿಯೂ ಆಗಿರುತ್ತಾರೆ. ಮತ್ತು ದೀಕ್ಷಾ ಕಾಲದಲ್ಲಿ

ಪಂಚ ಮುದ್ರೆಗಳು ಕೊಡಲ್ಪಡುವ ಪದ್ಧತಿಯು ಇರುವದಾಗಿ ತಿಳಿಯು ಬರುತ್ತದೆ. ಶಿವಜ್ಞಾನಿಗಳಾದ ಸರ್ವರಿಗೂ ಸಮಾನವಾದ ಹಕ್ಕು ಇರುವದೆಂಬ ಶಿವಾದ್ವೈತ ಸಿದ್ಧಾಂತಕ್ಕೆ ಮೇಲಿನ ಉತ್ತರವು ಭಿನ್ನವಾಗುವದಲ್ಲವೇ?

## ೫ನೆಯ ಪ್ರಶ್ನೆಯ ವಿಷಯ

ವೀರಶೈವರಿಗೆ ಚಾತುರ್ವರ್ಣ್ಯ ಉಂಟೇ? ಎಂಬ ಪ್ರಶ್ನೆಗೆ "ವೀರಶೈವ ಗ್ರಂಥಗಳಲ್ಲಿ ವೀರಶೈವರಿಗೆ ಚಾತುರ್ವರ್ಣ್ಯವಾಗಲೀ ಅಥವಾ ಜನಿವಾರವನ್ನು ಹಾಕಬೇಕೆಂದಾಗಲಿ ಹೇಳಿದ್ದರೆ ದಯವಿಟ್ಟು ಆ ಗ್ರಂಥಗಳ ಹೆಸರನ್ನು ಇಲ್ಲಿ ವಿವರಿಸಬೇಕು" ಎಂಬ ಪ್ರಶ್ನೆಯೇ ಉತ್ತರವೆಂದು ಉತ್ತರವು ಗುಪ್ತ ಮಾಡಲ್ಪಟ್ಟಿದೆ. ಆದರೆ ತಮ್ಮ ಪ್ರೋತ್ಸಾಹವುಳ್ಳ ಪಂಚಾಚಾರ್ಯ ಪ್ರಭಾ ಪತ್ರಿಕೆಯಲ್ಲಿ ವೀರಶೈವರಲ್ಲಿ ಚಾತುರ್ವರ್ಣ್ಯ ಉಂಟೆಂಬುದಕ್ಕೆ ಬೇಕಾದಷ್ಟು ವಿವರವಿರುತ್ತದೆ. ಮತ್ತು ಆ ಪತ್ರಿಕೆಯ ಮುಖ್ಯ ಚಾಲಕರಾದ ಕಾಶೀನಾಥ ಶಾಸ್ತ್ರಿಗಳನ್ನು ತಮ್ಮ ಆಸ್ಥಾನದಲ್ಲಿ ಸನ್ಮಾನ ಮಾಡುತ್ತಾ ಇರುವಿರಿ.

ರೇಣುಕಬೋಧೆ ಎಂದು ಪ್ರಕಟವಾಗಿರುವ ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವರು ಅತಿ ವರ್ಣಿಗಳೆಂದು ಬರೆದಿರುವದರಿಂದ ಈಗ ನಾಲ್ಕು ವರ್ಣಗಳುಂಟೆಂದು ಹೇಳುವದು ಶಾಸ್ತ್ರ ವಿರುದ್ಧವಲ್ಲವೆ? ಮತ್ತು ಈಗ ಕೇವಲ ಲಿಂಗಧಾರಿಗಳಲ್ಲಿ ರೂಢಿಯಲ್ಲಿಯೂ, ಶೂದ್ರ, ಮೊದಲಾದ ವಿಭಾಗಮಾಡಿಲ್ಲ. ಹಾಗೆ ಮಾಡಿದರೆ ಆಯಾ ಜಾತಿಗೆ ತಕ್ಕ ಜನಿವಾರ ಧಾರಣೆ ಮೊದಲಾದಲಕ್ಷಣಗಳೂ ಆದೆಸೆಯಿಂದ ಅವರು ಮಾಡುವ ಕರ್ಮಗಳೂ ಇರಬೇಕಾಗಿದ್ದಿತು. ಅದೂ ಇಲ್ಲ. ಅದರಿಂದ ವರ್ಣಭೇದವುಂಟೆಂದು ಹೇಳುವದು ಈಗಿನ ರೂಢಿಗೂ ವಿರೋಧವಲ್ಲವೇ? ಪಂಚಾಚಾರ್ಯ ಪ್ರಭಾ ಪತ್ರಿಕೆಯಲ್ಲಿ ಹೀಗೆ ಪ್ರಕಟಿಸುವದು ಸರಿಯಲ್ಲವೆಂದು ತಾವು ಒಂದು ಸಾರಿಯೂ ಪ್ರಕಟಿಸಿಲ್ಲವಾದ್ದರಿಂದ, ಇವಕ್ಕೆ ತಾವು ಅನುಮೋದಕರೆಂದು ಒಪ್ಪಬಹುದಲ್ಲವೆ?

## ೬ನೆಯ ಪ್ರಶ್ನೆಯ ವಿಷಯ

"ವಿರಕ್ತರು ಮಠದಯ್ಯನವರ ಶಿಷ್ಯರು" ಎಂಬ ತಮ್ಮ ಸರ್ಕ್ಯುಲರ್ ಸರಿಯಾದದ್ದೇ ಎಂಬ ಪ್ರಶ್ನೆಗೆ—

ಪಂಚಾಚಾರ್ಯರು ವೀರಶೈವ ಮತವನ್ನು ಸ್ಥಾಪಿಸಿ ಸಾಮಾನ್ಯ ವಿಶೇಷ ನಿರಾಭಾರಿ ಎಂದು ಮತದಲ್ಲಿ ಮೂರು ವರ್ಗಗಳನ್ನು ಮಾಡಿರುವರಷ್ಟೆ. ವಿರಕ್ತರು ನಿರಾಭಾರಿ ವೀರಶೈವರ ವರ್ಗದಲ್ಲಿ ಸೇರಿದವರಿದ್ದರೆ ಅವರಿಗೆ ಆಚಾರ್ಯರು ಸರ್ಕ್ಯುಲರ್ ಹೊರಡಿಸಿದ್ದು ಸರಿಯಾದದ್ದೇ ಇರುತ್ತದೆ. ಎಂಬೀ ಉತ್ತರವನ್ನು ತಾವು ತಿಳಿದು ಆನಂದಪಡಬಹುದಲ್ಲವೇ?

ಇದರಿಂದ ವಿರಕ್ತರು ಗುರುಸ್ಥಲದ ಮಠಸ್ಥರ ಶಿಷ್ಯರಾಗಬೇಕಾಯಿತು. ಈ ಪ್ರಣವಸ್ವರೂಪಿಗಳೇ (ವಿರಕ್ತರೇ) ಶಿವಯೋಗಿಗಳೆಂದೂ ಜಂಗಮರೆಂದೂ ಇವರೇ ವಿಶ್ವಭಾಸಕರಾದ ಗುರುಗಳು (ಜಗದ್ಗುರುಗಳು) ಎಂದೂ ಸಿದ್ಧಾಂತ ಶಿಖಾಮಣಿಯು ಹೇಳುವುದಕ್ಕೆ ಏನುಮಾಡುವಿರಿ? ಅದನ್ನೀಗ ತಲೆಕೆಳಗು ಮಾಡುವ ಪ್ರಯತ್ನವಲ್ಲವೇ ತಮ್ಮದು? ಕೆಳಗಿನ ಪತ್ರದಭಾಗವನ್ನು ಓದಿರಿ.

ರೇಣುಕಾಚಾರ್ಯರ ಉದರೋದಯರಾದ ಶ್ರೀವತ್ ಪೊಡಿವಿಡಿ ರುದ್ರಮುನಿ ಸ್ವಾಮಿಯವರ ಕರಕಮಲ ಸಂಜಾತರಾದ, ದ್ವಿತೀಯ ಶಂಭುದಿಗಂಬರ ಮುಕ್ತಿ ಮುನೀಶ್ವರ ಸ್ವಾಮಿಯವರ ವಂಶೋದ್ಭವರಾದ ಶ್ರೀ ಶಂಭಾಪುರದ ವೀರಸಿಂಹಾಸನದ ಶಿಖಾಮುದ್ರೆಗೆ ಕಾರಣ ಕರ್ತರಾದ ಮುತ್ತಿನ ಗದ್ದಿಗೆ ಪಟ್ಟದಪ್ಪನವರು ಪೊಡಮಟ್ಟು ಮಾಡಿಮಾಡುವ ಸಹಸ್ರ ಬಿನ್ನಹ.

ಈ ರೀತಿ ತಮ್ಮ ಪೀಠದ ಗುರುಗಳೊಬ್ಬರು ಜಗದ್ಗುರು ಚಿತ್ರದುರ್ಗದ ಶ್ರೀ ಮುರುಘಸ್ವಾಮಿಯವರ ದಿವ್ಯಪಾದಪದ್ಮಂಗಳಿಗೆ ಧಾತು ಸಂವತ್ಸರದ ಕಾರ್ತೀಕ ಶುದ್ಧ ೧೨ರಲ್ಲಿ ಬರೆದುಕೊಂಡ ಪತ್ರವಿದೆ. (ಇದನ್ನು ಸದರಿ ಚಿತ್ರದುರ್ಗದ ಸ್ವಾಮಿಗಳವರು ಮುದ್ರಿಸಿ ಪ್ರಕಟಮಾಡಿರುತ್ತಾರೆ.) ಈ ಪೂರ್ವ ಪದ್ಧತಿಗೆ ತಮ್ಮದು ವಿರುದ್ಧವಾದ ವರ್ತನವಾಗುವದಿಲ್ಲವೇ?

ರೇಣುಕರಾಗಲೀ ರೇವಣಸಿದ್ಧರಾಗಲೀ ವೀರಶೈವ ಮತವನ್ನು ನಾವುಸ್ಥಾಪಸನಮಾಡಿದ್ದೇವೆ. ನಮಗೆ, ಸಾಮಾನ್ಯ, ವಿಶೇಷ, ನಿರಾಭಾರಿ ವೀರಶೈವರು ಶಿಷ್ಯರು ಎಂಬುದಾಗಿ ಬರೆದ ಗ್ರಂಥವಾಗಲೀ ಅಥವಾ

ಗ್ರಂಥದ ಭಾಗವಾಗಲೀ ಇದ್ದರೆ ಹಾಗೂ ತಮ್ಮ ಪೀಠದವರಿಗೆ (ಶಿಷ್ಯರೆಂದು ತಾವು ಭಾವಿಸುವ) ವಿರಕ್ತರಿಂದ (ನಿರಾಭಾರಿಗಳಿಂದ) ಈಗಿನ ಶೂನ್ಯ ಸಿಂಹಾಸನಾಧಿಕಾರಿಗಳಿಂದ ಒಂದಾದರೂ ಪತ್ರ ಬಂದಿದ್ದರೆ ಅದನ್ನು ದಯಮಾಡಿ ಪ್ರಸಿದ್ಧಿಸುವಿರಾ! ಹಾಗಿಲ್ಲದಿದ್ದರೆ ವೀರಶೈವ ಮತದಲ್ಲಿ ಎಂದೂ ಇಲ್ಲದ ಪದ್ಧತಿಯನ್ನು ಹಾಕಲಿಕ್ಕೆ ಹೋದವರಲ್ಲಿ ತಾವು ಮೊದಲನೆಯವರು ಎಂದು ಹೇಳಲಿಕ್ಕೆ ಅಡ್ಡಿಯೆನಿದೆ?

ವೀರಶೈವಮತವು ಭಾಕ್ತಿಕಮತ, ಭಕ್ತಿಯಲ್ಲಿ ವೀರರೆಂದೆನ್ನಿಸಿಕೊಳ್ಳುವವರು, ಈ ಮತದಲ್ಲಿ ಗುರು ಜಂಗಮರಾಗುತ್ತಾರೆಯೇ ಹೊರತು ನಾನೇ ಹೆಚ್ಚೆಂದು ಹೇಳುವವನು ವೀರನಲ್ಲ, ವೀರಶೈವನಲ್ಲ. ಪಂಚಾಚಾರ್ಯಪೀಠದ ಗುರುಗಳಿಗೆ ನಿರಾಭಾರಿ ಜಂಗಮರು ಶಿಷ್ಯರು ಎಂಬ ಅಭಿಪ್ರಾಯವು ತಮ್ಮ ಪೀಠದ ಸರ್ಕ್ಯುಲರಿನಿಂದವ್ಯಕ್ತವಾಗಿರುವುದನ್ನು ನೋಡಿದರೆ ತಾವು ವೀರಶೈವ ಮತದಲ್ಲಿ ಅಹಂಭಾವನೆಯನ್ನು ಹೆಚ್ಚುಮಾಡಿ ವೀರಶೈವ ಮತತತ್ವವನ್ನೇ ರೂಪಾಂತರಗೊಳಿಸುತ್ತಿರುವುದು ಗೋಚರವಾಗುವದಿಲ್ಲವೇ? ಹಾಗಿಲ್ಲದಿದ್ದರೆ ವೀರಶೈವರಿಗೆ ಗುರು ಲಿಂಗ ಜಂಗಮದಲ್ಲಿ ಪೂಜ್ಯಭಾವವಿರಬೇಕೆಂದು ಶಾಸ್ತ್ರವು ಹೇಳುವಪ್ರಕಾರ ಇದೂವರೆವಿಗೆ ಯಾವ ಜಂಗಮದಲ್ಲಿ (ವಿರಕ್ತರಲ್ಲಿ) ತಾವು ಪೂಜ್ಯಭಾವವನ್ನಿಟ್ಟು ನಡೆದಿರುವಿರಿ ಎಂಬುದನ್ನು ದಯೆಯಿಟ್ಟು ಪ್ರಸಿದ್ಧಪಡಿಸಿರಿ.

### ೭ನೆಯ ಪ್ರಶ್ನೆಯ ವಿಷಯ.

ಕಾಶೀನಾಥ ಶಾಸ್ತ್ರಿಗಳು ಪ್ರಕಾಶಪಡಿಸಿದ ಗ್ರಂಥ ಮತ್ತು ಪಂಚಾಚಾರ್ಯಪ್ರಭಾ ಪತ್ರಿಕೆಯ ಪ್ರಕಟನೆಗಳಲ್ಲಿ ಸಮಾಜದ ಅನೈಕಮತ್ಯತೆಗೆ ಅವಕಾಶಕೊಡತಕ್ಕವುಗಳನ್ನು ತಪ್ಪಿಸೋಣವಾಗಬೇಕೆಂದು ಕೇಳಿಕೊಂಡರೆ ಉಭಯ ಪಕ್ಷದಿಂದಲೂ ವಾದಿಸಲಿಕ್ಕೆ ಅನೇಕ ಗ್ರಂಥಗಳು ಪ್ರಸನ್ನವಾಗಿರುವವು. ಪೀಠಾಧಿಕಾರಿಗಳು ಯಾರಿಗೂ ಯಾವ ಪ್ರತೀಕಾರವನ್ನೂ ಮಾಡುವದಿಲ್ಲ. ಎಂಬ ಉತ್ತರವು ಸಮಂಜಸವಾದುದೇನು?

ಪೀಠಾಧಿಕಾರಿಗಳು ನ್ಯಾಯವಾದ ಪಕ್ಷವನ್ನವಲಂಬಿಸಿ ಮಾತನಾಡುವುದಕ್ಕೆ ಅದನ್ನು ಪ್ರಸಿದ್ಧಿಸುವದಕ್ಕೆ ಉದಾಸೀನಮಾಡಿದಲ್ಲಿ ಈ ಕೆಲಸವನ್ನು ಮಾಡುವವರು ಯಾರು? ಉಭಯ ಪಕ್ಷ ಎಂಬ ಅಭಿಪ್ರಾ

ಯವು ಸಂಸ್ಥಾನಕ್ಕೆ ಏಕೆ ಬೇಕು? ಈ ವಿಷಯದಲ್ಲಿ ಸಂಸ್ಥಾನದವರು ಪ್ರವೇಶಿಸದೆ ಸಮಾಜದವರು ಜಗಳವಾಡುವುದನ್ನು ನೋಡುವುದು ಸಂಸ್ಥಾನಕ್ಕೆ ಒಪ್ಪಿಗೆಯಾಗಿದೆಯೇ? "ಗುರುಗಳ ಆಗಮನ ಶಿಷ್ಯರ ನಿಷ್ಪ್ರಮಣ'' ಎಂಬ ವೃತ್ತ ಪತ್ರಿಕೆಗಳ ಶಿರೋಭಾಗವನ್ನು ನೋಡಿ ಗುರುಗಳಾದ ತಮಗೆ ವ್ಯಸನವಾಗುವದಿಲ್ಲವೇನು? ಇದರ ಪರಿಹಾರಕ್ಕೆ ತಾವು ಏನು ನಡೆಸೋಣವಾಗಿದೆ?

## ೮. ನೆಯ ಪ್ರಶ್ನೆಯ ವಿಷಯ.

ಬಸವ ಜಯಂತಿಗೆ ತಾವು ಸೇರುವಿರಾ ಎಂಬ ಪ್ರಶ್ನೆಗೆ—

ಈ ಹಿಂದೆ ಬಸವ ಜಯಂತಿಯನ್ನು ಯಾರೂ, ಎಂದೂ ಎಲ್ಲಿಯೂ ಮಾಡಿದಂತೆ ಕಂಡು ಬರುವದಿಲ್ಲ .....ಶ್ರೀ ಮದಾಚಾರ್ಯ ಭಗವತ್ಪಾದರುಗಳ ಜಯಂತಿಗಳನ್ನು ಶಿಷ್ಯ ಪ್ರಶಿಷ್ಯರು ಆಚರಣೆಯಲ್ಲಿ ತರಹತ್ತಿದ ಕೂಡಲೇ ಒಂದೇ ಒಂದಾದ ಬಸವ ಪುರಾಣದ ಮೇಲಿಂದ ಬಸವನ ಉತ್ಪತ್ತಿಯನ್ನು ಕಂಡುಹಿಡಿದು, ಈಚೆಗೆ ಕೆಲವರು ಮಾಡಲು ಪ್ರವೃತ್ತರಾಗಿರುತ್ತಾರೆ. ಸಂತೋಷ, ಶಿಷ್ಯರನ್ನು ಗುರುಗಳು ಪೂಜಿಸುವ ಸಂಪ್ರದಾಯ ಉಂಟೋ? .......ಗುರು, ಲಿಂಗ, ಜಂಗಮ ಸೇವಾ ನಿರತರಾದ ಈ ಪುಣ್ಯಾತ್ಮರುಗಳ ಜಯಂತಿಯನ್ನು ಬಹುಜನರು ಆಚರಿಸುತ್ತಾರೆ. ಎಂಬ ಉತ್ತರವಿದೆ.

ಬಸವಜಯಂತಿಗೆ ತಮ್ಮ ಸಾಭಿಮಾನವು ಇಷ್ಟೇ ಸಾಕೇನು? ಬಸವೇಶ್ವರನು ಮಾಡಿದ ಜಂಗಮ ಸೇವೆ, ಸಕ್ಕರೆ ಕರಡಪ್ಪನವರು ಮಾಡಿದ ಜಂಗಮಸೇವೆಯು, ಅಲ್ಲಮ ಪ್ರಭುವನ್ನೂ ಅವರ ಸಂಪ್ರದಾಯಕರನ್ನೂ ಪೂಜೆ ಮಾಡಿದ್ದನ್ನೇ ಅಲ್ಲವೇ? ಅಂಥಾದ್ದನ್ನು ತಾವು ಅಧಿಕಾರಕ್ಕೆ ಬಂದಮೇಲೆ ಒಂದು ದಿವಸವಾದರೂ ಮಾಡಿದ್ದೀರಾ! ಬಸವೇಶ್ವರನು ತನ್ನನ್ನು ಪೂಜಿಸಬೇಕೆಂದು ತಮ್ಮಲ್ಲಿ ಕೇಳಿಕೊಳ್ಳುತ್ತ ಇದ್ದಾನೇನು? ಬಸವ ಜಯಂತಿಯಲ್ಲಿ ಕೆಲವರು ಸೇರುತ್ತಿರುವದು ಸಂತೋಷ, ಎಂದು ಹೇಳುವದರ ಬದಲಾಗಿ ತಾವೇ ಬಸವ ಜಯಂತಿಯಲ್ಲಿ ಏಕೆ ಸೇರಬಾರದು? ಎಲ್ಲಾ ವೀರಶೈವರು ಜಯಂತಿಯನ್ನು ನಡೆಸಬೇಕೆಂದು, ಯಾಕೆ ಬೋಧಿಸಬಾರದು? ಕನ್ನಡ ಸಾಹಿತ್ಯ ಪರಿಷತ್ತಿನವರೂ ಸರ್ವ ಮತೀಯರೂ ಬಸವೇಶ್ವರನಿಕೆ

ಬಸಗಳನ್ನು ಶ್ರೇಷ್ಠವೆಂದು ಭಾವಿಸುತ್ತಾ ಸ್ತೋತ್ರ ಮಾಡುತ್ತಿರುವಲ್ಲಿ ಆ ಬಸವೇಶ್ವರನ ಅನುಯಾಯಿಗಳೇ ನಮ್ಮ ಶಿಷ್ಯರೆಂದು ಹೇಳುತ್ತಿರುವ ತಾವು, "ಕೆಲವರು ನಡೆಸುವದು ಸಂತೋಷ", ಎಂದು ಉದಾಸೀನದಲ್ಲಿ ಹೇಳಿದ ಮಾತ್ರಕ್ಕೆ ತಮ್ಮ ಕರ್ತವ್ಯವನ್ನು ಮಾಡಿದಂತೆ ಆಯಿತೇನು? ಈ ಬಸವ ಜಯಂತಿಯ ದಿನದಲ್ಲಿಯಾದರೂ ಬಸವೇಶ್ವರನಂತೆ ಜಂಗಮ ಕೃಪೆಗೆ ಪಾತ್ರರಾಗುವದಕ್ಕಾಗಿ ಪ್ರಭು ಸಾಂಪ್ರದಾಯಕ ಜಂಗಮರ ಪೂಜೆಯನ್ನು ಮಾಡಿ, ತಮ್ಮ ಭಕ್ತಿಯ ಮಹಿಮೆಯನ್ನು ವೀರಶೈವರಲ್ಲಿ ಪ್ರಕಟಿಸ ಬಾರದೇ ?

## ೯ ನೆಯ ಪ್ರಶ್ನೆಯ ವಿಷಯ.

ಸಂಸ್ಕೃತ ಕಾಲೇಜನ್ನು ಯಾವ ಮಾದರಿಯಲ್ಲಿ ಸ್ಥಾಪಿಸುವಿರಿ ಎಂಬ ಪ್ರಶ್ನೆಗೆ—

ಸಂಸ್ಕೃತ ಕಾಲೇಜು ಸ್ಥಾಪನೆ ಆಗದಿದ್ದರೂ ಆರಂಭದಲ್ಲಿ ಈತರಹ ಪ್ರಶ್ನೆ ಮಾಡಿದ್ದು ಪರಪ್ರೇರಣೆ........ಸಂಸ್ಕೃತಕಾಲೇಜು ಸ್ಥಾಪನೆಯಾದಮೇಲೆ ಸರ್ವರಿಗೂ ಗೋಚರವಾಗುತ್ತದೆ. ಈ ಉತ್ತರವು ಸರಿಯೇನು ? ಶಿಕಾರಿಪುರದ ಭಕ್ತರು, ಬಹಳವಾಗಿ ಮುಂದಾಲೋಚನೆಯುಳ್ಳವರು. ಏಕಂದರೆ ಈಗ ಎಂಟು ವರ್ಷಗಳಲ್ಲಿ ತಾವು ಮಾಡಿರುವ ಕೆಲಸ ತಾವು ತೋರಿಸುತ್ತಿರುವ ಭಾವನೆಗಳನ್ನು ನೋಡಿದರೆ, ತಾವು ಸ್ಥಾಪಿಸುವ ಸಂಸ್ಕೃತ ಕಾಲೇಜು ಯಾವ ವೀರಶೈವ ಧರ್ಮವನ್ನು ವೃದ್ಧಿ ಮಾಡುತ್ತದೆಯೋ ಎಂಬ ಶಂಕೆಯು ಒದಗಿದೆ. ಈ ವಿಷಯವನ್ನು ಅವರು ಮೊದಲೇ ಯೋಚಿಸಿ ಈ ಪ್ರಶ್ನೆ ಹಾಕಿರುತ್ತಾರೆ. ತಾವು ಇದುವರೆವಿಗೂ ಸಂಸ್ಕೃತ ಕಾಲೇಜು ಮಾಡುತ್ತೇವೆ ಎಂಬ ಸಂಕಲ್ಪವನ್ನು ತೋರಿಸಿ ಶಿಷ್ಯರಿಂದ ತೆಗೆದುಕೊಂಡ ಹಣದಲ್ಲಿ ಎಷ್ಟನ್ನು ಈಗ ಅದಕ್ಕೆ ಕೊಟ್ಟಿರುವಿರಿ? ಯಾವ ಯಾವ ಸ್ಥಳಗಳಲ್ಲಿ ಸಂಸ್ಕೃತ ಕಾಲೇಜಿಗೆ ಸಂಬಂಧಪಡುವ ಶಾಖಾ ಶಾಲೆಗಳನ್ನು ಸ್ಥಾಪಿಸಿದ್ದೀರಿ ? ತಾವು ಶಿಕಾರಿಪುರದಲ್ಲಿ ಹೇಳುತ್ತಿದ್ದಂತೆ ಇತರ ಕಡೆಗಳಲ್ಲಿಯೂ ಹೇಳಿರಬಹುದಾದ ಪ್ರಕಾರ ನಮ್ಮ ಗುರುಗಳು ಕಾಲೇಜು ಮಾಡಿಬಿಡುತ್ತಾರೆ. ಅದರ ಅಂಗವಾಗಿ ನಮ್ಮ

ಲ್ಲಿ ಸಂಸ್ಕೃತ ಶಾಲೆಯಾಗುತ್ತದೆ, ಎಂದು ನಂಬಿಕೊಂಡು ಹಣವನ್ನು ಕೊಟ್ಟು. ಕಡೆಗೆ ತಾವು ಊರು ಬಿಟ್ಟು ಸುಸ್ಮನೆ ಬಂದಮೇಲೆ ನಮ್ಮ ಗೇನೂ ಫಲವಾಗಲಿಲ್ಲವೇದು, ಅನೇಕರು ವ್ಯಥೆ ಪಡುತ್ತಿರಬಹುದಲ್ಲವೇ ? ತಾವು ಇದುವರೆವಿಗೂ ಸಂಚರಿಸಿದ ಸ್ಥಳಗಳಲ್ಲಿ ಅಲ್ಲಲ್ಲಿ ಶಾಲೆಗಳನ್ನು ಸ್ಥಾಪಿಸಿದ್ದರೆ, ಬೆಂಗಳೂರಿನಲ್ಲಿ ಸ್ಥಾಪಿತವಾಗುವ ಕಾಲೇಜಿಗೆ ಅಲ್ಲಿಂದ ವಿದ್ಯಾರ್ಥಿಗಳು ಬಹಳವಾಗಿ ಬರಲಿಕ್ಕೆ ಅನುಕೂಲ ವಾಗುತ್ತಿದ್ದಿಲ್ಲವೇ ?

ತಮಗೆ ಗುರುತ್ವಾಧಿಕಾರವಾದ ಮೇಲೆ ಹುಬ್ಬಳ್ಳಿಯಲ್ಲಿ ಒಂದು ಸಂಸ್ಕೃತ ಕಾಲೇಜು ಆಯಿತು. ಧಾರವಾಡದಲ್ಲಿ ಒಂದಾಯಿತು. ಇವಕ್ಕೆ ವಿದ್ಯಾರ್ಥಿಗಳು ಬಂದು ಸೇರುವದಕ್ಕೆ ಗ್ರಾಮ ಪಾಠ ಶಾಲೆಗಳು ಇಲ್ಲವೆಂದು ಆ ಕಾಲೇಜುಗಳವರು ಯೋಚಿಸುತ್ತಿದ್ದಾರೆ. ಮತ್ತು ಯಾದಗಿರಿ ಕಾಲೇಜು ಸಹಾ ವಿದ್ಯಾರ್ಥಿಗಳು ಬೇಕೆನ್ನುತ್ತದೆ ಈಚೆಗೆ ಬೆಂಗಳೂರಿನಲ್ಲಿರುವ ಸರ್ಕಾರದ ಸಂಸ್ಕೃತ ಕಾಲೇಜು ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೂ ತೆರೆಯಲ್ಪಟ್ಟಿದೆ. ಈ ಸರ್ಕಾರದ ಕಾಲೇಜಿನಲ್ಲಿ ವೀರಶೈವರು ಸುಮಾರು ೧೫—೨೦ ಜನ ವಿದ್ಯಾರ್ಥಿಗಳಿರುವಲ್ಲಿ ತಾವು ಸ್ಥಾಪಿಸುವ ಕಾಲೇಜು ಯಾರಿಗೆ ಉಪಯೋಗವಾಗಬಹುದು ? ಎಷ್ಟು ಪಂಡಿತರನ್ನು ಒಳಗೊಳ್ಳಬಹುದು ? ಈಗಿರತಕ್ಕ ಕಾಲೇಜುಗಳಿಗೇನೇ ಹೆಚ್ಚು ವಿದ್ಯಾರ್ಥಿಗಳನ್ನು ಸೇರಿಸುವದಕ್ಕೆ ತಕ್ಕ ಪ್ರಯತ್ನವನ್ನು ನಡೆಸಿದರೆ ಅದೊಂದು ದೊಡ್ಡ ಪ್ರಯೋಜನವಾದಂತಾಗುತ್ತದೆ.

ಮತ್ತು ಕಾಶಿಯ ಹಿಂದೂ ವಿಶ್ವ ವಿದ್ಯಾಲಯದಲ್ಲಿ ಮತ ಬೋಧೆಯನ್ನು ಮಾಡುವದಕ್ಕೆ ಒಂದು ಧನ ನಿಧಿಯನ್ನು ಕೊಟ್ಟರೆ, ಅದರ ಬಡ್ಡಿಯ ಹಣದಿಂದ ಮತಬೋಧೆ ಮಾಡುವ ಪಂಡಿತರನ್ನು ಆ ವಿಶ್ವ ವಿದ್ಯಾಲಯದವರು ಏರ್ಪಡಿಸಿ ಅಲ್ಲಿ ಓದಿದವರಿಗೆ ಆ ಪರೀಕ್ಷೆಯನ್ನುಮಾಡಿ ಯೋಗ್ಯತಾ ಪತ್ರಗಳನ್ನು ಕೊಡುತ್ತಾರೆಂದು ತಿಳಿದು ಬಂದಿದೆ. ಕಾಶಿಯಲ್ಲಿ ಸಂಸ್ಕೃತ ವಿದ್ಯಾರ್ಥಿಗಳು ಬಹಳ. ಅಲ್ಲಿಗೆ ಧನ ನಿಧಿಯನ್ನು ಕೊಟ್ಟರೆ ದಕ್ಷಿಣದೇಶದ ಸಂಸ್ಕೃತ ಕಾಲೇಜುಗಳಲ್ಲಿ ಓದಿದವರೆಲ್ಲರೂ

ಕಲ್ಲಿಗೆ ಹೋಗಿ ಪ್ರಸಿದ್ಧ ಪಂಡಿತರಾಗಿ ಇಡೀ ಜಗತ್ತಿಗೇ ಆದರ್ಶರಾಗ ಬಹುದು. ಈ ಕೆಲಸವನ್ನು ಅವಶ್ಯಕವಾಗಿ ಮಾಡಿರಿ. ತಮಗೆ ಭಕ್ತರು ಕೊಟ್ಟ ಹಣವನ್ನು, ಸುಮ್ಮನೆ ಒಂದು ಕಟ್ಟಡಕ್ಕೆ ಹಾಕಿ ಹಾಳು ಮಾಡಬೇಡಿರಿ. ಕಾಶೀ ವಿಶ್ವ ವಿದ್ಯಾಲಯದಲ್ಲಿ, ವೀರಶೈವ ಧರ್ಮ ಬೋಧೆಯ ಧನ ನಿಧಿಯಾಗಿ ಏರ್ಪಡಿಸಲು ಹಣ ಕೊಡುವದರಿಂದ ವೀರಶೈವ ಧರ್ಮವು ಜಗತ್ತಿನಲ್ಲೆಲ್ಲಾ ಗಣ್ಯವಾಗಿ ತೋರಿ ಜಗತ್ತಿಗೆಲ್ಲಾ ಹರಡುವಂತೆ ಆಗುವ ದೊಡ್ಡ ಉಪಕಾರವನ್ನು ಸಮಾಜಕ್ಕೆ ಮಾಡಿದಂತಾಗುವದು. ಇದು ಮುಖ್ಯವೆಂದು ತಾವು ಯೋಚಿಸಿ ಇದನ್ನು ನಡೆಸಿರಿ.



ಮೇಲ್ಕಂಡಂತೆ ಒಂಬತ್ತು ಪ್ರಶ್ನೋತ್ತರಗಳ ವಿಮರ್ಶೆಯು ಮುಗಿಯಿತು. ಆದರೆ ತಾವು ಅನುಸರಿಸುವ ಮಾರ್ಗದಿಂದ ವೀರಶೈವ ಸಮಾಜದ ಉದ್ಧಾರವಾಗುವದೆಂದು ನಂಬಿದ್ದೀರೇನು? ತಾವು ಅಧಿಕಾರಕ್ಕೆ ಬಂದಮೇಲೆ ಸಮಾಜದ ಅನೈಕಮತ್ಯತೆಯು ಬೆಳೆಯುತ್ತಾ ಬೆಳೆಯುತ್ತಾ ಬಂದಿದೆ ಗುರುಗಳಾದವರು ಸಮಾಜದ ಒಂದು ವ್ಯಕ್ತಿಯೂ ವ್ಯಥೆಪಡದಂತೆ ಅಜ್ಞಾನವು ತೊಲಗುವಂತೆ ದೇಶಹಿತವನ್ನು ಮಾಡಿ ಉತ್ತಮರೆನಿಸಿ ಕೊಳ್ಳಬೇಕಲ್ಲವೇ? ಧಾರ್ಮಿಕದಲ್ಲಿ ಉಂಟಾಗುವ ಮನಸ್ಸಿನ ಸಂತಾಪವು ಆತ್ಮನನ್ನು ನೋಯಿಸದೇ ಇರುವದೇ? ಆ ಆತ್ಮನು ಒಬ್ಬನೇ ಅಲ್ಲವೇ? ಔರಂಗಜೇಬನು ಹಿಂದುಗಳನ್ನು ಧಾರ್ಮಿಕ ದೃಷ್ಟಿಯಲ್ಲಿ ನೋಯಿಸಿ ಕೊನೆಗೆ ಪಶ್ಚಾತ್ತಾಪ ಪಡಲಿಲ್ಲವೇ? ವೀರಶೈವರಿಗೆ ಅನೇಕರಿಗೆ ತಮ್ಮ ಗುರುತ್ವಾಧಿಕಾರದಲ್ಲಿ ಆಗಿರುವ ಕೊರತೆಯ ಅನುತಾಪವು ತಮಗೆ ತಗಲುವದಿಲ್ಲವೇ? ತಾವು ಗುರುಗಳಾಗಿ ಸಮಾಜದ ಮುಂದಾಳುಗಳಾಗಿದ್ದು, ಸಮಾಜವು ಕೆಟ್ಟುಹೋಗಿ ಒಡೆದು ಹೋಗುವದಲ್ಲಾ ಎಂಬ ದುಃಖವು ಲೇಶವಾದರೂ ತಮಗಿಲ್ಲವೇ? ಹಾಗಿರುವ ಪಕ್ಷದಲ್ಲಿ ಸಾರ್ವತ್ರಿಕವಾದ ಒಂದು ವೀರಶೈವ ಮಂಡಲವನ್ನು ಯೋಗ್ಯರಾದವರ ಅಧ್ಯಕ್ಷತೆಯಲ್ಲಿ ಕೂಡಿಸಿ ಅದರಲ್ಲಿ ತಾವು ಇಟ್ಟುಕೊಂಡಿರುವ ಧೋರಣೆಯು ಯೋಗ್ಯವು ಎಂಬುದನ್ನು ತೋರಿಸಿ ಕೊ

ಡಿರಿ, ಅವನ್ನು ನಿರ್ಣಯಮಾಡಿಸಿ ಪ್ರಸಿದ್ಧಪಡಿಸಿರಿ. ಆಗ ಎಲ್ಲರಿಗೂ ಒಪ್ಪಿಗೆಯಾಗುವದು, ಹೀಗಿಲ್ಲದಿದ್ದರೆ ತಮ್ಮಪಕ್ಷದ್ವೇ ಒಂದು ಸಂಘವಾಗಿ ಪರಿಣಮಿಸಬಹುದಲ್ಲವೇ ?

ಕಡೆಯ ವಿಷಯವೊಂದುಂಟು.

ವೀರಶೈವರಲ್ಲಿ ಸರ್ವರಿಗೂ ಅಷ್ಟಾವರಣವಿರಬೇಕು. ಅಷ್ಟಾವರಣವುಳ್ಳ ಭಕ್ತನಿಗೆ ಗುರುವಾಗಬೇಕಾದರೆ ಅವನಿಗೂ ಅಷ್ಟಾವರಣವಿರಬೇಕು. ಪೂರ್ವದ ಹಿರಿಯರು ನಂಬಿಕೊಂಡಿದ್ದ ಜಂಗಮುವನ್ನು ಅವರಲ್ಲವೆಂದು ತಿರಸ್ಕರಿಸುವ ತಮ್ಮ ಘೋರಣದಲ್ಲಿ ತಾವು ಆ ಜಂಗಮುವನ್ನು ಬಿಟ್ಟದ್ದಾದರೆ ತಮಗೆ ಅಷ್ಟಾವರಣವೇ ಇಲ್ಲವೆಂದು ಹಿರಿಯರ ಮಾರ್ಗವನ್ನು ಅನುಸರಿಸಿ ನಡೆಯುವವರು ತಿಳಿಯಬಹುದಲ್ಲವೇ? ಆಗ ಅವರಿಗೆ ತಾವು ಹೇಗೆ ಗುರುಗಳಾಗುವಿರಿ? ತಾವು ಎಲ್ಲರಿಗೂ ಗುರುವಾಗಬೇಕಾದ್ದರಿಂದ ಗೋತ್ರ ಸೂತ್ರಗಳುಳ್ಳ ಗುರುಸ್ಥಲದ ಚರಮೂರ್ತಿಯೇ ಅಷ್ಟಾವರಣದೊಳಗಿನ ಜಂಗಮ ಎಂಬುದನ್ನು ವೀರಶೈವ ಜಗತ್ತಿನಲ್ಲಿ ಸಿದ್ಧಾಂತಮಾಡಿ ತೋರಿಸಿಬಿಡಿರಿ. ಅಂತಹ ತಮ್ಮ ಕೆಚ್ಚೆದೆಯನ್ನಾದರೂ ನೋಡೋಣ

ಈ ಭರದಲ್ಲಿ ತಾವು ಈಗಿರುವ ವಿರಕ್ತರು ಗುರುಗಳಿಗೆ ನಡೆದುಕೊಳ್ಳುವದಿಲ್ಲ. ಅವರು ಅಷ್ಟಾವರಣವುಳ್ಳವರೇನು ? ಎಂಬ ಪ್ರಶ್ನೆಯನ್ನು ಮಾಡಬಹುದು- ವೀರಶೈವರಲ್ಲಿ ಹೇಗೆ ಜ್ಞಾನವೂ ಮತ್ತು ಅಧಿಕಾರವೂ ಬೆಳೆಯುತ್ತ ಹೋಗುವದೋ ಎಂದರೆ ಭಕ್ತಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಸ್ಥಲಗಳೂ ಸಾಮಾನ್ಯ ವಿಶೇಷ ನಿರಾಭಾರಿ ಎಂಬ ಅಧಿಕಾರಗಳೂ ಹೇಗೆ ಹೇಗೆ ಬೆಳೆಯುವವೋ ಹಾಗೆ ಹಾಗೆ ಗುರುಲಿಂಗ ಜಂಗಮರು ವ್ಯತ್ಯಾಸವನ್ನು ಹೊಂದುತ್ತಿದ್ದಾರೆ. ತಾವು ಬಾಲ್ಯದಲ್ಲಿರುವಾಗ ತಮಗೆ ಒಬ್ಬ ಅಯ್ಯನವರು ಲಿಂಗವನ್ನು ಕಟ್ಟಿ ತಮಗೆ ಗುರುಗಳಾಗಿದ್ದರು. ಈಗ ಅವರನ್ನು ಗುರುಗಳೆಂದು ಭಾವಿಸುತ್ತಿರುವಿರೇನು? ಈಗಿನ ತಮ್ಮ ಗುರುಗಳು ಬೇರೆ ಇದ್ದಾರೆ. ಇದರಂತೆ ನಿರಾಭಾರಿ ಅಧಿಕಾರವನ್ನು ಹೊಂದತಕ್ಕ ಶಿಷ್ಯನಿಗೆ ನಿರಾಭಾರಿ ಗುರುವೇ ಇರ

ಬೇಕಲ್ಲದೆ ಇತರರು ಆತನಿಗೆ ಗುರುಗಳಾಗಲಿಕ್ಕೆ ಶಕ್ತರಲ್ಲ. ಪಂಚಾಚಾರ್ಯ ಪೀಠದವರೇ ಗುರುಗಳು ಇತರರು ಗುರುಗಳಲ್ಲವೆಂದು ತಾವು ಭಾವಿಸುವದಾದರೆ ಆ ಭಾವನೆಯು ಶುದ್ಧ ತಪ್ಪು. ನಿರಾಭಾರಿ ಗುರು ಎಂಬ ಪದವನ್ನು ನಿಜಗುಣ ಶಿವಯೋಗಿಗಳು ಉಪಯೋಗಿಸಿದುದನ್ನು ನೋಡಬಹುದು. ಇದಲ್ಲದೆ ವೀರಶೈವ ಮತಗ್ರಂಥಗಳಲ್ಲಿಯೂ ನಿರಾಭಾರಿ ಗುರುಗಳೇ ಮುಖ್ಯ ಗುರುಗಳೆಂಬುದಕ್ಕೆ ಬೇಕಾದಷ್ಟು ಪ್ರಮಾಣಗಳಿವೆ. ಆದ್ದರಿಂದ ಅವರು ವಿರಕ್ತರಲ್ಲಿಯೇ ಒಬ್ಬರನ್ನು ಗುರುಗಳನ್ನಾಗಿಯೂ ಮತ್ತೊಬ್ಬರನ್ನು ಜಂಗಮರನ್ನಾಗಿಯೂ ನಂಬಿರುತ್ತಾರೆ. ಅದಕ್ಕೆ ತಕ್ಕಂತೆ ಲಿಂಗಸಂಸ್ಕಾರವನ್ನು ಹೊಂದಿರುತ್ತಾರೆ. ಹೀಗೆ ಗುರು ಲಿಂಗ ಜಂಗಮಕ್ಕೆ ಭಕ್ತಿ ತೋರಿಸದೆ ಇದ್ದ ವಿರಕ್ತರೂ ಸಹಾ ಅಷ್ಟಾವರಣದೊಳಗಿನ ವೀರಶೈವ ಜಂಗಮರೆಂದು ತಿಳಿಯಲ್ಪಡುವದಿಲ್ಲ. ಒಂದು ವ್ಯಕ್ತಿಯಲ್ಲಿ ನಾನೇ ದೊಡ್ಡವನು ಎಂಬ ತತ್ವವಿದ್ದರೆ ಆ ವ್ಯಕ್ತಿಯನ್ನು ಇಡೀ ಸಮಾಜವೇ ಅಂಗೀಕರಿಸಲಾಗದು. ಹಾಗೆಯೇ ವಿಶೇಷ ವೀರಶೈವನು ತನ್ನೊಳಗೆ ಎಲ್ಲವನ್ನೂ ಮಾಡಿಕೊಳ್ಳುತ್ತೇನೆ ಎನ್ನಲಿಕ್ಕೆ ಬರುವುದಿಲ್ಲ ಏಕೆಂದರೆ ತನಗಿಂತಲೂ ಹೆಚ್ಚಿನ ಅಧಿಕಾರವುಳ್ಳ ನಿರಾಭಾರಿ ಜಂಗಮವಿರುವಲ್ಲಿ ಅದನ್ನು ತಿರಸ್ಕರಿಸುವುದು ತಪ್ಪಿನ ಕೆಲಸವಾಗುತ್ತದೆ. ಹಾಗಾದರೆ ಅವರು ಹೆಚ್ಚು ನಾವು ಕಡಿಮೆ ಎಂಬ ಭಾವನೆಯು ಬಂದಿತಲ್ಲಾ ಇದು ಭಿನ್ನವೆಂದು ಒಬ್ಬಾನೊಬ್ಬ ವೀರಶೈವನು ಕೇಳಬಹುದು, ಶಿವಾದ್ವೈತ ಸಿದ್ಧಾಂತವು ಜ್ಞಾನವಿಲ್ಲದ್ದು ಜ್ಞಾನವುಳ್ಳದ್ದು ಈ ಎರಡನ್ನೂ ಬರೀ ಮಾತಿನಿಂದ ಒಂದು ಮಾಡುವಂಥಾದ್ದಲ್ಲ. ಯಾವಜ್ಞಾನವಿದೆಯೋ ಅದಕ್ಕೆತಕ್ಕ ಕ್ರಿಯೆ ಇರಬೇಕು. ಹಾಗಿದ್ದರೆ ಆಗ ಒಂದೆಂದು ಭಾವಿಸಲಿಕ್ಕೆ ಬರುತ್ತದೆ. ಅದರಂತೆ ಗುರುವಾದವನು ಜಂಗಮ ಜ್ಞಾನವನ್ನು ಹೊಂದಿ ಜಂಗಮನಾಗಿ ಆಚರಿಸಬಹುದು. ಭಕ್ತನು ಗುರುವಿನ ಜ್ಞಾನವನ್ನು ಹೊಂದಿ ಗುರುವಾಗಿ ಆಚರಿಸಬಹುದು. ಸರ್ವರಿಗೂ ಸರ್ವವನ್ನೂ ಹೊಂದಲಿಕ್ಕೆ ಬರುತ್ತದೆ. ಪರಂತು ಅದನ್ನು ಜ್ಞಾನಕ್ರಿಯೆಗಳಿಂದ ಪಡೆಯಬೇಕು. ಹಾಗಲ್ಲದೆ ಒಂದಾಗಲಾರದು. ಮೇಲಿನ ತರಗತಿ

ಯಲ್ಲಿ ಓದುವ ವಿದ್ಯಾರ್ಥಿಗೆ ಅದೇ ತರಗತಿಯಲ್ಲಿ ಓದಿದವನು ಹೇಗೆ ಗುರು ವಾಗುವನೋ, ಹಾಗೆ ಜಂಗಮನಿಗಿಂತಲೂ ಹೆಚ್ಚಿನ ಅಧಿಕಾರಿಗಳು ಯಾರೂ ಇಲ್ಲದ್ದರಿಂದ ಜಂಗಮರಿಗೆ ಜಂಗಮರೇ ಗುರುಗಳಾಗುತ್ತಾರೆ. ಆದ್ದರಿಂದ ಅವರೂ ಅಷ್ಟಾವರಣ ಸಂಪನ್ನರೆಂಬದನ್ನು ತಾವು ಯಾವಾ ಗಲೂ ತಮ್ಮ ಹೃದಯದಲ್ಲಿಟ್ಟುಕೊಂಡು ತಾವೂ ನಿಜವಾದ ಅಷ್ಟಾವರಣ ಸಂಪನ್ನರಾಗಲಿಕ್ಕೆ ಯತ್ನಮಾಡಿರಿ. ಇಲ್ಲದಿದ್ದರೆ ಶ್ರೇಷ್ಠವಾದ ವೀರಶೈವ ಮತವು ತಮ್ಮಿಂದ ಕೆಡಿಸಲ್ಪಡುವದು. ಇದನ್ನು ಯಾವಾಗಲೂ ನೆನಪಿ ನಲ್ಲಿಡಿರಿ.

---

ಇನ್ನು ಈ ವಿಜ್ಞಾಪನೆಯ ಸಾರಾಂಶವೇನಂದರೆ—

ವೀರಶೈವರು ತಮ್ಮ ಮೇಲೆ ಮಾಡುವ ಮುಖ್ಯ ಶಂಕೆಗಳು ಈ ಕೆಳಗೆ ಕಂಡಂತೆ ಅವೆ.

೧ ತಾವು ಅಲ್ಲಮಪ್ರಭು ಚನ್ನಬಸವಣ್ಣನವರ ಸಾಂಪ್ರದಾಯ್ಯ ಕರಾದ ವಿರಕ್ತರನ್ನು ಪೂಜ್ಯರೆಂದು ತಿಳಿಯುವದಿಲ್ಲ. ಬೇರೆ ವಿರಕ್ತರಾ ರೆಂಬುದನ್ನೂ ತೋರಿಸುವದಿಲ್ಲ.

೨ ಪ್ರಾಕೃತರಿಗೆ ಸಂಬಂಧಪಟ್ಟ ಬ್ರಾಹ್ಮಣಾದಿ ವರ್ಣಗಳನ್ನು ತಂದು ಹಾಕಿ ಅಪ್ರಾಕೃತವಾಗಿ ಇರುವ ವೀರಶೈವ ಮತವನ್ನು ಕೆಡಿಸುತ್ತೀರಿ.

೩ ಸರ್ವ ವೀರಶೈವರೂ ಒಂದೇ ಎಂಬ ಭಾವನೆಯಿಂದ ನಡೆದ ಶಿವ ಶರಣರ ತತ್ತ್ವಗಳನ್ನು ಪಾಲಿಸದೆ ಗುರು ಶಿಷ್ಯ ಎಂಬ ಭಿನ್ನ ಭಾವವನ್ನು ಸ್ಥಿರಮಾಡಿ ಶಿವಾದ್ವೈತವುಳ್ಳ ಈ ಮತವನ್ನು ದ್ವೈತ ವಾಗಿ ಮಾಡುತ್ತಾ ಇದ್ದೀರಿ.

೪ ಬಸವೇಶ್ವರನೇ ಮೊದಲಾದ ಶಿವಶರಣರಲ್ಲಿ ಯೋಗ್ಯ ರೀತಿಯ ಪೂಜ್ಯಭಾವವನ್ನಿಟ್ಟಿಲ್ಲ.

ಈ ಶಂಕೆಗಳಿಗೆ ಕೆಲವು ಸಮಾಧಾನಗಳನ್ನು ತಾವು ಯೋಚಿಸಿ ಕೊಂಡಿರಬಹುದು. ಅವುಗಳ ವಿಮರ್ಶೆಯೂ ಈ ಕೆಳಗೆ ಮಾಡಲ್ಪಟ್ಟಿರುತ್ತದೆ.

೧ ಬಸವೇಶ್ವರನ ಕಾಲದಿಂದ ಈ ಮತವು ಈ ಸ್ಥಿತಿಗೆ ಬಂದಿದೆ ಇದಕ್ಕೆ ಮುಂಚೆ ಜಂಗಮರೇ ಇರಲಿಲ್ಲ. ಎಂಬದಾಗಿ ತಾವು ಯೋಚಿಸುವದಾದರೆ ಅದೂ ಸರಿಯಲ್ಲ. ಇತಿಹಾಸ ದೃಷ್ಟಿಯಿಂದ ತಮ್ಮ ಗುರುತ್ವದ ಪೀಠವು ಯಾವ ಕಾಲದಿಂದ ಬಂದಿದೆಯೋ ಅದೇ ಕಾಲದಿಂದ ವಿರಕ್ತರ ಪೀಠವೂ ಬಂದಿದೆ, ಮತ್ತು ತಮ್ಮ ಪೀಠದ ಗುರುತ್ವವು ಯಾವ ಕಾಲದಿಂದ ಬಂದಿದೆಯೋ ಅಂದಿನಿಂದಲೇ ವಿರಕ್ತರ ಪೀಠದ ಜಂಗಮತ್ವವೂ ಬಂದಿದೆ, ಎಂಬುದು ಸಿದ್ಧಪಡುತ್ತದೆ. ಅಷ್ಟಾವರಣದೊಳಗಿನ ಗುರುತ್ವ ಜಂಗಮತ್ವಗಳೂ ಒಂದೇ ಕಾಲದಲ್ಲಿ ಆದವೆಂದೂ ಸಿದ್ಧಪಡುತ್ತದೆ.

೨ ಇತರ ಮತಗಳಲ್ಲಿ ಗುರುವೇ ಶ್ರೇಷ್ಠ ಎಂತ ಇದೆ ಇದರಲ್ಲಿ ಏಕೆ ಇಲ್ಲ ಎಂದು ಒಂದು ವೇಳೆ ಯೋಚಿಸುವದಾದರೆ ಅದೂ ಸರಿಯಲ್ಲ. ಈ ಮತದಲ್ಲಿ ಗುರು ಲಿಂಗ ಜಂಗಮ ಎಂಬ ಮೂರು ಪೂಜ್ಯ ವಸ್ತುಗಳಿವೆ. ಇವರಲ್ಲಿ ಲಿಂಗಕ್ಕಿಂತ ಗುರು ಶ್ರೇಷ್ಠನು ಗುರುವಿಗಿಂತ ಜಂಗಮನು ಶ್ರೇಷ್ಠನು ಎಂಬುದೂ ಸಿದ್ಧಪಡುತ್ತದೆ.

ಆದ್ದರಿಂದ ಮೇಲಿನ ಶಂಕೆಗಳನ್ನು ಪರಿಹರಿಸಿಕೊಳ್ಳುವದಕ್ಕಾಗಿ ನಿಜ ಸ್ಥಿತಿಯಲ್ಲಿ ನಡೆವ ಮತಾನುಯಾಯಿಗಳೊಡನೆ ಕೂಡಿ ನಡೆಯುವದಕ್ಕೆ ತಾವು ಇನ್ನಾದರೂ ಯತ್ನಿಸಿರಿ ಎಂದು ತಮಗೆ ಬಹು ದೀನತನದಿಂದ ಬೇಡುವೆನು. ಇಂತೀ ಸಮಾಜಸೇವಕನ ವಿಜ್ಞಾಪನೆಗಳು.

ಇನ್ನಾದರೂ ನಿಜ ಸ್ಥಿತಿಯಲ್ಲಿ ತಾವು ನಡೆಯುದಿದ್ದರೆ ಇದೇ ನನ್ನ ಕಟ್ಟಕಡೆಯ ವಿಜ್ಞಾಪನಾ ಪತ್ರವಾಗಿದೆ.

ಇದು ತಮಗೆ ಈಗ ಅಪ್ರಿಯವಾಗಿ ಕಂಡರೂ ಪರಿಣಾಮದಲ್ಲಿ ಸುಖಕೊಡುವಂಥಾದ್ದಾಗಿರುವದರಲ್ಲಿ ಲೇಶವೂ ಅನುಮಾನವಿಲ್ಲ. ಸತ್ಯವಾದ ನಡತೆಯ ಪರಿಣಾಮವು ಕೊನೆಯಲ್ಲಿ ಶ್ರೇಷ್ಠವಾದ ಫಲವನ್ನೇ ಕೊಡುತ್ತದೆ, ಎಂಬುದನ್ನು ಸರ್ವದಾ ಜ್ಞಾಪಕದಲ್ಲಿ ಇಡಬೇಕೆಂಬುದೇ ಈ ವಿಜ್ಞಾಪನಾ ಪತ್ರದ ಮುಖ್ಯಾಭಿಪ್ರಾಯವಾಗಿದೆ.

ಪ್ರಕಾಶಕ, ಸದ್ಧರ್ಮ ದೀಪಿಕೆ
ಹಾವೇರಿ.



# ಆರಾಧ್ಯರಿಗೊಂದು ಮಾತು.

ಮೈಸೂರು ಪ್ರಾಂತದಲ್ಲಿ ಲಿಂಗಧಾರಿಗಳಾಗಿ ಇರುವ ಆರಾಧ್ಯ ಮಹನೀಯರೇ !

ಈಗ ನೀವು ಹೊಸದಾಗಿ ಜನಿವಾರವನ್ನು ಧರಿಸಬೇಕೆಂದು ಯೋಜನೆ ಮಾಡುತ್ತೀರೆಂದು ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗಿರುವದು. ಈ ಕೆಳಗೆ ಕಂಡ ಪ್ರಶ್ನೆಗಳಿಗೆ ತಕ್ಕ ಸಮಾಧಾನದ ಉತ್ತರವನ್ನು ಕೊಡಿರಿ.

೧. ಜನಿವಾರ ಧರಿಸುವದರಿಂದ ಬ್ರಾಹ್ಮಣ್ಯವು ಬರುವದೆಂದು ಯೋಚಿಸುವದಾದರೆ "ಉಪವೀತವು ಜ್ಞಾನಮಯವಾಗಿರಬೇಕು, ಕರ್ಮ ಕಾಂಡವಾದ ಶಿಖಾ ಯಜ್ಞೋಪವೀತಗಳನ್ನು ಕಿತ್ತಿಹಾಕಬೇಕು. ಹೀಗೆ ಮಾಡಿದರೂ ಕೂಡಾ "ಬ್ರಾಹ್ಮಣ್ಯಂ ಸಕಲಂ ತಸ್ಯ" ಎಂದರೆ ಅವನಿಗೆ ಬ್ರಾಹ್ಮಣ್ಯವು ಕೂಡಿಯೇ ಇರುವದು" ಎಂಬುದಾಗಿ ಉಪನಿಷತ್ತುಗಳಲ್ಲಿ ಏಕೆ ಹೇಳಿರುವರು?

೨. ಜನಿವಾರವನ್ನು ಧರಿಸಿದಮೇಲೆ ಸೂತಕದಕಾಲದಲ್ಲಿ ಅದನ್ನು ತೆಗೆಯಬೇಕಾಗುತ್ತದೆ. ಹಾಗೆ ತೆಗೆದಾಗ ಅದಕ್ಕಿಂತಲೂ ಪವಿತ್ರವಾದ ಲಿಂಗವನ್ನೂ ತೆಗೆದಿಡಲು ಸಿದ್ಧರಾಗಿರುವಿರಾ ಹೇಗೆ ?

೩. ಲಿಂಗಧಾರೀ ಸದಾ ಶುಚಿಃ ' ಎಂದು ವೀರಶೈವರು ಹೇಳುತ್ತಿರುವದು ಸರಿಯಷ್ಟೆ. ಜನಿವಾರವನ್ನು ತೆಗೆದುಹಾಕಿ ನೀವು ಸೂತಕವನ್ನು ಆಚರಿಸುವಾಗ ಲಿಂಗವು ಶುದ್ಧವಾಗಿರುವದೇ ಅಶುದ್ಧವಾಗಿರುವದೇ?

೪. ಲಿಂಗವು ಶುದ್ಧವಾಗಿ ನೀವು ಅಶುದ್ಧವಾಗಿ ಲಿಂಗಧಾರಣ ಮಾಡುವದಾದರೆ 'ಶಿವೋಹಂ' ಎಂಬ ತತ್ತ್ವಕ್ಕೆ ಭಂಗಬಂದು ದ್ವೈತವು ತೋರುವದಕ್ಕೆ ಪರಿಹಾರವೇನಿರುವದು ?

೫. ಜನಿವಾರವನ್ನು ಧರಿಸಿ ಕರ್ಮಮಾಡುವವರು ಪ್ರಾಕೃತಿಕರು ಎಂದರೆ ಇವರು ಮನುಷ್ಯರಾಗಿದ್ದು ಕರ್ಮಗಳನ್ನು ಮಾಡತಕ್ಕವರಾಗಿದ್ದಾರೆ. ಸೋಹಂ (ನಾನು ಶಿವನು) ಎಂಬ ಅದ್ವೈತ ಜ್ಞಾನಕ್ಕೆ ಸರಿಯಾದ ಆಚರಣೆಗೆ ಈ ಕರ್ಮವು ಒಳ್ಳೇದಲ್ಲ, ಎಂದು ಹೇಳುವ ಅಭಿಪ್ರಾಯಕ್ಕೆ ನೀವು ತಪ್ಪಿದಂತೆ ಆಗುವದಿಲ್ಲವೇ?

೬. ಶಿವೋಹಂ ಸೋಹಂ ಎಂಬ ಜ್ಞಾನವನ್ನು ಹೊಂದಿರುವವನಿಗೆ ವರ್ಣಗಳ ಗೋಜು ಇಲ್ಲ, ಎಂಬ ಶಾಸ್ತ್ರದ ಅಭಿಪ್ರಾಯವನ್ನು ನೀವು ತಿಳಿದಿರುವಿರಾ ಇಲ್ಲವೇ ?

೭. ಈಗಿನ ಬ್ರಾಹ್ಮಣರು ತಮ್ಮ ಕರ್ಮಗಳಿಗಾಗಿ, ಶ್ರಾದ್ಧಗಳಿಗಾಗಿ ಹಣ ಖರ್ಚುಮಾಡಿ, ದೇಹಶ್ರಮಮಾಡಿ ಅಂತಹ ಭಾರವನ್ನು ಹೊರಲಾರೆವೆಂದು ಹೇಳುತ್ತಿರುವಾಗ, ವೀರಶೈವರಾಗಿ ಜ್ಞಾನಮಾರ್ಗದಲ್ಲಿರುವ ನೀವು ಮತ್ತೆ ಕರ್ಮಮಾರ್ಗಕ್ಕೆ ಹೋಗುವದು ಕೆಳಗಿನ ಮಾರ್ಗಕ್ಕೆ ಹೋದಂತಾಗುವದಿಲ್ಲವೇ ? ಮತ್ತು ದ್ರವ್ಯ ವ್ಯಯದಿಂದಲೂ ಆಯಾಸದಿಂದಲೂ ಆಚರಿಸುವ ಧರ್ಮವನ್ನು ಗಂಟುಹಾಕಿಕೊಂಡಂತೆ ಆಗುವದಿಲ್ಲವೇ?

೮.ಜನಿವಾರವನ್ನು ಜಾತಿಯ ಹೆಚ್ಚುಗಾರಿಕೆಗಾಗಿ ಧರಿಸಬೇಕೆಂದಿದ್ದರೆ ಅಂಥಾ ಹೆಚ್ಚುಗಾರಿಕೆಯಿಂದ ಮೋಕ್ಷವಾಗುವದಾದರೆ ಪಾರಮೇಶ್ವರಾಗಮದಲ್ಲಿ

ನ ಸಾಧಯಂತಿ ಮಾಂ ಯೋಗೋ ಜಾತಯಶ್ಚಾಶ್ರಮಾ ಅಪಿ

“ ನನ್ನನ್ನು ಜಾತಿಗಳಾಗಲೀ ಆಶ್ರಮಗಳಾಗಲೀ ಸಾಧಿಸುವದಿಲ್ಲ ” ಎಂದು ಶಿವನು ಏಕೆ ಹೇಳಿರುವನು ?

೯ ಬ್ರಾಹ್ಮಣರಾಗುವದರಿಂದ ಪಾರಮಾರ್ಥಿಕ ಸುಖವಿಲ್ಲದಿದ್ದರೂ ಈ ಲೋಕದ ಸುಖವಾಗುತ್ತದೆ ಎಂದು ಆಲೋಚಿಸುವದಾದರೆ ರಾಜಕೀಯ (ಸರಕಾರ) ದಲ್ಲಿ ಅಧಿಕಾರವು ಸಿಕ್ಕುವದೇ ಅಥವಾ ವ್ಯಾಪಾರದಲ್ಲಿ ಮುಂದಾಗುವಿರಾ ? ಇಲ್ಲವೇ ಪರದೇಶದಲ್ಲಿ ಹೆಚ್ಚಿನ ಸೌಲಭ್ಯಗಳು ಸಿಕ್ಕುವವೇ ?

೧೦ ಕರ್ಮಣಿ ವಿಶತೀತಿ ವೈಶ್ಯಃ (ಕರ್ಮದಲ್ಲಿ ಪ್ರವೇಶಮಾಡುವದರಿಂದ ವೈಶ್ಯನು) ಕರ್ಮಕ್ಷ ತಾತ್ ತ್ರಾಯತೀತಿ ಕ್ಷತ್ರಿಯಃ ( ಕರ್ಮವು ನಾಶವಾಗುವ ಸಂದರ್ಭದಲ್ಲಿ ರಕ್ಷಿಸುವವನು ಕ್ಷತ್ರಿಯನು. ) ಎಂಬುದಾಗಿ ಕರ್ಮಗಳ ದೃಷ್ಟಿಯಿಂದ ವರ್ಣಗಳನ್ನು ನಿರ್ಣಯ ಮಾಡಿದಂತೆ ಬ್ರಹ್ಮಕರ್ಮ ಕರೋತೀತಿ ಬ್ರಾಹ್ಮಣಃ ( ವೇದದ ಬ್ರಾಹ್ಮಣ ಎಂಬ ಭಾಗದಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಮಾಡುವವನು) ಎಂದು ಅರ್ಥವನ್ನು ಮಾಡುವದಾದರೆ ಅದರಂತೆ ಯಜ್ಞ ಯಾಗ

ಹೋಮಗಳನ್ನು ಮಾಡುವಲ್ಲಿಯೂ, ಪಶು ಯಜ್ಞವನ್ನು ಕೂಡಾ ಮಾಡುವಲ್ಲಿಯೂ, ಸಿದ್ಧರಿರುವಿರಾ ಹೇಗೆ ?

೧೧ ಅನೇಕ ಜಾತಿಗಳ ದೆಸೆಯಿಂದ ಹಿಂದೂ ಧರ್ಮವು ಕೆಟ್ಟುಹೋಗಿದೆ. ಎಲ್ಲಾ ಜಾತಿಗಳನ್ನೂ ವಜಾ ಮಾಡಬೇಕೆಂದು ಹೇಳುವವರಲ್ಲಿ ಕೆಲವು ಬ್ರಾಹ್ಮಣರೂ ಸೇರಿಕೊಂಡಿರುತ್ತಾರೆ. ಕರ್ಮ ಬ್ರಾಹ್ಮಣ್ಯವು ಶ್ರೇಷ್ಠವೆಂದು ಅವರೆದುರಿಗೆ ನೀವು ಸಿದ್ಧಮಾಡಿ ತೋರಿಸಲಿಕ್ಕೆ ಹೋಗುವಿರಾ ಹೇಗೆ ? ನಾಲ್ಕು ವರ್ಣಗಳ ಕರ್ಮದ ಗೋಜು ಇಲ್ಲದೆ ಯಾವಾಗಲೂ ಮಹಾದೇವನನ್ನು ಅನುಸರಿಸಿಕೊಂಡು ಹೋಗುವ ಧರ್ಮವು ಬಹು ಮುಖ್ಯವಾದುದು, ಇದನ್ನು ಎಲ್ಲರೂ ಅನುಸರಿಸಬೇಕು, ಮಹಾದೇವನ ಸಂಬಂಧವಿಲ್ಲದಂತೆ ಬರೀ ಮನುಷ್ಯತ್ವವನ್ನೇ ಒಂದು ಮಾಡುವ ಉಪಾಯವು ಹಿಂದೂ ಪೂರ್ವಿಕರ ಅಭಿಪ್ರಾಯಕ್ಕೆ ವಿರುದ್ಧವಾದುದು, ಎಂದು ಹೇಳಿ ಅವರನ್ನು ಧರ್ಮದ ಕಡೆಗೆ ಎಳೆಯುವದಕ್ಕೆ ವೀರಶೈವವು ಮುಖ್ಯವೋ ? ಕರ್ಮ ಬ್ರಾಹ್ಮಣ್ಯವು ಮುಖ್ಯವೋ ತಿಳಿಸಿರಿ.

೧೨. ಹಿಂದೂ ದೇಶದ ಈಗಿನ ಮುಂದಾಳುಗಳು ವರ್ಣಗಳ ತೊಂದರೆಯನ್ನು ಬೇಗನೆ ಕಡಿಮೆಮಾಡಿ ಹಿಂದೂ ಧರ್ಮವನ್ನು ಸುಧಾರಿಸಬೇಕೆಂದು ನಿಂತಿರುವಲ್ಲಿ ಅಂಥಾ ಯೋಜನೆಯಿಲ್ಲದೆ ನೀವು ಸುಮ್ಮನೆ ಕೂತುಕೊಂಡಿರಬೇಕೆಂದು ಯೋಚಿಸುತ್ತಾ ಇದ್ದಂತಾಯಿತಲ್ಲವೇ ? ಅವರು ನಿಂತುಕೊಂಡಾಗ ನೀವು ಕೂತುಕೊಂಡಿರುವದರಿಂದ ನೀವು ಯಾವಾಗಲೂ ಹಿಂದಾಳುಗಳೆಂದು ಕರೆಸಿಕೊಳ್ಳಲ್ಪಡುವದು ಸಹಜವಾಗಿ ತೋರುತ್ತದೆ. ಇದಕ್ಕೆ ಏನು ಹೇಳುವಿರಿ ?

೧೩. ಬ್ರಾಹ್ಮಣ ವರ್ಣವನ್ನೂ ಮೀರಿದಂಥಾ ಅತಿ ವರ್ಣವೆಂಬುದು ಒಂದು ಉಂಟು, ಸನ್ಯಾಸಾಶ್ರಮವನ್ನೂ ಮೀರಿದ ಅತ್ಯಾಶ್ರಮ ಒಂದು ಉಂಟು. ಇವುಗಳನ್ನು ಹೊಂದಲಿಕ್ಕೆ ಎಲ್ಲರಿಗೂ ಅವಕಾಶವುಂಟು.

ಎಂಬದಾಗಿ ಉಪನಿಷತ್ತು ಮೊದಲಾದವುಗಳು ಬೋಧಿಸುತ್ತವೆ. ಈ ಅತಿವರ್ಣ ಅತ್ಯಾಶ್ರಮಗಳೂ ಸಹಾ ಹಿಂದೂ ಧರ್ಮದಲ್ಲಿ ಸೇರಿದವುಗಳ್ಳ ಎಂಬ ವಿಷಯಗಳು ನಿಮಗೆ ಗೊತ್ತಿವೆಯೋ ಇಲ್ಲವೇ?

೧೪. ಸಿದ್ಧಾಂತ ಶಿಖಾಮಣಿಯನ್ನು ಪ್ರಾಮುಖ್ಯವೆಂದು ತಿಳಿಯುವ ನೀವು ಅದರಲ್ಲಿ ವೀರಶೈವರು ಅತಿವರ್ಣಿಗಳು ಅತ್ಯಾಶ್ರಮಿಗಳು ಎಂದು ಬೋಧಿಸಿರುವದನ್ನು ಮೀರಿ ನಡೆಯಲು ಯೋಚಿಸುತ್ತಿರುವಿರಾ ಹೇಗೆ?

೧೫. ಅತಿವರ್ಣಿಗಳಾಗಿ ಇರುವವರ ದೆಸೆಯಿಂದ ಕರ್ಮದ ಗೋಜಿಗೆ ಹೋಗದೆ ಜ್ಞಾನ, ಮತ್ತು ಯೋಗ ಇವುಗಳನ್ನು ಹೊಂದಿ ಶಾಂತ ದಿಂದ ಸ್ವ ಸ್ವರೂಪಾನುಸಂಧಾನಿಗಳಾಗಿರುವಲ್ಲಿ ಇದೇ ನಮ್ಮ ಪಾರಮಾರ್ಥಿಕದ ಉತ್ತಮ ಮಾರ್ಗವೆಂದು ನಿಮಗೆ ತೃಪ್ತಿಯಿಲ್ಲವೇ ಹೇಗೆ?

ಇದೇನು? 'ಒಂದು ಮಾತು' ಎಂಬ ಶಿರೋಲೇಖನಕ್ಕೆ ಪ್ರತಿಯಾಗಿ ಬಹಳ ಪ್ರಶ್ನೆಗಳು ಒಳಗೆ ಸೇರಿರುವವಲ್ಲಾ ಎಂದು ನೀವು ಯೋಚಿಸ ಬಹುದು "ಇವಕ್ಕೆಲ್ಲಾ ಸಮಾಧಾನದ ಉತ್ತರವನ್ನು ಕೊಡಿರಿ" ಎಂಬುದು ಒಂದೇ ಮಾತು.

(ನೀವು ಉತ್ತಮರೆನಿಸಿಕೊಂಡು ಇರುವದೇ ಎಲ್ಲರಿಗೂ ಇಷ್ಟ. ಆದರೆ ಅಂಥಾ ಉತ್ತಮತ್ವದ ಮಾರ್ಗವನ್ನು ಸರಿಯಾಗಿ ಯೋಚಿಸಿ ತಿಳಿದುಕೊಳ್ಳದೆ 'ಧುಡುಂ' ಪ್ರವೇಶಮಾಡಿ ವಿಷಾದ ಪಡಬಾರದೆಂಬೇ ಈ ಲೇಖನದ ಮುಖ್ಯ ಉದ್ದೇಶವಾಗಿದೆ. ಹಾಗೆ ನೀವು ಯೋಚಿಸಿಕೊಂಡಿರುವುದು ನಿಜವಾದ ಪಕ್ಷಕ್ಕೆ ನಿಮ್ಮ ಆ ಉತ್ತಮತ್ವದ ಅಭಿಪ್ರಾಯವನ್ನು ಕಾರಣಗಳ ಸಹಿತವಾಗಿ ಪ್ರಕಟಪಡಿಸಿ ತೋರಿಸಿರಿ.)

ತಮ್ಮವನಾದ

ವಿ. ಸಿ. ಯಗಟಿ ವಕೀಲ, ಹಾವೇರಿ.

# ಈಗಿನ ಧಾರ್ಮಿಕ ಸಂಗತಿಗಳು.

ಬೆಳಗಾಂವ ಜಿಲ್ಲೆಯ ಬೈಲಹೊಂಗಲದಲ್ಲಿ ಇರುವ ವೀರಶೈವ ಧರ್ಮಾರ್ಥ ಪಾಠಶಾಲೆ ಮತ್ತು ಫ್ರೀ ಬೋರ್ಡಿಂಗ್ ಇದರ ಮೊದಲನೆಯ ವರ್ಷದ ವರದಿಯು ನಮ್ಮಲ್ಲಿಗೆ ಬಂದಿರುತ್ತದೆ. ಈ ಪಾಠಶಾಲೆಯಲ್ಲಿ ೧೫ವಿದ್ಯಾರ್ಥಿಗಳು ಸಂಸ್ಕೃತವಲ್ಲಿ ವಿದ್ಯಾರ್ಜನೆ ಮಾಡುತ್ತಾ ಇದ್ದಾರೆ, ಶಾ.ಶಕ ೧೮೫೫ಳ ಫಾಲ್ಗುಣ ಶು. ೬ ಯಲ್ಲಿ ಪಾಠಕ್ರಮವು ಆರಂಭವಾಯಿತು, ಶ್ರೀಶಾಂತಲಿಂಗ ಸ್ವಾಮಿ ಮಠದ ಶ್ರೀ ನಿ. ನೀಲಕಂಠ ದೇಶಿಕರವರ ಭಿಕ್ಷಾಟನದ ಸಹಾಯದಿಂದಲೂ ಉದಾರಬುದ್ಧಿಯುಳ್ಳ ಮಹಾಶಯರ ಸಹಾಯದಿಂದಲೂ ಈ ಸಂಸ್ಥೆಯು ಮುಂದೆ ನಡೆಸಲ್ಪಡಬೇಕಾಗಿದೆ, ಎಂಬದಾಗಿ ಈ ವರದಿಯಿಂದ ತಿಳಿಯಬರುತ್ತದೆ.

ಧರ್ಮ ಗ್ರಂಥಗಳು ಸಂಸ್ಕೃತದಲ್ಲಿ ಬಹಳವಾಗಿ ಇರುವವೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಸಂಸ್ಕೃತವನ್ನು ಕಲಿತು ಧರ್ಮ ಗ್ರಂಥಗಳಲ್ಲಿ ಹೇಳಲ್ಪಟ್ಟ ನಿಜ ತತ್ತ್ವವನ್ನು ಪ್ರಕಾಶಕ್ಕೆ ತರುವುದು ಹಿಂದುಗಳ ಮುಖ್ಯ ಕರ್ತವ್ಯವಾಗಿದೆ.

ಈಚೆಗೆ ಬೊಂಬಾಯಿ ಸರಕಾರದವರು ಧಾರವಾಡದ ಶಿಕ್ಷಣ ಕಾಲೇಜಿನಲ್ಲಿ ಸಂಸ್ಕೃತದ ಅಭ್ಯಾಸವನ್ನು ಬಹು ಮಟ್ಟಿಗೆ ಕಡಿಮೆಮಾಡಿರುತ್ತಾರಾಗಿ ತಿಳಿಯುತ್ತದೆ. ಮೈಸೂರು ದೇಶದಲ್ಲಿಯೂ ಅಪ್ಪರ್ ಸೆಕಂಡರಿ ಮೊದಲಾದ ಕನ್ನಡ ಪರೀಕ್ಷೆಗಳಲ್ಲಿ ಇಟ್ಟ ಸಂಸ್ಕೃತದ ಭಾಗವನ್ನು ಬಹಳ ಮಟ್ಟಿಗೆ ಕಡಿಮೆ ಮಾಡಿರುವರೆಂದು ತಿಳಿಯುತ್ತದೆ. ಇಂತಹ ಸಂದರ್ಭದಲ್ಲಿ ವೀರಶೈವರು ತಮ್ಮ ಸಂಸ್ಕೃತ ಗ್ರಂಥಗಳನ್ನು ಪ್ರಚಾರಕ್ಕೆ ತರುವುದಕ್ಕಾಗಿ ಸಂಸ್ಕೃತಾಭ್ಯಾಸದ ಶಾಲೆಗಳನ್ನು ಸ್ವಂತವಾಗಿ ಏರ್ಪಡಿಸಿಕೊಳ್ಳುವುದು ಅತ್ಯವಶ್ಯಕವಾದ ಕೆಲಸವಾಗಿದೆ. ಈ ಶಾಲೆಯು ಧನ ನಿಧಿಯ ಆಶ್ರಯವಿಲ್ಲದೆ ಏರ್ಪಾಡಾಗಿದ್ದರೂ ಮುಂದೆ ಉ

ದಾರಿಗಳು ಅಭಿಮಾನವಿಟ್ಟು ಧನವನ್ನು ಕೂಡಿಸಿ ಇದನ್ನು ಸ್ಥಿರವಾಗಿ ಇರುವಂತೆ ಮಾಡುವುದು ಒಳ್ಳೆಯದು.

ಈ ಶಾಲೆಯುವರು ೧೯೫೭ ವರ್ಷದಲ್ಲಿ ೫೩೩–೬–೫ ಮಾತ್ರ ಖರ್ಚು ಮಾಡಿರುವದು ಇವರ ಮಿತವ್ಯಯದ ಕರ್ತವ್ಯವನ್ನು ಪ್ರಕಟ ಸುತ್ತದೆ. ಹೀಗೆಯೇ ದರವರ್ಷವೂ ಉತ್ಪನ್ನವನ್ನು ಹೆಚ್ಚುಮಾಡು ತ್ತಾ ಮಿತವ್ಯಯವನ್ನು ಮಾಡುತ್ತಾ ಉಳಿದ ಹಣವನ್ನು ಧನ ಸಿಥಿ ಯಾಗಿ ಏರ್ಪಡಿಸುವುದು ಒಳ್ಳೆಯದು. ಒಟ್ಟಿನಲ್ಲಿ ಯಾವುದೊಂದು ಪಕ್ಷಪಾತಕ್ಕೆ ಅವಕಾಶಕೊಡದೆ ಅಭಿಮಾನದಿಂದ ಕೆಲಸಮಾಡಬೇಕು.

ವೀರಶೈವರ ಸಂಸ್ಕೃತ ಪಾಠಶಾಲೆಗಳಲ್ಲೆಲ್ಲಾ ಅಭ್ಯಾಸವು ಒಂದೇ ವಿಧವಾಗಿರುವುದು ಅವಶ್ಯಕವಾದ್ದರಿಂದ ಹುಬ್ಬಳ್ಳಿಯ ಸಂಸ್ಕೃತ ಕಾಲೇಜಿನ ನಿಯಮದಂತೆ ಇದನ್ನು ನಡೆಸುವವರಾಗಿ ಆ ಕಾಲೇಜಿಗೆ ಶಾಖೆಯಾಗಿ ಇದನ್ನು ಸೇರಿಸಿದರೆ ಅಲ್ಲಿಂದ ಸ್ವಲ್ಪ ಸಹಾಯವನ್ನೂ ಈ ಶಾಲೆಯು ಹೊಂದಬಹುದಾಗಿದೆ.

ಮುಖ್ಯವಾಗಿ ಎಲ್ಲಾ ಶಾಲೆಗಳಲ್ಲಿಯೂ ಒಂದೇ ವಿಧವಾದ ಪಾಠ ಕ್ರಮವಿರುವಂತೆ ಮಾಡುವದಕ್ಕಾಗಿ ವೀರಶೈವ ಮಹನೀಯರು ಬಹು ಬೇಗನೆ ಪ್ರಯತ್ನ ನಡೆಸಬೇಕಾಗಿದೆ.

ಈ ಪಾಠಶಾಲೆಯು ಶ್ರೀ ಕುಮಾರೇಶ್ವರನ ದಯೆಯಿಂದ ಇನ್ನು ಮುಂದೆ ಅತಿಶಯವಾಗಿ ವೃದ್ಧಿಗೆ ಬರಲೆಂದು ಮಹಾದೇವನನ್ನು ಪ್ರಾರ್ಥಿಸುತ್ತೇವೆ.

ಪ್ರಕಾಶಕ.

# ಸದ್ಧರ್ಮ ದಿಪೀಕೆ.

## ಎರಡನೆಯ ವರ್ಷದ ಕೊನೆಯ ವಿಜ್ಞಪ್ತಿ.

---

### ಈ ಪತ್ರಿಕೆಯನ್ನು ಓದುವ ಮಹನೀಯರಲ್ಲಿ ವಿಜ್ಞಾಪನೆಗಳು.

ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ ಇವರ ಆಶೀರ್ವಾದ ಬಲದಿಂದ ಆರಂಭಿಸಲ್ಪಟ್ಟ ಈ ಸದ್ಧರ್ಮ ದೀಪಿಕೆಯ ಎರಡು ವರ್ಷದ ಕೊನೆಯನ್ನು ಈ ಸಂಚಿಕೆಗೆ ಕಂಡಂತಾಯಿತು. ಈಗ ಎರಡು ವರ್ಷದ ಹಿಂದೆ ಸುವರ್ಣ ಆಶ್ವಯುಜ ಮಾಸದಿಂದ ಕಳು ಹಿಸಲಾರಂಭಿಸಲ್ಪಟ್ಟ ಈ ಪತ್ರಿಕೆಯು ಸ್ವಲ್ಪ ಹೆಚ್ಚು ಕಡಿಮೆ ಈ ವರೆವಿಗೆ ೨೪ ಸಂಚಿಕೆಗಳನ್ನು ಮುಂಪೆ ತಂದಿದ್ದಾಗ್ಯೂ ಮೊದಲ ವರ್ಷದ ಚೈತ್ರ ಮಾಸದಿಂದ ಆರಂಭವಾದಂತೆ ಪತ್ರಿಕೆಯಲ್ಲಿ ನಮೂದಿಸಿದ ಪ್ರಕಾರ ಹಿಂದಿನ ಸಂಚಿಕೆಗಳನ್ನು ಈ ವರೆವಿಗೂ ಕೂಡಿಸಿಕೊಳ್ಳುವುದು ಆಗಿಲ್ಲ. ಇದಕ್ಕೆ ಈಗಿನ ಹಣದ ಪೇಚಾಟದ ಕಾಲದ ದುರ್ದಸೆಯು ಈ ಪತ್ರಿಕೆಗೂ ತಗಲಿ ಇತರ ಕೆಲಸಗಳಿಗೆ ಗಮನ ಕೊಟ್ಟದ್ದೇ ಕಾರಣವಾಗಿದೆ.

ಕಳೆದ ವರ್ಷದ ಕೊನೆಯಲ್ಲಿ ವಿಜ್ಞಾಪಿಸಿದಂತೆ ಮುದ್ರಣಾಲಯದ ಕೆಲಸಕ್ಕಾಗಿ ಮಾಡಿದ ಸಾಲವು ತೀರಿಸಲ್ಪಡುತ್ತಾ ಬಂದಿದೆ. ಬೊಮ್ಮನ ಹಳ್ಳಿ ಸಾಹುಕಾರರು ಮ. ರಾ. ನೆಲವಿಗಿ ಪ್ರಭವಪ್ಪನವರಲ್ಲಿ ಮಾಡಿದ ಒಂದು ನೂರು ರೂಪಾಯಿಗಳ ಸಾಲವನ್ನು ತೀರಿಸಲಿಕ್ಕೆ ಇನ್ನೂ ಅನುಕೂಲವಾಗಿಲ್ಲ. ಈ ಮುದ್ರಣಾಲಯದ ಕಾರ್ಯಗಳಿಗಾಗಿ ಇದೂ ವರೆವಿಗೆ ಸಹಾಯ ಮಾಡಿದವರೆಲ್ಲರ ಉಪಕಾರವನ್ನು ಬಹಳವಾಗಿ ಸ್ಮರಣೆ ಮಾಡುತ್ತೇವೆ.

ಈ ಮುದ್ರಣಾಲಯದಲ್ಲಿ ಕತ್ತರಿಸುವಯಂತ್ರ (Cutting Press)

ದಾರಿಗಳು ಅಭಿಮಾನವಿಟ್ಟು ಧನವನ್ನು ಕೂಡಿಸಿ ಇದನ್ನು ಸ್ಥಿರವಾಗಿ ಇರುವಂತೆ ಮಾಡುವುದು ಒಳ್ಳೆಯದು.

ಈ ಶಾಲೆಯವರು ೧೮೫೭ ವರ್ಷದಲ್ಲಿ ೫೩೩-೬-೫ ಮಾತ್ರ ಖರ್ಚು ಮಾಡಿರುವದು ಇವರ ಮಿತವ್ಯಯದ ಕರ್ತವ್ಯವನ್ನು ಪ್ರಕಟ ಸುತ್ತದೆ. ಹೀಗೆಯೇ ದರವರ್ಷವೂ ಉತ್ಪನ್ನವನ್ನು ಹೆಚ್ಚುಮಾಡು ತ್ತಾ ಮಿತವ್ಯಯವನ್ನು ಮಾಡುತ್ತಾ ಉಳಿದ ಹಣವನ್ನು ಧನ ಸಿಥಿ ಯಾಗಿ ಏರ್ಪಡಿಸುವುದು ಒಳ್ಳೆಯದು. ಒಟ್ಟಿನಲ್ಲಿ ಯಾವುದೊಂದು ಪಕ್ಷಪಾತಕ್ಕೆ ಅವಕಾಶಕೊಡದೆ ಅಭಿಮಾನದಿಂದ ಕೆಲಸಮಾಡಬೇಕು.

ವೀರಶೈವರ ಸಂಸ್ಕೃತ ಪಾಠಶಾಲೆಗಳಲ್ಲೆಲ್ಲಾ ಅಭ್ಯಾಸವು ಒಂದೇ ವಿಧವಾಗಿರುವುದು ಅವಶ್ಯಕವಾದ್ದರಿಂದ ಹುಬ್ಬಳ್ಳಿಯ ಸಂಸ್ಕೃತ ಕಾಲೇಜಿನ ನಿಯಮದಂತೆ ಇದನ್ನು ನಡೆಸುವವರಾಗಿ ಆ ಕಾಲೇಜಿಗೆ ಶಾಖೆಯಾಗಿ ಇದನ್ನು ಸೇರಿಸಿದರೆ ಅಲ್ಲಿಂದ ಸ್ವಲ್ಪ ಸಹಾಯವನ್ನೂ ಈ ಶಾಲೆಯು ಹೊಂದಬಹುದಾಗಿದೆ.

ಮುಖ್ಯವಾಗಿ ಎಲ್ಲಾ ಶಾಲೆಗಳಲ್ಲಿಯೂ ಒಂದೇ ವಿಧವಾದ ಪಾಠ ಕ್ರಮವಿರುವಂತೆ ಮಾಡುವದಕ್ಕಾಗಿ ವೀರಶೈವ ಮಹನೀಯರು ಬಹು ಬೇಗನೆ ಪ್ರಯತ್ನ ನಡೆಸಬೇಕಾಗಿದೆ.

ಈ ಪಾಠಶಾಲೆಯು ಶ್ರೀ ಕುಮಾರೇಶ್ವರನ ದಯೆಯಿಂದ ಇನ್ನು ಮುಂದೆ ಅತಿಶಯವಾಗಿ ವೃದ್ಧಿಗೆ ಬರಲೆಂದು ಮಹಾದೇವನನ್ನು ಪ್ರಾರ್ಥಿಸುತ್ತೇವೆ.

ಪ್ರಕಾಶಕ.

# ಸದ್ಧರ್ಮ ದೀಪಿಕೆ.

## ಎರಡನೆಯ ವರ್ಷದ ಕೊನೆಯ ವಿಜ್ಞಪ್ತಿ.

---

ಈ ಪತ್ರಿಕೆಯನ್ನು ಓದುವ ಮಹನೀಯರಲ್ಲಿ ವಿಜ್ಞಾಪನೆಗಳು.

ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ ಇವರ ಆಶೀರ್ವಾದ ಬಲದಿಂದ ಆರಂಭಿಸಲ್ಪಟ್ಟ ಈ ಸದ್ಧರ್ಮ ದೀಪಿಕೆಯ ಎರಡು ವರ್ಷದ ಕೊನೆಯನ್ನು ಈ ಸಂಚಿಕೆಗೆ ಕಂಡಂತಾಯಿತು. ಈಗ ಎರಡು ವರ್ಷದ ಹಿಂದೆ ಸುವ ಆರು ಆಶ್ವಯುಜ ಮಾಸದಿಂದ ಕಳು ಹಿಸಲಾರಂಭಿಸಲ್ಪಟ್ಟ ಈ ಪತ್ರಿಕೆಯು ಸ್ವಲ್ಪ ಹೆಚ್ಚು ಕಡಿಮೆ ಈ ವರೆವಿಗೆ ೨೪ ಸಂಚಿಕೆಗಳನ್ನು ಮುಂದೆ ತಂದಿದ್ದಾಗ್ಯೂ ಮೊದಲ ವರ್ಷದ ಚೈತ್ರ ಮಾಸದಿಂದ ಆರಂಭವಾದಂತೆ ಪತ್ರಿಕೆಯಲ್ಲಿ ನಮೂದಿಸಿದ ಪ್ರಕಾರ ಹಿಂ ದಿನ ಸಂಚಿಕೆಗಳನ್ನು ಈ ವರೆವಿಗೂ ಕೂಡಿಸಿಕೊಳ್ಳುವುದು ಆಗಿಲ್ಲ. ಇದ ಕ್ಕೆ ಈಗಿನ ಹಣದ ಪೇಚಾಟದ ಕಾಲದ ದುರ್ದಸೆಯು ಈ ಪತ್ರಿಕೆಗೂ ತಗಲಿ ಇತರ ಕೆಲಸಗಳಿಗೆ ಗಮನ ಕೊಟ್ಟದ್ದೇ ಕಾರಣವಾಗಿದೆ.

ಕಳೆದ ವರ್ಷದ ಕೊನೆಯಲ್ಲಿ ವಿಜ್ಞಾಪಿಸಿದಂತೆ ಮುದ್ರಣಾಲಯದ ಕೆಲಸಕ್ಕಾಗಿ ಮಾಡಿದ ಸಾಲವು ತೀರಿಸಲ್ಪಡುತ್ತಾ ಬಂದಿದೆ. ಬೊಮ್ಮನ ಹಳ್ಳಿ ಸಾಹುಕಾರ್‍ರು ಮ. ರಾ. ನೆಲವಿಗಿ ಪ್ರಭವಪ್ಪನವರಲ್ಲಿ ಮಾಡಿದ ಒಂದು ನೂರು ರೂಪಾಯಿಗಳ ಸಾಲವನ್ನು ತೀರಿಸಲಿಕ್ಕೆ ಇನ್ನೂ ಅನು ಕೂಲವಾಗಿಲ್ಲ. ಈ ಮುದ್ರಣಾಲಯದ ಕಾರ್ಯಗಳಿಗಾಗಿ ಇದೂ ವರೆ ವಿಗೆ ಸಹಾಯ ಮಾಡಿದವರೆಲ್ಲರ ಉಪಕಾರವನ್ನು ಬಹಳವಾಗಿ ಸ್ಮರಣೆ ಮಾಡುತ್ತೇವೆ.

ಈ ಮುದ್ರಣಾಲಯದಲ್ಲಿ ಕತ್ತರಿಸುವಯಂತ್ರ (Cutting Press)

ಮೊದಲಾದ ಕೆಲವು ಸಲಕರಣೆಗಳು ಇಲ್ಲದ ಕೊರತೆಯು ಇನ್ನೂ ಸರಿಪ ಟ್ಟಿಲ್ಲ. ಒಳ್ಳೆಯ ಕಾಗದವಿಲ್ಲ. ಕಾಲ ಕಾಲಕ್ಕೆ ಪತ್ರಿಕೆ ಹೊರಡುವದಿಲ್ಲ. ಇವೆಲ್ಲವೂ ಹಣದ ಕೊರತೆಯಿಂದಲೇ ಎಂಬುದನ್ನು ವಾಚಕರು ಲಕ್ಷ್ಯದಲ್ಲಿ ಇಟ್ಟು ಈ ಸಂಬಂಧದ ಪತ್ರಿಕೆಯಲ್ಲಿನ ನಮ್ಮ ದೋಷಗಳನ್ನು ಮನ್ನಿಸ ಬೇಕೆಂದು ಪ್ರಾರ್ಥಿಸುತ್ತೇವೆ. ಇನ್ನು ಮುಂದೆ ಒಳ್ಳೆಯ ಕಾಗದ ಗಳನ್ನು ಉಪಯೋಗಿಸಬೇಕೆಂದು ನಿರ್ಧರಿಸಿರುವೆವು.

ಇದೂವರೆವಿಗೆ ಪೂರ್ವಿಕರ ಗ್ರಂಥಗಳನ್ನು ಇದ್ದ ರೀತಿಯಲ್ಲಿ ಪ್ರಕಟಕ್ಕೆ ತರುವದರಲ್ಲಿ ಪ್ರಯತ್ನವು ನಡೆದಿತ್ತು. ಈಗಿನ ಕಾಲದ ನಾಗರಿಕತೆಗೆ ತಕ್ಕಂತೆ ತಿಳಿಗನ್ನಡದಲ್ಲಿ ವಚನ ರೂಪವಾಗಿ ಗ್ರಂಥಗಳು ಬೇಕೆಂಬುವ ವಿಷಯವನ್ನು ಆಲೋಚಿಸಿ 'ವೀರಶೈವ ಮೊದಲನೆಯ ಪುಸ್ತಕ' ಎಂಬುದನ್ನು ಮುದ್ರಿಸಲು ಆರಂಭಮಾಡಿ ಇದೆ. ಈ ಪತ್ರಿ ಕೆಯ ಉದ್ದೇಶದಲ್ಲಿ ಮೊದಲು ವಿಜ್ಞಾಪಿಸಿಕೊಂಡಂತೆ ಇದೂವರೆವಿಗೆ ಪ್ರಕ ಟವಾಗದೆ ಇರುವ ಲಿಂಗ ಅಥವಾ ಲಿಂಗಧಾರಣ ಉಪನಿಷತ್ ಮೊದಲಾ ದ ಉಪನಿಷತ್ತುಗಳನ್ನು ಪ್ರಕಟಿಸಲಿಕ್ಕೆ ಪ್ರಯತ್ನವು ನಡೆದಿದೆ. ಇನ್ನೂ 'ಕನ್ನಡ ವಚನರೂಪ ಪದ್ಯರೂಪ ಗ್ರಂಥಗಳು, ಸಂಸ್ಕೃತ ಗ್ರಂಥ ಗಳು ಈ ಎಲ್ಲಬಗೆಯ ಧರ್ಮಗ್ರಂಥಗಳು ಪ್ರಕಟವಾಗಬೇಕಾಗಿದೆ. (ಸಂ ಸ್ಕೃತದ ಗ್ರಂಥಗಳ ಪ್ರಮಾಣವನ್ನು ಬಹಳವಾಗಿ ಅಪೇಕ್ಷಿಸುವವರೂ ಇದ್ದಾರೆ.) ಲಾವಣಿ ಪದಗಳು ಸಣ್ಣ ಸಣ್ಣ ಹಾಡುಗಳು ಇವುಗಳ ಮೂಲಕವಾಗಿಯೂ ಧರ್ಮತತ್ವವು ಪ್ರಚಾರವಾಗಬೇಕು. ಹೆಂಗ ಸರು, ಹುಡುಗರು, ದನಕಾಯುವವರು, ಆದಿಯಾಗಿ ತಮ್ಮ ಕೆಲಸ ಗಳನ್ನು ಮಾಡುವಾಗ ಧರ್ಮಸಂಬಂಧದ ಹಾಡುಗಳು ವಚನಗಳು ಮೊದ ಲಾದವುಗಳನ್ನು ಎಂದುಕೊಳ್ಳುವಂತೆ ಆಗಬೇಕು. ಆರೋಗ್ಯ ವಿಚಾರ ಗಳೂ ನಿಜಗುಣಶಿವಯೋಗಿಗಳ ನಿಜತತ್ವ ಪ್ರಚಾರವೂ ಪ್ರಕಟವಾಗ ಬೇಕು. ಇದಕ್ಕಾಗಿ ಲೇಖಕರ ಸಹಾಯವೂ ಬೇಕು. ಇವಕ್ಕೆಲ್ಲಾ ಅನುಕೂಲವನ್ನು ಮಹಾದೇವನು ಒದಗಿಸಲಿ ಎಂಬದಾಗಿ ಪ್ರಾರ್ಥಿಸು ತ್ತೇವೆ.

ಈ ಮಾಸಪತ್ರಿಕೆಯು ವಾರಪತ್ರಿಕೆಯಾಗಿ ಪರಿಣಮಿಸಿ ಧಾರ್ಮಿಕ

ಸಂಗತಿಗಳು ಬಹಳವಾಗಿ ಪ್ರಚಾರಕ್ಕೆ ಬರಬೇಕೆಂದು ಕೆಲವರು ಅಪೇಕ್ಷಿ
ಸುತ್ತಾರೆ. ಇವೆಲ್ಲಾ ಸಾಮಾನ್ಯ ಕೆಲಸಗಳಲ್ಲ. ಬಹಳ ಹಣದ
ಸಹಾಯದಿಂದ ನಡೆಸಲ್ಪಡತಕ್ಕ ಕೆಲಸಗಳು. ಇಡೀ ವೀರಶೈವ ಸಮಾ
ಜದ ಒಂದು ದ್ರವ್ಯನಿಧಿಯು ಏರ್ಪಾಡಾಗಿ ಅದರ ಉತ್ಪತ್ತಿಯಿಂದ
ಗ್ರಂಥಗಳು ಪತ್ರಿಕೆಗಳು ಮೊದಲಾದವು ಪ್ರಕಟವಾಗುವಂತೆ ಆಗುವುದು
ಅವಶ್ಯಕ. ಈ ಕಡೆಗೆ ಸಮಾಜ ಬಂಧುಗಳು ಹೆಚ್ಚು ಗಮನಕೊಡ
ಬೇಕಾಗಿದೆ. ಅದರೆ ಅನುಕೂಲವು ದೊರೆತ ಹಾಗೆಲ್ಲಾ ಈ ಪತ್ರಿ
ಕೆಯ ಬೆಳವಣಿಗೆಗೆ ಗಮನ ಕೊಡುತ್ತೇವೆ.

ಈ ಪತ್ರಿಕೆಯು ತನ್ನ ಚಂದಾದಾರರ ಬಲದಿಂದಲೇ ತಾನು ನಿಲ್ಲುವ
ಸ್ಥಿತಿಯು ಇನ್ನೂ ಬಂದಿಲ್ಲ. ಹೋದ ವರ್ಷಕ್ಕಿಂತ ಚಂದಾದಾರರ
ಬಲವು ಈ ವರ್ಷ ಹೆಚ್ಚಾಗಿ ತಿರುಗಿರುವುದು. ಆದರೂ ಕೆಲವರು ಹೋದ
ವರ್ಷದ ಚಂದಾದಾರರು ಅನೇಕ ತಿಂಗಳುಗಳ ಪತ್ರಿಕೆಗಳನ್ನು ಸ್ವೀಕರಿ
ಸಿ ನಾವು ಮಾಸಪತ್ರಿಕೆಯ ಮೇಲುಭಾಗದ ಹಾಳೆಯಲ್ಲಿ "ವಿ. ಪಿ. ಕಳು
ಹಿಸಲ್ಪಡುತ್ತದೆ, ಬೇಡವಾದರೆ ಬರೆಯಿರಿ" ಎಂದು ವಿಜ್ಞಾಪನೆ ಮಾಡಿ
ಕೊಂಡಾಗ್ಯೂ ಒಂದು ಕಾರ್ಡನ್ನಾದರೂ ಬರೆಯದೆ ವಿ. ಪಿ. ಯನ್ನು
ವಾಪಸು ಕಳುಹಿಸಿರುತ್ತಾರೆ. ಇದಕ್ಕಾಗಿ ಎಷ್ಟು ವಿಷಾದ ಪಟ್ಟರೂ
ತೀರದು. ಗ್ರಂಥ ಪ್ರಸಾರಣೆಯ ಕೆಲಸಕ್ಕೆ ಪೂರ್ವದಲ್ಲಿ ರಾಜರು
ಶ್ರೀಮಂತರು ಸಾವಿರಾರು ರೂಪಾಯಿಗಳು ಖರ್ಚು ಮಾಡುತ್ತಿದ್ದರು.
ಈಗ ಜನರು ವರ್ಷಕ್ಕೆ ಎರಡುರೂಪಾಯಿಗಳನ್ನು ( ಮಿಕ್ಕ ನಾಲ್ಕಾಣೆ
ಟಪ್ಪಾಲಖರ್ಚಿಗೆ ಹೋಗುತ್ತದೆ) ಧರ್ಮಕ್ಕಾಗಿ ಉಪಯೋಗಿಸಿದೆವೆಂದು
ತಿಳಿದು ಕೊಡಬಹುದಾಗಿದ್ದಾಗ್ಯೂ ಅಂಥಾ ಯೋಚನೆಯು ಬಾರದೆ ಇದ
ದ್ದು ಈ ಸಮಾಜದ ಗ್ರಂಥಗಳ ದುರ್ದೈವವೆಂದ ಭಾವಿಸಬೇಕಾಗಿದೆ.
ಧರ್ಮವು ನಾಶವಾಗುತ್ತಿರುವ ಈ ಕಾಲದಲ್ಲಿ ಒಣಗಿದ ಪೈರಿಗೆ
ಮಳೆ ಬಂದಂತೆ ಧರ್ಮಾಭಿಮಾನಿಗಳ ಸಹಾಯವು ಅತ್ಯವಶ್ಯಕವಾಗಿದೆ.
ಇನ್ನು ಮೇಲಾದರೂ ಸಹಾಯವು ದೊರಕಿ ಇನ್ನೂ ಹೆಚ್ಚು ಗ್ರಂಥಗಳು
ಮುದ್ರಣವಾಗಲಿ ಎಂದು ಬಯಸುವೆವು. ಅನುಕೂಲವು ದೊರೆದಷ್ಟು
ಹೆಚ್ಚಿನ ಕೆಲಸಗಳು ನಡೆಸಲ್ಪಡುತ್ತವೆ, ಎಂಬ ಅಂಶವನ್ನು ದೃಢವಾಗಿ

ಹೇಳುವೆವು.

ಈ ವರ್ಷದಲ್ಲಿ ಪತ್ರಿಕೆಗಳ ಪ್ರಚಾರ ಕಾರ್ಯವನ್ನು ನಡೆಸುವ ಬಗ್ಗೆ ಯಾರಾದರೂ ಮುಂದಾಳುಗಳಾದರೆ ಅವರ ಸಹಾಯವನ್ನು ಹೊಂದಿ ಗ್ರಂಥಗಳನ್ನು ಬರೆಯುವ ಕೆಲಸವೊಂದರಲ್ಲಿಯೇ ಇರಬೇಕೆಂದು ಯೋಚಿಸಿ ಅಂತಹ ಪ್ರಕಟನೆಯನ್ನು ಮಾಡಿದ್ದೆವು. ಆ ಬಗ್ಗೆ ತಕ್ಕ ಅನುಕೂಲವು ಈ ವರೆವಿಗೂ ಆಗಿಲ್ಲ. ಗ್ರಂಥಗಳ ಮುದ್ರಣಕ್ಕೆ ಸಹಾಯವು ದೊರೆದಷ್ಟೂ ಮಾಸಪತ್ರಿಕೆಗಳನ್ನು ಮುದ್ರಿಸಿ ಪ್ರಕಟಿಸುವದಕ್ಕೆ ಅನುಕೂಲವಾಗುತ್ತದೆ. ಆದ್ದರಿಂದ ಈ ಕಡೆಗೆ ಮಹನೀಯರ ದೃಷ್ಟಿಯು ವಿಶೇಷವಾಗಿ ಬೀಳಬೇಕಾಗಿದೆ.

ಈ ಪತ್ರಿಕೆಯ ಓದುಗರು ಲೌಕಿಕ ಕೆಲಸಗಳಂತೆ ಧಾರ್ಮಿಕವೂ ಒಂದು ಕೆಲಸವೆಂದು ತಿಳಿದು ಇವನ್ನು ಓದುವ ಧರ್ಮದ ಕಡೆಗೆ ಗಮನ ಕೊಟ್ಟದ್ದಕ್ಕಾಗಿ ಬಹಳವಾಗಿ ವಂದಿಸುವೆವು.

ಹಿಂದೂದೇಶವು ಧಾರ್ಮಿಕರಾಜ್ಯವೆಂದು ಬಹಳ ಪೂರ್ವದಿಂದಲೂ ಪ್ರಖ್ಯಾತಿಯನ್ನು ಪಡೆದಿರುವಂತೆ ಯಾವಾಗಲೂ ಧರ್ಮದೊಡನೆ ಕೂಡಿದ ರಾಜ್ಯವಾಗಿರಲಿ.



# ಸದ್ಧರ್ಮ ದೀಪಿಕೆ.

ಸಂಚಿಕೆ, ೨೫ ಮತ್ತು ೨೬.

ಪ್ರಕಾಶಕ—ಶ್ರೀ ಚನ್ನಮಲ್ಲಿಕಾರ್ಜುನ.

(ಪ್ರಕಟಿಸಿದ ದಿನ. ವೈಶಾಖ ಶು ೧೫. ಶಕ ೧೮೫೭)



**Registered N0. B. 3050**

ಶ್ರೀಮನ್ನಿರಂಜನವರ್ಯ ಶಿವಬಸವ ಮಹಾಸ್ವಾಮಿಗಳವರ ಹುಕ್ಕೇರಿಮಠ ಹಾವೇರಿಯಲ್ಲಿ ಪ್ರಕಾಶಕರಾದ ಚನ್ನಮಲ್ಲಪ್ಪ ನೂರೊಂದಪ್ಪ ಕೋರಿ ಇವರು ಇದನ್ನು ಪ್ರಕಟಿಸಿದರು. ಸದರಿಯವರು ಇದನ್ನು ಹಾವೇರಿಯ ಶಿವಲಿಂಗ ವಿಜಯ ಮುದ್ರಾಲಯದಲ್ಲಿ ಮುದ್ರಿಸಿದರು.

ವರ್ಷ ೩ ಯುವನಾಮ ಸಂವತ್ಸರ ಚೈತ್ರ, ವೈಶಾಖ.

ವಿಷಯಗಳು ಪುಟ



## ಮುಖ್ಯವಾಗಿ ಓದಿರಿ.

ಮೂರನೆಯ ವರ್ಷದ ಆರಂಭದ ಈ ಸಂಚಿಕೆಗಳನ್ನು ತೆಗೆದುಕೊಂಡ ಚಂದಾದಾರರು ತಮ್ಮ ಚಂದಾ ಹಣವನ್ನು ದಯವಿಟ್ಟು ಮಣಿಯಾರ್ಡರ್ ಮೂಲಕ, ಕಳುಹಿಸಿ ಕೊಡೋಣವಾಗಬೇಕೆಂದು ವಿನಂತಿ. ಈಗಾಗಲೇ ಕೆಲವರು ತಮ್ಮ ಚಂದಾಹಣವನ್ನು ಕಳುಹಿಸಿ ಇರುತ್ತಾರೆ. ಅವರ ಉಪಕಾರವನ್ನು ಬಹಳವಾಗಿ ಸ್ಮರಿಸುತ್ತೇನೆ. ಹಣದ ಅನುಕೂಲತೆಯಿಲ್ಲದಿದ್ದರೆ, ಇಲ್ಲಿ ಮುಂದೆ ಕೆಲಸವು ನಡೆಸಲ್ಪಡುವದಕ್ಕೆ ತೊಂದರೆಯಾಗುತ್ತದೆ, ಎಂಬುದನ್ನು ದಯವಿಟ್ಟು ಲಕ್ಷ್ಯದಲ್ಲಿ ತಂದು ಇದರ ಪ್ರಕಟನಗೆ ಸಹಾಯ ಮಾಡಬೇಕೆಂದು ಪ್ರಾರ್ಥನೆ. ಹಣವು ಬಾರದಿದ್ದರೆ ಮುಂದಿನ ಸಂಚಿಕೆಯು, ವಿ. ಪಿ. ಮೂಲಕ ಕಳುಹಿಸಲ್ಪಡುವದು. ಆ ವಿ. ಪಿ. ಅಂಗೀಕರಿಸಲಿಕ್ಕೆ ಇಷ್ಟವಿಲ್ಲದವರು ದಯವಿಟ್ಟು ಮುಂಚೆಯೇ ತಿಳಿಸಬೇಕೆಂದು ಪ್ರಾರ್ಥನೆ.

ಪ್ರಕಾಶಕ.

# ಮೂರನೆಯ ವರ್ಷದ ಆರಂಭದ ಮುದ್ದು ನುಡಿಗಳು.

ಈ ತಿಂಗಳ ಪುಸ್ತಕದ ಓದುಗರಾದ ಮಹನೀಯರೇ:—

ತಮ್ಮೆಲ್ಲರಲ್ಲಿ ವ್ಯಾಪಿಸಿ ಇರುವ ಶಿವನ ಕೃಪೆಯ ಪ್ರೇರಣೆಯ ಬಲದಿಂದ ಈ ಅಲ್ಪ ಸೇವಕನು ಆರಂಭಿಸಿದ ಕೆಲಸವು ಎರಡು ವರ್ಷಗಳಾಗಿ ಮೂರನೆಯ ವರ್ಷದ ಎರಡು ಸಂಚಿಕೆಗಳು ಈಗ ಹೊರಬಿದ್ದು ತಮ್ಮ ಹಸ್ತಗತವಾಗಿವೆ.

ಇದು ಹಣದ ಉತ್ಪತ್ತಿಯ ಕಾಲವಲ್ಲ, ಮತ್ತು ಧರ್ಮಗ್ರಂಥಗಳನ್ನು ಓದಬೇಕೆಂದು ಬಯಸುವವರೂ ಬಹಳವಾಗಿ ಇಲ್ಲ. ಇಂತಹ ಕಾಲದಲ್ಲಿ ಇದು ತಲೆಎತ್ತಿ ಕೆಲಸ ಮಾಡುತ್ತಿರುವುದು ಬಹು ಕಷ್ಟಸಾಧ್ಯದ ಕಾರ್ಯವೆಂಬುದು ತಮಗೆ ತಿಳಿಯದೆ ಇರತಕ್ಕ ಅಂಶವಲ್ಲ.

ಎರಡನೆಯ ವರ್ಷದ ಸಂಚಿಕೆಗಳು ಬಹಳ ವಿಳಂಬವಾಗಿ ಹೊರಟವೆಂಬುದು ಆಕ್ಷೇಪಣೀಯವಾದ ಅಂಶವಾದರೂ ಚಂದಾದಾರರ ಸಂಖ್ಯೆಯು ಬೆಳೆಯದೆ ಇರುವುದರಿಂದಲೂ ವೆಚ್ಚದ ಹಣದ ಉತ್ಪತ್ತಿಗಾಗಿ ಇತರ ಕೆಲಸಗಳ ಕಡೆಗೆ ಗಮನ ಕೊಡುವುದಕ್ಕೆ ಪ್ರಕಾಶಕನ ವೇಳೆಯು ವೆಚ್ಚವಾಗುತ್ತಾ ಬಂದದ್ದರಿಂದಲೂ ಮಂದ ಮಂದವಾಗಿ ಧರ್ಮಗ್ರಂಥಗಳ ಪ್ರಕಟನೆಯು ನಡೆದಿದೆ. ಇಂತಹ ಕಾಲದಲ್ಲಿ ಇದು ಹೀಗೆಯೇ ನಡೆಯುವುದು ಉತ್ತಮವೆಂದು ತೋರುವುದರಿಂದಲೂ ವ್ಯಾವಹಾರಿಕ ಸುದ್ದಿಗಳಂತೆ ಈ ಹೊತ್ತಿನಿಂದ ನಾಳೆಗೆ ಬದಲಾಯಿಸುವ ವಿಷಯಗಳೇನೂ ಇದರಲ್ಲಿ ಇಲ್ಲದೆ ಪೂರ್ವಿಕರ ಧರ್ಮ ಪದ್ಧತಿಯನ್ನು ತಿಳಿಯುವ ಪರಿಶೋಧನಾ ಕಾರ್ಯ-(Research work) ಆಗಿರುವುದರಿಂದಲೂ ಇದರಲ್ಲಿನ ಧರ್ಮಗ್ರಂಥಗಳು ಸಾವಕಾಶವಾಗಿ ಪ್ರಕಟವಾದರೂ ನೂರಾರು ವರ್ಷಗಳಿಂದ ನಡೆಯದೆ ಇದ್ದ ಕಾರ್ಯವು ಕೆಲವು ತಿಂಗಳ ಸಾವಕಾಶದಲ್ಲಿ ನಡೆಯುವುದೆಂಬ ಅಭಿಪ್ರಾಯವನ್ನು ಮನಸ್ಸಿಗೆ ತಂದು ಒಟ್ಟಿನಲ್ಲಿ ೧೨ ಸಂಚಿಕೆಗಳಾದರೆ ಒಂದು ವರ್ಷವೆಂಬ ಅಭಿಮಾನವನ್ನು ವಹಿಸಿ ಈ ಪತ್ರಿಕೆಗೆ ಉದಾರಾಶ್ರಯವನ್ನು ಕೊಡುವಿರೆಂದು ಪ್ರಾರ್ಥಿಸುತ್ತೇನೆ.

ಹೀಗೆ ತಮ್ಮನ್ನು ಪ್ರಾರ್ಥಿಸಿಕೊಂಡಾಗ್ಯೂ ಎರಡೆರಡು ತಿಂಗಳ ಸಂಚಿಕೆಗಳನ್ನಾದರೂ ಇನ್ನು ಮುಂದೆ ಬೇಗನೆ ಹೊರಡಿಸಿ ಹಿಂದೆ ಬಿದ್ದ ಕಾರ್ಯವನ್ನು ಸಮಗೂಡಿಸಬೇಕೆಂಬ ಪ್ರಕಾಶಕನ ಲವಲವಿಕೆ ತಪ್ಪಿದುದಲ್ಲ.

ಇವರಲ್ಲಿ ಪ್ರಕಟವಾಗುತ್ತಿರುವ ಗ್ರಂಥಗಳಲ್ಲಿ ಹಿಂದೆ ಮುದ್ರಣದ ಮುಖವನ್ನೇ ಕಾಣದಿರುವವುಗಳೇ ಬಹಳ. ಒಂದೆರಡು ಹಿಂದೆ ಕಂಡಿದ್ದರೂ ಅನುಭಾವಿಗಳಲ್ಲದವರ ಕೈಗೆ ಸಿಕ್ಕು ಮೆಣಸು ಜೀರಿಗೆ ಎಂಬವುಗಳನ್ನು ಮೋಣ ಸೂಜಿ ರಾಗಿ ಎಂದು ತಿಳಿವಂತೆ ಮುದ್ರಿಸಿದವುಗಳಾಗಿವೆ. ಎಷ್ಟು ಅನುಭವವನ್ನು ಹೊಂದಿದಾಗ್ಯೂ ಇನ್ನೂ ತಿಳಿದುಕೊಳ್ಳತಕ್ಕ ಅಂಶಗಳು ಲೆಕ್ಕವಿಲ್ಲದಷ್ಟು ಇವೆ ಎಂದು ನಿನ್ನೆ ಮೊನ್ನೆ ನೋಡಿದ ಕೆಲವು ಪೂರ್ವಿಕರ ಗ್ರಂಥಗಳ ಉದಾಹರಣೆಯಿಂದ ತಿಳಿದು ಬರುತ್ತದೆ. ಆದ್ದರಿಂದ ಒಂದೊಂದಾಗಿ ಪೂರ್ವಿಕ ಗ್ರಂಥಗಳ ಪ್ರಕಟನೆಯನ್ನು ಮಾಡಬೇಕಾದುದು ಅತ್ಯವಶ್ಯಕವೂ ಅಮೋಘವೂ ಆದ ಕಾರ್ಯವೆಂಬುದುದನ್ನು ಸರ್ವರೂ ಅಂಗೀಕರಿಸಬೇಕಾಗಿದೆ. ಮತ್ತು ಶುದ್ಧರೀತಿಯಲ್ಲಿ ಪ್ರಕಟವಾಗುವದರ ಕಡೆಗೂ ಗಮನ ಕೊಡಬೇಕಾಗಿದೆ.

ಪೂರ್ವಿಕರು ಆತ್ಮನ ( ತಮ್ಮ ಪರಿಶುದ್ಧನಾದ ಜೀವನ ) ಉನ್ನತಿಗಾಗಿ ಮಾಡಿದ ಸಾಹಸಗಳೂ ಬರೆದ ಬರೆವಣಿಗೆಗಳೂ ಈಗಿನ ಜನರಿಂದ ಮರೆಯಲ್ಪಡತಕ್ಕವುಗಳೂ ಅಲಕ್ಷ್ಯ ಮಾಡಲ್ಪಡತಕ್ಕವುಗಳೂ ಆಗಿಲ್ಲ. ಈಗಿನ ಕಾಲದಲ್ಲಿ ದ್ರವ್ಯವನ್ನು ಸಂಪಾದಿಸುವುದಕ್ಕೆ ಅಥವಾ ಕೆಲಸ ಮಾಡುವುದಕ್ಕೆ ತಕ್ಕ ಉಪಾಯಗಳನ್ನು ಬೋಧಿಸುವ ಗ್ರಂಥಗಳಾಗಬೇಕೆಂದು ಅನೇಕರು ಬಯಸುತ್ತಿದ್ದರೂ ಅವುಗಳ ಜೊತೆಯಲ್ಲಿ ತಮ್ಮ ಅಂತರಾತ್ಮನ ತಿದ್ದುಪಡಿ ಮಾಡುವ ಕಾರ್ಯಗಳನ್ನು ಮಾಡದೆ ಇದ್ದರೆ ಮನುಷ್ಯನು ಹುಟ್ಟಿದುದಕ್ಕೆ ಸಾಧಕವಾದ ಕೆಲಸವನ್ನು ಮಾಡಿದಂತಾಗುವುದಿಲ್ಲ. ಒಂದು ಸಾವಿರ ರೂಪಾಯಿಯನ್ನು ಗಳಿಸುವ ಸಾಮರ್ಥ್ಯವನ್ನು ಹೊಂದಿದರೂ ಒಂದು ಸುಳ್ಳು ಹೇಳುವುದು ಯೋಗ್ಯವೆಂದು ತಿಳಿದರೆ ಆ ದ್ರವ್ಯ ಸಂಪಾದನೆಯು ವ್ಯರ್ಥವೇ ಸರಿ.

ಈಗಿನ ಶಾಸ್ತ್ರಜ್ಞರು ರಚಿಸುವ ಗ್ರಂಥಗಳಲ್ಲಿ ಮನುಷ್ಯನಿಗೆ ಹೊರಗಿನಿಂದ ದೊರಕತಕ್ಕ ಸುಖವನ್ನು ಹೆಚ್ಚಿಸುವುದರಲ್ಲಿ ಪ್ರಯತ್ನ

ಮಾಡುವವುಗಳೇ ಬಹಳ. ಪೂರ್ವದವರು ರಚಿಸಿದ ಗ್ರಂಥಗಳಲ್ಲಿ ಮನುಷ್ಯನು ತನ್ನ ಮನಸ್ಸನ್ನು ತನ್ನ ಗುಣವೇ ಮೊದಲಾದವುಗಳನ್ನು ತಿದ್ದುವುದಕ್ಕೆ ಬೇಕಾದ ಮಹಾದೇವನ ಸಂಬಂಧದ ಜ್ಞಾನವನ್ನು ಉಂಟು ಮಾಡುವವುಗಳೇ ಬಹಳ. ಈಗ ಎರಡರ ಕಡೆಗೂ ಗಮನ ಕೊಡದಿದ್ದರೆ ಮನುಷ್ಯನ ಬಾಳು ಬೆಲೆಯುಳ್ಳದಾಗುವುದಿಲ್ಲ.

ಈವರ್ಷ ಈ ಮಾಸಪತ್ರಿಕೆಗೆ ಒಳ್ಳೆಯ ಕಾಗದಗಳನ್ನೇ ಉಪಯೋಗಿಸಬೇಕೆಂದು ಯೋಚಿಸಿಇದೆ ಎಂದು ಹಿಂದೆ ವಿಜ್ಞಾಪಿಸಿದಂತೆ ಈ ಸಂಚಿಕೆಯಲ್ಲಿ ಈ ವಿಷಯುವನ್ನು ಒಳ್ಳೆಯಕಾಗದವನ್ನೇ ಉಪಯೋಗಿಸಿ ಮುದ್ರಣ ಮಾಡಿ ಇರುತ್ತದೆ. ಮುಂದೆ ಇದೇ ಕಾಗದವನ್ನೇ ಎಲ್ಲಾ ವಿಷಯಗಳಿಗೂ ಉಪಯೋಗಿಸಲು ಏರ್ಪಡಿಸಿರುತ್ತದೆ: ಉತ್ತಮವಾದ ರಟ್ಟು (Cover) ಹಾಕಬೇಕೆಂದೂ ಯೋಚಿಸಿ ಇರುತ್ತದೆ. ಆದರೂ ವಾರ್ಷಿಕ ಚಂದಾದರವನ್ನೇನೂ ಹೆಚ್ಚಿಸಿ ಇರುವದಿಲ್ಲ ಮೊದಲಿನಂತೆ ಒಂದು ವರ್ಷಕ್ಕೆ ಟಪಾಲು ಖರ್ಚುಸಹಿತ್ಕೆ ಎರಡು ರೂಪಾಯಿ ನಾಲ್ಕಾಣೆಯನ್ನು ಕೊಡುವುದು ಹೆಚ್ಚಿನ ಬೆಲೆಯಲ್ಲ, ಎಂಬ ಅಂಶವನ್ನು ಗಮನಕ್ಕೆ ತಂದು ಹೆಚ್ಚು ಚಂದಾದಾರರಾಗಲು ಪ್ರೋತ್ಸಾಹ ಕೊಡಬೇಕೆಂದು ಈ ಬಡಸೇವಕನು ಪ್ರಾರ್ಥಿಸುತ್ತಾನೆ.

ಓಲೆಯಗರಿಯ ಪ್ರತಿಗಳಲ್ಲಿ ವೀರಶೈವರ ಸಂಸ್ಕೃತ ಗ್ರಂಥಗಳು ಸಿಕ್ಕುತ್ತವೆ. ಕೆಲವು ಉಪಸಿಷತ್ತುಗಳೂ ದೊರೆತಿವೆ ಇಂತಹವುಗಳನ್ನು ದೇವನಾಗರಿಯಲ್ಲಿ ಮುದ್ರಿಸುವುದೂ ಅವಶ್ಯಕವಾದ ಕಾರ್ಯವು. ಇಂತಹ ಗ್ರಂಥ ಪ್ರಚಾರಕ ಕಾರ್ಯಕ್ಕಾಗಿಯೇ ಒಂದು ಸಂಘವೂ ಇದಕ್ಕಾಗಿಯೇ ಒಂದು ದ್ರವ್ಯ ನಿಧಿಯೂ ಇದ್ದು ಈ ಕೆಲಸಗಳು ನಿತ್ಯವಾಗಿ ನಡೆಯುವಂತೆ ಆಗಬೇಕೆಂದು ಸಮಾಜದವರು ಬಹಳ ಬೇಗನೆ ಪ್ರಯತ್ನ ನಡೆಸಬೇಕಾಗಿದೆ. ಈಗಿನ ಪ್ರಾಪಂಚಿಕ ಕಾರ್ಯಗಳ ಪ್ರಗತಿಯು ಎಷ್ಟು ಮುಂದಾಗಿ ಇರುವುದೋ ಅದರಂತೆ ಧಾರ್ಮಿಕ ಪ್ರಗತಿಯೂ ಆಗಬೇಕಾಗಿದೆ, ಹಾಗೆ ಆಗುವ ವೇಳೆಯಲ್ಲಿ ನಮ್ಮ ಧಾರ್ಮಿಕ ಗ್ರಂಥಗಳ ಕಡೆಗೆ ನಾವು ಲಕ್ಷ್ಯಕೊಡದೆ ಪ್ರಗತಿಗೆ ಸಿದ್ಧವಾಗಿ ಕೂಡುವುದು ಅನ್ಯಾಯದ ಕೆಲಸ. ಈಗಿನ ಸ್ವಾತಂತ್ರ್ಯಾಪೇಕ್ಷೆಯ ಜನರು ಧರ್ಮವು ಎಷ್ಟು ಮಟ್ಟಿಗೆ ತಮಗೆ ಅನುಕೂಲವಾಗಿ ಇರಬೇಕೆಂದು ಯೋಚಿಸುವರೋ

ಅಷ್ಟು ಮಟ್ಟಿಗೆ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಸ್ವಾತಂತ್ರ್ಯವನ್ನು ಅನುಭವಿಸುವ ತೆರದಲ್ಲಿ ವೀರಶೈವ ಧರ್ಮದ ಕಟ್ಟಳೆಗಳಿವೆ. ಎಂಬುವು ಜನರ ಮನಸ್ಸಿಗೆ ತಿಳಿಯುವಂತೆ ಆಗಿಲ್ಲ. ಆದ್ದರಿಂದ ವೇದದ ನಂಬುಗೆಯುಳ್ಳವರಿಗೂ ಸ್ಮೃತಿಯ ಆಚರಣೆಯನ್ನು ನಡೆಸುವವರಿಗೂ ಪುರಾಣದ ಕಥೆಗಳನ್ನು ಕೇಳುವವರಿಗೂ ಪಾಶ್ಚಾತ್ಯ ದೇಶಗಳ ನಾಗರಿಕತೆಯನ್ನು ಬಯಸುವವರಿಗೂ ಅನುಕೂಲವಾಗುವಂತೆ ಹಿಂದೂ ಮತದ ಕಟ್ಟಳೆಗಳು ಯಾವವು ಇವೆ ಎಂಬುದನ್ನು ತೋರಿಸಬೇಕಾದರೆ ನಾವು ಇನ್ನೂ ಸಂಶೋಧನೆ ಮಾಡಿ ಪೂರ್ವಗ್ರಂಥಗಳನ್ನು ಬಯಲಿಗೆ ತರಬೇಕಾಗಿದೆ. ಈ ಕೆಲಸವನ್ನು ವೀರಶೈವಸಮಾಜದವರು ಬಹು ಬೇಗನೆ ಕೈಗೊಳ್ಳುವರೆಂದು ಮತ್ತೊಮ್ಮೆ ಬೇಡಿಕೊಂಡು ಈ ವರ್ಷಾರಂಭದ ಮುದ್ದು ನುಡಿಗಳನ್ನು ಮುಗಿಸಬೇಕಾಗಿದೆ.

ಪ್ರಕಾಶಕ.



# ವೀರಶೈವ ಗ್ರಂಥಗಳ ನಿರ್ಣಯ.

[ ಲೇಖಕ:—ಜೀರಿಗೆ ಬಸವಲಿಂಗಪ್ಪ ]

ಸದ್ಧರ್ಮ ಪ್ರದೀಪಿಕೆಯಲ್ಲಿ ನೀವು ಪ್ರಕಟಿಸುತ್ತಿರುವ ಲಿಂಗಧಾರಣೋಪನಿಷತ್ತೆಂಬ ಗ್ರಂಥವನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ವೀರಶೈವರಲ್ಲಿ ವೇದಾಗಮೋಪನಿಷತ್ಪುರಾಣೇತಿಹಾಸ ಪ್ರತಿಪಾದಿತವಾದ ವೀರಶೈವವೆಂದು ಬರೆದುಕೊಳ್ಳುವ ವಾಡಿಕೆಯುಂಟು. ವೇದಾಗಮ ಮೊದಲಾದವುಗಳು ಸಾರ್ವತ್ರಿಕವಾದವುಗಳು. ಅವನ್ನು ಯಾರಾದರೂ ತಮ್ಮದೇ ಎಂದು ಹೇಳುವದಕ್ಕೆ ಆಗುವದಿಲ್ಲ.-(ಆದರೆ) ವೇದಗಳು ಸಾಧಾರಣವಾಗಿ ಬ್ರಾಹ್ಮಣರ ಗ್ರಂಥಗಳಾಗಿರುತ್ತವೆ. ಶಿವಾಗಮಗಳೆಂಬವು ಸಾಧಾರಣವಾಗಿ ಶೈವರ ಗ್ರಂಥಗಳಾಗಿರುತ್ತವೆ. ಪುರಾಣಗಳೆಂಬವು ಪಣ್ಮತಗಳ ಗ್ರಂಥಗಳಾಗಿರುತ್ತವೆ. ಇದರಲ್ಲಿ ವೀರಶೈವರೆಂಬ ಪ್ರಸಿದ್ಧ ಮತದವರ ಸ್ವಂತ ಗ್ರಂಥಗಳೇನಾದರೂ ಉಂಟೋ ಎಂಬ ಪ್ರಶ್ನೆ ಬರುತ್ತದೆ.—ವೀರಶೈವರೆಂಬವರು ಸ್ವಂತವಾಗಿ ಯಾವ ಗ್ರಂಥಗಳನ್ನೂ ಉಂಟಾಗಿರುವದಿಲ್ಲವೇ? ಭವಿ ಭಕ್ತ ಎಂಬ ಭೇದಗಳನ್ನು ಹೇಳುತ್ತಾರೆ. ವೀರಶೈವವು ಅಪ್ರಾಕೃತ ಶಿವಸೃಷ್ಟಿ ಎಂತಲೂ, ಇತರ ಬ್ರಾಹ್ಮಣಾದಿಗಳೆಲ್ಲವೂ ಪ್ರಾಕೃತ ಬ್ರಹ್ಮಸೃಷ್ಟಿ ಎಂತಲೂ ಬರೆದುಕೊಳ್ಳುತ್ತಾರೆ. ಹೀಗೆ ಪ್ರಪಂಚವನ್ನೇ ಎರಡು ಭಾಗಮಾಡಿ ತಾವು ಒಂದು ಭಾಗಕ್ಕೆ ಸೇರಿದವರೆಂದು ಹೇಳುವ ವೀರಶೈವರು ಸ್ವತಂತ್ರರಲ್ಲವೇ? ಈಗಿನ ರಾಜಕೀಯ ವಾತಾವರಣ, ರಾಷ್ಟ್ರೀಯ ವಾತಾವರಣಗಳಲ್ಲಿ ಸ್ವತಂತ್ರತೆಯನ್ನು ಹೇಳಕೂಡದೆಂದು ಹೇಳಿದರೆ, ವಾತಾವರಣಕ್ಕನುಸರಿಸಿ ಆದ್ಯ ವೀರಶೈವರ ಉದ್ದಿಶ್ಯವನ್ನೂ ತತ್ವವನ್ನೂ ರೂಪಾಂತರ ಮಾಡುತ್ತಾ ಹೋಗುತ್ತೀರಾ ಹೇಗೆ? ಆದ್ಯವೀರಶೈವರ ಮತವು ವಾತಾವರಣಕ್ಕೋಸ್ಕರವಿರುತ್ತದೆಯೋ? ವಾತಾವರಣವು ಮತದ ವಿಚಾರದಲ್ಲಿ ಗಣಿಸಲ್ಪಡಕೂಡದ್ದಾಗಿರುತ್ತದೋ? ವೀರಶೈವರ ಸ್ವಂತ ಆಸ್ತಿಗಳಾವವೆಂಬುದನ್ನು ನಿರ್ಣಯಿಸಿ ಗಟ್ಟಿಮಾಡಬೇಕಾಗಿರುತ್ತದೆ. ಮತಸಂಬಂಧದ ಮಟ್ಟಿಗೆ ವಾತಾವರಣವನ್ನು ಅಂಟಿಸಿಕೊಳ್ಳದೆ ಕೆಲಸ

ಮಾಡಬೇಕಾಗುತ್ತದೆ. ಯಾವುದೋ ಒಂದುವಿಧದ ಶುಷ್ಕ ಗೌರವಗಳಿಗೋ ಸ್ಕರ ಸತ್ಯವನ್ನು ಹಿಂದಕ್ಕೆ ತಳ್ಳಿ ನಾವು ಮುಂದುವರಿಯುತ್ತಾ ಹೋದರೆ, ಖಂಡಿತವಾಗಿ ನಮ್ಮ ಸಮಾಜವು ನಿರ್ನಾಮವಾಗಿ ಹೋಗುವದೆಂಬ ಕಾಲಜ್ಞಾನವು ನನಗೆ ಚೆನ್ನಾಗಿ ಮುಂದಟ್ಟಾಗುತ್ತಾ ಇದೆ.

ಸತ್ಯ ವಿಚಾರವೇನು? ವೀರಶೈವವು ಸ್ವತಂತ್ರ ಮತವು ಅಹುದೇ ಅಲ್ಲವೆ? ವೀರಶೈವಕ್ಕೆ ಸ್ವತಂತ್ರ ಗ್ರಂಥಗಳುಂಟೇ ಇಲ್ಲವೇ ಎಂಬುದನ್ನು ನಾನು ಸತ್ಯಾಧಾರದ ಮೇಲೆ ಈಗ ಕೈಲಾದ ಮಟ್ಟಿಗೆ ಹೇಳುತ್ತೇನೆ. ಬಸವಾದಿ ಪ್ರಮಥರ ವಚನಗಳು ವೀರಶೈವಕ್ಕೆ ಸ್ವತಂತ್ರ ಗ್ರಂಥಗಳೆಂಬುದು ಜಗತ್ತಿಗೆ ಗೊತ್ತಾದ ಸಂಗತಿಯಾಗಿರುತ್ತದೆ. ಇದರಂತೆ ಆಗಮಗಳು ಸ್ವತಂತ್ರ ಗ್ರಂಥಗಳೆಂದು ಹೇಳಬೇಕಾಗಿದೆ. ಆದರೆ ಆಗಮಗಳಲ್ಲಿ ವಿಂಗಡಿಸಬೇಕಾಗಿರುತ್ತದೆ. ಏತಕ್ಕೆಂದರೆ ಶೈವ ವಿಷಯಗಳನ್ನು ಹೇಳುವ ಆಗಮಗಳು ಎಷ್ಟು ಮಾತ್ರಕ್ಕೂ ವೀರಶೈವಕ್ಕೆ ಸಂಬಂಧಿಸುವದಿಲ್ಲ. ವೀರಶೈವಾಗಮಗಳೇ ಬೇರೆ, ವೀರಶೈವ ವಿಚಾರಗಳನ್ನು ಹೇಳುವ ಆಗಮಗಳು ಬೇರೆ ಎಂದು ಎಣಿಸಬೇಕಾಗಿರುತ್ತದೆ. ಆಗಮಗಳ ಸಮುದಾಯದಲ್ಲಿ ವೀರಶೈವಾಗಮಗಳು ಸೇರಿಸಲ್ಪಟ್ಟಿದ್ದಾಗ್ಯೂ ಇವುಗಳು ಪ್ರತ್ಯೇಕವೆಂಬುದು ಆಗಮಗಳನ್ನು ಪೂರ್ವಾಂಗಗಳೆಂದೂ ಉತ್ತರಾಂಗಗಳೆಂದೂ ಸಿದ್ಧಾಂತ ಶಿಖಾಮಣ್ಯಾದಿ ಗ್ರಂಥಗಳಲ್ಲಿ ಪ್ರತ್ಯೇಕಿಸಿರುವದರಲ್ಲೇ ಗೊತ್ತಾಗುತ್ತದೆ. ಸ್ಕಾಂದಾದಿ ಎಲ್ಲಾ ಪುರಾಣಗಳ ಮಾತೂ ಹೀಗೆಯೇ ಆಗಿರುತ್ತದೆ. ಹದಿನೆಂಟು ಪುರಾಣಗಳೊಳಗೆಲ್ಲಾ ಶಂಕರಸಂಹಿತೆಯೊಂದೇ ವೀರಶೈವದ್ದಾಗಿರುತ್ತದೆ. ಇನ್ನು ಉಪನಿಷತ್ತುಗಳು ಸಾರ್ವತ್ರಿಕವಾದ ಜ್ಞಾನವಿಚಾರದ ಮಟ್ಟಿಗೆ ವೀರಶೈವರು ಸಮ್ಮತಿಪಡುವಂತಿದ್ದರೂ ವೀರಶೈವರ ಲಿಂಗಧಾರಣದ ಮಟ್ಟಿಗೂ ಷಟ್‌ಸ್ಥಲದಮಟ್ಟಿಗೂ ಅವುಗಳು ವೀರಶೈವರ ಸ್ವತಂತ್ರ ಗ್ರಂಥಗಳಾಗುವದಿಲ್ಲ. ವೇದದ ವಿಚಾರದಲ್ಲಂತೂ ಬಸವೇಶ್ವರನು ಪರಮಾತ್ಮನು ಒಬ್ಬನು, ಪರಮಾತ್ಮನು ಸರ್ವಾಂತರ್ಯಾಮಿ, ಎಂಬ ವೇದದ ಉತ್ತರ ಭಾಗದ ಮಟ್ಟಿಗೆ ಒಪ್ಪಿರುತ್ತಾನೆಯೇ ಹೊರತು ಉಳಿದ ಎಲ್ಲ ಭಾಗವನ್ನೂ ತೀಕ್ಷ್ಣವಾಗಿ ನಿರಾಕರಿಸಿರುತ್ತಾನೆ. ವೇದವು ವೀರ

ಶೈವರ ಸ್ವತಂತ್ರ ಗ್ರಂಥವಲ್ಲ.

ಉಪನಿಷತ್ತುಗಳ ವಿಚಾರದಲ್ಲಿ ವೀರಶೈವರ ಸ್ವತಂತ್ರ ಗ್ರಂಥವೆನ್ನಬಹುದಾದ ಲಿಂಗಧಾರಣೋಪನಿಷತ್ತನ್ನು ಈಗ ನೀವು ಪ್ರಕಟಿಸಿರುತ್ತೀರಿ, ಇದು ಬಹಳ ಒಳ್ಳೆಯದಾಯಿತು. ಇದೂ ಅಲ್ಲದೆ ಪಂಚಾಚಾರ್ಯರ ಉತ್ಪತ್ತಿಯನ್ನು ಹೇಳುವ ವೀರಲೈಂಗ್ಯೋಪನಿಷತ್ತೆಂಬುದೊಂದಿರುತ್ತದೆ. ಇದೊಂದು ವೀರಶೈವರ ಸ್ವತಂತ್ರ ಗ್ರಂಥವೆನ್ನಬಹುದು. ಅಂತೂ ಈಗ ನಾನು ಮೇಲೆ ಹೇಳಿದ ವಿಚಾರದಿಂದ ವೀರಶೈವರಿಗೆ ಸ್ವತಂತ್ರ ಗ್ರಂಥಗಳು ಸ್ವಾಭಾವಿಕವಾಗಿ ಇದೆ ಎಂದು ತಿಳಿದಹಾಗಾಯಿತು. ಆಗಮಗಳ ವಿಚಾರದಲ್ಲಿ ಮೊಗ್ಗೆಮಾಯಿದೇವರು, ಗುಬ್ಬಿಮಲ್ಲಣಾರ್ಯರು ಮೊದಲಾದವರು ವೀರಶೈವರಿಗೆ ಸಂಬಂಧಪಟ್ಟ ಆಗಮಗಳನ್ನು ವೀರಶಿವಾಗಮಗಳೆಂದು ಕರೆದಿರುತ್ತಾರೆ. ಆದುದರಿಂದ ವೀರಶೈವರ ಸ್ವತಂತ್ರ ಗ್ರಂಥಗಳನ್ನು ಪ್ರಕೃತಕಾಲದಲ್ಲಿ ನಿರ್ಣಯಮಾಡಿ ವೀರಶೈವಧರ್ಮಕ್ಕೆ ಮಹೋಪಕಾರ ಮಾಡಬೇಕಾಗಿರುತ್ತದೆ. ಈ ಸ್ವತಂತ್ರ ಗ್ರಂಥಗಳು ಕಾಲದಲ್ಲಿ ಹಿಂದು ಮುಂದಾಗಿರಬಹುದು. ಕಾಲವು ಗಣನೀಯವಾದದ್ದಲ್ಲ. ನಮ್ಮ ಸ್ವಾಸ್ಥ್ಯವೆಂಬುದು ಗಣನೀಯವಾದದ್ದು.

ಈಗ ಮಾಡಬೇಕಾದ್ದೇನೆಂದರೆ—ಲಿಂಗಧಾರಣೋಪನಿಷತ್ತು, ವೀರಲೈಂಗ್ಯೋಪನಿಷತ್ತು, ಲಿಂಗಧಾರಣ ಚಂದ್ರಿಕೆ, ಪುರಾಣಾಂತರ್ಗತ ಶಂಕರ ಸಂಹಿತೆ, ವೀರಶಿವಾಗಮ, ಬಸವಾದಿ ಪ್ರಮಥರ ವಚನಗಳು ಮತ್ತು ಈಚಿನ ಅನಂತ ಗ್ರಂಥಗಳು ಇವುಗಳನ್ನು ವೀರಶೈವ ಗ್ರಂಥಗಳೆಂದು ಗೊತ್ತು ಮಾಡಿ ಒತ್ತಟ್ಟಿಗೆ ಬೇರೆ ಮುದ್ರಣ ಮಾಡಿಸಿ ವೀರಶೈವಮತ ವಿದ್ಯಾಪರೀಕ್ಷೆ ಎಂಬ ವಾರ್ಷಿಕ ಪರೀಕ್ಷೆಯನ್ನು ಗೊತ್ತುಮಾಡಿ ಅದರಲ್ಲಿ ವೀರಶೈವ ಸಂಸ್ಕೃತ ಮತ್ತು ಕನ್ನಡ ವಿದ್ಯಾರ್ಥಿಗಳು ತೇರ್ಗಡೆ ಹೊಂದುವಂತೆ ಮಾಡಬೇಕು.

---

# ( ಪ್ರಕಾಶಕನ ಟಿಪ್ಪಣಿ. )

## ( ಮ. ರಾ ಜೀಗಿಗೆ ಬಸವಲಿಂಗಪ್ಪನವರು )

ಈ ಮಹನೀಯರು ವೀರಶೈವರು ಸ್ವತಂತ್ರರು ಎಂಬುದು ಜನಸಾಮಾನ್ಯಕ್ಕೂ ತಿಳಿಯಬೇಕೆಂದು ಅಪೇಕ್ಷಿಸುತ್ತಾರೆ. ಇದು ಬಹಳ ಉತ್ತಮವಾದ ಅಭಿಪ್ರಾಯವು. ಈಗಿನ ಹಿಂದೂ ಜನಾಂಗದಲ್ಲಿ ಪೂರ್ವಿಕರು ಹೊಂದಿದ ಅಭಿಪ್ರಾಯಗಳಲ್ಲಿ ಅತ್ಯಂತ ಉತ್ತಮವಾದವುಗಳನ್ನು ಅನುಸರಿಸಿ ತೋರಿಸತಕ್ಕವರೇ ವೀರಶೈವರು. ವೀರಶೈವರು ಯಾವ ಧ್ಯೇಯಗಳನ್ನಿಟ್ಟುಕೊಂಡು ನಡೆಯುವರೋ ಆ ಧ್ಯೇಯಗಳೇ ಉಪನಿಷತ್ತುಗಳಲ್ಲಿಯೂ ತೋರಿ ಬರುತ್ತವೆ ಎಂಬುದಕ್ಕೆ 'ಜಾಗದ್ವೈತ ನಿರಸನತ್ರಿವಿಧಿ' ಎಂಬ ಕನ್ನಡ ಗ್ರಂಥದಲ್ಲಿ ಕೊಡಲ್ಪಡುತ್ತಿರುವ ಉಪನಿಷತ್ತಿನ ಪ್ರಮಾಣಗಳೇ ಸಾಕ್ಷಿಯಾಗಿ ಇವೆ. ಆದ್ದರಿಂದ ಹಿಂದೂ ಜನಾಂಗದಲ್ಲಿಯೇ ವೀರಶೈವವು ಹೆಚ್ಚು ಸ್ವಾತಂತ್ರ್ಯವುಳ್ಳದು. ಈಗಿನ ಇದರ ಅನುಯಾಯಿಗಳು ಈ ವಿಷಯವನ್ನು ತಿಳಿಯದೆ ಇನ್ನೊಬ್ಬರನ್ನು ಧಾರ್ಮಿಕ ವಿಷಯದಲ್ಲಿ ಅವಲಂಬಿಸುತ್ತಾ ಇರುವುದು ವಿಷಾದ ಪಡತಕ್ಕ ಸಂಗತಿಯಾಗಿದೆ.

ವೇದಗಳು ಉಪನಿಷತ್ತುಗಳು ಆಗಮಗಳು ಮೊದಲಾದವು ಸಾಮಾನ್ಯವಾಗಿ ಒಂದು ಪಂಗಡಕ್ಕಾಗಿಯೇ ಎಂದು ರಚಿಸಲ್ಪಟ್ಟಿಲ್ಲ. ಒಬ್ಬ ಮನುಷ್ಯನು ತನ್ನ ಯೋಗ್ಯತೆಯನ್ನು ಬೆಳೆಯಿಸಿಕೊಂಡ ಹಾಗೆಲ್ಲಾ ಇವುಗಳಲ್ಲಿ ತನಗೆ ತಕ್ಕ ಭಾಗಗಳನ್ನು ಗ್ರಹಿಸುತ್ತಾನೆ. ವೇದದಲ್ಲಿ ಮತ್ತು ಉಪನಿಷತ್ತುಗಳಲ್ಲಿ ಲಿಂಗಧಾರಣ ಪರವಾದ ವಾಕ್ಯಗಳು ಉಂಟೆಂದು ನಮ್ಮ ಪೂರ್ವಿಕರು ಸಾಧಿಸಿರುತ್ತಾರೆ. ಯಾವ ಪಂಗಡದವರಾದರೂ ವೇದದಲ್ಲಿ ಹೇಳಲ್ಪಟ್ಟ ಎಲ್ಲಾ ಭಾಗವೂ ನಮ್ಮದೆಂದು ಹೇಳುವದಿಲ್ಲ. ಕೆಲವು ಭಾಗವನ್ನೇ ನಮ್ಮದೆಂದು ಹೇಳಿ ವೈದಿಕರು ಎನ್ನಿಸಿಕೊಂಡಿರುತ್ತಾರೆ. ಅದರಂತೆ ವೇದದಲ್ಲಿ ಇರುವ ಷಡಕ್ಷರಮಂತ್ರ, ಪಂಚಬ್ರಹ್ಮಾದಿಗಳು, ಶಿವಾದ್ವೈತತತ್ವ, ಶ್ರೀರುದ್ರಮಂತ್ರ, ಪರಬ್ರಹ್ಮ ಅಕ್ಷರ ಈ ಮೊದಲಾದ ಹೆಸರಿನಿಂದ ಕರೆಯಲ್ಪಡುವ ನಿರಾಕಾರನಾದ ಮಹಾದೇವ, ಇವೇ ಮೊದಲಾದ ಅನೇಕ ಭಾಗಗಳನ್ನು ವೀರಶೈವರು ಒಪ್ಪು

ವಶದಿಂದ ಇವರೂ ನೈದಿಕರೇ ಆಗಿರುತ್ತಾರೆ. ಶಿವಾಗಮಗಳ ಉತ್ತರ ಭಾಗಗಳೂ ಕೂಡಾ ಬರೀ ವೀರಶೈವರಿಗೆ ಸಂಬಂಧಪಟ್ಟವುಗಳೆಂದು ತಿಳಿಯುವಂತೆ ಇಲ್ಲ. ಈಗ ಗ್ರಂಥಲಿಪಿಯಲ್ಲಿ ಮುದ್ರಿಸಲ್ಪಟ್ಟ ಕಾಮಿಕಾಗಮದ ಉತ್ತರಭಾಗದಲ್ಲಿ ಸ್ಥಾವರದೇವತಾ ಪ್ರತಿಷ್ಠಾ ಮೊದಲಾದ ಶೈವ ಭಾಗಗಳೂ ಹೇಳಲ್ಪಟ್ಟಿರುತ್ತವೆ. ಅಪ್ಪಾಸಾಹೇಬ ವಾಂದ ಮಲ್ಲಪ್ಪನವರೂ ಹುಬ್ಬಳ್ಳಿ ಜಗದ್ಗುರು ಮೂರುಸಾವಿರ ಮಠದ ಗಂಗಾಧರಸ್ವಾಮಿಗಳ ಕೃಪಾಬಲದಿಂದ ಶಂಕರಪ್ಪ ಅಚ್ಚಪ್ಪ ಟೊಪ್ಪಿಗಿ ಇವರೂ ಪ್ರಕಟಪಡಿಸಿದ ಆಗಮಗಳಲ್ಲಿ ಶೈವ ಲಕ್ಷಣಗಳೂ ವೀರಶೈವ ಲಕ್ಷಣಗಳೂ ಹೋಮವಿಧಿಗಳೇ ಮೊದಲಾದವುಗಳೂ ಹೇಳಲ್ಪಟ್ಟಿವೆ. ಅವುಗಳಲ್ಲಿಯೂ ವೀರಶೈವವನ್ನು ಆಯ್ದುಕೊಳ್ಳಬೇಕಾಗಿದೆ. ಹೀಗೆ ಆಗಮಗಳಲ್ಲಿ ಹೇಳಿದುದೆಲ್ಲವೂ ನಮ್ಮದೇ ಎಂದು ಹೇಳುವವರು ಒಂದೂ ಮತದವರೂ ಇಲ್ಲ. (ವೇದಾಗಮಗಳು ಎಲ್ಲಾ ಯೋಗ್ಯತೆಯವರಿಗೂ ಬೇಕಾದ ವಿಷಯಗಳನ್ನು ಒಟ್ಟುಗೂಡಿಸಿ ಹೇಳಿವೆ. ಇವುಗಳ ರಚನೆಯ ಕಾಲದಲ್ಲಿ ಬೇರೆ ಬೇರೆ ಹೇಳಬೇಕೆಂಬ ಅವಶ್ಯಕತೆ ಇರಲಿಲ್ಲ.)

ಪುರಾಣಗಳಲ್ಲಿಯೂ ಪಾಶುಪತ, ವೀರಶೈವ ಮತಗಳೂ ಹೇಳಲ್ಪಟ್ಟಿವೆ. ಆದ್ದರಿಂದ ಭಿನ್ನಾಭಿಪ್ರಾಯಗಳನ್ನು ಬಿಟ್ಟು 'ಎಲ್ಲಾ ಶಾಸ್ತ್ರದಲ್ಲಿಯೂ ವೀರಶೈವ ತತ್ತ್ವವು ಪ್ರತಿಪಾದಿಸಲ್ಪಟ್ಟ ಅಭಿಪ್ರಾಯಗಳಿವೆ' ಎಂಬುದನ್ನು ಪ್ರತಿಯೊಬ್ಬ ವೀರಶೈವನೂ ಯೋಚಿಸಿ ಈ ಮತವು ಸ್ವಾತಂತ್ರಿಕ ಮತನೆಂಬುದನ್ನು ಏನೂ ಅನುಮಾನವಿಲ್ಲದೆ ತಿಳಿದುಕೊಂಡಿರಬೇಕು. ಲಿಂಗಧಾರಣಉಪನಿಷತ್ ಪ್ರಾಚೀನವಾಗಿ ಇದ್ದುದು, ಎಂದು ತಿಳಿದು ಬಂದ ಸಂಗತಿಯನ್ನು ಅದರ ಮುನ್ನುಡಿಯಲ್ಲಿ ಕೊಡಲಾಗುವುದು. ವೀರಲೈಂಗ್ಯೋಪನಿಷತ್ತು ಕಾಗದದಲ್ಲಿ ಬರೆದ ಪ್ರತಿಯೊಂದು ಸಿಕ್ಕಿದೆ. ಇದು ಪೂರ್ವದ್ದೆಂದು ಹೇಳುವ ಸ್ಥಿತಿಗೆ ಇನ್ನೂ ಬಂದಿಲ್ಲ. ಸಾಧ್ಯವಾದ ಮಟ್ಟಿಗೆ ಈಗ ಓಲೆಯ ಪ್ರತಿಗಳಿಂದ ಸಂಗ್ರಹಿಸಿದ ಉಪನಿಷತ್ತುಗಳನ್ನು ಮೊದಲು ಮುದ್ರಿಸಬೇಕೆಂಬ ಯೋಚನೆ ಇದೆ. ವೀರಶೈವವೇ ಆಗಿರುವ ಶಿವಾಗಮೋಪನಿಷತ್ ಪುರಾಣ ಭಾಗಗಳನ್ನೂ ವೇದಾದಿಗಳಲ್ಲಿ ಆಯ್ದುಕೊಂಡಿರುವ ವಿಷಯಗಳನ್ನೂ ಶರಣರ ವಚನಗಳನ್ನೂ ಸೇರಿಸಿ ವೀರಶೈವ ಗ್ರಂಥಗಳನ್ನು ಏರ್ಪಡಿಸುವುದೂ ಇವುಗಳಲ್ಲಿ ಪರೀಕ್ಷೆಯಾಗಿ ತೇರ್ಗಡೆಯಾದವರಿಗೇನೇ ಮುಂದೆ ಮಠದ ಅಧಿಕಾರ ಮೊದಲಾದ ಪದವಿಗಳು ಕೊಡಲ್ಪಡಬೇಕೆಂಬ ನಿಯಮವನ್ನು ಮಾಡುವುದೂ ವೀರಶೈವ ಸಮಾಜದ ಅತ್ಯವಶ್ಯಕವಾದ ಕಾರ್ಯಗಳಾಗಿವೆ.

# ವಿಮರ್ಶೆ.

## ವೀರಶೈವ ಚಂದ್ರಿಕೆ.

ವಾರ್ಷಿಕ ಚಂದಾ ೧—೮—೦ ಅಂಚೆವೆಚ್ಚ ಸೇರಿ ೧—೧೧—೦

ಡೆಮ್ಮಿ ಅಷ್ಟಪತ್ರ ೩೨ ಪುಟ.

ಸಂಪಾದಕರು ಮತ್ತು ಪ್ರಕಾಶಕರು ಆಲೂರು ಮುರಿಗೇಂದ್ರ ಸೆಟ್ಟರು.

ಇದು ಧಾರವಾಡಜಿಲ್ಲಾ ಸಿರಹಟ್ಟಿ ಶ್ರೀ ಫಕ್ಕೀರೇಶಸ್ವಾಮಿಗಳವರ ಕೃಪಾಛತ್ರದಲ್ಲಿ ನಡೆದ ಒಂದು ಮಾಸಪತ್ರ

ಈ ಮಾಸಪತ್ರದ ೪—೫—೬ ನೆಯ ಸಂಚಿಕೆಗಳು ನಮ್ಮ ಕೈಸೇರಿವೆ. ವೀರಶೈವ ಚಂದ್ರಿಕೆ ಎಂಬ ಅಭಿಧಾನದಿಂದ ಇದು ಪ್ರಕಟವಾಗುತ್ತಾ ಇರುವುದು ಆನಂದಕರವಾದ ವಿಷಯ. ಆದರೆ ಹೆಸರಿಗೆ ತಕ್ಕಂತೆ ಇವರಲ್ಲಿ ವೀರಶೈವ ವಿಷಯಗಳು ಹೆಚ್ಚಾಗಿ ಇರಬೇಕು. ವೀರಶೈವರ ಗ್ರಂಥಗಳು ಮುದ್ರಣವಾಗದೆ ಕೈಬರಹದಲ್ಲಿ ಬಹಳವಾಗಿವೆ. ಅವುಗಳನ್ನು ಈಗಿನ ವೀರಶೈವರು ತಿಳಿದುಕೊಳ್ಳಲು ಅವಕಾಶವಾಗುನಂತೆ ಪ್ರಕಟಿಸುವುದು ಉತ್ತಮ. ಅವು ತಾವಾಗಿಯೇ ವೀರಶೈವ ತತ್ವವನ್ನು ಬೋಧಿಸುತ್ತವೆ. ಸಿರಹಟ್ಟಿಯ ಶ್ರೀ. ‖ ‖ ಸ್ವಾಮಿಗಳವರು ಈ ಕಾರ್ಯಕ್ಕೆ ಆಶ್ರಯ ಕೊಟ್ಟದ್ದು ಬಹಳ ಅಭಿನಂದನೀಯವಾದ ಸಂಗತಿ.

ವೀರಶೈವರು ಇದರಂತಿರುವ ವಿದ್ಯಾ ಪ್ರಚಾರ ಕಾರ್ಯಕ್ಕೆ ಇನ್ನು ಮುಂದೆ ಹೆಚ್ಚು ಗಮನವನ್ನು ಕೊಡುವುದು ಅತ್ಯವಶ್ಯಕವಾದ ಕಾರ್ಯವಾಗಿವೆ. ವೀರಶೈವರು ಈ ಭಾಗದಲ್ಲಿ ಬಹಳ ಬಹಳ ಹಿಂದುಳಿದಿರುವರೆಂಬುದಕ್ಕೆ ಅಡ್ಡಿ ಏನೂ ಇಲ್ಲ.

## ಮಂಗಲ ಸ್ತೋತ್ರಾವಲಿ.

ಎಸ್, ಸ್ವಾಮಿ, ಎಂಬುವವರು ಇದರ ಸಂಪಾದಕರು. ಇದು ಕಂದಪದ್ಯಗಳು, ಪದಗಳು, ಕೆಲವು ವೃತ್ತಗಳು ಇವುಗಳಿಂದ ಕೂಡಿರುವ

ಒಂದು ಪುಸ್ತಕ. ಧಾರವಾಡಜಿಲ್ಲಾ ಕಲಘಟಗಿತಾಲ್ಲೂಕ ಬೆಲವಂತರ ಗ್ರಾಮದಲ್ಲಿ ಇರುವ ಚನ್ನಬಸವೇಶ್ವರ ಶಿವಯೋಗಿಗಳವರ ಸ್ತೋತ್ರವೂ ಬಸವಾದಿ ಪ್ರಮಥರ ಸ್ತೋತ್ರಗಳೂ ಇವರಲ್ಲಿ ಇವೆ. ಗೃಹಸ್ಥಾಶ್ರಮದಲ್ಲಿ ಇದ್ದಾಗ್ಯೂ ಧರ್ಮನಿಷ್ಠರಾಗಿ ನಡೆದು ಭಕ್ತರಿಂದ ಹೊಗಳಿಸಿಕೊಳ್ಳುತ್ತಿರುವ ಈ ಮಹನೀಯರ ಸ್ತೋತ್ರವನ್ನು ಹಾಡುವುದು ಅತ್ಯವಶ್ಯ. ಪೂರ್ವದಿಂದಲೂ ವೀರಶೈವರು ಮಹನೀಯರಾದವರ ಸ್ತೋತ್ರಮೊದಲಾದವುಗಳನ್ನು ಬಹಳವಾಗಿ ರಚಿಸಿರುವುದು ಕೈಬರಹದ ಪ್ರತಿಗಳಿಂದ ತಿಳಿಯುತ್ತದೆ. ಆ ಪದ್ಧತಿಯು ಈಗ ಕಡಿಮೆಯಾಗಿದೆ. ಈ ಗ್ರಂಥದ ಪ್ರಕಾಶಕರು ಇದಕ್ಕೆ ಗಮನ ಕೊಟ್ಟದ್ದಕ್ಕಾಗಿ ಆನಂದ ಪಡಬೇಕಾಗಿದೆ.

## ಸಿದ್ಧರಾಮೇಶ್ವರ ಖಾಸ ಅಂಕ.

'ಸುದರ್ಶನ' ಎಂಬ ವಾರಪತ್ರಿಕೆಯು ಸೋಲಾಪುರದಲ್ಲಿ ಮಹಾರಾಷ್ಟ್ರ ಭಾಷೆಯಲ್ಲಿ ಹೊರಡುತ್ತಿರುವ ಸಂಗತಿಯು ವೀರಶೈವರಿಗೆ ತಿಳಿದ ವಿಷಯುವೇ ಆಗಿದೆ. ಈ ಪತ್ರಿಕೆಯ ಒಂದನೆಯ ವರ್ಷದ ಕಡೆಯ ಸಂಚಿಕೆಯೊಡನೆ "ಶ್ರೀ ಸಿದ್ಧರಾಮೇಶ್ವರ ಖಾಸ ಅಂಕ" ಎಂಬುದಾಗಿ ಒಂದು ವಿಶೇಷ ಪುಸ್ತಕವನ್ನು ಹೊರಡಿಸಿರುತ್ತಾರೆ. ಇದರಲ್ಲಿ ಸಿದ್ಧರಾಮೇಶ್ವರನ ವಿಷಯುವಾದ ಲೇಖನಗಳು ಬಹಳವಾಗಿ ಇರುತ್ತವೆ. ಮಹಾರಾಷ್ಟ್ರವನ್ನು ಬಲ್ಲ ವೀರಶೈವರು ಈ ಪುಸ್ತಕವನ್ನು ಸಂಗ್ರಹಿಸುವುದು ಅವಶ್ಯಕವಾಗಿದೆ.

---

### ೨ ನೆಯ ವರ್ಷದ ಕೊನೆಯ ವಿನಯಾರ್ಥಿಗಳು.

ಇನ್ನು ಮೂರನೆಯ ವರ್ಷದ ಆರಂಭದಲ್ಲಿ ಮೊದಲನೆಯ ಪತ್ರಿಕೆಯು ವ್ಯಾಲ್ಯೂಪೇಬಲ್ (V. P.) ಕಳುಹಿಸಲ್ಪಡುವುದು. ಅದನ್ನು ತೆಗೆದುಕೊಳ್ಳಲಿಕ್ಕೆ ಇಷ್ಟವಿಲ್ಲದವರು ಮೊದಲೇ ನನಗೆ ತಿಳಿಸಬೇಕಾಗಿ ಕೋರಲ್ಪಟ್ಟಿದೆ. ವ್ಹಿ. ಪಿ. ಕಳುಹಿಸಿದನಂತರ ವಾಪಸುಮಾಡಿ ಅನ್ಯಾಯವಾಗಿ ಅಂಚೆಯ ವೆಚ್ಚವು ಉಂಟಾಗುವಂತೆ ಮಾಡಬಾರದಾಗಿ ಪ್ರಾರ್ಥನೆ.

ಹಿಂದೆ ೧ ವರ್ಷ ಅಥವಾ ೨ ವರ್ಷಗಳ ಚಂದಾ ಬಾಕಿ ಇಟ್ಟುಕೊಂಡ ವರಿಗೂ ವ್ಹಿ. ಪಿ. ಕಳುಹಿಸಲ್ಪಡುವುದು. ಚಂದಾದಾರರು ಕೃಪೆ ಮಾಡಿ ಈ ಪತ್ರಿಕೆಯು ತನ್ನ ಕಾಲುಬಲವನ್ನೇಲೆ ತಾನು ನಿಲ್ಲುವಂತೆ ಮಾಡಿ ಧರ್ಮಗ್ರಂಥಗಳ ಅಭಿವೃದ್ಧಿಗೆ ಪ್ರೋತ್ಸಾಹವನ್ನು ಕೊಡ ಬೇಕೆಂಬು ಪ್ರಾರ್ಥನೆ. ಗ್ರಂಥಗಳ ಪ್ರಸಾದದಿಂದ ಬಹಳ ಪ್ರಯೋಜನವುಂಟೆಂಬ ಅಂಶವು ಓದುಗರಿಗೆ ಕಾಲಕ್ರಮದಲ್ಲಿ ತಿಳಿಯುತ್ತಾ ಬಂದೀತೆಂದು ಈ ಬಡ ಪ್ರಕಾಶಕನ ಬಲವಾದ ನಂಬಿಕೆ.

ಸನ್ಮಾನನೀಯರಾದ ಮಹನೀಯರು ಈ ಪತ್ರಿಕೆಯನ್ನು ಆದರದಿಂದ ಗ್ರಹಿಸುತ್ತಿರುವಬಗ್ಗೂ ಮತ್ತು ಅನೇಕರು ತಮ್ಮ ಅಭಿಪ್ರಾಯಗ ಳನ್ನು ಕಳುಹಿಸಿರುವ ಬಗ್ಗೂ ಧನ್ಯವಾದವನ್ನು ಮಾಡುತ್ತೇನೆ.

ಪತ್ರಿಕಾಕರ್ತರು ವಿನಿಮಯವಾಗಿ ಪತ್ರಿಕೆಗಳನ್ನು ಕಳುಹಿ ಸುತ್ತಾ ಇರುವಬಗ್ಗೂ ಸಾಹಿತ್ಯ ಪಂಷತ್ ಪತ್ರಿಕೆಯಲ್ಲಿ ಈ ಪತ್ರಿ ಕೆಯ ವಿಷಯವಾಗಿ ಆಗಾಗ್ಗೆ ಬರೆಯುತ್ತಾ ಇರುವ ಬಗ್ಗೂ ಕೃತಜ್ಞತೆ ಯ ಅಭಿನಂದನವನ್ನು ಅರ್ಪಿಸುತ್ತೇನೆ.

ಧರ್ಮಾಭಿಮಾನಿಗಳ ವಿಧೇಯನಾದ

ಪ್ರಕಾಶಕ

# ಪತ್ರಿಕೆಯ ಸಾವಕಾಶ.

ಗ್ರಂಥ ಪರಿಶೋಧನೆಗಾಗಿ ಮೈಸೂರಿಗೆ ಹೋಗಿ ಅಲ್ಲಿ ಸುಮಾರು ಎರಡು ತಿಂಗಳುಕಾಲ ಇದ್ದುದ್ದರಿಂದ ಈ ಪತ್ರಿಕೆಯು ಹೊರಡಲು ತಿಂಗಳು ಗಟ್ಟಲೆ ಸಾವಕಾಶವಾದದ್ದಕ್ಕಾಗಿ ವಾಚಕರು ಕ್ಷಮಿಸಬೇಕೆಂದು ಪ್ರಾರ್ಥನೆ. ಮುಂದೆ ಸಾಧ್ಯವಾದಷ್ಟು ಬೇಗನೆ ಪತ್ರಿಕೆಗಳು ಹೊರಡಿಸಲ್ಪಡುವವು.

ಪ್ರಕಾಶಕ.

---

Kiel 22nd December 1934

# A LETTER FROM PROF. DR. F. O. SCHRADER. KIEL, (GERMANY.)

To Kiel,

*Sri Channamallikarjuna*
*Haveri, Dt. Dharwar, India.*

DEAR SIR:

Your kind letter of the 19/20 xi 34 is quite welcome to me, as I have always wished to be in connection with one well-versed in the Virasaiva religion and its literature.

It is true that more than ten years ago, in a little paper which I enclose and which is the only thing I ever published on Virasaiva- matam, I have said in a foot-note ( see p. 314 ) that I was engaged in preparing a monograph on this sect. I did, however, not get far in that mainly bec-ause I found that my materials were In-sufficient. .e g. I never succeeded in ob-

taiuing the Lingayat Bhashya on the Brahmasutras which is said to exist, and of the Kriyasara by Nilakantha, sivacharya I have only the portion published in Devanagari letters in 1910.

I should like to take up the work again but cannot say when this will be possible. For, I am now engaged in other works which must first be finished. At any rate I am glad to be in touch with you and send you my cordial greetings.

Yours sincerely
F. Otto Schrader.

P. S. I am specially interested in the sources prior to Sri Basava, of the Virasaiva-matam. In the preface to my book " The Minor Upanisadas vol I ( Adyar, 1912 ) I have published ( on p. XLiii) the two Virasaiva lists of Upanisads. Many of the Upanisads mentioned there ( uiz Katyayana, Panchabrahma Bodhayaniya, Carcu Sravana, Parakrama, Brahmayagna, Procya, or Pracya; Asurayana. or Asvalayaniya, Ambaka, Sankhyayaniya, Vagurayaniya ) I was unable to trace elsewhere. Are Viraasaivas in possession of any manuscripts of these, perhaps of a samgraha containing all are most of them. I should

be delighted if you could procure me the same.

I should also like to have a list of those of the ancient Saiva-Agamas which can be proved to have contributed to the formation of the Virasaiva religion and philosophy For, as you will understand, these are the very questions which will have to form the subject of the first chapter of a scientific work on the Virasaiva religion. This system no doubt is quite unique in many points but still it is also based, at least in some respects on certain ancient traditions and to know exactty which these are is the first requiremeut of its histarical treatment.

Sd. F. O. S.

---

ಜರ್ಮನೀ ದೇಶದ ಪ್ರಸಿದ್ಧ ಪಂಡಿತರಾದ ಪ್ರೊಫೆಸರ್ ಡಾಕ್ಟರ್ ಎಫ್, ಓ, ಸ್ಕ್ರೇಡರ್ ಅವರ ಇಂಗ್ಲಿಷ್ ಪತ್ರದ ಸಾರಾಂಶವು.

ಶ್ರೀ ಚನ್ನಮಲ್ಲಿಕಾರ್ಜುನ, ಹಾವೇರಿ ಇವರಿಗೆ

ಅಯ್ಯಾ, ನಿಮ್ಮ 19/20 xi 34 ಪತ್ರವು ನನಗೆ ಸುಖಾಗಮನವಾಗಿ ಇದೆ. ನಾನು ವೀರಶೈವಮತವನ್ನೂ ಅದರ ಗ್ರಂಥಗಳನ್ನೂ ಬಸ್ಲವರ ಜೊತೆಗೆ ಸಂಬಂಧಿಸಿ ಇರಬೇಕೆಂದು ಅಪೇಕ್ಷಿಸಿ ಇದ್ದೇನೆ.

ನಾನು ಹತ್ತು ವರುಷಗಳಹಿಂದೆ ವೀರಶೈವ ಮತ ವಿಷಯವಾಗಿ ಇದರೊಡನೆ ಕಳುಹಿಸಿ ಇರುವ ಒಂದು ಚಿಕ್ಕ ಪ್ರಬಂಧದ ಇಷ್ಟೇ ವಿಷಯವನ್ನು ನಾನು ಪ್ರಕಟಿಸಿದುದು ನಿಶ್ಚಯ. ಈ ಮತದ ವಿಷಯವಾಗಿ ಒಂದು Monograph ಸಿದ್ಧಪಡಿಸುವ ಕೆಲಸವಮಾಡುತ್ತಾ ಇದ್ದೇನೆಂದು ಈ ಪ್ರಬಂಧದ ಅಡಿಯ ಟಿಪ್ಪಣಿಯಲ್ಲಿ ಹೇಳಿ ಇದ್ದೇನೆ.

ನನಗೆ ದೊರಕಿರುವ ವಿಷಯಸಾಮಗ್ರಿಗಳು ಸಾಕಾಗಲಿಲ್ಲವೆಂದು ಕಂಡು ಬಂದದ್ದರಿಂದ ಈ ವಿಷಯದಲ್ಲಿ ಮುಂದಕ್ಕೆ ಹೋಗಿಲ್ಲ. ಏಕೆಂದರೆ ಬ್ರಹ್ಮಸೂತ್ರದ ಮೇಲೆ ಬರೆದ 'ಲಿಂಗಾಯತ ಭಾಷ್ಯವನ್ನು ಹೊಂದುವ ನನ್ನ ಪ್ರಯತ್ನವು 'ಫಲಕಾರಿಯಾಗಿಲ್ಲ, ( ಅದು ಇದೆ ಎಂದು ಹೇಳುತ್ತಾರೆ.) ನೀಲಕಂಠ ಶಿವಾಚಾರ್ಯರವರು ಮಾಡಿದ ಕ್ರಿಯಾಸಾರದ ಪ್ರತಿ ೧೯೧೦ ನೆಯ ಇಸವಿಯಲ್ಲಿ ದೇವನಾಗರಿಯಲ್ಲಿ ಪ್ರಕಟಿಸಿದ ಭಾಗವು ಮಾತ್ರ ನನ್ನಲ್ಲಿ ಇದೆ.

ನಾನು ಆ ಕೆಲಸವನ್ನು ಮತ್ತೆ ಕೈಕೊಳ್ಳುವುದಕ್ಕೆ ಅಪೇಕ್ಷಿಸುವೆನು, ಆದರೆ ಇದು ಯಾವಾಗ ಸಾಧ್ಯವೆಂಬುದನ್ನು ಹೇಳಲಾರೆನು. ಈಗ ನಾನು ಬೇರೆ ಕೆಲಸಗಳಲ್ಲಿ ತೊಡಗಿದ್ದೇನೆ. ಅವನ್ನು ಮೊದಲು ಮುಗಿಸಬೇಕಾಗಿದೆ. ಯಾವ ವಿಧದಲ್ಲಿಯಾದರೂ ನಿಮ್ಮ ಸಂಬಂಧವಲ್ಲಿ ಇರಲು ನನಗೆ ಸಂತೋಷ ಮತ್ತು ನಿಮಗೆ ವಂದನೆಗಳನ್ನು ಕಳುಹಿಸುವೆನು.

ನಿಮ್ಮ Sincerely.
ಎಫ್. ಒಟ್ಟೊ ಸ್ಕ್ರೇಡರ್.

(ದಯವಿಟ್ಟು ತಿರುಗಿಸಿ ನೋಡಿರಿ):—ವೀರಶೈವ ಮತದ ವಿಷಯವಾಗಿ ಶ್ರೀ ಬಸವನಿಗಿಂತ ಪೂರ್ವದ ಮೂಲ ವಿಷಯಗಳಲ್ಲಿ ನನಗೆ ಹೆಚ್ಚಿನ ಗಮನವಿರುತ್ತದೆ. ಚಿಕ್ಕ ಉಪನಿಷತ್ತುಗಳು ಭಾಗ ೧ (ಅಡ್ಯರ್ ೧೯೧೨) ಎಂಬ ನನ್ನ ಪುಸ್ತಕದ ಪೀಠಿಕೆಯಲ್ಲಿ ವೀರಶೈವರ ಉಪನಿಷತ್ತುಗಳ ಎರಡು ಪಟ್ಟಿಯನ್ನು ಪ್ರಕಟಿಸಿ ಇದ್ದೇನೆ. ಅದರಲ್ಲಿ ಕಂಡ ಅನೇಕ ಉಪನಿಷತ್ತುಗಳು ( ಕಾತ್ಯಾಯನ, ಪಂಚಬ್ರಹ್ಮ, ಬೋಧಾಯನೀಯಚರ್ಚಾ, ಶ್ರವಣ, ಪರಾಕ್ರಮ, ಬ್ರಹ್ಮಯಜ್ಞ, ಪ್ರಾಚ್ಯ ಅಥವಾ ಪ್ರಾಚ್ಯ, ಆಸುರಾಯಣ ಅಥವಾ ಆಶ್ವಲಾಯನೀಯ, ಅಂಬಕ,

ಸಾಂಖ್ಯಾಯನೀಯ, ವಾಗುರಾಯಣೀಯ ) ಇವುಗಳನ್ನು ಎಲ್ಲಿಯೂ ಗುರ್ತಿಸಲಾಗಲಿಲ್ಲ.

ವೀರಶೈವರು ಇವುಗಳಲ್ಲಿ ಯಾವುದಾದರೂ ಕೈಬರಹದ ಪ್ರತಿಗಳನ್ನು ( ಇವುಗಳಲ್ಲಿ ಎಲ್ಲಾ ಆಗಲೀ ಅಥವಾ ಬಹಳ ಆಗಲೀ ಉಪನಿಷತ್ತುಗಳ ಸಂಗ್ರಹವನ್ನು ) ಉಂಟಾಗಿದ್ದಾರೇನು? ನೀವು ಇವುಗಳನ್ನು ನನಗೆ ದೊರಕಿಸಿದರೆ ನಾನು ಸಂತೋಷಪಡುವೆನು.

ಇದಲ್ಲದೆ ವೀರಶೈವ ಮತದ ಮತ್ತು ಅದರ ವೇದಾಂತದ ರಚನೆಯನ್ನು ಒಳಗೊಂಡಿರುವುವೆಂಬುದನ್ನು ತೋರಿಸಿ ಪ್ರಕಟವಾಗಿರುವ ಪೂರ್ವಿಕ ಶಿವಾಗಮಗಳ ಒಂದು ಪಟ್ಟಿಯನ್ನು ನೋಡಬೇಕೆಂದು ನಾನು ಪ್ರೀತಿಸುತ್ತೇನೆ. ಏಕೆಂದರೆ ವೀರಶೈವಮತದ ವಿಷಯವಾಗಿ ಪರಿಶೋಧಿಸಲ್ಪಟ್ಟ ಗ್ರಂಥದ ಮೊದಲನೆಯ ಅಧ್ಯಾಯದ ಸಂಗತಿಯಾಗಿ ಈ ಪ್ರಶ್ನೆಗಳು ಇರುತ್ತವೆ ಎಂಬುದುನಿಮಗೆ ಗೊತ್ತಿರುವ ಸಂಗತಿಯೇ ಆಗಿದೆ. ಅನೇಕ ಸಂಗತಿಗಳಲ್ಲಿ ಇದಕ್ಕೆ ಸಮಾನವು ಇಲ್ಲವೇ ಇಲ್ಲ ಎಂದು ಹೇಳಲು ಅನುಮಾನವೇನೂ ಇಲ್ಲದಂತೆ ಈ ಮತದ ಪದ್ಧತಿಯು ಇದೆ. ಆದರೆ ಕೆಲವು ವಿಷಯಗಳಲ್ಲಿಯಾದರೂ ಕೆಲವು ಪೂರ್ವ ಪದ್ಧತಿಗಳನ್ನು ಅವಲಂಬಿಸಿಕೊಂಡು ಇರುತ್ತದೆ. ಇವುಗಳು ಯಾವುವು ಎಂಬುದನ್ನು ತಿಳಿಯುವುದಕ್ಕೆ ಅದರ ಚಾರಿತ್ರಿಕ ಶೋಧನದ ಮೊದಲನೆಯ ಅವಶ್ಯಕತೆ ಇದೆ.

Sd. F. O. S.

( ಈ ಕನ್ನಡದ ವಿವರಣದಲ್ಲಿ Monograph ಎಂಬ ಇಂಗ್ಲಿಷ್ ಪದವು ಮೂಲದಲ್ಲಿ ಇದ್ದದ್ದು ಹಾಗೆಯೇ ಮುದ್ರಿತವಾಗಿದೆ. ಇದಕ್ಕೆ ಸಾಂಕೇತಿಕ ಪ್ರಬಂಧ ಅಥವಾ ಹೆಸ್ಸುರುತಿನ ಹೊತ್ತಗೆ ಎಂಬ ಕನ್ನಡ ಪದಗಳನ್ನು ಉಪಯೋಗಿಸಬಹುದು. )

(ಈ ಪತ್ರದ ಜೊತೆಯಲ್ಲಿ ಇವರ ಇಂಗ್ಲಿಷಿನ ಪ್ರಬಂಧವು ಬಂದಿರುತ್ತದೆ. ಅದರಲ್ಲಿನ ವಿಷಯವನ್ನು ಮುಂದೆ ಪ್ರಕಟಿಸಲಾಗುವುದು.)

# ಪ್ರಕಾಶಕನ ಟಿಪ್ಪಣಿ.

ಇವರ ಪತ್ರವನ್ನು ನೋಡಿದ್ದುದರಿಂದ ವೀರಶೈವರಿಗೆ ಆಗುವಲಾಭಗಳೇನು ?

1 ವೀರಶೈವ ಮತದ ಚರಿತ್ರೆಯನ್ನು ಜರ್ಮನಿಯವರು ಹುಡುಕುತ್ತಿರುವಾಗ ವೀರಶೈವರು ಇದಕ್ಕೆ ಯೋಚಿಸದೆ ಸುಮ್ಮನೆ ಕೂತಿರುವದು ಯುಕ್ತವೇ ?

2 ಬಸವೇಶ್ವರನಿಗಿಂತ ಪೂರ್ವದಲ್ಲಿ ಇದ್ದ ವೀರಶೈವ ಗ್ರಂಥಗಳ ಪ್ರಕಟನೆಗೆ ಯಾವ ಗಮನವೂ ಕೊಡಲ್ಪಟ್ಟಿಲ್ಲ. ಇದೇಕೆ ?

3 ವೀರಶೈವರ ಸಂಸ್ಕೃತ ಗ್ರಂಥಗಳನ್ನು 'ದೇವನಾಗರಿ' ಲಿಪಿಯಲ್ಲಿ ಮುದ್ರಿಸಿದರೆ ಜಗತ್ತಿನ ಸಂಸ್ಕೃತಜ್ಞರೆಲ್ಲರೂ ಓದಿ ವೀರಶೈವದ ಮಹತ್ವವನ್ನು ತಿಳಿಯುವದಕ್ಕೆ ಅನುಮಾನವೇನೂಇಲ್ಲ. ಈ ಕೆಲಸದ ಯೋಜನೆಯು ಅವಶ್ಯಕವಲ್ಲವೇ ?

4 ವೀರಶೈವರು ತಮಗೆ ಸಂಬಂಧಪಟ್ಟ ಉಪನಿಷತ್ತುಗಳ ಹೆಸರನ್ನು ಈ ಜರ್ಮನೀ ಪಂಡಿತರಿಂದ ತಿಳಿಯಬೇಕಾಗಿರುವದಾದರೂ ಅವುಗಳ ಕೈ ಬರಹದ ಪ್ರತಿಗಳ ಶೋಧನೆಗೆ ಈವರೆಗೂ ಯಾವ ಪ್ರಯತ್ನವೂ ಮಾಡಲಟ್ಟಿಲ್ಲ. ಇದಕ್ಕೆ ಏನು ಉಪಾಯ ?

5 ಯಾವ ಶಿವಾಗಮಗಳಲ್ಲಿ ವೀರಶೈವ ವಿಷಯವು ಪ್ರತಿಪಾದಿತವಾಗಿದೆಯೋ ಆ ಶಿವಾಗಮಗಳನ್ನು ತೋರಿಸಿರಿ, ಎಂದು ಕೇಳುವೆಡೆಯಲ್ಲಿ ವೀರಶೈವರು ಸುಮ್ಮನೆ ಕೂಡುವದು ಸರಿಯೇ?

6 ವೀರಶೈವರು ಯಾವ ಪೂರ್ವ ಪದ್ಧತಿಯ ಆಧಾರದಮೇಲೆ ಇದ್ದಾರೆ ?

ಈ ವಿಷಯಗಳನ್ನು ಆಲೋಚಿಸುವುದಕ್ಕೆ ಈ ಪತ್ರವು ಹುರಿದುಂಬಿಸುತ್ತಿದೆ. ಇಂಥಾ ಆಲೋಚನೆಯ ದೆಸೆಯಿಂದ ಆಗುವ ಲಾಭಗಳಲ್ಲಿ

೧ ವೀರಶೈವ ಜಗದ್ಗುರುಗಳೆಂಬುವವರು ಸುಖ ಲೋಲುಪ್ತರಾಗಿ ಇರದೆ ಅಥವಾ ಕೇವಲ ಲೌಕಿಕ ಕಾರ್ಯಗಳಲ್ಲಿ ಮಾತ್ರ ಬೀಳದೆ ತಮ್ಮ ಧಾರ್ಮಿಕದ ನಿಜಸ್ಥಿತಿಯನ್ನು ಬಯಲಿಗೆ ಇಡಲು ತಕ್ಕ ಶಕ್ತಿಯುಳ್ಳವ

ಗಾಗಬೇಕೆಂದು ಪ್ರಯತ್ನಿಸಬೇಕೆಂಬ ಇಚ್ಛೆಯನ್ನು ಹುಟ್ಟಿಸುವುದು.

೨ ಬಸವೇಶ್ವರನ ಕಾಲದಿಂದಲೇ ಈ ಮತವು ಬಂದಿದೆ ಎಂದು ಹೇಳುವವರು, ತಮ್ಮ ಉಪನಿಷತ್ತುಗಳು ಮೊದಲಾದವುಗಳನ್ನು ಹುಡುಕಿ ನೋಡಿಕೊಂಡು ತಮ್ಮ ಪೂರ್ವ ಸಂಪ್ರದಾಯವನ್ನು ಸಿದ್ಧಗೊಳಿಸಲಾದೀತೇ ಇಲ್ಲವೇ ಎಂದು ಯೋಚಿಸಬೇಕಾಗಿರುವುದು.

೩ ಗುರುಗಳು ಹೆಚ್ಚು, ಜಂಗಮರು ಹೆಚ್ಚು ಎಂದು ವಾದಿಸುವ ಚಳವಳಿಯುವರು ತಮ್ಮ ಆ ಕೆಲಸಗಳನ್ನು ಬಿಟ್ಟು ಇಡೀ ಮತದ ಶ್ರೇಯಸ್ಸಿಗಾಗಿ ಮತಗ್ರಂಥಗಳ ಐಕಮತ್ಯವನ್ನು ಪ್ರಕಟಿಸುವದಕ್ಕಾಗಿ ಪ್ರಯತ್ನಿಸುವಂತೆ ಆಗಬೇಕಾಗಿರುವದು.

೪ ವೀರಶೈವ ಮತವು ಅನೇಕ ವಿಷಯಗಳಲ್ಲಿ ಉತ್ತಮವೆಂಬ ಈ ಜರ್ಮನೀ ಪಂಡಿತರ ಅಭಿಪ್ರಾಯವನ್ನು ನಿಜವೆಂದು ತೋರಿಸುವ ಪುಸ್ತಕ ಅಥವಾ ಪ್ರಕಟನೆಗಳನ್ನು ಜಗತ್ತಿಗೆಲ್ಲಾ ತಿಳಿಯುವಂತೆ ಇಂಗ್ಲಿಷ್ ಹಿಂದೀ ಮೊದಲಾದ ಭಾಷೆಗಳಲ್ಲಿ ಪ್ರಚುರಪಡಿಸಬೇಕಾಗಿ ಇರುವುದು.

೫ ವೀರಶೈವ ಗುರುವರ್ಗದವರೂ, ಶ್ರೀಮಂತರೂ, ಈ ಧರ್ಮದ ಸ್ಥಿತಿಯ ಲಕ್ಷಣಗಳನ್ನು ಹಳ್ಳಿಗಳಲ್ಲಿ ಇರುವವರಿಗೆಲ್ಲಾ ವ್ಯಾಪಿಸುವಂತೆ ಪ್ರಕಟ ಪಡಿಸಬೇಕಾಗಿದೆ.

ಇವೇ ಮೊದಲಾದ ಅನೇಕ ಕಾರ್ಯಗಳ ಯೋಜನೆಯ ಯೋಚನೆಯು ಈ ಪತ್ರದಲ್ಲಿ ತುಂಬಿಕೊಂಡಿದೆ.

ಇಂಥಾ ಮಹತ್ಕಾರ್ಯಗಳಿದ್ದಾಗ್ಯೂ ವೀರಶೈವರು ಇವುಗಳ ವಿಷಯಕ್ಕೆ ಗಮನಕೊಡದೆ ತಮ್ಮ ತಮ್ಮಲ್ಲಿ ಜಗಳಮಾಡುವುದು, ಇನ್ನೊಬ್ಬರ ಏಳಿಗೆಯನ್ನು ಸಹಿಸದೆ ಅವರನ್ನು ಮುರಿಯಬೇಕೆಂದು ಪ್ರಯತ್ನ ಮಾಡುವದು, ಧಾರ್ಮಿಕ ನಿಜಸ್ಥಿತಿಯನ್ನು ಪ್ರಕಟ ಮಾಡಲಿಕ್ಕೆ ಮನಗೊಡದೆ ಇರುವದು, ಮುದ್ರಣಯಂತ್ರವು ಪ್ರಚಾರಕ್ಕೆ ಬಂದು ನೂರಾರು ವರ್ಷಗಳಾಗಿದ್ದಾಗ್ಯೂ ತಮ್ಮ ಸಹಸ್ರಾರು ಕೈಬರಹದ ಗ್ರಂಥಗಳನ್ನು ಆ ಯಂತ್ರಕ್ಕೆ ತೋರಿಸದೆ ಇನ್ನೂ ಮೂಲೆಗಳಲ್ಲಿ ಬಚ್ಚಿಟ್ಟಿರುವುದು, ಭಕ್ತರು ಭಕ್ತರಲ್ಲಿ ಜಗಳ, ಗುರು ಗುರುಗಳಲ್ಲಿ ಜಗಳ, ಜಂಗಮ ಜಂಗಮರಲ್ಲಿ ಜಗಳ, ಗುರು ಭಕ್ತ ಜಂಗಮರಲ್ಲಿ ಜಗಳ ಹೀಗೆ ಜಗಳ

ಗಳ ಮೊಟ್ಟೆ (ರಾಶಿ) ಯಲ್ಲಿ ಬಿದ್ದಿರುವುದು; ಇನ್ನೇ ಮುಂತಾದ ಕಾರ್ಯಗಳಲ್ಲಿ ಕಾಲಕಳೆಯುವುದನ್ನು ಬಿಟ್ಟು ತಮ್ಮ ಧಾರ್ಮಿಕ ಸ್ಥಿತಿಯನ್ನು ಸುಧಾರಿಸಿ ಕೊಳ್ಳುವ ಪ್ರಯತ್ನವನ್ನೂ ಆರ್ಥಿಕ ಸ್ಥಿತಿಯಲ್ಲಿ ನಿತ್ಯವ್ಯಯದ ಸಂಗತಿಯಲ್ಲಿ ದೇಶೋದ್ಧಾರದ ವಿಷಯದಲ್ಲಿ ತಕ್ಕ ಯೋಜನೆಗಳನ್ನು ಮಾಡಿ ಅಲ್ಲಿಯೂ ಮುಂದಾಳುಗಳಾಗುವ ಪ್ರಯತ್ನವನ್ನೂ ಬೇಗನೆ ಏಕೆ ಮಾಡಬಾರದು? ಮಹಾಸಭೆಯು ಫಂಡಿನ ಹಣದ ಬಡ್ಡಿಯ ಉಳಿತಾಯವನ್ನು ಇದಕ್ಕೆ ಏಕೆ ವೆಚ್ಚಮಾಡಬಾರದು? ಇತರ ವಿಧದಲ್ಲಿಯೂ ಈ ಕಾರ್ಯಗಳಿಗೆ ಬೇರೆ ಬೇರೆ ಸಂಘಗಳನ್ನೇಕೆ ಏರ್ಪಡಿಸಬಾರದು?

ತಾವೇ ಮುಂದಾಳುಗಳಾಗಿ ತಮ್ಮನ್ನೂ ದೇಶವನ್ನೂ ಉದ್ಧಾರ ಮಾಡುವ ಶಕ್ತಿಯು ಕರ್ನಾಟಕದಲ್ಲಿನ ವೀರಶೈವರಿಗೆ ಇರುತ್ತಿರುವಲ್ಲಿ ಅಂತಹ ಸ್ವತಃ ಸಿದ್ಧವಾದ ಹಕ್ಕು ಬಾಧ್ಯತೆಯನ್ನು ಬಿಟ್ಟು ಇನ್ನೊಬ್ಬರ ಹಾಡಿಗೆ ತಾಳಹಾಕುತ್ತಾ ಸ್ವಚ್ಛಂದನಾಗಿ ಕಾಲಕಳೆಯುತ್ತಿರುವ ಈಗಿನ ವೀರಶೈವರನ್ನು ನೋಡಿ ನಗಬೇಕೋ ಅಳಬೇಕೋ? ತಿಳಿಯದಾಗಿದೆ.

ಪ್ರಕಾಶಕ.

# ಈಗಿನ ಸಮಾಚಾರಗಳು.



## ಎಲ್ಲ ಭಾಷೆಗೂ ಒಂದೇ ಲಿಪಿ.

ಈಗ ಹಿಂದೂ ದೇಶದಲ್ಲಿ ಉಪಯೋಗದಲ್ಲಿ ಇರುವ ಎಲ್ಲಾ ದೇಶೀಯ ಭಾಷೆಗಳನ್ನು ಬರೆಯುವ ಲಿಪಿಯನ್ನು ಒಂದೇ ವಿಧವಾಗಿ ಮಾಡಬೇಕೆಂದೂ, ದೇವನಾಗರಿ ಲಿಪಿಯನ್ನೇ ಹಿಂದೀ, ಮಹಾರಾಷ್ಟ್ರ, ಕನ್ನಡ, ತೆಲುಗು ಮೊದಲಾದ ಭಾಷೆಗಳನ್ನು ಮುದ್ರಣ ಮಾಡುವುದಕ್ಕೂ ಅಭ್ಯಾಸ ಮಾಡುವುದಕ್ಕೂ ಉಪಯೋಗ ಮಾಡಬೇಕೆಂದೂ ಮುಂದಾಳುಗಳು ಪ್ರಯತ್ನಿಸಿ ಇದರ ಏರ್ಪಾಡಿಗಾಗಿ ಒಂದು ಸಂಘವನ್ನು ಏರ್ಪಡಿಸಿ ಇರುತ್ತಾರೆ.

——————

## ಬಹಳ ಹಳೆಯ ಪಟ್ಟಣ.

ಹಿಂದೂಸ್ಥಾನದಲ್ಲಿ ಭೂಗರ್ಭದಲ್ಲಿ ಸಿಕ್ಕಿದ ಪಟ್ಟಣಗಳಲ್ಲಿ ಸಿಂಧೂ ದೇಶದ ಮೋಹನ್ ಜೋದಾರೋ ಎಂಬ ಪಟ್ಟಣವೇ ಬಹಳ ಪೂರ್ವ ಕಾಲದ್ದು ಎಂದರೆ ೫—೬ ಸಾವಿರ ವರುಷಗಳ ಹಿಂದಿನದು ಎಂದು ಗೊತ್ತು ಮಾಡಲ್ಪಟ್ಟಿರುವುದು ಸರಿಯಷ್ಟೆ. ಈಗ ಕರಾಚಿ ಪ್ರಾಂತದಲ್ಲಿ ಖೈರಪುರ ಸಂಸ್ಥಾನದಲ್ಲಿ ಕಾತೋಜಿ ಎಂಬ ಗ್ರಾಮದ ಹತ್ತರ ಇನ್ನೊಂದು ದೊಡ್ಡ ಪಟ್ಟಣವು ಭೂಗರ್ಭದಲ್ಲಿ ಸಿಕ್ಕಿರುವದೆಂತಲೂ ಇದು ಮೋಹನ ಜೋದಾರೋ ಪಟ್ಟಣಕ್ಕಿಂತ ಪೂರ್ವದ್ದೆಂತಲೂ ತಿಳಿಯಬಂದಿದೆ. ಸರಕಾರದವರು ಇಲ್ಲಿ ಅಗಿದು ಇದನ್ನು ಹೊರಗೆ ತೆಗೆಯಲಿಕ್ಕೆ ಪ್ರಯತ್ನಿಸುತ್ತಾ ಇದ್ದಾರೆ.

ಪೂರ್ವದಲ್ಲಿ ಪ್ರಳಯ ಎಂಬದಾಗಿ ಕರೆಯಲ್ಪಡುತ್ತಿದ್ದ ಭೂಕಂಪವು ಸಂಭವಿಸಿ ಹೀಗೆ ಪಟ್ಟಣಗಳು ಭೂಮಿಯಲ್ಲಿ ಮುಳುಗಿ ಹೋದಂತೆ ಊಹಿಸಬೇಕಾಗಿದೆ.

——————

## ಅಂಚೆಯ ಇಲಾಖೆ.

ಪೋಸ್ಟ (ಅಂಚೆ) ಖಾತೆಯವರು ಕಾರ್ಡುಗಳು ಮತ್ತು ಬುಕ್ ಪೋಸ್ಟಗಳಿಗೆ ಈಗ ಇರುವ ಒಂಬತ್ತು ಪೈಗೆ ಬದಲಾಗಿ ಆರು ಪೈಯಂತೆಯೂ, ಈಗ ಅರ್ಧತೊಲೆಯ ಪತ್ರಕ್ಕೆ ಒಂದಾಣೆ ಇರುವುದರ ಬದಲಾಗಿ

ಒಂದು ತೊಲೆಯ ವರೆವಿಗಿನ ಪತ್ರಗಳಿಗೆ ಒಂದಾಣೆಯಂತೆಯೂ, ಟಪ್ಪಾಲು ಖರ್ಚನ್ನು ವಿಧಿಸಿದರೆ ಇಂತಹ ಹಣದ ಮುಗ್ಗಟ್ಟಿನ ಕಾಲದಲ್ಲಿ ಬಡ ರೈತಂಗೆ ಕಾಗದ ಪತ್ರಗಳನ್ನು ಬರೆಯುವುದಕ್ಕೆ ಅನುಕೂಲವಾಗಿ ಪರಿಣಮಿಸುತ್ತದೆ.

ಇದಲ್ಲದೆ ರೈಲ್‌ವೇ ಸ್ಟೇಷನ್‌ಗಳಲ್ಲಿ ಇರತಕ್ಕ ಕಾಗದದ ಪೆಟ್ಟಿಗೆಗಳನ್ನು ರೈಲ್‌ವೇ ಪೋಸ್ಟಿನವರೇ ಟಪ್ಪಾಲು (ಮೇಲು) ಗಾಡಿ ಮತ್ತು ಪ್ರಯಾಣಿಕರ (Passenger) ಗಾಡಿಗಳು ಬಂದಾಗ ತೆಗೆದುಕೊಂಡು ಹೋಗುವಂತೆ ಏರ್ಪಡಿಸಿದರೆ ಬಹಳ ಜನರು ಟಪ್ಪಾಲು ಹೊತ್ತಿನಲ್ಲಲ್ಲದೆ ಉಳಿದ ಹೊತ್ತುಗಳಲ್ಲಿ ರೈಲ್‌ವೆ ಗಾಡಿಯಲ್ಲಿ ಓಡಾಡುವ ಜನರ ಸಂಗಡ ಕಾಗದ ಕಳುಹಿಸುವ ಪ್ರಯತ್ನವು ನಿಂತು ಹೋಗಿ ಟಪ್ಪಾಲು ಇಲಾಖೆಗೆ ಹೆಚ್ಚಿನ ಲಾಭವಾಗಬಹುದು. ಇದಕ್ಕಾಗಿ ಟಪ್ಪಾಲು ಇಲಾಖೆಯವರಿಗೆ ಪ್ರಯಾಣಿಕರ (Passenger) ಗಾಡಿಯಲ್ಲಿ ಒಬ್ಬ ಟಪ್ಪಾಲು ನವಕರನು ಇರುವಂತೆ ನೇಮಿಸುವುದೊಂದೇ ಹೆಚ್ಚಿನ ಖರ್ಚು. ಈ ನವಕರನೇ ಪ್ರಯಾಣಿಕರ ಗಾಡಿ ನಿಲ್ಲುವ ಸ್ಟೇಷನ್‌ಗಳಲ್ಲಿ ಅಲ್ಲಿ ತಲುಪಬೇಕಾದ ಕಾಗದಗಳನ್ನು ಒಂದು ಚೀಲದಲ್ಲಿ ಹಾಕಿ ಸ್ಟೇಷನ್ ಮಾಸ್ಟರವರಲ್ಲಿ ಕೊಟ್ಟರೆ ಪೋಸ್ಟ್‌ಮಾಸ್ಟರು ಅದನ್ನು ತರಿಸಿಕೊಳ್ಳಬಹುದು. ಪ್ರಯಾಣಿಕರ(ಪ್ಯಾಸೆಂಜರ್) ಗಾಡಿ ಅಂಚೆಯ (ಮೇಲು) ಗಾಡಿ ಕೂಡಿದಾಗ ಕಾಗದ ಪತ್ರಗಳ ಚೀಲಗಳನ್ನು ಬದಲಾಯಿಸಿಕೊಳ್ಳಬಹುದು. ಆವರೆ ಇದರಿಂದ ಪ್ರಜೆಗಳಿಗೂ ಅಂಚೆ ಇಲಾಖೆಯವರಿಗೂ ಕೂಡಾ ಹೆಚ್ಚಿನ ಲಾಭವಾಗಬಹುದೆಂಬ ಪರೀಕ್ಷಣೆ ಇದೆ. ಮತ್ತು ಕಾಗದಪತ್ರಗಳನ್ನು ದಿನಕ್ಕೆ ಎರಡು ಸಾರಿ ಸಾಗಿಸಿದಂತೆಯೂ ಆಗುತ್ತದೆ. ಒಂದೊಂದು ಸ್ಟೇಷನ್‌ನಲ್ಲಿ ಇರುವ ಟಪ್ಪಾಲು ಪೆಟ್ಟಿಗೆಗಳಿಂದ ಕಾಗದಗಳನ್ನು ತೆಗೆದುಕೊಂಡು ತಮ್ಮ ಗಾಡಿಗೆ ಒಯ್ಯಲಿಕ್ಕೆ ಎರಡು ನಿಮಿಷಗಳ ಕಾಲಕ್ಕಿಂತ ಹೆಚ್ಚಾಗಿ ಬೇಕಾಗಲಾರದೆಂದು ನಂಬಬಹುದಾಗಿದೆ. ಈ ವಿಷಯದಲ್ಲಿ ಪೋಸ್ಟ್ ಇಲಾಖೆಯವರು ಮುಖ್ಯವಾಗಿ ಗಮನ ಕೊಡಬೇಕಾಗಿದೆ. ಮತ್ತು ನ್ಯಾಯ ವಿಧಾಯಕ ಸಭೆಯ ಮೆಂಬರುಗಳೂ ಗಮನ ತೆಗೆದುಕೊಂಡು ಈ ಬಗ್ಗೆ ಪ್ರಯತ್ನಿಸುವುದೂ ಅವಶ್ಯಕ.

ಈಗಿನ ಟಪ್ಪಾಲು ದರಗಳೇ ಹೆಚ್ಚಾಗಿರುವಲ್ಲಿ ಅಂಚೆ(ಮೇಲು) ಗಾಡಿಯಲ್ಲಿ ಹೋಗುವ ಕಾಗದಗಳಿಗೆ ಲೇಟ್ ಲೆಟರ್ ಫೀ ಅರ್ಥಾತ್ ಹೆಚ್ಚು ವಿಧಿಸಿ

ಇರುವುದರಿಂದ ಒಂದು ಕಾರ್ಡಿಗೆ ಒಂದೂಕಾಲಾಣೆ ಕಾಗದಕ್ಕೆ ಒಂದೂ ಮುಕ್ಕಾಲಾಣೆ ಖರ್ಚು ಮಾಡಬೇಕಾಗುತ್ತದೆ. ಈ ತೊಂದರೆಯಿಂದ ಅನೇಕರು ಮೇಲುಗಾಡಿಯಲ್ಲಿ ಹೋಗುವ ಜನರನ್ನು ನೋಡಿ ಅವರಲ್ಲಿ ತಮ್ಮ ಕಾಗದಗಳನ್ನು ಕೊಟ್ಟು ಕಳುಹಿಸುತ್ತಾರೆ. ಈ ಲೇಟ ಫೀಯನ್ನು ವಜಾಮಾಡಿ ಸ್ಟೇಷನ್‌ಗಳಲ್ಲಿ ಇರುವ ಡಬ್ಬಿಗಳನ್ನೇ ರೈಲ್‌ವೇ ಪೋಸ್ಟಿನವರು ತೆಗೆಯುವಂತೆ ಏರ್ಪಡಿಸಿದರೆ ಪೋಸ್ಟ್ ಇಲಾಖೆಯವರಿಗೆ ಲಾಭವು ಹೆಚ್ಚಾಗುವುದರಲ್ಲಿ ಸಂಶಯವಿಲ್ಲ. ಈ ಕಡೆಗೆ ಪೋಸ್ಟ್ ಇಲಾಖೆಯವರು ಹೆಚ್ಚು ಗಮನ ಕೊಡುವರೆಂದು ನಂಬುತ್ತೇವೆ.

———

## ಕ್ವೆಟ್ಟಾ ಭೂಕಂಪ.

ಕ್ವೆಟ್ಟಾದಲ್ಲಿ ಆದ ಭೂಕಂಪದ ದೆಸೆಯಿಂದ ಜನರಿಗೆ ಉಂಟಾದ ತೊಂದರೆಗಳನ್ನು ದೂರ ಮಾಡುವದಕ್ಕಾಗಿ ಹಿಂದುಸ್ಥಾನದ ರಾಜಪ್ರತಿನಿಧಿ (Viceray)ಗಳು ಒಂದು ದ್ರವ್ಯನಿಧಿ (Fund) ಏರ್ಪಡಿಸಿ ಇರುವುದು ಸರಿಯಷ್ಟೆ. ಈ ದ್ರವ್ಯನಿಧಿಗೆ ಇನ್ನೂ ಹೆಚ್ಚು ಹೆಚ್ಚಾಗಿ ಜನರು ಅನುಕೂಲಿಸಬೇಕಾಗಿದೆ. ಅಲ್ಲಿನ ಜನರ ತೊಂದರೆಯು ಇನ್ನೂ ತೀರಿಲ್ಲವೆಂಬ ವರ್ತಮಾನಗಳು ಈಗಲೂ ಬರುತ್ತಾ ಇವೆ.

———

## ವಿಮರ್ಶೆ

### ಮಹಾದೇವಿಯಕ್ಕನವರ ಜೀವನ ಚರಿತ್ರೆ.

ಈ ಹೆಸರಿನ ಒಂದು ಚಿಕ್ಕ ಪುಸ್ತಕವನ್ನು ಟಿ. ಎನ್ ಮಹಾದೇವಯ್ಯನವರು ಬರೆದಿರುವರಲ್ಲದೆ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲಾ ಪುಷ್ಪ ೧ ಆಗಿ ಬೆಂಗಳೂರಿನಲ್ಲಿ ಪ್ರಕಟವಾಗಿದೆ. ಸರ್ಪಭೂಷಣ ಶಿವಯೋಗಿ ಮಠದ ಈಗಿನ ಅಧಿಕಾರಿಗಳಾದ ಶ್ರೀ. ನಿ. ವ. ಮಹಾದೇವಸ್ವಾಮಿಗಳವರು ಇಂತಹ ಕಾರ್ಯಗಳನ್ನು ನಡೆಸುತ್ತಿರುವುದು ಸ್ತುತ್ಯವಾದುದು. ಇದು ಮೈಸೂರು ರೋಡಿನಲ್ಲಿರುವ ಬೆಂಗಳೂರು ಪ್ರೆಸ್ಸಿನಲ್ಲಿ ಅಚ್ಚಾಗಿರುತ್ತದೆ. ಆದರೂ ಕೆಲವು ಅಶುದ್ಧಗಳು ಇದರಲ್ಲಿ ಸೇರಿವೆ. ಉದಾ:—೧೩ನೆಯ ಪುಟದ ಕಡೆಯಭಾಗ.

ಗಿರಿಯಲ್ಲದೆ ' ಹುಲ್ಲು ದೊರಡಿ ' ಇಲ್ಲಿ ' ಹುಲು ವೊರಡಿ ' ಎಂದೂ 'ಕಿರಿವಳ್ಳಕ್ಕೆಳಿಸುವುದೇ' ಎಂಬಲ್ಲಿ 'ಕಿರಿವಳ್ಳಕ್ಕೆಳಸುವುದೇ' ಎಂದೂ ಆಗಬೇಕು.

ಈ ಚಿಕ್ಕ ಚರಿತ್ರೆಯನ್ನು ಪ್ರಕಟವಾಡುವವರಲ್ಲಿನೇ ಮಹಾದೇವಯ್ಯನವರು ಬಹಳ ಶ್ರಮೆಯನ್ನು ತೆಗೆದುಕೊಂಡಿರುತ್ತಾರೆ. ಅಕ್ಕನವರ ವಚನಗಳಿಂದಲೇ ಅವರ ಚರಿತ್ರೆಯನ್ನು ಆಕರ್ಷಣವಾಡಿ ಇರುತ್ತಾರೆ.

ಈ ಚಿಕ್ಕ ಪುಸ್ತಕದ ಬೆಲೆ ಎರಡಾಣೆ. ಓದುಗರು ಗ್ರಹಿಸಲಿಕ್ಕೆ ಯೋಗ್ಯವಾಗಿ ಇದೆ.

---

## ಸಾಧು ಟಿ. ಎಲ್, ಲಾಸ್ವಾನಿ ಇವರ ಮಹತ್ವದ ಭಾಷಣ.

ಲಾಸ್ವಾನಿ ಇವರು ಬೊಂಬಾಯಿಯಲ್ಲಿ ನಡೆದ ಅಖಿಲ ಭಾರತ ಜೀವದಯಾ ಪರಿಷತ್ತಿನ ೭ನೆಯ ಅಧಿವೇಶನದ ಅಧ್ಯಕ್ಷರು.

ಇವರ ಆಗಿನ ಭಾಷಣವನ್ನು ಅನ್ನದಾನೀಶ್ವರ ವಿರಕ್ತಮಠ ಗುಡದೂರ ಎಂಬುವವರು ಯೋಗ್ಯರೀತಿಯಲ್ಲಿ ಕನ್ನಡಿಸಿ ಇರುತ್ತಾರೆ. ಇದನ್ನು ಓದುವುದರಿಂದ ಭರತಖಂಡವನ್ನು ಸುಧಾರಿಸುವ ಮೂಲಸೂತ್ರವೇ ನಮ್ಮ ಕೈಗೆ ಸಿಕ್ಕಂತಾಗುವುದು.

---

## ಸೇವಾಧರ್ಮ

### ಅಥವಾ ಮಾನವ ಧರ್ಮಸಾಧನ

ಅನ್ನದಾನೀಶ್ವರ ವಿರಕ್ತಮಠ ಗುಡದೂರ ಇವರು ರಚಿಸಿದ ಒಂದು ಚಿಕ್ಕಪುಸ್ತಕ ಬೆಲೆ ಎರಡಾಣೆ.

ಇದು ಪ್ರತಿಯೊಬ್ಬ ಮನುಷ್ಯನೂ ಪರರ ಸೇವಾ ಮಾಡಬೇಕೆಂಬುದನ್ನು ಬೋಧಿಸುತ್ತದೆ. ತನು ಮನ ಧನಗಳನ್ನು ಸಮರ್ಪಿಸಿ ಸೇವಾ ಮಾಡಬೇಕೆಂದು ಬೋಧಿಸುತ್ತದೆ. ಬಸವೇಶ್ವರನ ಮೂರು ವಚನಗಳಿಂದ ಕೊನೆಗಂಡಿರುತ್ತದೆ. ಬಸವೇಶ್ವರನ ದಾಸೋಹಂಭಾದ ಬಗೆಯನ್ನು ಇನ್ನೂ ಹೆಚ್ಚಾಗಿ ವಿವರಿಸಿದ್ದರೆ ಚನ್ನಾಗಿರುತ್ತಿದ್ದಿತು.

---

# ಕನ್ನಡದ ಉನ್ನತಿ.

ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಈಚೀಚೆಗೆ ಕರ್ಣಾಟಕ ಸಾಹಿತ್ಯ ಪರಿಷತ್ತು ಬಹಳ ಉತ್ತಮವಾದ ಕೆಲಸವನ್ನು ಮಾಡುತ್ತಾ ಇದೆ. ಕಳೆದ ವರ್ಷ ಏರ್ಪಡಿಸಿದ ಗ್ರಂಥ ಪ್ರದರ್ಶನದಿಂದ ಎಲ್ಲ ಕನ್ನಡ ಗ್ರಂಥಗಳೂ ಒಂದು ಕಡೆಯಲ್ಲಿ ಕೂಡಿ ಬೀಳಲಿಕ್ಕೆ ಅವಕಾಶವಾದುದಲ್ಲದೆ ಕನ್ನಡ ವಾಙ್ಮಯದ ಬಂಡವಾಳವು ಈಗ ದೊರಕಲಿರುವುದು ಎಷ್ಟು ಎಂಬುದನ್ನು ತಿಳಿಯುವುದಕ್ಕೂ ಅನುಕೂಲವಾಯಿತು.

ಈ ವರ್ಷ (೧೯೩೫ ಮೇ ಜೂನ್ ತಿಂಗಳುಗಳಲ್ಲಿ) ಬೆಂಗಳೂರಿನಲ್ಲಿ ಇರುವ ಶ್ರೀ ಕೃಷ್ಣರಾಜ ಪರಿಷನ್ಮಂದಿರ (ಈ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯಾಲಯ) ದಲ್ಲಿ ಗಮಕ ಕಲೆಯ ಅಭ್ಯಾಸದ ಗೋಷ್ಠಿಯನ್ನು ಎಂದರೆ ಕನ್ನಡ ಕಾವ್ಯಗಳನ್ನು ಕಿವಿಗೆ ಇನಿದಾಗುವಂತೆಯೂ, ಅರ್ಥವು ಓದಿದ ಕೂಡಲೇ ಸುಲಭವಾಗಿ ತಿಳಿಯುವಂತೆಯೂ ಓದುವುದನ್ನು ಕಲಿಸುವ ವರ್ಗವು ಒಂದೊಂದು ಗಂಟೆಯ ಹೊತ್ತು ನಡೆಯಲು ಈ ಪರಿಷತ್ತಿನವರಿಂದ ಏರ್ಪಡಿಸಲು ನಿಶ್ಚಿತವಾಗಿದ್ದಿತು.

ಕನ್ನಡದಲ್ಲಿ ತ್ರಿವಿಧಿ, ಸಾಂಗತ್ಯ, ಸೀಸಪದ್ಯ, ಷಟ್ಪದಿ, ಕಂದ ಪದ್ಯ, ವೃತ್ತ ಮೊದಲಾದ ಅನೇಕ ಛಂದೋ ಬದ್ಧವಾದ ಪದ್ಯಗಳಿದ್ದಾಗ್ಯೂ ಅವುಗಳನ್ನು ಓದುವ ದಾಟಿ ಮೊದಲಾದವುಗಳು ತಿಳಿಯದೆ ಹುಡುಗರ ಮಗ್ಗಿ (ಪರೋಚಿ) ಯಂತೆ ಅವುಗಳನ್ನು ಉದ್ದಕ್ಕೆ ಓದುವ ಪದ್ಧತಿಯು ಬಿದ್ದು ಇವುಗಳನ್ನು ನಿರ್ಮಿಸಿದವರ ಉದ್ದೇಶಕ್ಕೆ ಭಂಗವನ್ನು ತರುವಂತೆ ಆಗಿದೆ.

ಈ ಪದ್ಯಗಳು ಕೇಳುವವರಿಗೆ ಮನೋಹರವಾಗಿ ಕಿವಿಗಿಂಪಾಗಿ ಇರುವುದಕ್ಕಾಗಿ ರಚಿಸಲ್ಪಟ್ಟವುಗಳಾಗಿ ಇವೆ. ತಕ್ಕ ರೀತಿಯಲ್ಲಿ ಇವುಗಳನ್ನು ಹೇಳಿದರೆ ಕನ್ನಡದ ರಸಿಕತೆಯು ಉಳಿದಂತಾಗುತ್ತದೆ. ಈ ಉದ್ದೇಶವು ನೆರವೇರುವಂತೆ ಪರಿಷತ್ತಿನವರು ಏರ್ಪಡಿಸಿದುದು ಶ್ರೇಷ್ಠವಾದ ಕೆಲಸ.

ಇದಲ್ಲದೆ ರಾಯಚೂರಿನಲ್ಲಿ ಕೂಡಿದ ೧೯೩೪ ನೆಯ ಈ ಸಾಹಿತ್ಯ

ಪರಿಷತ್ತಿನ ಸಮ್ಮೇಳನದಲ್ಲಿ ಆಗಿರುವ ನಿರ್ಣಯಗಳಲ್ಲಿ ಈ ಕೆಳಗಿನವು ಬಹು ಮುಖ್ಯವಾದವುಗಳು.

೧೫. ನಿಜಾಂ ಸರ್ಕಾರದಲ್ಲಿ ಕರ್ಣಾಟಕದ ಇತಿಹಾಸಕ್ಕೆ ಮುಖ್ಯ ಸಾಮಗ್ರಿಗಳಾಗಿರುವ ಶಿಲಾಶಾಸನಗಳು ಹೇರಳವಾದುವೂ ಮಹತ್ತ್ವವುಳ್ಳುವೂ ಇರುವುದರಿಂದ, ನಿಜಾಂ ಸರ್ಕಾರದವರು ಕೊಪ್ಪಳ ಜಹಗೀರಿನ ಶಾಸನಗಳನ್ನು ಮುದ್ರಿಸುತ್ತಿರುವುದಕ್ಕಾಗಿ ಈ ಸಮ್ಮೇಳನವು ಆ ಸರ್ಕಾರವನ್ನು ಅಭಿನಂದಿಸಿ, ಅದರಂತೆ ಈ ಸಂಸ್ಥಾನದ ಇತರ ಭಾಗಗಳಲ್ಲಿಯೂ ಶಿಲಾಲಿಪಿಗಳ ಸಂಶೋಧನ ಕಾರ್ಯವನ್ನು ತೀವ್ರವೇ ನಡಸಿ, ಸಂಸ್ಥಾನದ ಯಾವತ್ತೂ ಭಾಗಗಳ ಕನ್ನಡ ಶಿಲಾಲಿಪಿಗಳ ಅಚ್ಚನ್ನು ತೆಗೆದುಕೊಂಡು ಮುದ್ರಿಸಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

೧೬. ನಿಜಾಂ ಸಂಸ್ಥಾನದಲ್ಲಿ ಕೈಬರಹದ ಅಸಂಖ್ಯಾತ ಕನ್ನಡ ಗ್ರಂಥಗಳು ದೊರೆಯುವುದರಿಂದ ಅವುಗಳನ್ನು ಸಂಗ್ರಹಿಸಿ ಸಂಶೋಧಕರಿಗೆ ದೊರಕಿಸಿಕೊಡಬೇಕೆಂದು ನಿಜಾಂ ಸರ್ಕಾರವನ್ನು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

೧೯. ಕರ್ಣಾಟಕ ದೇಶದ ಭಾಷೆ ಸಾಹಿತ್ಯ ಸಂಸ್ಕೃತಿಗಳಲ್ಲಿ ಇರುವ ಪ್ರಾದೇಶಿಕ ವ್ಯತ್ಯಾಸಗಳನ್ನು ಕಡಮೆ ಮಾಡಿ ಅವುಗಳ ಏಕರೂಪತೆಯನ್ನೂ ಸಾರಸಂಪತ್ತುಗಳನ್ನೂ ಹೆಚ್ಚುಪಡಿಸುವುದಕ್ಕೆ ಕನ್ನಡನಾಡಿನಲ್ಲಿರುವ ನಾನಾ ಸರಕಾರಗಳ ಮತ್ತು ವಿದ್ಯಾಧಿಕಾರಿಗಳ ಮನಃಪೂರ್ವಕವಾದ ಅನ್ಯೋನ್ಯ ಸಹಕಾರವು ಅತ್ಯಂತ ಆವಶ್ಯವಾಗಿರುವುದರಿಂದ ಇಂಥ ಸಹಕಾರವನ್ನು ಸಂಪಾದಿಸಿ ಸಾರ್ಥಕಗೊಳಿಸುವುದಕ್ಕಾಗಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಂಬಂಧದಲ್ಲಿ ಒಂದು ಪ್ರತ್ಯೇಕವಾದ ಸಮಿತಿಯು ಏರ್ಪಾಟಾಗಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ. ಆ ಸಮಿತಿಯಲ್ಲಿ (೧) ಮೈಸೂರು ಸಂಸ್ಥಾನ, (೨) ಬೊಂಬಾಯಿ ಅಧಿಪತ್ಯ, (೩) ಮದರಾಸು ಅಧಿಪತ್ಯ, (೪) ಹೈದರಾಬಾದು ಸಂಸ್ಥಾನ, (೫) ಕೊಡಗು ಪ್ರಾಂತ, (೬) ಉತ್ತರ ಕರ್ಣಾಟಕ ಸಂಸ್ಥಾನಗಳು— ಈ ಬೇರೆ ಬೇರೆ ಸರ್ಕಾರಗಳು ನಿಯಮಿಸಿ ಕಳುಹಿಸುವ ಒಬ್ಬೊಬ್ಬ ಪ್ರತಿನಿಧಿಯೂ; (೧) ಮೈಸೂರು, (೨) ಬೊಂಬಾಯಿ, (೩) ಮದರಾಸು, (೪) ಹೈದರಾಬಾದು— ಈ ವಿಶ್ವವಿದ್ಯಾಲಯಗಳ ಒಬ್ಬೊಬ್ಬ ಪ್ರತಿನಿಧಿ

ಯೂ; ಇವರುಗಳ ಜೊತೆಗೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ನಿಯಮಿಸುವ ಮೂವರು ಸದಸ್ಯರೂ ಇರತಕ್ಕದ್ದು; ಮತ್ತು ಈ ಸಮಿತಿಗೆ ಉಚಿತ ತೋರಿದ ಮೇರೆಗೆ ಐದು ಮಂದಿಗೆ ಮೀರದಂತೆ ಬೇರೆ ಸದಸ್ಯರನ್ನು ಸೇರಿಸಿಕೊಳ್ಳಲು ಅದಕ್ಕೆ ಅಧಿಕಾರವಿರತಕ್ಕದ್ದು. ಈ ಸಮಿತಿಯು ಈ ಮುಂದೆ ಕಾಣುವ ಪ್ರಶ್ನೆಗಳನ್ನು ವಿಚಾರಕ್ಕೆ ತಿಗೆದುಕೊಳ್ಳತಕ್ಕದ್ದು :—

(೧) ಬೇರೆ ಬೇರೆ ಪ್ರಾಂತಗಳಲ್ಲಿರುವ ಪಾಠಶಾಲೆ ವಿಶ್ವವಿದ್ಯಾಲಯಗಳಲ್ಲಿ ನಾನಾ ತರಗತಿಗಳಲ್ಲಿ ಉಪಯೋಗವಾಗುತ್ತಿರುವ ಕನ್ನಡ ಪಠ್ಯ ಪುಸ್ತಕಗಳ ಶೈಲಿ ಸಾಹಿತ್ಯ ಮೊದಲಾದವುಗಳಲ್ಲಿ ಏಕರೂಪತೆಯನ್ನುಂಟು ಮಾಡಿಸುವುದು ಎಷ್ಟು ಮಟ್ಟಿಗೆ ಸಾಧ್ಯ ? ಅದಕ್ಕೆ ಆಗಬೇಕಾದ ಏರ್ಪಾಟುಗಳೇನು ?

(೨) ಸರ್ಕಾರದ ಕನ್ನಡ ಪ್ರಸಿದ್ಧ ಪತ್ರಿಕೆಗಳು, ಪ್ರಕಟನೆಗಳು, ವರದಿಗಳು ಮುಂತಾದ ಕಾಗದ ಪತ್ರಗಳಲ್ಲಿ ಒಂದೇ ಬಗೆಯ ಶೈಲಿಯನ್ನೂ ಒಂದೇ ಪರಿಭಾಷೆಯನ್ನೂ ರೂಢಿಗೆ ತರುವುದು ಎಷ್ಟು ಮಟ್ಟಿಗೆ ಸಾಧ್ಯ ? ಅದಕ್ಕೆ ಆಗಬೇಕಾದ ಏರ್ಪಾಟುಗಳಾವುವು ?

(೩) ಕನ್ನಡ ದೇಶವೆಲ್ಲಕ್ಕೂ ಸಮಾನ ಪ್ರಮಾಣವಾಗಿರುವಂತೆ ನಿಘಂಟು, ವ್ಯಾಕರಣ, ಕೋಶಗಳನ್ನು ತಯಾರು ಮಾಡಿಸಲು ಸಾಧ್ಯವೆ ? ಅದು ಹೇಗೆ ?

(೪) ಕನ್ನಡ ಪಾಠಶಾಲೆಗಳ ಬೋಧಕರ ಪ್ರಯೋಜನಕ್ಕಾಗಿ ಪಂಡಿತ ಪರೀಕ್ಷೆ ಮೊದಲಾದ ಪರೀಕ್ಷೆಗಳನ್ನು ಕನ್ನಡ ದೇಶದ ಎಲ್ಲ ಸರ್ಕಾರಗಳೂ ಎಲ್ಲ ವಿದ್ಯಾ ಇಲಾಖೆಗಳೂ ಅಂಗೀಕರಿಸುವಂತೆ ಒಂದು ಅಧಿಕಾರ ಸ್ಥಾನದಿಂದ ನಡೆಯಿಸುವುದು ಸಾಧ್ಯವೆ ?

ಈ ಪ್ರಶ್ನೆಗಳನ್ನೂ ಮತ್ತು ಇದಕ್ಕೆ ಸಂಬಂಧಪಟ್ಟ ಇತರ ಪ್ರಶ್ನೆಗಳನ್ನೂ ಮೇಲ್ಕಂಡ ಸಮಿತಿಯು ಪರ್ಯಾಲೋಚಿಸಿ, ತನ್ನ ತೀರ್ಮಾನಗಳನ್ನು ಈ ಸಮ್ಮೇಳನಕ್ಕೂ ಕನ್ನಡ ನಾಡಿನ ಸರ್ಕಾರಗಳಿಗೂ ೧೯೩೩ ನೆಯ ಇಸವಿಯ ಅಂತ್ಯದೊಳಗಾಗಿ ತಿಳಿಯಪಡಿಸತಕ್ಕದ್ದು.

ಈ ಮೇಲೆ ಕಂಡಂತೆ ಸಮಿತಿಯನ್ನು ನಾನಾ ಸರ್ಕಾರಗಳ ಸಹಾಯದಿಂದ ನಿಯಾಮಕ ಮಾಡಿಸಿ ಕೆಲಸ ನೆರವೇರಿಸಲು ಅವಶ್ಯವಾದ ಎಲ್ಲ

ಪ್ರಯತ್ನಗಳನ್ನೂ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ನಡಸತಕ್ಕದ್ದು.

ಈ ನಿರ್ಣಯದ ಪ್ರಕಾರ ಮೈಸೂರು ಬೊಂಬಾಯಿ ಮದರಾಸು ಹೈದರಾಬಾದು ಸರಕಾರದವರು ಕೂಡಿ ಕನ್ನಡದ ಪಠ್ಯ ಪುಸ್ತಕಗಳನ್ನು ಏರ್ಪಡಿಸುವುದಾದರೆ ಕನ್ನಡ ಮಾತೆಯು ತನ್ನ ಮಕ್ಕಳೆಲ್ಲರನ್ನು ಒಂದೇ ವಿಧವಾಗಿ ಪೋಷಿಸುವಂತೆ ಆಗುತ್ತದೆ. ಇಲ್ಲದಿದ್ದರೆ ಕಲ್ಯಾಣದ ಕಡೆಯಲ್ಲಿ ಯಾನಾ ಎಂಬ ಪದದ ಉಪಯೋಗ ಮಾಡುವುದು, ರೈಲ್ವೆ ಇಲಾಖೆಯಲ್ಲಿ ರಿಟರನ್ ಟಕೆಟ್ಟು ಎಂಬ ಪದದ ಉಪಯೋಗ ಮಾಡುವುದು, ಇವೇ ಮುಂತಾದ ಅಬದ್ಧಗಳು ಬೆಳೆದು ಕನ್ನಡ ಮಾತೆಯ ಮುಖಕ್ಕೆ ಮಸಿ ಹಚ್ಚಿದಂತಾಗಿ ಅನುಯಾಯಿಗಳಿಗೂ ಆ ಮಸಿಯು ಅಂಟಿಕೊಳ್ಳಲಿಕ್ಕೆ ಆರಂಭವಾಗುವುದು.

ಇಂಥಾ ಅಸ್ಪಿಷ್ಟಗಳೆಲ್ಲಾ ನಿವಾರಣೆಯಾಗುವಂತೆ ಕರ್ನಾಟಕ ( ಕನ್ನಡ ) ರಾಜ್ಯದ ರಾಜರುಗಳು ತಕ್ಕ ಬೆಂಬಲವನ್ನು ಕೊಟ್ಟು ಕನ್ನಡವನ್ನು ಸ್ವಚ್ಛವಾಗಿ ಬೆಳಗುವಂತೆ ಮಾಡಿ ಕನ್ನಡವು ಕನ್ನಡಿಯಾಗಿರುವಂತೆ ಉನ್ನತಿಗೆಯ್ಯಲಿ ಎಂದು ಸಾಭಿಮಾನದಿಂದ ಪ್ರಾರ್ಥಿಸುವೆವು.

ಹೈದರಾಬಾದು ಸರಕಾರದವರು ಕನ್ನಡ ಲಿಪಿಯ ಶಿಲಾಶಾಸನಗಳನ್ನು ಇದೂ ವರೆವಿಗೆ ಬಯಲಿಗೆ ತಾರದೆ ಇರುವುದಕ್ಕೆ ಬಹಳ ವಿಷಾದಿಸಬೇಕಾಗಿದೆ. ವರ್ಷಕ್ಕೆ ಸ್ವಲ್ಪ ಸ್ವಲ್ಪವೆಂತಲಾದರೂ ಈ ಕೆಲಸವನ್ನು ನಡೆಸುವುದರ ಕಡೆಗೆ ಆ ಸರಕಾರದವರು ಗಮನ ಕೊಡುವರೆಂದು ನಿರೀಕ್ಷಿಸುತ್ತೇವೆ.

ಈ ಕರ್ನಾಟಕ ಸಾಹಿತ್ಯ ಪರಿಷತ್ತಿನ ದ್ರವ್ಯ ನಿಧಿಗಾಗಿ ಕನ್ನಡ ಭಾಷೆಯ ಮುಂದಾಳುಗಳಾದ ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು M. A. B. L. ಸೆಂಟ್ರಲ್ ಕಾಲೇಜಿನ ಇಂಗ್ಲಿಷ ಪ್ರೊಫೆಸರ್ ಇವರು ಒಂದು ಸಾವಿರ ರೂಪಾಯಿಗಳನ್ನು ದಾನ ಮಾಡಿದುದು ಸ್ತುತ್ಯವಾದ ಕೆಲಸ.

ಈಚೆಗೆ ಪ್ರಬಲಕ್ಕೆ ಬಂದ ಹಿಂದಿ ಭಾಷೆಯ ಪ್ರಚಾರಕ್ಕೆ ಲಕ್ಷಗಟ್ಟಲೆ ನಿಧಿಯನ್ನು ಕೂಡಿಸಬೇಕೆಂದು ರಾಷ್ಟ್ರದ ಮುಂದಾಳುಗಳಾದ ಮೋಹನದಾಸ ಕರಮಚಂದ ಗಾಂಧಿಯವರು ಮುಂತಾದವರು ಯೋಚಿಸುತ್ತಾ ಇರುವಲ್ಲಿ ಸಾವಿರಾರು ವರ್ಷಗಳಿಂದ ತನ್ನ ಮನೋಹರತೆಯನ್ನು ವ್ಯಾಪನೆಗೊಳಿಸಿರುವ ಕನ್ನಡದ ಅಭಿವೃದ್ಧಿಗೆ ತಕ್ಕ ನಿಧಿ ಇಲ್ಲದೆ

ಇರುವುದು ಎಷ್ಟು ದೊಡ್ಡ ಕೊರತೆ, ಮತ್ತು ವ್ಯಸನದ ಸ್ಥಿತಿಯು. ಈ ಕೊರತೆಯ ಪರಿಹಾರಕ್ಕಾಗಿ ಇವರು ಹಾಕಿದ ಮಾದರಿಯನ್ನು ಕನ್ನಡದ ಅಭಿಮಾನಿಗಳು ಅನುಸರಿಸಿ ತಾವೂ ಈ ದ್ರವ್ಯ ನಿಧಿಯನ್ನು ಬೆಳೆಸಲು ಸಹಾಯ ಮಾಡಿ ಕನ್ನಡವು ತನ್ನಷ್ಟಕ್ಕೆ ತಾನೇ ಮುಂದೆ ಬಂದು ಸನ್ನುತವಾದ ಕಾರ್ಯವನ್ನು ಮಾಡಿ ಜಗತ್ತನ್ನು ಆನಂದಪಡಿಸುವಂತೆ ಆಗಲಿ ಎಂಬುದೇ ಕನ್ನಡಿಗರೆಲ್ಲರ ಬಯಕೆಯು. ಅವರಲ್ಲಿ ನಮ್ಮದು ಸ್ವಲ್ಪ.

ಈ ವರ್ಷದ ಸಾಹಿತ್ಯ ಪರಿಷತ್ತು ಹಿಂದೂಸ್ಥಾನದ ಅತ್ಯಂತ ದೊಡ್ಡ ಪಟ್ಟಣವಾದ ಬೊಂಬಾಯಿಯಲ್ಲಿ ಮುಂದಿನ ಡಿಸೆಂಬರು ತಿಂಗಳಲ್ಲಿ ಕೂಡಲಿರುವುದು ಇನ್ನೂ ಸಂತೋಷದ ಕಾರ್ಯವು, ಇದಲ್ಲದೆ ದಿವಾನ್ ಬಹದ್ದೂರ್ ಸಿದ್ದಪ್ಪನವರು ತೋಟಪ್ಪನವರು ಕಂಬಳಿ, ( ಬೊಂಬಾಯಿ ವಿದ್ಯಾಭ್ಯಾಸದ ಇಲಾಖಾ ಮಂತ್ರಿಯವರು ) ಮೊದಲಾದವರು ಇದನ್ನು ಯೋಗ್ಯ ರೀತಿಯಲ್ಲಿ ನೆರವೇರಿಸಲು ಏರ್ಪಡಿಸುತ್ತಾ ಇರುವುದನ್ನು ನೋಡಿದರೆ ಕನ್ನಡದ ಬನ್ನ ( ಭಂಗ ) ವೇ ಹರಿದು ಹೋಗುವ ಕಾಲವು ಬಂದಿತು ಎಂದು ಯೋಚಿಸಬೇಕಾಗಿರುವುದು.

ಕನ್ನಡದ ಕೊರತೆಗಳು ಬಹಳವಾಗಿ ಇವೆ. ಎಲ್ಲಾ ಕನ್ನಡ ಪದಗಳನ್ನು ಒಳಗೊಂಡ ಒಂದು ಕನ್ನಡ ಕೋಶವು ಈ ವರೆವಿಗೂ ರಚಿಸಲ್ಪಟ್ಟಿಲ್ಲ. ಶಿವ ಶರಣರ ವಚನ ವಾಙ್ಮಯದಲ್ಲಿ ಇರುವ ಪಾರಿಭಾಷಿಕ ಪದಗಳ ಸರಿಯಾದ ಅರ್ಥವನ್ನು ತಿಳಿಯುವುದಕ್ಕೆ ತಕ್ಕ ಅನುಕೂಲಗಳಿಲ್ಲ. ಈ ಕಾಲದಲ್ಲಿ ಇಂಗ್ಲಿಷ್ ಭಾಷೆಯು ಇಡೀ ಜಗತ್ತನ್ನು ಆವರಿಸಿ ಇರುವುದರಿಂದ ಕನ್ನಡದಲ್ಲಿ ಇರುವ ವಿಶೇಷ ಸಂಗತಿಗಳನ್ನು ಇಂಗ್ಲಿಷ್‌ನಲ್ಲಿ ತಿಳಿಸಲು ಕನ್ನಡ ಪಾರಿಭಾಷಿಕ ಪದಗಳಿಗೆ ತಕ್ಕ ಇಂಗ್ಲಿಷ್ ಪದಗಳು ಬೇಕು. ಅವುಗಳ ಯೋಜನೆಯಿಲ್ಲ.

ಇಂತಹ ಕೊರತೆಗಳನ್ನು ನಿವಾರಣ ಮಾಡುವುದಕ್ಕೆ ಈ ವರ್ಷದ ಪರಿಷತ್ತಿನಲ್ಲಿ ಅನುಕೂಲವು ಮಾಡಲ್ಪಡುವುದೆಂದು ನಂಬುತ್ತೇವೆ.

ವೈದ್ಯದ ವಿಷಯವೇ ಮೊದಲಾದ ಅನೇಕ ವಿಷಯಗಳ ಗ್ರಂಥಗಳು ಓಲೆಯಗರಿಯಲ್ಲಿ ಇರತಕ್ಕವುಗಳು ಇನ್ನೂ ಮುದ್ರಣವಾಗಿಲ್ಲ. ಇವನ್ನೆಲ್ಲಾ ಹೊರಕ್ಕೆ ತರುವಂತೆಯೂ ಒಂದೊಂದು ಭಾಗದಲ್ಲಿಯೂ ಅಭಿವೃದ್ಧಿಯ ತೋರುವಂತೆಯೂ ಮಾಡಲಿಕ್ಕೆ ಉಪ ಸಮಿತಿಗಳು ಏರ್ಪಾಡಾಗುವುದೂ ಅತ್ಯಂತ ಆವಶ್ಯಕವಾದ ಕಾರ್ಯವಾಗಿದೆ.

ಕರ್ಣಾಟಕ ಸಿಂಹಾಸನಾಧೀಶ್ವರರಾದ ಮೈಸೂರಿನ ಶ್ರೀಮನ್ಮಹಾರಾಜ

ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್‌ರವರು G. C. S. I, G. B. E, ಇವರು ಈ ಪರಿಷತ್ತಿನ ಮೇಲೆ ಕೃಪೆಯಿಟ್ಟು ಪೋಷಕರಾಗಿರುವರಲ್ಲದೆ ಇದರ ವಿಶೇಷೋತ್ಸವಗಳಿಗೆ ಕೃಪಾಪೂರ್ವಕವಾಗಿ ಧನಸಹಾಯವನ್ನು ಮಾಡುತ್ತಾ ಇರುವದು ಅಭಿನಂದನೀಯವಾದ ಸಂಗತಿ. ಪೂರ್ವದಲ್ಲಿ ಕನ್ನಡದ ಅಭಿವೃದ್ಧಿಗೆ ರಾಜರುಗಳ ಬೆಂಬಲವು ವಿಶೇಷವಾಗಿದ್ದಿತು. ಈಗ ಕನ್ನಡವನ್ನು ಮುಂದಕ್ಕೆ ತರುವುದಕ್ಕೆ ಈ ಮಹಾರಾಜರವರೇ ಮುಂದಾಳುಗಳೆಂದು ತಿಳಿಯಲು ಸಂಶಯವೇನೂ ಇಲ್ಲ. ಇವರ ಕೃಪಾದೃಷ್ಟಿಯನ್ನೇ ಕನ್ನಡ ಮಾತೆಯು ಹಾರೈಸಿ ಬೇಡುತ್ತಿದ್ದಾಳೆ. ಈ ಮಹಾರಾಜರವರ ವಿಶೇಷ ಕೃಪೆಗೆ ಪಾತ್ರಳಾದಲ್ಲದೆ ಕನ್ನಡಮಾತೆಯು ತನ್ನ ಅಲಂಕಾರ ವೈಖರಿಗಳಿಂದ ಶೋಭಿಸಳು. ಆದ್ದರಿಂದ ಇವರ ಕೃಪಾಪೂರ್ವಕವಾದ ಸಹಾಯವೂ ಇನ್ನೂ ಹೆಚ್ಚಾಗಿ ಆಗಬೇಕಾಗಿದೆ.

ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರವರು ಜಿ. ಸಿ. ಐ. ಇ. ರವರು ಈ ಕರ್ನಾಟಕ ಪರಿಷತ್ತಿನ ಅಧ್ಯಕ್ಷರಾಗಿ ಇರುತ್ತಾರೆ. ಈ ದೆಸೆಯಿಂದ ಈ ಪರಿಷತ್ತು ಇವರದಾಗಿರುತ್ತದೆ. ಕನ್ನಡಮಾತೆಯು ಇವರ ತಾಯಿಯಸ್ವರೂಪಳಾಗಿಯೂ ಇರುತ್ತಾಳೆ. ಇಂತಹ ತಾಯಿಯನ್ನು ಹೇಗೆ ಜೋಪಾನ ಮಾಡಬೇಕೆಂಬುದು ಇವರಿಗೇ ಗೊತ್ತು. ಹಿಂದಿಭಾಷೆಯ ಉಪಟಳದಿಂದ ನೋಯದಂತೆ ಈಕೆಯನ್ನು ಹೇಗೆ ರಕ್ಷಿಸಬೇಕೆಂಬುದೂ ಇವರಿಗೆ ಗೊತ್ತು. ಇದರಲ್ಲಿ ನಾವು ಬರೆಯಬೇಕಾದುದೇನೂ ಇಲ್ಲ.

ಈ ವರ್ಷದ ಪರಿಷತ್ತಿನಲ್ಲಿ ಕೂಡುವ ಕನ್ನಡ ಸಾಹಿತ್ಯಾಭಿಮಾನಿಗಳು ಆಂಧ್ರರಿಂದ ಮತ್ತು ಮಹಾರಾಷ್ಟ್ರರಿಂದ ಕನ್ನಡಕ್ಕೆ ಆಗುತ್ತಿರುವ ಪೀಡೆಗಳನ್ನು ತಪ್ಪಿಸಿ ಸರ್ವತೋಮುಖವಾಗಿ ಕನ್ನಡವು ಆನಂದದಿಂದ ಬೆಳೆಯುವಂತೆ ಏರ್ಪಡಿಸುವರೆಂದೂ ಕನ್ನಡದ ಉನ್ನತಿಯ ಅನುಕೂಲಗಳನ್ನು ಹೆಚ್ಚಿಸಿ ಅವರ ಏಳಿಗೆಗೆ ಚಿರಸ್ಥಾಯಿಯಾದ ಕಾರ್ಯಗಳನ್ನು ಮಾಡುವರೆಂದೂ ಕನ್ನಡವು ಹಿಂದೂ ದೇಶದ ನಾಗರಿಕತೆಯ ಮುಖ್ಯ ಚಿಹ್ನೆಯಾಗಿದ್ದ ಧಾರ್ಮಿಕ ತತ್ವ ವಿಷಯಗಳ ವಿವರಣೆಯ ಮುಖ್ಯವಾದ ಬೀಡಾಗಿರುವುದೆಂಬುದನ್ನು ಇಡೀ ಜಗತ್ತಿಗೆ ತೋರಿಸುವಂತೆ ಮಾಡುವರೆಂದೂ ನಂಬಿ ನಿರೀಕ್ಷಿಸುತ್ತಿರುವೆವು.

—ಪ್ರಕಾಶಕ.

# ಕ್ರೈಸ್ತರು ಹಿಂದೂ ಧರ್ಮಕ್ಕೆ ಸೇರಿದುದು.



ಸ್ಟೋಕ್ಸ್ ಎಂಬುವವರು ಮತ್ತು ಅವರ ಪತ್ನಿಯವರು ಮೊದಲು ಕ್ರೈಸ್ತರಾಗಿದ್ದು ಈಗ ಹಿಂದೂಧರ್ಮದ ದೀಕ್ಷೆಯನ್ನು ಹೊಂದಿ ಹಿಂದೂ ಧರ್ಮವನ್ನು ಸ್ವೀಕರಿಸಿ ಇರುತ್ತಾರೆ. ಈ ಜುಲೈತಿಂಗಳಲ್ಲಿ ಸನಾತನಿಗಳು ಅವರಿಗೆ ಕೊಟ್ಟ ಮೇಜವಾನಿಯ ವೇಳೆಯಲ್ಲಿ ಅವರು ಹೀಗೆ ಹೇಳಿರುತ್ತಾರೆ:—

"ಹಿಂದೂ ಧರ್ಮದಲ್ಲಿ ಪ್ರತಿಯೊಬ್ಬನಿಗೆ ಸ್ವತಂತ್ರವಾಗಿ ತನ್ನ ಇಚ್ಛೆಯಂತೆ ಮುಕ್ತಿಮಾರ್ಗದ ಶೋಧಮಾಡಲು ಸ್ವಾತಂತ್ರ್ಯವಿದೆ. ಆದರೆ ಉಳಿದ ಧರ್ಮಗಳಂತೆ ನಿಯಂತ್ರಣ ಕಟ್ಟು ಮೊದಲಾದವುಗಳು ಹಿಂದೂ ಧರ್ಮದಲ್ಲಿ ಇಲ್ಲ. ಸ್ವತಂತ್ರ ಧರ್ಮವಾದ ಹಿಂದೂ ಧರ್ಮವೇ ನನಗೆ ಪ್ರಿಯವೆನಿಸುತ್ತದೆ."

ಇವರು ಹೇಳಿರುವ ಈ ಮಾತಿನ ಒಂದೊಂದು ಅಕ್ಷರವೂ ನಿಜವಾದುದು. ಹಿಂದೂ ಧರ್ಮಗಳಲ್ಲಿ ಮಹಾದೇವನೇ ಇಲ್ಲವೆಂದು ಹೇಳುವವನಿಗೆ ಪಂಚಭೂತಗಳನ್ನು ತತ್ತ್ವವಾಗಿ ತಿಳಿಯುವ ಸಾಂಖ್ಯ ಶಾಸ್ತ್ರವು ಇರುತ್ತದೆ. ಮುಂದೆ ಮುಂದೆ ಮಹಾದೇವನು ಉಂಟೆಂದು ತರ್ಕಿಸಿ ತಿಳಿಯುವವರಿಗೆ ಯೋಗ, ನ್ಯಾಯ, ವೈಶೇಷಿಕ ಶಾಸ್ತ್ರಗಳಿವೆ. ಸಾಕಾರನಾದ ಮಹಾದೇವನ ಮೂರ್ತಿಯನ್ನು ಪೂಜಿಸುವುದಕ್ಕೆ ಪೂರ್ವಮೀಮಾಂಸ ಶಾಸ್ತ್ರವಿದೆ. ನಿರಾಕಾರ ಬ್ರಹ್ಮ (ಮಹಾದೇವ) ನನ್ನು ನಂಬಲಿಕ್ಕೆ ಮತ್ತು ತಾನೇ ಬ್ರಹ್ಮಸ್ವರೂಪನೆಂದು ತಿಳಿಯಲಿಕ್ಕೆ ಉತ್ತರ ಮೀಮಾಂಸ ಶಾಸ್ತ್ರವಿದೆ. ಹೀಗೆ ಹಿಂದೂ ಧರ್ಮವು ಒಬ್ಬನೇ ಕ್ರಮ ಕ್ರಮವಾಗಿ ತನ್ನ ತಿಳಿವಳಿಕೆಯಲ್ಲಿ ಮುಂದಕ್ಕೆ ಹೋಗಿ ಕಡೆಯಲ್ಲಿ ತಾನೂ ಬ್ರಹ್ಮ ಸರ್ವವೂ ಬ್ರಹ್ಮ ಎಂದು ತಿಳಿಯುವಷ್ಟು ಸ್ವತಂತ್ರತೆಯನ್ನೂ ಹೊಂದುತ್ತಾನೆ.

ಇಂತಹ ಅನುಕೂಲ ಸ್ಥಿತಿಯ ಆಚರಣೆಯನ್ನು ಅನೇಕ ಶತಮಾನಗಳಿಂದ ಹಿಂದೂಗಳು ನಡೆಸದೆ ಅವರು ಬೇರೆ ಇವರು ಬೇರೆ, ಅವರು ದೊಡ್ಡವರು

ಇವರು ಸಣ್ಣವರು, ಒಬ್ಬರಿಗೊಬ್ಬರು ಕೂಡಲಿಕ್ಕಾಗದು, ಎಂಬ ವಿಭಾಗಗಳನ್ನು ಹೆಚ್ಚು ಮಾಡುತ್ತಾ ಅನೇಕ ಕಟ್ಟು (ನಿರ್ಬಂಧ) ಗಳನ್ನು ಏರ್ಪಡಿಸುತ್ತಾ ಬಂದುದರಿಂದ ಈಗ ಹಿಂದೂ ಮತದಷ್ಟು ಭೇದವುಳ್ಳುದು, ಪ್ರಪಂಚದಲ್ಲಿ ಇನ್ನೂ ಯಾವುದೂ ಇಲ್ಲವೆಂದು ನಿಂದೆ ಮಾಡಿಸಿಕೊಳ್ಳುವ ಸ್ವರೂಪಕ್ಕೆ ತಿರುಗಿಬಿಟ್ಟಿದೆ. ಈಗ ಭೇದಗಳನ್ನೆಲ್ಲಾ ತೆಗೆದು ಬಿಡಬೇಕು. ಅತ್ಯಂತ ಪೂರ್ವಕಾಲದ ಹಿಂದೂ ತತ್ವವನ್ನೇ ನೆಲೆಗೊಳಿಸಬೇಕು. ಇಂತಹ ಸಂಗತಿಗಳನ್ನು ಕುರಿತು ಹಸ್ತಪತ್ರಿಕೆಗಳನ್ನು ಹಂಚಬೇಕು. ಈ ತತ್ತ್ವವನ್ನು ತಿಳಿಸುವ ಪುಸ್ತಕಗಳನ್ನು ಹೆಚ್ಚಾಗಿ ಪ್ರಕಟಿಸಬೇಕು. ಅದರಂತೆ ಆಚರಿಸಲು ತಕ್ಕ ಪ್ರಯತ್ನಗಳನ್ನು ಮಾಡಬೇಕು. ಹೀಗಾದರೆ ಹಿಂದೂ ಜನರಿಗೆ ತಮ್ಮ ಪೂರ್ವಿಕರ ನಿಜವಾದ ತತ್ವವು ಏನು ಉಂಟು ಎಂಬುದನ್ನು ತಿಳಿದು ಬೇಕಾದ ರೀತಿಯಲ್ಲಿ ಸ್ವಾತಂತ್ರ್ಯವನ್ನು ಅನುಭವಿಸಿಕೊಂಡು ಇರಲಿಕ್ಕೆ ಅವಕಾಶವಾಗುತ್ತದೆ.

ಈ ಸ್ಟೋಕ್ಸ್ ಎಂಬುವವರು ಅನೇಕ ಹಿಂದೂಗಳಿಗೂ ಕೂಡಾ ತಿಳಿಯದೆ ಇರುವ ಹಿಂದೂ ಮತದ ಸ್ವಾತಂತ್ರ್ಯದ ನಿಜಸ್ಥಿತಿಯನ್ನು ಕೂಪ ಕೂರ್ಮ ನ್ಯಾಯದಂತೆ ನಿಜಧರ್ಮಾಂಧರಾಗಿ ಇರುವವರಿಗೆ ಕೂಡಾ ಬೋಧೆ ಯಾಗುವಂತೆ ತಿಳಿಯ ಪಡಿಸಿದುದೂ ತಾವಿಬ್ಬರೂ (ದಂಪತಿಗಳು) ಈ ಧರ್ಮಕ್ಕೆ ಸೇರಿದುದೂ ಇಡೀ ಜಗತ್ತಿನ ಜನರ ದೃಷ್ಟಿಯನ್ನು ಆಕರ್ಷಣೆ ಮಾಡುವಂತಹ ಕೆಲಸವಾಗಿದೆ.

ಇನ್ನಾದರೂ ಹಿಂದೂಗಳು ಹಿಂದೂಧರ್ಮವನ್ನು ಸರಿಯಾಗಿ ತಿಳಿದು ಹಿಂದೂಧರ್ಮದ ಮುಖ್ಯ ಲಕ್ಷಣವಾದ ಸರ್ವಸಮಾನತ್ವ ಭಾವವನ್ನೂ ಅತ್ಯಂತ ಶ್ರೇಷ್ಠವಾದ ಧಾರ್ಮಿಕ ಸ್ವಾತಂತ್ರ್ಯ ಲಕ್ಷಣವನ್ನೂ ಆಚರಿಸಿ ಇಡೀ ಜಗತ್ತಿನ ಜನರಿಗೆಲ್ಲಾ ಬೋಧಿಸಿ ಹಿಂದೂ ಮತವನ್ನು ಜಗತ್ತಿನಲ್ಲೆಲ್ಲಾ ಹರಡುವವರಾಗಲಿ ಎಂದು ಆಶಿಸುವೆವು.

ಪ್ರಕಾಶಕ.

---

# ಲಿಂಗಾಯುತರೂ ಮತ್ತು ಪುನರ್ಜನ್ಮವೂ.

ಲೇಖಕರು:— ಎಫ್. ಆಟೋ ಸ್ಕ್ರೇಡರ್.

( ಕನ್ನಡಭಾಷೆಗೆ ತಂದವರು:— ವೀರಪ್ಪನವರು ಯಗಟಿ
ಬಿ. ಎ. ಎಲ್. ಎಲ್. ಬಿ ವಕೀಲರು, ಹಾವೇರಿ. )

ಅಬ್ಬೆ ಡುಬಾಯಿಸ ಎಂಬವರು ತಮ್ಮ ಪ್ರಖ್ಯಾತ ಗ್ರಂಥವಾದ ಹಿಂದೂ ಪದ್ಧತಿಗಳು ಮತ್ತು ಧಾರ್ಮಿಕ ವಿಧಿಗಳು (Hindu manners, Customs and Ceremonies) ಎಂಬದರಲ್ಲಿ ಶೈವಧರ್ಮದ ವಿಷಯವಾಗಿ ಹೇಳುವಾಗ ವೀರಶೈವ ಅಥವಾ ಲಿಂಗಾಯುತ ಧರ್ಮದ ವಿಷಯುವಾಗಿ ಹೀಗೆ ಪ್ರತಿಪಾದಿಸಿದ್ದಾರೆ. "ಈ ಶೈವಧರ್ಮದ ಅಗಾಧವಾದ ವಿಶಿಷ್ಟತ್ವವೇನಂದರೆ ಹಿಂದೂಧರ್ಮದ ಮುಖ್ಯ ತತ್ವವಾದ ಮರುಜನ್ಮವನ್ನು ಸಂಪೂರ್ಣವಾಗಿ ನಿರಾಕರಿಸಿದ್ದು." ಈ ವಾಕ್ಯವು ಥರ್ಸಟನ್ ಮತ್ತು ರಂಗಾಚಾರಿ ಇವರಿಂದ ತಮ್ಮ ಗ್ರಂಥಗಳಲ್ಲಿ (Castes and Tribes of Southern India Madras 1909, Vol IV P. 286) ಮೇಲಿಂದ ಮೇಲೆ ಹೇಳಲ್ಪಟ್ಟದೆ. ಇದರಂತೆಯೇ ಎನ್ ಥಾವೆನ್ನರಿಂದ ಬರೆಯಲ್ಪಟ್ಟವೆ. ( ಆದರೂ ಇವರು ಸಂಪೂರ್ಣ ದೃಢವಾಗಿ ಹೇಳುವದಿಲ್ಲ.) ( In Hasting's Encyclopaedia of Religion and Ethics). ರಸೆಲ್ ಮತ್ತು ಹಿರಾಲಾಲ್‌ರಿಂದ (In Tribes and Castes of Central Provinces, London 1916 Vol I. P. 245) ಸಹ ಬರೆಯಲ್ಪಟ್ಟದೆ.

ಈ ಬರೆವಣಿಗೆಗಳಿಂದ ಲಿಂಗಾಯುತರು ಆತ್ಮದ ಅಮರತ್ವವನ್ನು ಪ್ರತಿಪಾದಿಸುತ್ತಾರೋ ಹೇಗೆಂಬದು ಸಂಶಯದ ಮಾತಾಗಿದೆ.

ಸ್ಟೆನ್ ಕೊನೊ ಎಂಬವರು ಸಹ ತಮ್ಮ 'ಇಂಡಿಯನ್' ಎಂಬ ಲೋಕಪ್ರಿಯವಾದ ಚಿಕ್ಕ ಗ್ರಂಥದಲ್ಲಿ (1917) ಈ ಪಂಥವು ಪುನರ್ಜನ್ಮವನ್ನು ನಿರಾಕರಿಸುತ್ತದೆ ಎಂದು ಹೇಳಿದ್ದಾರೆ.

ಹಿಂದೂಧರ್ಮದ ಒಂದು ಪಂಥವು ಪುನರ್ಜನ್ಮವನ್ನು ಅಥವಾ ಅಮರತ್ವವನ್ನು ಸಹ ನಿರಾಕರಿಸುತ್ತದೆಂಬದು ವಿಶೇಷಸಂಗತಿಯಾಗಿದೆ.

ಯಾಕಂದರೆ ಹಿಂದುಗಳು ಪುನರ್ಜನ್ಮಕ್ಕಿಂತ ಬೇರೆಯಾದ ಒಂದು ತತ್ವದಲ್ಲಿ ಹೆಚ್ಚು ನಂಬಿಕೆಯುಳ್ಳವರಾಗಿರುವರೆಂದು ತೋರಿಸುವದು ಕಠಿಣವಾಗಿದೆ. ಆದಾಗ್ಯೂ ಲಿಂಗಾಯತರು ಪುರಾತನ ಹಿಂದೂ ಧರ್ಮವನ್ನು ತಲೆಕೆಳಗೆ ಮಾಡುವ ಯತ್ನದಲ್ಲಿಯೂ ಮತ್ತು ತಮ್ಮ ವಾಙ್ಮಯದ ಪೂರ್ಣ ಅಜ್ಞಾನದಿಂದಲೂ ಈ ತಪ್ಪನ್ನು ಮಾಡಿರುವರೆಂದು ಕಂಡುಬರುತ್ತದೆ. ಅವರ ಗ್ರಂಥಗಳಿಂದ ಒಂದು ಆಧಾರವು ಈ ತಪ್ಪನ್ನು ಹೋಗಲಾಡಿಸಲು ಸಾಕಾಗಿದೆ. ಇದಲ್ಲದೆ ಲಿಂಗಾಯತರ ಮತತತ್ವಗಳನ್ನು ಚನ್ನಾಗಿ ಅರಿತುಕೊಳ್ಳಲು ಈ ವಿಷಯವನ್ನು ಹೆಚ್ಚು ವಿಶದವಾಗಿ ಹೇಳಲು ಅರ್ಹವಾಗಿದೆ.

ಲಿಂಗಾಯತರು ಸ್ವರ್ಗ ನರಕಗಳಲ್ಲಿಯೂ ಪುನರ್ಜನ್ಮದಲ್ಲಿಯೂ ನಂಬಿಕೆಯುಳ್ಳವರಾಗಿರುವರೆಂಬದಕ್ಕೆ ಕೆಲವು ಆಧಾರ ಶ್ಲೋಕಗಳನ್ನು ಕೊಟ್ಟು ಪ್ರಾರಂಭಿಸುತ್ತೇನೆ.

ನೀಲಕಂಠನಾಗನಾಥನು ವೀರಮಾಹೇಶ್ವರಾಚಾರ ಸಂಗ್ರಹದ ಧರ್ಮಾಧರ್ಮ ಪ್ರಕರಣದ ಶ್ಲೋಕ ೧೬-೧೭ರಲ್ಲಿ ಮನುಷ್ಯಶರೀರವು ಧರ್ಮ ಮತ್ತು ಅಧರ್ಮಗಳಿಂದ ಉತ್ಪತ್ತಿಯಾಗಿದೆಯೆಂತಲೂ ಮತ್ತು ಮನುಷ್ಯನು ಸದಾಚಾರದಿಂದ ಶ್ರೇಷ್ಠಗತಿಯನ್ನು ಹೊಂದುವನೆಂತಲೂ ಮತ್ತು ಪಾಪದಿಂದ ಅಧೋಗತಿಯನ್ನು ಹೊಂದುವನೆಂತಲೂ, ಎರಡೂ ಬಂಧನಗಳನ್ನು ಜ್ಞಾನವೆಂಬ ಶಸ್ತ್ರದಿಂದ ಕತ್ತರಿಸಿ ಮೋಕ್ಷ ಪಡೆಯುತ್ತಾನೆಂತಲೂ, ಹೇಳಿದ್ದಾನೆ. ಮುಂದಿನ ಪ್ರಕರಣವು ಎರಡು ನೂರಕ್ಕಿಂತ ಹೆಚ್ಚು ಶ್ಲೋಕಗಳಿಂದ ನರಕಗಳ ವಿವರವನ್ನು ಕೊಡುತ್ತದೆ.

ಶಿವಯೋಗೀಂದ್ರನು ಅನಾದಿವೀರಶೈವಸಾರಸಂಗ್ರಹದಲ್ಲಿ ವಿಶ್ವೋತ್ಪತ್ತಿಯ ಪ್ರಕರಣದಲ್ಲಿ ಗರ್ಭ ಉಪನಿಷತ್ತಿನ ೪ನೇ ಪ್ರಕರಣದ ಆಧಾರದಿಂದ "ಅಥ ನವಮೇ ಮಾಸೇ'' ಮುಂತಾಗಿ "ನಾನಾಯೋನಿ ಸಹಸ್ರಾಣಿ" "ಮೃತಶ್ಚಾಹಮ್ ಪುನರ್ಜಾತೊ ಜಾತಶ್ಚಾಹಮ್ ಪುನರ್ಮೃತಃ" ಎಂಬ ಶ್ಲೋಕಗಳನ್ನು ಉದಾಹರಿಸಿದ್ದಾನೆ.

೨೮ ಶೈವಾಗಮಗಳಲ್ಲಿ ಕೇವಲ ವೀರಶೈವಪರವಾದ ಪಾರಮೇಶ್ವರಾಗಮದ ೮ನೇ ಪಟಲದ ೮೧ನೆಯ ಶ್ಲೋಕದಲ್ಲಿ ಭಗವದ್ಗೀತೆಯ ಪ್ರಸಿದ್ಧವಾದ ೬ನೇ ಪ್ರಕರಣದ ಶ್ಲೋಕ ೩೭-೪೨ ಗಳು ಹೀಗೆ ವಿವರಿಸಲ್ಪಟ್ಟಿವೆ:—ಲಿಂಗಾಯತನು ಎಡವಿಬಿದ್ದಾಗ(ತನ್ನ ಧರ್ಮವನ್ನು ತಪ್ಪಿ ನಡೆದಾಗ,

ಅವನು ನರಕದಲ್ಲಿ ಬೀಳುವದಿಲ್ಲ. ಆದರೆ ಅನೇಕ ವರ್ಷಗಳ ಕಾಲ ಸ್ವರ್ಗ ಸುಖವನ್ನು ಅನುಭವಿಸಿದನಂತರ ಲಿಂಗಾಯತವಂಶದಲ್ಲಿ ಜನ್ಮತಾಳು ತ್ತಾನೆ(ಗೃಹೇಷು ಲಿಂಗಿನಾಂ). ಹೀಗೆ ಅನೇಕ ಜನ್ಮಗಳಲ್ಲಿ ಶುದ್ಧವಾದ ನಂತರ ಅವನು ಕೊನೆಯ ಜನ್ಮವನ್ನು( ಚರಮಂ ಜನ್ಮ) ಪುಟ್ಟುತ್ತಾನೆ.

ಲಿಂಗಾಯತನಾದ ಕೆಳದಿ ಬಸವರಾಜನ ಶಿವತತ್ವರತ್ನಾಕರದ ೬ನೇ ಕಲ್ಲೋಲದ ೩ನೇ ತರಂಗದ ೪೩ನೇ ಶ್ಲೋಕದಲ್ಲಿ ಶಿವಭಕ್ತನಾದವ ನನ್ನು ಹಿಂಸೆಮಾಡಿದವನಿಗೆ ಒಂದು ಕೋಟಿ ಜನ್ಮಗಳವರೆಗೆ ಹಂದಿಯಾ ಗಿಯೂ, ಏಳು ಜನ್ಮಗಳವರೆಗೆ ತೊನ್ನುಶರೀರಿಯಾಗಿಯೂ, ಒಂದುಜನ್ಮ ದಾಸೀಪುತ್ರಿಯಾಗಿಯೂ ಇರಬೇಕಾಗುವದೆಂದು ಹೇಳಿದೆ.

ಮೇಲೆ ಹೇಳಿದಂತೆ ಅನೇಕ ಆಧಾರಗಳನ್ನು ಕೊಡಬಹುದು. ಆದರೆ ಇದು ಅನಾವಶ್ಯಕವು. ಯಾಕಂದರೆ ಲಿಂಗಾಯತರು ಜೈನ ಬೌದ್ಧರಂತೆ ಬ್ರಾಹ್ಮಣ ಧರ್ಮಗ್ರಂಥಗಳನ್ನು ನಿರಾಕರಿಸುವದಿಲ್ಲ. ಆದರೆ ಅವುಗಳನ್ನು ಪ್ರಮಾಣಗ್ರಂಥಗಳನ್ನಾಗಿ ತಿಳಿಯುವದರಿಂದ ಪುನರ್ಜನ್ಮದಲ್ಲಿ ನಂಬಿಕೆಯುಳ್ಳವರೆಂಬವಕ್ಕೆ ಸಾಕ್ಷಿಯಾಗಿದೆ.

ಅಬ್ಬೆ ಡುಬಾಯಿಸನು ಯಾಕೆ ತಪ್ಪು ಮಾಡಿದನೆಂಬ ಪ್ರಶ್ನೆಯು ಉದ್ಭವಿಸುವದು. ಇಂಥ ಮೇಧಾವಿಯು ಮತ್ತು ನಂಬತಕ್ಕದ್ದನ್ನು ತಿಳಿಸುವವನು ಯಾಕೆ ತಪ್ಪು ಮಾಡಿರಬಹುದೆಂಬದನ್ನು ನಂಬುವದು ಕಠಿಣವಾಗಿದೆ.

ಈ ಸಮಸ್ಯೆಯನ್ನು ಬಿಡಿಸುವದು ಸುಲಭವಾಗಿದೆ. ೨೮ ಶೈವಾಗಮಗಳಲ್ಲಿ ಮೊದಲನೆಯದೆಂದು ಕರೆಯಲ್ಪಡುವ ಕಾಮಿಕಾಗಮದ(ಕೆಳಗೆ ಬರೆದ) ಶ್ಲೋಕದಲ್ಲಿ ಹೀಗೆ ಹೇಳಿದೆ.

ಏಕೇನ ಜನ್ಮನಾ ಮುಕ್ತಿರ್ ವೀರಾಣಾಂಚ ಮಹೇಶ್ವರಿ ।
ಇತರೇಷಾಂಚ ಶೈವಾನಾಂಮುಕ್ತಿರ್ ಜನ್ಮತ್ರಯಾತ್ಪರಮ್ ॥

ಅಂದರೆ ಒಂದೇ ಜನ್ಮದಿಂದ ವೀರಶೈವರು ಮೋಕ್ಷ ಪಡೆಯುತ್ತಾರೆ. ಎಲೋ ಮಹೇಶ್ವರಿಯೇ! ಉಳಿದ ಶೈವರು ಮೂರು ಜನ್ಮಗಳ ತರುವಾಯ ಮೋಕ್ಷ ಪಡೆಯುತ್ತಾರೆ.

ವೀರಶೈವ ಧರ್ಮವು ಎಷ್ಟು ಶ್ರೇಷ್ಠವಿರುವದೆಂದರೆ ಪ್ರತಿಯೊಬ್ಬನೂ ಅವರ ದೀಕ್ಷೆಯನ್ನು ವಿಧಿಪೂರ್ವಕವಾಗಿ ಹೊಂದಿ ಅವರ ತತ್ವಗಳನ್ನು ಕೊನೆಯವರೆಗೆ ಪಾಲಿಸಿದಲ್ಲಿ ಸತ್ತಕ್ಷಣದಲ್ಲಿಯೇ ಶಿವನಲ್ಲಿ ಐಕ್ಯವಾಗುತ್ತಾನೆ. ಮತ್ತು ಪುನರ್ಜನ್ಮದಿಂದ ಮುಕ್ತನಾಗುತ್ತಾನೆ. ಇಂಥವನು

ಪುನರ್ಜನ್ಮಕ್ಕೊಳಗಾದವನೆಂದು ಯಾರು ನಂಬುತ್ತಾರೋ ಅವರು ತಪ್ತ ಕುಂಭ ನರಕದಲ್ಲಿ ಚಿರಕಾಲ ಬೀಳುವರು. ಈ ಪ್ರಕಾರ ಅವಿತ್ಯಪುರಾಣದ ಆಧಾರವನ್ನು ವೇದಾಂತಸಾರ ವೀರಶೈವ ಚಿಂತಾಮಣಿಯ ಕರ್ತನು ಉದಾಹರಿಸಿದ್ದಾನೆ.

ಈ ನಂಬಿಗೆಯು ಲಿಂಗಾಯತರು ಮಾಡುವ ತಮ್ಮ ಮೃತಶರೀರಗಳ ಉತ್ತರಕ್ರಿಯೆಯು ಮೇಲಿಂದ ಗೊತ್ತಾಗುವದು. ಸತ್ತಾಗ ಅಥವಾ ಜೀವಂತವಿರುವಾಗ ಶಿವರೂಪವಾದ ಲಿಂಗವನ್ನು ಶರೀರದಿಂದ ಅಗಲಿರಬಾರದೆಂಬುದೇ ಅವರ ಮೃತಶರೀರಗಳು ದಹನವಾಗದಿರುವದಕ್ಕೆ ಕಾರಣವು. ಅವರು ಮುಕ್ತರಾಗಿರುವದರಿಂದ ಅವರ ಮೃತಶರೀರಗಳನ್ನು ಸನ್ಯಾಸಿಗಳು ಜೀವಂತವಿರುವಾಗ ಜ್ಞಾನಾಗ್ನಿಯಿಂದ ಒಮ್ಮೆ ಅವರ ದೇಹವು ಸುಡಲ್ಪಟ್ಟಂತೆ (ಇವರ ದೇಹವೂ ಅಗಿದೆ ಎಂದು) ತಿಳಿಯತಕ್ಕದ್ದು. ಆದ್ದರಿಂದ. ಅವರ ಮೃತಶರೀರಗಳು ಮಾಸಿದ ಕೆಂಪು (ಕಾವೀ) ಬಣ್ಣದ ಅರಿವೆಗಳಲ್ಲಿ ಮುಚ್ಚಲ್ಪಟ್ಟು ಹೂಳಲ್ಪಡುತ್ತವೆ. ಇದರಂತೆಯೇ ಹೆಣ್ಣುಮಕ್ಕಳೂ ಸಹ ಲಿಂಗಧಾರಿಗಳಿರುವದರಿಂದ ಇವರ ಉತ್ತರಕ್ರಿಯೆಯು ಮಾಡಲ್ಪಡುತ್ತದೆ.

ಆದ್ದರಿಂದ ಇವರ ಉತ್ತರಕ್ರಿಯೆಯ ಆಧಾರದ ಮೇಲಿಂದಲೂ ಪ್ರತಿಯೊಬ್ಬ ಲಿಂಗಾಯತನು ಮೃತವಾದನಂತರ ಪುನರ್ಜನ್ಮತಾಳುವದಿಲ್ಲವೆಂಬ ಹೇಳಿಕೆಯಿಂದಲೂ ಲಿಂಗಾಯತರು ಪುನರ್ಜನ್ಮದಲ್ಲಿ ನಂಬಿಕೆಯಿಲ್ಲದವರೆಂಬ ತೀರ್ಮಾನವನ್ನು ಅಬ್ಬೆಡುಬಾಯಿಸನು ತೆಗೆದನೆಂಬದು ಸಿದ್ಧವಾಗುತ್ತದೆ. ಅವನು ಲಿಂಗಾಯತ ಧರ್ಮವನ್ನು ಇನ್ನುಳಿದ ಇಂಡಿಯನ್ ಧರ್ಮಗಳಿಗಿಂತ ಪ್ರತ್ಯೇಕವಾದದ್ದೆಂದು ತಿಳಿದದ್ದೇ ಪ್ರಮಾದವು. ಕ್ರಿಶ್ಚಿಯನ್ ಧರ್ಮದಂತೆ ಲಿಂಗಾಯತ ಧರ್ಮವೊಂದೇ ತನ್ನ ಪ್ರತಿಯೊಬ್ಬ ಅನುಯಾಯಿಗೆ ಒಂದೇ ಜನ್ಮದಲ್ಲಿ ಮುಕ್ತವಾಗಲು ಅವಕಾಶ ಕೊಡುತ್ತದೆ. "ಲಿಂಗಾಯತನು ಹೂಳಲ್ಪಟ್ಟಕೂಡಲೇ ಮರೆಯಲ್ಪಡುತ್ತಾನೆ" ಎಂದು ಅಬೆಡುಬಾಯಿಸನು ಹೇಳುವದು ಸತ್ಯವಾಗಿದೆ. ಯಾಕಂದರೆ ಶಿವನಲ್ಲಿ ಬೆರೆತವನಿಗೆ ಮತ್ತು ಶಿವನಿಗೆ ಅರ್ಪಿಸಿದ ಯಾವತ್ತು ಅಂಶಗಳಲ್ಲಿ ಭಾಗಿಯಾದವನಿಗೆ ತರ್ಪಣ, ಹವನ ಮೊದಲಾದ ವಿಧಿಗಳಿಂದ ಏನು ಪ್ರಯೋಜನವುಂಟು? ಈ ಕಾರಣದಿಂದಲೇ ವರ್ಷಕ್ಕೊಮ್ಮೆ ಲಿಂಗಾಯತರಿಂದ ತಮ್ಮ ಹಿರಿಯರಿಗೆ ಮಾಡಲ್ಪಡುವ ಆರಾಧನೆಯು ಕೇವಲ ಅವರ ಸ್ಮಾರಕಕ್ಕಾಗಿಯೇ ವಿನಹ ಬೇರೆಯಲ್ಲವೆಂದು

ಮಾಯಿದೇವನು ತನ್ನ ಶಿವಸಿದ್ಧಾಂತ ತಂತ್ರದ ದೇಹಾವಸಾನ ಭಾಗದಲ್ಲಿ ಹೇಳಿದ್ದಾನೆ.

ಅಥೈನಂ ಅಪಿಚೋದ್ದಿಶ್ಯ ಕರ್ಮಚೇತ್ ಕರ್ತುಮ್ ಈಪ್ಸಿತಮ್ ।
ಕಲ್ಯಾಣಂ ಏವಕುರ್ವೀತ ಶಿವಭಕ್ತಾಂಶ್ಚ ತರ್ಪಯೇತ್ ॥
ಪ್ರತ್ಯಬ್ದಂ ಚ ತಮುದ್ದಿಶ್ಯ ಶಿವಭಕ್ತಾನ್ ಶ್ಚ ಭೋಜಯೇತ್
ಭಕ್ತೇಭ್ಯೋ ದತ್ತಮ್ ಅನ್ನಂ ಯದ್ ದತ್ತಮ್ ಏವ ಶಿವಾಯ ಹಿ

ಆದರೆ ಇದೆಲ್ಲಾ ಸರಿಯಾದ ಲಿಂಗಾಯತನೆಂದು ತಿಳಿಯಲ್ಪಟ್ಟವನಿಗೆ ಮಾತ್ರ ಅನ್ವಯಿಸುತ್ತದೆ ಆದರೆ ಮಾಲಾಗಳು ಅಥವಾ ಚಲವಾದಿಗಳಂತಹ ಪರಿಶುದ್ಧರಲ್ಲದ ಲಿಂಗಾಯತ ಸಂಬಂಧಿಗಳಾದ ಜನರಿಗೆ ಅನ್ವಯಿಸುವದಿಲ್ಲ. ಈ ಚಲವಾದಿಗಳು ಲಿಂಗಾಯತರ ಅನುಯಾಯಿಗಳು. ಇವರು ಲಿಂಗವನ್ನು ಧರಿಸುತ್ತಾರೆ. ಮತ್ತು ಲಿಂಗಾಯತರ ಉತ್ಸವಗಳಲ್ಲಿ ಗಂಟೆ ಬಾರಿಸುತ್ತ ಹೋಗುತ್ತಾರೆ. ಈಗಿನ ಕಾಲದ ಲಿಂಗವಂತರಲ್ಲಿ ಮಾಲಾ ಅಥವಾ ಮಾದಿಗರು ಲಿಂಗವನ್ನು ಧರಿಸಲಿಕ್ಕೆ ಅರ್ಹರಲ್ಲವೆಂಬುದು ಹೇಗೋ ರೂಢಿಗೆ ಬಂದಿದೆ. ಈ ಚಲವಾದಿಗಳಂತಹವರು ಸಹ ಪುನರ್ಜನ್ಮದಿಂದ ಮುಕ್ತರಾದವರೆಂದು ಹೇಳುವ ಅವಶ್ಯವಿಲ್ಲ. (ಆಗುತ್ತಾರೆಂದು ಭಾವವು).

## ಪ್ರಕಾಶಕನ ಟಿಪ್ಪಣಿಗಳು.

ಇದು ಜರ್ಮನೀ ದೇಶದ ಪ್ರಸಿದ್ಧ ಪಂಡಿತರಾದ ಕೀಲ್ ಎಂಬ ಪಟ್ಟಣದಲ್ಲಿ ಇರುವ ಪ್ರೊಫೆಸರ್ ಡಾಕ್ಟರ್ ಎಫ್, ಒಟ್ಟೋ, ಸ್ಕ್ರೇಡರ್ (Prof, Dr. F. Otto Schrader) ಎಂಬವರು ವೀರಶೈವ ಮತದ ವಿಷಯವಾಗಿ ಬರೆದ ಪ್ರಬಂಧದ ಭಾಷಾಂತರವು. (ಕಂಸದೊಳಗೆ ಬರೆದ ಶಬ್ದಗಳು ಇವರು ಬರೆದವುಗಳಲ್ಲ.) ಇವರು ವೀರಶೈವ ಮತದ ವಿಷಯವಾದ ಅನೇಕ ಗ್ರಂಥಗಳನ್ನು ಓದಿರುವರೆಂಬುದು ಇದರಿಂದ ಚನ್ನಾಗಿ ವ್ಯಕ್ತವಾಗುತ್ತದೆ. ಈ ಪ್ರಬಂಧದಲ್ಲಿ ಒಂದು ಕಡೆ ಕೆಳಗಡೆ ಬರೆದ ಟಿಪ್ಪಣಿಯಲ್ಲಿ "ನನ್ನ ಬಳಿಯಲ್ಲಿ ವೀರಶೈವರ ಗ್ರಂಥಗಳ ಒಳ್ಳೆಯ ಸಂಗ್ರಹವು (ಕೂಡಿಸಿರೋಣವು) ಇರುತ್ತದೆ. ಈ ವಿಶೇಷ ಲಕ್ಷಣದ ಮತದ ವಿಷಯವಾಗಿ ಒಂದು ಸಾಂಕೇತಿಕ ಪುಸ್ತಕ (ಹೆಗ್ಗುರುತಿನ ಹೊತ್ತಗೆ= Monograph)ವನ್ನು ಸಿದ್ಧಮಾಡುವುದಕ್ಕಾಗಿ ಅವು

ಗಳನ್ನು ಉಪಯೋಗ ಮಾಡುತ್ತೇನೆ.'' ಎಂದು ತಿಳಿಸಿ ಇದ್ದಾರೆ. ಈ ಮತದ ಉತ್ತಮ ಲಕ್ಷಣಗಳು ಅವರ ಮನಸ್ಸಿನಲ್ಲಿ ಚನ್ನಾಗಿ ಬಿಂಬಿಸಿ ಇರುತ್ತವೆ ಎಂಬ ನಿಶ್ಚಯವು ಇದರಿಂದ ಗೊತ್ತಾಗುತ್ತದೆ. ಇದಕ್ಕೆ ಬಹಳವಾಗಿ ಸಂತೋಷಿಸಬೇಕಾಗಿದೆ. ಇಂತಹ ಪಂಡಿತರು ಆಂಗ್ಲೇಯ ಭಾಷೆಯಲ್ಲಿ ವೀರಶೈವ ಮತ ಸಂಬಂಧದ ಪುಸ್ತಕವನ್ನು ಬರೆಯುವದೂ ಸಹಾ ಸ್ತುತ್ಯವಾದ ವಿಷಯುವೇ ಆಗಿದೆ.

ಇವರು ಬರೆದಿರುವಂತೆ ವೀರಶೈವರು 'ನಮಗೆ ಪುನರ್ಜನ್ಮ ವಿಲ್ಲ' ಎಂದು ನಂಬುವುದು ಸತ್ಯವಾಗಿದೆ. ವೀರಶೈವರು ಬ್ರಾಹ್ಮಣ ಮತ (ಹಿಂದೂ ಧರ್ಮ)ವನ್ನು ಜೈನ ಬೌದ್ಧರಂತೆ ತಿರಸ್ಕರಿಸುವುದಿಲ್ಲ ಎಂಬ ರಹಸ್ಯವನ್ನು ಇವರು ಕಂಡುಹಿಡಿದಿರುವುದು ಯೋಗ್ಯವಾದ ವಿಷಯವಾಗಿದೆ. ಆದರೆ ವೀರಶೈವರು ಹಿಂದೂಧರ್ಮದಲ್ಲಿ ಹೇಳಿದ ಪುನರ್ಜನ್ಮದ ವಿಷಯವನ್ನು ಅಹುದೆಂದು ಒಪ್ಪಿಕೊಂಡಿರುತ್ತಾರೆ, ಹೀಗೆ ಅವರ ಗ್ರಂಥಗಳಲ್ಲಿ ಬರೆದಿರುತ್ತಾರೆ ಎಂದು ಹೇಳುವದರಿಂದ ವೀರಶೈವರಿಗೆ ಪುನರ್ಜನ್ಮವಿದೆ ಎಂದು ತಿಳಿವುದಾದರೆ ಆ ವಿಷಯವು ಮಾತ್ರ ನಂಬುಗೆಗೆ ಅರ್ಹವಲ್ಲದ ವಿಷಯವಾಗುತ್ತದೆ.

ವೀರಶೈವರ ಗ್ರಂಥಗಳಲ್ಲಿ ಮನುಷ್ಯರಿಗೆ ಸುಖ ದುಃಖವುಂಟು, ಸ್ವರ್ಗ ನರಕಗಳುಂಟು, ಜಾತಿಭೇದಗಳು ಉಂಟು, ಎಂದು ಮುಂತಾಗಿ ಹೇಳಿದ್ದರೂ ಕೂಡ ಹಿಂದೂಧರ್ಮಕ್ಕೆ ಸೇರಿದ ಅಂತಹ ಪ್ರಾಕೃತಿಕರ (ಮನುಷ್ಯರ) ಲಕ್ಷಣಗಳನ್ನೂ, ಅದೇ ಹಿಂದೂಧರ್ಮಕ್ಕೆ ಸೇರಿದ ತಮ್ಮ ಅಪ್ರಾಕೃತಿಕ (ಅತಿವರ್ಣದ) ಲಕ್ಷಣಗಳನ್ನೂ ತೋರಿಸಿದರೆ ಇವೆರಡನ್ನೂ ಹೋಲಿಸಿ ಓದಿದಾಗ ಅತಿವರ್ಣದ ಕಡೆಗೆ ಅವರು ಒಲಿಯುವರೆಂಬುದೇ ಹಾಗೆ ಹೇಳಿರುವುದರ ಉದ್ದೇಶವಲ್ಲದೆ ತಾವು ಹಿಂದಿನ ಜನ್ಮದಿಂದ ಬಂದೆವೆಂಬುದನ್ನು ಅಥವಾ ಮುಂದೆ ಜನ್ಮಕ್ಕೆ ಒರುವೆವೆಂಬದನ್ನು ವೀರಶೈವರು ಒಪ್ಪುವುದೇ ಇಲ್ಲ.

ಇದಕ್ಕೆ ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗಸ್ವಾಮಿಗಳವರ ವಚನವೇ ಸಾಕ್ಷಿಯಾಗಿದೆ.

ಲಿಂಗದಿ ದ ಶರಣರುದಯವಾಗದಿರ್ದರೆ ಬಸವ ಚನ್ನಬಸವ ಪ್ರಭುದೇವರು ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳೆಲ್ಲರೂ ಕ್ಷೀರ ಕ್ಷೀರವ ಬೆರಸಿದಂತೆ ನೀರು ನೀರ ಬೆರಸಿದಂತೆ ಘೃತ ಘೃತ

ವ ಬೆರಸಿದಂತೆ ಬಯಲು ಬಯಲ ಬೆರಸಿದಂತೆ ಲಿಂಗವ ಬೆರಸಿ ಮ ಹಾಲಿಂಗವೆಯಾದರು ಹೇಂಗೆ ನೋಡಾ? ಲಿಂಗದಿಂದ ಶರಣನುದಯ ವಾಗದಿದ್ದರೆ ನೀಲಲೋಚನೆಯಮ್ಮ ಲಿಂಗದೊಳಗೆ ತನ್ನಂಗವನೇಕೀಕ ರಿಸಿ ಕೇವಲ ಪರಂಜ್ಯೋತಿ ಲಿಂಗದಲ್ಲಿ ನಿರವಯವಾದಳು ಹೇಂಗೆ ನೋಡಾ? ಇಂತಪ್ಪ ದೃಷ್ಟವ ಕಂಡು ಕಂಡು ನಂಬದಿರ್ಪುದು ಕರ್ಮ ದ ಫಲ. ಅದು ಇವರ ಗುಣವೇ? ಶಿವನ ಮಾಯಾ ಪ್ರಪಂಚಿಸ ಗುಣ ನೋಡಾ ಈ ಪ್ರಪಂಚ ಜೀವಿಗಳು ಅಹುದೆಂಬುದೂ ಅಲ್ಲವೆಂಬುದೂ ಪ್ರಮಾಣವಲ್ಲ ನೋಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಈ ವಚನವನ್ನು ನೋಡಿದರೆ ಶಿವಶರಣರು ಹಿಂದಿನ ಜನ್ಮದಿಂದ ಬಂದವರಲ್ಲವೆಂಬುದೂ ಮುಂದಿನ ಜನ್ಮಕ್ಕೆ ಬರುವವರಲ್ಲವೆಂಬುದೂ ಇ ವರ ತಿಳುವಳಿಕೆಯಲ್ಲಿ ಇರುವುದು ಚನ್ನಾಗಿ ಗೊತ್ತಾಗುತ್ತದೆ. ಈ ಲೋಕದಲ್ಲಿ ಪ್ರಮಥರು (ಶಿವಭಕ್ತರು) ಅವತಾರಿಗಳಾಗಿ ಬಂದು ಲಿಂ ಗೈಕ್ಯರಾಗುತ್ತಾರೆ ಎಂಬುದೇ ವೀರಶೈವರ ನಿಜವಾದ ಜ್ಞಾನವು. ಆದ್ದ ರಿಂದ ಅಮರತ್ವ (Immorality)ವನ್ನೇ ಇವರು ಒಪ್ಪತಕ್ಕವರು.

ವೇದಾಂತ (ಅದ್ವೈತ, ಸೋಹಂ = ನಾನೇ ಬ್ರಹ್ಮನು ಎಂದು ಹೇಳುವ ಶಾಸ್ತ್ರ)ದಲ್ಲಿ ಮನುಷ್ಯನು ಅದ್ವೈತಿಯಾದರೆ ಜೀವನ್ ಮು ಕ್ತನಾಗುವನೆಂದೂ ಆದರೂ ದೇಹವಿರುವವರೆವಿಗೂ ದೇಹದ ಸುಖ ದುಃಖಗಳು ತಪ್ಪುವುದಿಲ್ಲವಾದ್ದರಿಂದ ವಿದೇಹಮುಕ್ತಿ (ಕೈವಲ್ಯ) ಆಗುವು ದಿಲ್ಲವೆಂದೂ ಈ ದೇಹದ ಮುಕ್ತಿಯು ಜೀವನು ದೇಹದಿಂದ ಅಗಲಿ ದಾಗ ಮಾತ್ರವೇ ಆಗುವುದೆಂದೂ ಕೊನೆಯ ಪರಿಣಾಮವನ್ನು ಹೇ ಳಿ ಇರುತ್ತಾರೆ. ವೀರಶೈವರಲ್ಲಿ ಹಾಗಲ್ಲ. ಜೀವನ್ ಮುಕ್ತಿಯೂ ವಿದೇಹ ಮುಕ್ತಿಯೂ ಕೂಡಾ ಈ ದೇಹವಿರುವಾಗಲೇ ಉಂಟಾಗುತ್ತವೆ ಎಂದೂ ಹೀಗೆ ಮನುಷ್ಯನು ಸಾಕಾರ ಬ್ರಹ್ಮನಾಗಿ ಈ ಲೋಕದವರಂತೆ ಆ ಚರಣೆಗಳನ್ನು ಮಾಡಿ ಕಡೆಯಲ್ಲಿ ನಿರಾಕಾರ ಬ್ರಹ್ಮನಲ್ಲಿ ಲೀನನಾಗುತ್ತಾ ನೆ ಎಂದೂ, ಇವರು ತಿಳಿದಿರುತ್ತಾರೆ. ಆದುದರಿಂದ ವೇದಾಂತದ ಕಟ್ಟಕ ಡೆಯ ಪರಿಣಾಮವು ವೀರಶೈವದಲ್ಲಿಯೇ ಸ್ಥಿರವಾಗಿ ನಿಲ್ಲುವುದು. ಆದ್ದ ರಿಂದಲೇ ಇವರು ಅಮರತ್ವವನ್ನು ಪಡೆದವರು. ಅಮರರಿಗೆ ದೇವತೆಗ ಳು(ದೇವರು) ಎಂದು ಕರೆಯುವಂತೆ ಶಿವಶರಣರಿಗೂ ಪ್ರಭುದೇವ, ಬ ಸವರಾಜದೇವ ಮಾಚಿದೇವ ಮುಂತಾದ ಹೆಸರುಗಳಿಂದ ಕರೆದಿರುವುದ

ನ್ನು ನಾವು ಗ್ರಂಥಗಳಿಂದ ನೋಡಬಹುದು.

ಹೀಗಿದ್ದರೂ ವೀರಶೈವರು ಹಿಂದೂಶಾಸ್ತ್ರವನ್ನು ತಿರಸ್ಕರಿಸುವುದಿಲ್ಲ. ಸ್ಮೃತಿಗಳಲ್ಲಿ ಪುರಾಣಗಳಲ್ಲಿ ವೇದಗಳಲ್ಲಿ ಹೇಳಲ್ಪಟ್ಟಂತೆ ಕರ್ಮಗಳನ್ನು ಮಾಡುವ ಮನುಷ್ಯರಿಗೆ ಅವುಗಳಲ್ಲಿ ಹೇಳಲ್ಪಟ್ಟ ಪ್ರಕಾರ ಪುನರ್ಜನ್ಮವೇ ಮೊದಲಾದ ಫಲಗಳು ಉಂಟೆಂಬುದನ್ನು ಒಪ್ಪದೆ ಬಿಡುವುದಿಲ್ಲ. ವೀರಶೈವರು ಪ್ರಾಕೃತಿಕರನ್ನು(ಕರ್ಮಿಗಳನ್ನು) ಹಸಿಯ ಬೀಜದಂತೆಯೂ ತಮ್ಮನ್ನು ಹುರಿದ ಬೀಜದಂತೆಯೂ ತಿಳಿಯುತ್ತಾರೆ ಹಸಿಯ ಬೀಜವು ಪುನಃ ಹುಟ್ಟಿ ಬೆಳೆವಂತೆ ಕರ್ಮಿಗಳಾವ ಮನುಷ್ಯರು ಮತ್ತೆ ಹುಟ್ಟಿ ಬೆಳೆಯುತ್ತಾರೆ ಎಂದೂ ಹುರಿದ ಬೀಜವು ಹುಟ್ಟದೆ ಇರುವಂತೆ 'ನಾನು ಶಿವ' ಎಂದು ತಿಳಿಯುವ ಜ್ಞಾನವೆಂಬ ಬೆಂಕಿಯಿಂದ ತಾವು ಸುಡಲ್ಪಟ್ಟವರಾದ್ದರಿಂದ ತಾವು ತಿರುಗಿ ಹುಟ್ಟುವುದಿಲ್ಲವೆಂದೂ ತಿಳಿದಿರುತ್ತಾರೆ.

ವೀರಶೈವ ಎನಿಸಿಕೊಂಡರೆ ಮಾತ್ರ ಸಾಲದು. ಅದರಂತೆ ನಡೆದು ವೀರಶೈವನಾಗಬೇಕೆಂಬುದು ಈ ಮತೀಯರ ಘನವಾದ ಅಭಿಪ್ರಾಯ. ಇದೇ ಈ ವೀರಶೈವರ ಘನರಹಸ್ಯ.

ಆದರೆ ವೀರಶೈವರು ತಮಗೆ ಸರಿಯಲ್ಲದ ಮಾರ್ಗದಲ್ಲಿ ನಡೆದರೆ ಅಂಥವರೂ ಸಹಾ ತಿರುಗಿ ಹುಟ್ಟಿ ಬರುವರೆಂದೂ ನಂಬುತ್ತಾರೆ. ಹೀಗೆ ಹೇಳಿದ ಮಾತ್ರದಿಂದ ವೀರಶೈವರಿಗೆ ಪೂರ್ವಜನ್ಮ—ಪುನರ್ಜನ್ಮ ಉಂಟೆಂದು ತಿಳಿಯಲಿಕ್ಕೆ ಬರುವದಿಲ್ಲ. ಪುನರ್ಜನ್ಮವು ತಪ್ಪುನಡತೆಯ ಫಲವು. ಹೀಗೆ ತಪ್ಪಿ ನಡೆದಾಗ ಅವನು ಹಿಂದೂಧರ್ಮದೊಳಗಿನ ಪ್ರಾಕೃತಿಕನೇ ಎಂಬ ನಿಶ್ಚಯವು ವೀರಶೈವರಿಗೆ ಉಂಟು. "ತಪ್ಪಿನಡೆದವನು ಪುನಃ ಲಿಂಗಿಗಳಲ್ಲಿ ಹುಟ್ಟುವನು'' ಎಂದು ತಿಳಿಯುತ್ತಾರೆ. ಇದಕ್ಕೆ ಪ್ರಮಾಣವನ್ನು ಈ ಸ್ಕ್ರೇಡರವರೇ ಬರೆದಿರುತ್ತಾರೆ.

ಹೀಗಾದರೂ ಲಿಂಗಧಾರಣೆಯು ಶ್ರೇಷ್ಠವೇ ಎಂದು ನಿರ್ಧರವಾಗಿ ತಿಳಿಯಬೇಕು. ಏಕೆಂದರೆ ಲಿಂಗಪೂಜೆಯು ನಿರ್ಗುಣಪೂಜೆಯಾಗಿಯೂ ಶಿವಸ್ವರೂಪವನ್ನು ಕೊಡುವುದಾಗಿಯೂ, ಅತಿವರ್ಣವನ್ನು ಉಂಟು ಮಾಡುವುದಾಗಿಯೂ ಮೂಲವಸ್ತು ಅದರೊಳಗಿನ ಶಕ್ತಿ ಇವೆರಡನ್ನೇ ನಂಬುವುದಾಗಿಯೂ ಹಲವು ದೇವರನ್ನು ನಂಬದೆ ಇರುವಂತೆ ಮಾಡು

ಶ್ರೀ ಗುರವೇ ನಮಃ

# ಕಲ್ಯಾಣದ ಶಿವಾಂಕದಲ್ಲಿಯ ಲಿಂಗರಹಸ್ಯ.

ಲೇಖಕರು:—ಪಂ. ಶ್ರೀ ಗೋಪಿನಾಥಜೀ, ಕವಿರಾಜ, ಎಮ್. ಎ.
ಪ್ರಿನ್ಸಿಪಾಲ್, ಗವರ್ನಮೆಂಟ ಸಂಸ್ಕೃತ ಕಾಲೇಜ, ಕಾಶೀ.

ಕನ್ನಡದಲ್ಲಿ ಬರೆದವರು:—ಶಿವಬಸವ ದೇವರು, ಯರಗಂಬಳಿ
ಮಠ ತಡಕೋಡ. ಒಡಕಹೊಳೆ. (ಸವದತ್ತಿ)

ಒಬ್ಬ ವಿಚಾರಕ:—ಪಾಶ್ಚಾತ್ಯ ಪಂಡಿತರ ವಿಚಾರಕ್ಕೆ ಸಿಕ್ಕುಬಿದ್ದು ಮರುಳರಾದ ಈಗಿನ ಕೆಲವು ನವ ಶಿಕ್ಷಿತರಾದ ಭಾರತೀಯ ತರುಣರು, ಭಾರತವರ್ಷನ ಉಪಾಸನೆಯ ಸಂಬಂಧವಾದ ಮಾತು ನಡೆದಾಗ ಹೀಗೆ ಹೇಳುತ್ತಿರುವರಲ್ಲಾ, ಭಾರತೀಯ ದರ್ಶನ ಮತ್ತು ಧರ್ಮತತ್ವದ ವಿಷಯದಲ್ಲಿ ಭಾರತವರ್ಷದಲ್ಲಿ ಬಹು ಗಂಭೀರವಾದ ತತ್ವಗಳು ಬೆಳಕಿಗೆ ಬಂದಿರುತ್ತವೆಂಬುವೇನೋ ನಿಜ, ಇದು ಸಮಸ್ತ ಜಗತ್ತಿಗೆ ಆಶ್ಚರ್ಯವನ್ನುಂಟುಮಾಡತಕ್ಕುದಾಗಿದೆ, ಆದರೆ ಉಪಾಸನೆಯ ಸಂಬಂಧದಲ್ಲಿ ಅಂತಹ ಪ್ರಶಂಸೆಯು ಮಾಡತಕ್ಕದ್ದಿರುವದಿಲ್ಲ, ಲಿಂಗದ ಉಪಾಸನೆಯು ಭರತಖಂಡಕ್ಕೆ ಒಂದು ಕಲಂಕವಾಗಿದೆ, ಈ ಸಮಯದಲ್ಲಿ ಇಂಥಾ ಹೇಯ ಮತ್ತು ಅಸಭ್ಯಕಾಲೋಚಿತವಾದ ಉಪಾಸನೆಯು ಇರುವದು ಯೋಗ್ಯವಲ್ಲ, ಎಂಬಿವೇ ಮೊದಲಾದ ಸಂಗತಿಗಳು ಇವರ ವಿಚಾರದಿಂದ ತಿಳಿದುಬರುತ್ತವೆ. ಇವರ ವಿಚಾರವನ್ನು ಸ್ವಲ್ಪ ಆಳವಾಗಿ ವಿಚಾರಿಸಿದರೆ, ಲಿಂಗೋಪಾಸನೆಯ ವಿಷಯದಲ್ಲಿ ಮನಸ್ಸಿನಲ್ಲಿ ಸ್ವಲ್ಪ ಸಂದೇಹವು ಉತ್ಪನ್ನವಾಗುತ್ತದೆ. ನಾನು ಬಾಲ್ಯಕಾಲದಿಂದಲೂ ಲಿಂಗರೂಪ ಶಿವನ ಉಪಾಸನೆಯನ್ನು ನೋಡುತ್ತ ಬಂದಿದ್ದೇನೆ. ಈ ಸಂಸ್ಕಾರದ ಬಲದಿಂದ ಈ ಉಪಾಸನೆಯಲ್ಲಿ ಹೇಯತ್ವವಿದೆ ಎಂಬದು ಮನಸ್ಸಿನಲ್ಲಿ ಹೊಳೆಯಲೊಲ್ಲದು. ಆದರೆ ಪೂರ್ವಸಂಸ್ಕಾರವನ್ನು ಬಿಟ್ಟು ವಿಚಾರಮಾಡಿದ್ದಾದರೆ, ವಿದೇಶೀಯ ವಿಚಾರಕರು ಸ್ವಭಾವತಃ ಪ್ರೇರಣೆಗೆ ವಶರಾಗಿ ಈ ಲಿಂಗೋಪಾಸನೆಯನ್ನು ನಿಂದಿಸುತ್ತಿದ್ದಾರೆ. ಈ ವಿಷಯದಲ್ಲಿ ನಾನು ನಿಮ್ಮನ್ನು ಸ್ವಲ್ಪ ಕೇಳಲಿಚ್ಛಿಸಿದ್ದೇನೆ. ನೀವು ಕೃಪೆಮಾಡಿ ಲಿಂಗ ರಹಸ್ಯದವಿಷಯದಲ್ಲಿ ಸಂಕ್ಷೇಪವಾಗಿ ವಿವರಿಸಿದ್ದಾದರೆ ನಾನು ನಿಮಗೆ ಅತ್ಯಂತ ಕೃತಜ್ಞನಾಗುವೆನು. ನಿಮ್ಮ ವಿವರಣೆಯಿಂದ ನನ್ನ ಸಕಲ ಸಂಶಯಗಳು ದೂರವಾಗುವವಲ್ಲ

ಡ್ಡ, ಹೊಸದಾಗಿ ಸಂಶಯಗಳು ಹುಟ್ಟಿದ್ದಾದರೆ ನಾನೇ ವಿಚಾರಮಾಡ ಲಿಕ್ಕೆ ಸಮರ್ಥನಾಗುವೆನು.

ಉತ್ತರ ಹೇಳುವವನು:—ನಿನ್ನ ಸಂಶಯವನ್ನು ಕಳೆಯಲಿಕ್ಕೆ ನಾನು ಯಥಾಶಕ್ತಿಯಾಗಿ ಹೇಳುವೆನು. ಹೇಳುವದಕ್ಕಿಂತ ಮೊದಲು ನಾನು ನಿನಗೆ ಒಂದೆರಡು ಮಾತುಗಳನ್ನು ಕೇಳಲಿಚ್ಛಿಸಿದ್ದೇನೆ. ನೀನು ಪ್ರಾಚೀನ ಇತಿಹಾಸದ ಆಲೋಚನೆಯನ್ನು ಮಾಡಿದ್ದೀಯೋ? ಪೃಥ್ವಿಯಲ್ಲಿಯ ಅಧಿಕಾಂಶ ಜನರಲ್ಲಿ ಅತಿ ಪ್ರಾಚೀನ ಸಭ್ಯಜಾತಿಯಲ್ಲಿ ಲಿಂಗೋಪಾಸನೆಯು ಒಂದು ತರದಿಂದ ಇತ್ತೆಂಬುದು ನಿನಗೆ ಗೊತ್ತಿಲ್ಲವೋ? ಭಾರತವರ್ಷ(ಭರತಖಂಡ)ದಲ್ಲಿ ಮೊದಲು ಐತಿಹಾಸಿಕ ಯುಗದಿಂದಲೂ ಲಿಂಗೋಪಾಸನೆಯು ಪ್ರಚಾರದಲ್ಲಿ ಇದೆ. 'ಮೋಹನ ಜೋದಾರೋ' ಎಂಬಲ್ಲಿ ದೊರೆತ ಪ್ರಾಚೀನ ಚಿಹ್ನೆಗಳನ್ನು ನೋಡಿದ್ದಾದರೆ, ಆ ಸಮಯದಲ್ಲಿಯೂ ಜನರು ಈಗಿನಂತಿರುವ ಶಿವಲಿಂಗವನ್ನು ಪೂಜಿಸುತ್ತಿದ್ದರೆಂದು ತಿಳಿದು ಬರುವದು. ಯಾವ ಉಪಾಸನೆಯು ಅಥವಾ ಸಾಧನೆಯು ಒಂದು ಸಮಯದಲ್ಲಿ ಜಗತ್ತನ್ನು ವ್ಯಾಪಿಸಿಕೊಂಡಿತ್ತೋ, ಅದು ಹಾಗೆಯೇ ಮುಂದಿನಯುಗದಲ್ಲಿ ಭಾರತಖಂಡದಲ್ಲಿ ಭಗವತ್ಕಲ್ಪರಾದ ಶ್ರೀ ಶಂಕರಾಚಾರ್ಯ ಮೊದಲಾದ ಅಸಂಖ್ಯ ಜ್ಞಾನಿಗಳ, ಮತ್ತು ಯೋಗಿಗಳ, ದ್ವಾರಾ ಅನುಷ್ಠಾನಕ್ಕೆ ತರುತ್ತ ಬರುವದಾಗಿಯೋ, ಅಂಥ ಸಾಧನೆಯು ಮೂಢಜನರ ಉಪಹಾಸ ವಚನಗಳಿಗೆ ಎಂದೂ ಭಾಜನವಾಗಲಿಕ್ಕೆ ಯೋಗ್ಯವಿಲ್ಲ. ತೀವ್ರವಾದ ಸಾಧನೆ ಇಲ್ಲದೆ ಯಾವದೇ ತತ್ವವನ್ನು ಚನ್ನಾಗಿ ತಿಳಿಯುವ ಸಂಭವವೇ ಇಲ್ಲ. ಆದ್ದರಿಂದ ಲಿಂಗೋಪಾಸನೆಯನ್ನು ನಿಂದಿಸಲಿಕ್ಕೆ ಹತ್ತುವದು ಉದ್ಧಟತನವಲ್ಲದೆ, ಮತ್ತೇನೂ ಇಲ್ಲ.

ವಿಚಾರಕ:—ನಾನು ತಿಳಿಯಲಿಚ್ಛೆಯಿಂದ ಪ್ರಶ್ನೆಮಾಡಿದ್ದೇನಲ್ಲದೆ, ನಿಂದೆಯನ್ನು ಮಾಡಬೇಕೆಂಬ ಉದ್ದೇಶದಿಂದಲ್ಲ ಲಿಂಗೋಪಾಸನೆಯ ಮೂಲದಲ್ಲಿ, ಯಾವ ಒಂದು ಹೇಯಭಾವವಿದೆಯೋ ಅದನ್ನು ನೀವು ಸ್ವೀಕರಿಸಲಿಚ್ಛಿಸುವದಿಲ್ಲವೋ? ಹಾಗಾದರೆ ಸಭ್ಯಸಮಾಜದಲ್ಲಿ ಇದನ್ನು ಯಾವರೀತಿಯಾಗಿ ಸಮರ್ಥನೆಮಾಡಲು ಶಕ್ಯವಿದೆ?

ಹೇಳುವವನು:—ಅಹೇಯ (ಶ್ರೇಷ್ಠ) ಮತ್ತು ಹೇಯವಾದದ್ದರ ವಿಚಾರವು, ಈಗಿನ ಪಾಶ್ಚಾತ್ಯ ಸಂಸ್ಕಾರಕ್ಕೆ ಸಿಕ್ಕುಬಿದ್ದ ಯುವಕರ ವಿಕೃತ ದೃಷ್ಟಿಯ ನಿರ್ಣಯಕ್ಕೆ ಅನುಸಾರವಾಗಿ ಆಗಲು ಶಕ್ಯವಿಲ್ಲ. ವ್ಯಕ್ತಿಗತ ಸಂಸ್ಕಾರದಿಂದಲೂ ಸಾಮಾಜಿಕ ಮನೋಭಾವದಿಂದಲೂ ಸುತ್ತ

ಆದರ ನಿದರ್ಶನವನ್ನು ಯಾವನೂ ತೋರಿಸಲಿಕ್ಕೆ ಸಮರ್ಥನಾಗಲಾರನು. ಆದರೆ ಈ ಅವ್ಯಕ್ತ ಸತ್ತಿಯಿಂದ ಯಾವ ತೇಜೋಮಯವಾದ ಮತ್ತು ಜ್ಯೋತಿರ್ಮಯವಾದ ತತ್ವವು ಪ್ರಕಟವಾಗುತ್ತದೆಯೋ (ಉಂಟಾಗುತ್ತದೆಯೋ), ಅದು ಸ್ವಯಂ ಪ್ರಕಟವಾಗುತ್ತದೆ. ಆದ್ದರಿಂದ ಅದು ಸ್ವಯಂಭುವೆಂದು ಹೇಳಲ್ಪಡುತ್ತದೆ. ಇದೇ ಅವ್ಯಕ್ತಾವಸ್ಥೆಗೆ ಪರಿಚಯವನ್ನು ಉಂಟುಮಾಡುವದಾದ್ದರಿಂದ ಇದು ಲಿಂಗ ಎಂಬುವ ಪದದಿಂದ ಹೇಳಲ್ಪಡುವ ವಸ್ತುವಾಗಿದೆ. (ಲಿಂಗ ಪದಕ್ಕೆ ವಾಚ್ಯವಾಗಿದೆ).

ವಿಚಾರಕ:—ನೀವು ಸ್ವಯಂಭು ರೂಪ ಲಿಂಗದ ಪರಿಚಯವನ್ನು ಯಾವರೀತಿ ಹೇಳಿದಿರೋ ಅದನ್ನು ಕೇಳಿ ನನಗೆ ತೃಪ್ತಿಯಾಯಿತು. ಈ ಲಿಂಗದ ಆಚೆಗೆ (ಪೂರ್ವ) ಇರುವ ಅಲಿಂಗಾವಸ್ಥೆಯ ಸಂಬಂಧವಾಗಿ ಕೇಳಲಿಕ್ಕೆ ನನಗೆ ಸ್ವಲ್ಪವೂ ಇಚ್ಛೆಯಿಲ್ಲ. ನನ್ನ ಹೇಳಿಕೆ ಹೀಗಿದೆ:—ಲಿಂಗ ಮತ್ತು ಯೋನಿ ಇವೆರಡು ಅನ್ಯೋನ್ಯವಾಗಿ ಕೂಡಿಕೊಂಡು ಸಾಂಸಾರಿಕ ಕಾರ್ಯಗಳ ಸಂಪಾದನ ಮಾಡುತ್ತವೆ. ಅದರ ಒಂದಂಶವು ಲಿಂಗತತ್ವವಿದೆ, ಮತ್ತೊಂದಂಶವಾದ ಯೋನಿತತ್ವದ ವಿಷಯವು ಸರಿಯಾಗಿ ತಿಳಿಯದಿರುವದರಿಂದ ಲಿಂಗರಹಸ್ಯವು ಚನ್ನಾಗಿ ತಿಳಿಯಲಿಕ್ಕೆ ಶಕ್ಯವಿಲ್ಲ. ಆದಕಾರಣ ಸಂಕ್ಷೇಪವಾಗಿ ಯೋನಿ ರಹಸ್ಯದ ಸಂಬಂಧದಲ್ಲಿಯೂ ನಾಲ್ಕಾರು ಮಾತುಗಳನ್ನು ಹೇಳಿರೆಂದು ಪ್ರಾರ್ಥಿಸುತ್ತೇನೆ. ಇದರಿಂದ ಉದ್ದಿಷ್ಟ ವಿಷಯವು ಚನ್ನಾಗಿ ತಿಳಿವಳಿಕೆಯಲ್ಲಿ ಬರುವದು.

ಹೇಳುವವನು:—ನಿನ್ನ ಪ್ರಶ್ನೆಯು ಬಹು ಯೋಗ್ಯವಿದೆ. ಯೋನಿತತ್ವದ ವಿಷಯದಲ್ಲಿ ಚನ್ನಾಗಿ ತಿಳಿವಳಿಕೆಯುಂಟಾಗದಿರುವದರಿಂದ ಲಿಂಗರಹಸ್ಯವು ಸರಿಯಾಗಿ ತಿಳಿಯಲಿಕ್ಕೆ ಬರುವದಿಲ್ಲ. ಆದರೂ ಈ ವಿಷಯವು ಬಹು ಜಟಿಲವಿದೆ. ಇದಲ್ಲದೆ ಇದರ ಗೂಢತೆಯ ವಿಚಾರವನ್ನು, ಸಾಧನ ಮಾಡಿದ ಸಾಧಕನ ಹೊರತು, ಅನ್ಯರಿಗೆ ತಿಳಿಸುವುದು ಬಹಳ ಕಷ್ಟವಿದೆ. ಆದರೂ ಆಲೋಚನೆಯ ವಿಷಯವು ಲಿಂಗರಹಸ್ಯವೇ ಇರುವ ಕಾರಣ, ಸಂಕ್ಷೇಪವಾಗಿ ನಾಲ್ಕಾರು ಮಾತು ಹೇಳುವದು ಅವಶ್ಯವೆಂದು ತಿಳಿದಿದ್ದೇನೆ

ಹೇಗೆ ಆಧಾರ ಮತ್ತು ಆಧೇಯಗಳು ಪರಸ್ಪರ ಸಂಬಂಧದಿಂದ ಕೂಡಿರುವವೋ. ಹಾಗೆ ಒಂದು ರೀತಿಯಿಂದ ಲಿಂಗ (ಶಿವ) ಮತ್ತು ಯೋನಿ (ಶಕ್ತಿ)ಗಳನ್ನು ತಿಳಿಯಬಹುದು. ಆದರೆ ಈ ಸಾದೃಶ್ಯವು

ಎಲ್ಲಾ ರೀತಿಯಿಂದಲೂ ಇಲ್ಲವೆಂದು ಧ್ಯಾನದಲ್ಲಿಡಬೇಕು. ಯಾವಾಗ ಆದಿಶಕ್ತಿಯೂ ಭಗವಂತನೂ ಅತ್ಯಂತ ಸಾಮ್ಯಾವಸ್ಥೆಯಲ್ಲಿರುವರೋ ಆವಾಗ ಅವರಲ್ಲಿ ಶಕ್ತಿ ಅಥವಾ ಲಿಂಗ ರೂಪ ದ್ವೈತಭಾವ ಕಲ್ಪನೆಯೇ ಯಾವರೀತಿಯಿಂದಲೂ ಉಂಟಾಗುವದಿಲ್ಲ. ಎಲ್ಲಿ ಅನಾದಿ ದ್ವೈತವು ಪ್ರಕಾಶಿತವಾಗುವದೋ ಅಲ್ಲಿ ಒಂದರ ಹೊರತು ಮತ್ತೊಂದರ ಪ್ರಾಪ್ತಿ ಇಲ್ಲವೆಂದು ತಿಳಿಯಬೇಕಾಗುತ್ತದೆ.

ತಂತ್ರಶಾಸ್ತ್ರದಲ್ಲಿ ಶಕ್ತಿಯು ತ್ರಿಕೋಣರೂಪದಿಂದ ತೋರಿಸಲ್ಪಟ್ಟಿದೆ.

ಉದಾಹರಣೆ. ೧




ಇದು ಅ ಬ ಕ ತ್ರಿಕೋಣವು ಇದೇ ಶಕ್ತಿ ರೂಪವು.

ಲಿಂಗವು ಆ ಶಕ್ತಿಯ ಕೇಂದ್ರಸ್ವರೂಪ ಅಥವಾ ಮಧ್ಯಬಿಂದು ಸ್ವರೂಪ ಎಂದು ತೋರಿಸಲ್ಪಟ್ಟಿದೆ.

ಉದಾಹರಣೆ. ೨




ಇಲ್ಲಿ ಡ ಬಿಂದುವು 'ಅ ಬ ಕ' ತ್ರಿಕೋಣದ ಮಧ್ಯಬಿಂದುವಿದೆ ಇದೇ ಲಿಂಗವು.

ಸೃಷ್ಟಿಯು ಮೀರಿದ ಅವಸ್ಥೆಯಲ್ಲಿ, ಸರ್ವಶಕ್ತಿಯು ಎಲ್ಲಿ ನಿತ್ಯದಲ್ಲಿ ಪ್ರಕಾಶಮಾನವಾಗಿ ಅಥವಾ ನಿತ್ಯದಲ್ಲಿ ಮುಚ್ಚಲ್ಪಟ್ಟದ್ದಾಗಿದೆಯೋ, ಅಲ್ಲಿ ಬಿಂದು, ಮಂಡಲ, ಮತ್ತು ಬಿಂದುವಿನಿಂದ ಮಂಡಲ ಪರ್ಯಂತರವಾಗಿ ಹೊರಟಂಥ ಕಿರಣರೇಖಾ, ಈ ಮೂರು ಅಭಿನ್ನರೂಪದಿಂದ ಪ್ರಕಾಶಿತವಾಗುತ್ತವೆ.

ಈ ಅಭೇದಾತ್ಮಕ ಸತ್ತೆಯಲ್ಲಿ ಮಂಡಲಕ್ಕೆ ಶಕ್ತಿಯ ಪೂರ್ವರೂಪದ ಕಲ್ಪನೆ, ಬಿಂದುವಿಗೆ ಲಿಂಗದ ಪೂರ್ವರೂಪದ ಕಲ್ಪನೆ, ಉಂಟಾಗುತ್ತವೆ. ಆದರೂ ಸೃಷ್ಟಿಯ ಮೊದಲಿನ ಅವಸ್ಥೆಯಲ್ಲಿ (ಈ ಅವಸ್ಥೆಯೂ ಸಹ ಅನಾದಿಕಾಲದಿಂದ ಈ ಕಾಲದವರೆಗೂ ಆಗಿದೆ.) ಹಾಗೆಯೇ ಬಿಂದು ಅವರ ಆವರಣ ಈ ಎರಡರಲ್ಲಿ ಭೇದವು ತೋರಿಬರುತ್ತದೆ. ಇವರ ಫಲ ಸ್ವರೂಪವಾಗಿ ಯಾವ ಆವರಣ ರೂಪವಾದ ಮಂಡಲವು

ಬಿಂದುವಿನೊಡನೆ ಅಭಿನ್ನರೂಪವಾಗಿತ್ತೋ, ಅದೇನವು ಸೃಷ್ಟಿಯ ಮೊದಲು ಮೂರು ಸರಳರೇಖೆಯಿಂದಾದ ತ್ರಿಕೋಣದಿಂದ ಕೂಡಿದ ಕ್ಷೇತ್ರರೂಪದಿಂದ ಪ್ರಕಟವಾಗುತ್ತದೆ. ಬಿಂದುವಿನಿಂದ ಅನೇಕ ಕಿರಣರೇಖೆಗಳು ಪ್ರಸರಣವಾಗುತ್ತಿದ್ದರೂ ಸಂಕುಚಿತ ಅವಸ್ಥೆಯು ಸಮಯವಾದ ಸೃಷ್ಟಿಯ ಆರಂಭಕಾಲದಲ್ಲಿ ಮೂರೇ ಕಿರಣಗಳು ಗ್ರಹಿಸಲಿಕ್ಕೆ ಯೋಗ್ಯವಿವೆ. ಈ ಮೂರು ಕಿರಣಗಳು ಸರಳರೇಖೆಯ ರೂಪದಲ್ಲಿ ತಮತಮಗೆ ಸಮಾನವಾದ ದೂರದಲ್ಲಿದ್ದು ಮೂರುಕಡೆಗೆ ಹಬ್ಬುತ್ತವೆ.

ಉದಾಹರಣೆ ೩




ಇಲ್ಲಿ 'ಡ' ಎಂಬುದು ಬಿಂದುವು. 'ಅ ಬ ಕ' ಎಂಬುದು ಮಂಡಲವು. ಸಣ್ಣ ರೇಖೆಗಳು ಬಿಂದುವಿನಿಂದ ಮಂಡಲಪರ್ಯಂತ ಹೊರಟ ಕಿರಣರೇಖೆಗಳು.

ಮಹಾಶೂನ್ಯದ ವಕ್ಷಸ್ಥಲದಲ್ಲಿ ಈ ಹರಡುವಿಕೆಯ ಲೀಲೆಯು ಕೂಡಲಿಕ್ಕೆ ಹತ್ತುವದು. ಆದ್ದರಿಂದ ಈ ಲೀಲೆಯು ಅಲ್ಲಿ ಎಲ್ಲಾ ಕಡೆಯಲ್ಲಿ ಸಮಾನ ರೀತಿಯಿಂದಲೇ ಆಗುವದು. (ಈ ವಕ್ಷಸ್ಥಲವೇ ಬ ಕ ರೇಖಾರೂಪವು ಉದಾ:೪ ನೋಡಿರಿ.) ಯಾಕೆಂದರೆ ಆ ಸಮಯದಲ್ಲಿ ಆಕರ್ಷಣ ಅಥವಾ ವಿಕರ್ಷಣವನ್ನು ಮಾಡುವ ಯಾವ ಶಕ್ತಿಯೂ ಆಗ ಉಂಟಾಗಿರುವದಿಲ್ಲ (ಹುಟ್ಟಿರುವುದಿಲ್ಲ!) ಆದಕಾರಣ ಈ ಮೂರು ಸರಳರೇಖೆಗಳು ಅನ್ಯೋನ್ಯವಾಗಿ ಸಮಭಾವವನ್ನು ಹೊಂದಿದವುಗಳಾಗಿ ಇರುತ್ತವೆ.

ಉದಾಹರಣೆ೪




ಡ ಎಂಬುದು ಬಿಂದುವು. ಡಬ, ಡಕ, ಮತ್ತು ಡಅ, ಈ ಮೂರು ಕಿರ

ಣ ರೇಖೆಗಳು ಡ ಬಿಂದುವಿನಿಂದ ಹೊರಟು ಕ್ರಮವಾಗಿ ಬ, ಕ, ಮತ್ತು ಅ, ಬಿಂದುವಿನಲ್ಲಿ ತಡೆಯುವವು. ಈ ಮೂರು ಕಿರಣರೇಖೆಗಳ ತುದಿಗಳಿಂದರೆ ಬ, ಕ, ಮತ್ತು ಅ, ಬಿಂದುಗಳಾದವು. ಈ ಅ, ಕ, ಮತ್ತು ಬ ಬಿಂದುಗಳು ಒಂದಕ್ಕೊಂದು ಕೂಡುವದಕ್ಕಾಗಿ ಪುನಃ ಹೊಂದಿದ ಗತಿಯ ಫಲರೂಪವೇ, ಅ ಬ ಕ ಸಮಭುಜ ತ್ರಿಕೋಣವದೆ.

ಒಂದೇ ಮೂಲಸ್ಥಾನದಿಂದ ಹೊರಟಿರುವ ಕಾರಣ, ಯಾವಾಗ ಈ ಮೂರು ಸರಳ ರೇಖೆಗಳು ಮೊದಲನೆ ಗತಿಯನ್ನು ತಡೆಯುವ ಸಮಯದಲ್ಲಿ ಸ್ಥಿರತ್ವವನ್ನು ಹೊಂದುತ್ತವೆಯೋ ( ಅ ಬ ರೇಖೆಯನ್ನು ನೋಡಿರಿ.) ಆವಾಗ ಇವುಗಳ ತುದಿಯ ಭಾಗಗಳು ಅನ್ಯೋನ್ಯವಾಗಿ ಕೂಡುವದಕ್ಕೋಸ್ಕರವಾಗಿ ಪುನಃ ಗತಿಯಲ್ಪವಾಗುತ್ತವೆ. ಅದರ ಫಲರೂಪವಾಗಿ ಮೂರುಹೊರಗಿನ ಸರಳರೇಖೆಗಳ ವಿಕಾಸವಾಗುತ್ತದೆ. (ಮೇಲೆ ಅ ಬ ಕ ಸಮ ತ್ರಿಭುಜವನ್ನು ನೋಡಿರಿ. )

ಹೀಗೆ ಒಂದು ಸಮಬಾಹು ಮತ್ತು ಸಮಕೋಣವುಳ್ಳ ಸಮಭುಜ ತ್ರಿಕೋಣವು ಪ್ರಕಟವಾಗು(ಹುಟ್ಟು)ತ್ತದೆ. ಆ ಸಮಯದಲ್ಲಿ ಈ ಮೂರೂ ಬಾಹ್ಯ ಸರಳರೇಖೆಗಳೂ ಸಹ ಕೇಂದ್ರಸ್ವರೂಪವಾದ ಬಿಂದುವಿಗೆ, ಆವರಣವೆಂದು ತಿಳಿಯಲ್ಪಡುತ್ತವೆ. ಇದೇ ಮೊದಲನೆಯ ಆವರಣವೆಂದು ಹೇಳಲು ಬಾರದು. ಯಾಕೇಂದರೆ ಮೂರಕ್ಕಿಂತ ಕಡಿಮೆ ಸರಳರೇಖೆಗಳಿಂದ ಯಾವ ವಸ್ತುವಿಗೂ ಸುತ್ತುಗಟ್ಟಲಿಕ್ಕಾಗದು.. ತಂತ್ರಶಾಸ್ತ್ರದಲ್ಲಿ ಈ ತ್ರಿಕೋಣ ಯಾ ತ್ರಿಭುಜಕ್ಕೆ ಮೂಲ ತ್ರಿಕೋಣವೆಂದು ಅನ್ನುತ್ತಾರೆ.

ಬಿಂದುವಿನ ಹೆಚ್ಚು ಕಡಿಮೆಯ ಚಲನೆಯ ನಿಮಿತ್ತದಿಂದ ಈ ತ್ರಿಕೋಣದ ರೂಪವು ಬೇರೆ ಬೇರೆ ಪ್ರಕಾರದ್ದಾಗಿ ಆಗುತ್ತದೆ. ಯಾಕೇದರೆ ಬಾಹು ಅಥವಾ ತ್ರಿಕೋಣದ ಅನ್ಯೋನ್ಯ ಅಸಂಖ್ಯ ಪ್ರಕಾರದ ವೈಷಮ್ಯವು ಆಗಲಿಕ್ಕೆ ಶಕ್ಯವಿದೆ. ಆದರೆ ಸಮಭುಜ (ಮೂಲ) ತ್ರಿಕೋಣವು ಸಾಮ್ಯಭಾವವನ್ನು ಹೊಂದುವದರಿಂದ, ಯಾವಾಗಲೂ ಒಂದೇ ಪ್ರಕಾರವಾಗಿರುತ್ತದೆ

ಈ ಮೂಲ ತ್ರಿಕೋಣವೇ ಜಗತ್ತಿನ ಉತ್ಪತ್ತಿಗೆ ಕಾರಣವಾದ ಮಹಾಯೋನಿರೂಪವಿದೆ. ಯಾವಾಗ ಇದರ ಮಧ್ಯದಲ್ಲಿರುವ ಬಿಂದುವು ಪ್ರಕ್ಷುಬ್ಧವಾಗಿ, ಮೇಲಕ್ಕೆ ಗತಿಯುಳ್ಳದ್ದಾಗಿ, ಜ್ಯೋತಿರ್ಮಯ ರೇಖೆಯ

ರೂಪದಲ್ಲಿ ಪರಿಣಾಮವನ್ನು ಹೊಂದುವದೋ ಆವಾಗ ಇದನ್ನು ಉಜ್ವಲವಾದ ಪ್ರಕಾಶದ ಗುಂಪಿನ ಕಂಭದ ರೂಪದಲ್ಲಿ ಪ್ರತ್ಯಕ್ಷವಾಗಿ ಕಾಣಲು ಶಕ್ಯವಿದೆ. ಇದೇ ಪೂರ್ವದಲ್ಲಿ ವರ್ಣಿತವಾದ ಸ್ವಯಂಭು ನಾಮಕವಾದ ಜ್ಯೋತಿರ್ಲಿಂಗವೆಂದು ಹೇಳುವದವಶ್ಯವಿಲ್ಲ. ಅಂತರ್ದೃಷ್ಟಿಯನ್ನು ತೆರೆದ ಮೇಲೆ ಒಳಗೆ ಮತ್ತು ಹೊರಗೆ ಎಲ್ಲಾ ಕಡೆಯಲ್ಲಿಯೂ, ಈ ಲೀಲೆಯೇ ಪ್ರತ್ಯಕ್ಷವಾಗಿ ಕಾಣುವದು. ಬಾಯಬಲ್ ಮತ್ತು ಇತರ ಬೇರೆ ಬೇರೆ ಧರ್ಮಗ್ರಂಥಗಳಲ್ಲಿ, ಯಾವ ಅಗ್ನಿಸ್ತಂಭ (Pillar of life)ದ ವರ್ಣನೆಯು ಬಂದಿದೆಯೋ, ಅದಾವರೂ ಈ ಲಿಂಗಜ್ಯೋತಿಯ ಹೊರತಾಗಿ ಬೇರೆ ಏನೂ ಅಲ್ಲ.

ವಿಚಾರಕ:—ನೀವು ಯಾವ ಪ್ರಕಾರವಾಗಿ ವರ್ಣನೆಯನ್ನು ಮಾಡಿದಿರೋ ಅದರಿಂದ ಯೋನಿಯಿಂದ ಲಿಂಗವು ಪ್ರಕಟವಾಗುವದೆಂದು, ತಿಳಿದು ಬರುವದು. ಇದು ಕೆಲವಂಶದಲ್ಲಿ ಸತ್ಯವಾದದ್ದಲ್ಲವೇ?

ಹೇಳುವವನು:—ನಿನ್ನ ತಿಳಿವಳಿಕೆಯು ನಿರ್ಮಲವಾದುದಲ್ಲ. ಆದರೆ ಇನ್ನೂ ನೀನು ಲಿಂಗ ಮತ್ತು ಯೋನಿ ಇವುಗಳ ಪರಸ್ಪರ ಸಂಬಂಧವನ್ನು ಚನ್ನಾಗಿ ತಿಳಿದುಕೊಂಡಿಲ್ಲ. ಆದಕಾರಣ ಸೂಕ್ಷ್ಮ ತತ್ವವನ್ನು ಇನ್ನೂ ನೀನು ಗ್ರಹಿಸಲಿಲ್ಲ ನೀನು ಸರಳವಾಗಿ ತಿಳಿಯುವದಕ್ಕಾಗಿ ವಿಷಯವನ್ನು ಇನ್ನೂ ಸ್ವಲ್ಪ ಸ್ಪಷ್ಟಮಾಡಲಿಕ್ಕೆ ಪ್ರಯತ್ನಿಸುತ್ತೇನೆ ನೋಡು!

ನಾನು ಯಾವ ಯೋನಿಯ ಸಂಬಂಧದಲ್ಲಿ ನಿನಗೆ ಹೇಳಿದೆನೋ ಅದರ ಮೂಲವು ಒಂದೇ ಇದ್ದರೂ, ದ್ವೈತ ಜಗತ್ತಿನಲ್ಲಿ ಬ್ರಹ್ಮಯೋನಿ ಮಾತೃಯೋನಿ ಈ ಭೇದಗಳಿಂದ ದ್ವಿವಿಧವಾಗಿ ತಿಳಿಯಬೇಕು. ಇದರಿಂದ ತ್ರಿಕೋಣವು ಊರ್ಧ್ವಮುಖ ಅಧೋಮುಖ ಈ ಎರಡು ಭೇದದಿಂದ ಎರಡು ವಿಧವಾಗಿದೆ. ಈ ಎರಡರ ಕೇಂದ್ರಸ್ಥಲದಲ್ಲಿ ಬಿಂದುವು ಇರುತ್ತದೆ. ಬಿಂದುವು ಕ್ಷೋಭೆಯನ್ನುಹೊಂದಿ, ಯಾವಾಗ ರೇಖಾ ರೂಪದಲ್ಲಿ ಗತಿಯನ್ನು ಹೊಂದುವದೋ, ಆವಾಗ ಅದು ಮೇಲೆ, ಕೆಳಗೆ, ಎಂಬ ಭೇದದಿಂದ ಎರಡು ಪ್ರಕಾರವಾಗುತ್ತದೆ. ಇದರಲ್ಲಿ ಒಂದರ ಹೆಸರು ಊರ್ಧ್ವಲಿಂಗ, ಮತ್ತೊಂದರ ಹೆಸರು ಅಧೋಲಿಂಗ. ಸಾಧಾರಣ ಅವಸ್ಥೆಯಲ್ಲಿ ಜಗತ್ತಿನ ಎಲ್ಲಾ ಜಂತುಗಳು ಅಧೋಲಿಂಗದಿಂದ ಕೂಡಿವೆ. ಆದರೆ ಸಾಧನೆಯ ಮೂಲಕ ಕುಂಡಲಿನೀ ಶಕ್ತಿಯು ಪ್ರಬುದ್ಧವಾಗಲು ಊರ್ಧ್ವಲಿಂಗರೂಪದಲ್ಲಿ ಬರಲು ಶಕ್ಯವಿದೆ.

ನೋಡು! ಬಿಂದುವು ಯಾವಾಗ ವಿಸರ್ಗದ ರೂಪದಲ್ಲಿ ಪರಿಣಾಮವನ್ನು ಹೊಂದುವದೋ ಅರ್ಥಾತ್ ದ್ವೈತಜಗತ್ತಿಗೆ ಮೂಲವಾದ ದ್ವಂದ್ವವು ಪ್ರಕಟವಾಗುವದೋ, ಆಗ ಒಂದು ಬಿಂದುವು ಮೇಲೂ ಮತ್ತೊಂದುಬಿಂದುವು ಕೆಳಗೂ ಬೀಳುತ್ತವೆ. ಇವೆರಡೂ ಬಿಂದುಗಳನ್ನು ಕೂಡಿಸುವ ರೇಖೆಯೇ ಅಕ್ಷರೇಖೆಯು, ಅಥವಾ ಬ್ರಹ್ಮಸೂತ್ರವು. ಮೇಲಿನಬಿಂದುವು ಒಂದು ತ್ರಿಕೋಣದ ಮಧ್ಯಬಿಂದುವಿದೆ. ಇದರಂತೆ ಕೆಳಗಿನ ಬಿಂದುವು ಎರಡನೆಯ ತ್ರಿಕೋಣದ ಮಧ್ಯಬಿಂದುವಿದೆ. ಯಾವಾಗ ಮೇಲಿನ ತ್ರಿಕೋಣವೂ ಹಾಗೆಯೇ ಅದರ ಮಧ್ಯದಲ್ಲಿರುವ ಬಿಂದುವೂ ಚಲನೆಯನ್ನು ಹೊಂದುವವೋ, ಆವಾಗ ಆ ಬಿಂದುವಿನಿಂದ ಕೆಳಮುಖವಾದ (ಕೆಳಗಡೆ ಬರುವ) ಶಕ್ತಿಧಾರೆಯು ಹೊರಡುವದು. ಇದೇ ಸೃಷ್ಟಿಯ ಅವಸ್ಥೆಯನ್ನು ಸೂಚಿಸುವದಾಗಿದೆ. ಇದರಂತೆ ಕೆಳಗಿರುವ ಬಿಂದುವು ಮತ್ತು ತ್ರಿಕೋಣವು ಯಾವಾಗ ಚಲನೆಯನ್ನು ಹೊಂದುವವೋ, ಆವಾಗ ಬಿಂದುವಿನಿಂದ ಮೇಲಕ್ಕೆ ಮುಖವಾದ ಶಕ್ತಿಧಾರೆಯು ಹೊರಡುತ್ತದೆ, ಇದೇ ಸಂಹಾರದ ಅವಸ್ಥೆಯು. ಯಾವ ಶಕ್ತಿಧಾರೆಯು ಸೃಷ್ಟಿಯ ಸಮಯದಲ್ಲಿ ಊರ್ಧ್ವಬಿಂದುವಿನಿಂದ ಕೆಳಗಡೆ ಇಳಿಯುತ್ತದೆಯೋ, ಅದು ಒಂದು ತ್ರಿಕೋಣ ಕ್ಷೇತ್ರರೂಪವಾದ ತನ್ನ ಎದೆಯಲ್ಲಿ ಧಾರಣಮಾಡಿಕೊಳ್ಳುತ್ತದೆ. ಅದರ ಫಲರೂಪವಾಗಿ ಪ್ರಾಕೃತಿಕ ದೇಹಗಳ ರಚನೆಯಾಗುತ್ತದೆ. (ಮೇಲೆ ಅ ಬ ಕ ತ್ರಿಭುಜವೇ ಎದೆಯ ರೂಪವು. ಇದರಿಂದಲೇ ದೇಹದ ರಚನೆ.) ಹೀಗೆಯೇ ಅಜ್ಞಾನಮಯ ಪ್ರಪಂಚವು ಪ್ರಕಟವಾಗುತ್ತದೆ. ಮತ್ತೊಂದುಕಡೆ ಯಾವಾಗ ಕೆಳಗಿನ ಬಿಂದುವು ಊರ್ಧ್ವಲಿಂಗಾವಸ್ಥೆಯನ್ನುಹೊಂದಿ ಮೇಲುಮುಖ ಶಕ್ತಿಯನ್ನು ಸಂಚಾರಗೊಳಿಸುತ್ತದೆಯೋ ಆಗ ಎರಡನೆಯ ತ್ರಿಕೋಣವು ಕ್ಷೇತ್ರರೂಪವಾಗಿ, ಆ ಕೆಳಗಿನ ಬಿಂದುವನ್ನು ಬೀಜರೂಪವಾಗಿ ಧರಿಸಿಕೊಳ್ಳುತ್ತದೆ. ಇದರ ಫಲರೂಪವಾಗಿ ಅಪ್ರಾಕೃತಿಕ ಅಥವಾ ದಿವ್ಯಪ್ರಪಂಚದ ಪ್ರಕಟನ(ಉತ್ಪತ್ತಿ?)ವಾಗುವದು, ದೇವತೆಗಳ ದೇಹನಿರ್ಮಾಣವೂ ಅಥವಾ ಸಾಧಕನಿಗೆ ದಿವ್ಯಭಾವನೆಯ ಪ್ರಾಪ್ತಿಯೂ, ಇವರಿಂದ ಆಗುವದು.

ದಿವ್ಯದೃಷ್ಟಿಯ ಮೂಲದಲ್ಲಿ ಪ್ರಾಕೃತ ಸೃಷ್ಟಿ ಸಂಹಾರದ ಅವಶ್ಯಕತೆಯುಂಟು. ಹಾಗೆಯೇ ಪ್ರಾಕೃತ ಸೃಷ್ಟಿಯಮೂಲದಲ್ಲಿ ದಿವ್ಯಸೃಷ್ಟಿಯ ತಿರೋಭಾವ(ಮೊದಲಿನ ಕಡೆಗೆ ತಿರುಗಿ ಹೋಗುವ ಭಾವ)ದ ಅವಶ್ಯಕತೆ ಇದೆ.

ಆದ್ದರಿಂದ ಸೃಷ್ಟಿ ಮತ್ತು ಸಂಹಾರ ಈ ಎರಡೂ ಕ್ರಿಯೆಗಳು ಅನ್ಯೋನ್ಯವಾಗಿ ಜೋಡನೆಯಾಗಿಯೇ ಇರುವವು. ಮತ್ತು ಈ ಎರಡರ ಮೂಲದಲ್ಲಿಯೇ ( ಇದರಂತೆ ) ಲಿಂಗಯೋನಿಗಳ ಪರಸ್ಪರ ಸಂಬಂಧವು ಇದ್ದೇಇದೆ.

ತಂತ್ರಶಾಸ್ತ್ರದಲ್ಲಿ ಯಾವ ಮಧ್ಯಬಿಂದುವಿನಿಂದ ಕೂಡಿದ ಷಟ್ಕೋಣದ ವರ್ಣನೆಯು ಸಿಕ್ಕುತ್ತದೆಯೋ, ಅದನ್ನು ಈ ಮೇಲುಮುಖ ಮತ್ತು ಕೆಳಮುಖ ತ್ರಿಕೋಣದ ಪರಸ್ಪರ ಸಂಯೋಗದಿಂದಲೇ ಉತ್ಪನ್ನವಾದದ್ದು ಎಂದು ತಿಳಿಯಬೇಕು. ಮಧ್ಯಬಿಂದುವು ಎರಡೂ ತ್ರಿಕೋಣಗಳಿಗೆ ಸಾಮಾನ್ಯತೆ (Common) ಯಲ್ಲಿ ಇದೆ. ಈ ಷಟ್ಕೋಣವೇ ಶಿವಶಕ್ತಿಗಳು ಕೂಡಿದ ರೂಪವಿದೆ. ಹಿಂದೂ, ಬೌದ್ಧ, ಮತ್ತು ಜೈನ ಮೊದಲಾದ ಎಲ್ಲಾ ಸಂಪ್ರದಾಯಕ ಉಪಾಸಕರು ಯಾವರೂಪದಿಂದಲಾದರೂ ಇವನ್ನು ಸ್ವೀಕಾರಮಾಡಿದ್ದಾರೆ.

ಇದೇ ಆ ಷಟ್ಕೋಣ.

ಉದಾ:— ೫




ಇದು ಅ ಬ ಕ ಡ ಪ ವ ಷಟ್ಕೋಣವು, ಅ ಬ ಕ ತ್ರಿಕೋಣ ಮತ್ತು ಡ ಪ ವ ತ್ರಿಕೋಣಗಳ ಪರಸ್ಪರ ಸಂಯೋಗದಿಂದ ಆಗಿರುತ್ತದೆ.

ಯ, ಮಧ್ಯಬಿಂದುವು, ಇದು ಅ ಬ ಕ ತ್ರಿಕೋಣ ಮತ್ತು ಡ ಪ ವ ತ್ರಿಕೋಣಗಳ ಸಾಮಾನ್ಯತೆಯ (Common) ಮಧ್ಯಬಿಂದುವಾಗಿದೆ.

ಈ ಬಿಂದುವಿನಿಂದ ಆದ ಚಲನಗಳು ಊರ್ಧ್ವ (ಮೇಲುಗಡೆ) ಅಥವಾ ಅಧೋಭಾಗ (ಕೆಳಗಡೆ) ಪ್ರಸರಣವಾಗುತ್ತವೆ.

ನೋಡು:- ನಾನು ಇಲ್ಲಿ ಯಾವ ಯೋನಿ ಮತ್ತು ಲಿಂಗದಮಾತನ್ನು ಹೇಳಿದ್ದೇನೋ, ಅವೇ ವೈದಿಕಸಾಧನೆಯಲ್ಲಿ ಯಜ್ಞಕುಂಡ ಮತ್ತು ಯಜ್ಞಾಗ್ನಿಯ ಸ್ಥಾನವನ್ನು ಹೊಂದಿಕೊಂಡಿವೆ. ಆಚಾರ್ಯರು ಅನೇಕ ಸ್ಥಳಗಳಲ್ಲಿ ಕುಂಡವೇ ಪ್ರಕೃತಿ ಅಥವಾ ಯೋನಿಯೆಂದೂ ಅಗ್ನಿಯು ರುದ್ರ ಅಥವಾ ಶಿವಜ್ಯೋತಿಯೆಂದೂ ಸ್ಪಷ್ಟವಾಗಿ ಹೇಳಿದ್ದಾ

ರೆ. ದೇಹತತ್ವವನ್ನು ಬಲ್ಲಯೋಗಿಗಳ ಮುಖದಿಂದ ವರ್ಣಿಸಲ್ಪಟ್ಟ ಆಧಾರಚಕ್ರವೂಸಹ, ಕುಂಡಲಿ ಅಥವಾ ಯೋನಿಸ್ವರೂಪವೇ ಇದೆ. ಅದರ ಮಧ್ಯದಲ್ಲಿರುವ ಜ್ಯೋತಿಯು ಯಾವಾಗ ಪ್ರಕಾಶಿತವಾಗಿ ಬ್ರಹ್ಮ ಮಾರ್ಗದಲ್ಲಿ ಸಂಚರಿಸುವದೋ, ಆಗ ಅದಕ್ಕೆ ಲಿಂಗವೆಂದು ಹೇಳುತ್ತಾರೆ.

ವಿಚಾರಕ:—ಲಿಂಗವು ಎಷ್ಟು ಪ್ರಕಾರವಾಗಿದೆ? ಮತ್ತು ಯೋನಿಯು ಎಷ್ಟುಪ್ರಕಾರವಾಗಿದೆ? ಮತ್ತು ಇವುಗಳ ಮೂಲಸಂಬಂಧದ ಭೇದವು ಏನೇನಿದೆ?

ಹೇಳುವವನು:—ಲಿಂಗವು ಒಂದೇಇದ್ದರೂ ಯೋನಿ ಅಥವಾ ಆಧಾರ ಭೇದದಿಂದ ಅಸಂಖ್ಯರೂಪದಲ್ಲಿ ಹರಡಿಇದೆ. ಸ್ವಯಂಭುಲಿಂಗ, ಬಾಣಲಿಂಗ, ಮತ್ತು ಇತರಲಿಂಗ, ಮೊದಲಾದ ಎಲ್ಲಾ ಭೇದಗಳು ಕೇವಲ ಒಂದೇಲಿಂಗದ ಭಿನ್ನ ಭಿನ್ನ ಪ್ರಕಾರದ ವಿಕಾಸಗಳಿವೆ ಅದರಂತೆ ಮೂಲ ಯೋನಿಯೂ ಒಂದೇ ಅದೆ. ಆದರೆ ಲಿಂಗಗಳು ವಿಚಿತ್ರ (ಭೇದ) ವಾಗಿರುವಕಾರಣ ಅದೂ ಭಿನ್ನ ಭಿನ್ನ ಯೋನಿಗಳ ರೂಪದಲ್ಲಿ ಪ್ರಕಟಿತವಾಗಿರುತ್ತದೆ. ಶಾಸ್ತ್ರದಲ್ಲಿ ಯಾವ ೮೪ಲಕ್ಷಯೋನಿಗಳ ವರ್ಣನೆಯು ಸಿಕ್ಕುತ್ತದೆಯೋ ಅದಕ್ಕೆಲ್ಲಾ ಇದೊಂದೇ ಮೂಲ ಕಾರಣವಿದೆ. ಆದ್ದರಿಂದ ಒಂದು ದೃಷ್ಟಿಯಿಂದ ಲಿಂಗವೂ ಒಂದೇ ಅದೆ, ಮತ್ತು ಯೋನಿಯೂ ಒಂದೇ ಅದೆ, ಆದರೆ ಮತ್ತೊಂದು ದೃಷ್ಟಿಯಿಂದ ನೋಡಿದರೆ, ಎರಡರ ವೈಚಿತ್ರ್ಯವು (ಭೇದಗಳು) ಅನಂತ ಪ್ರಕಾರ ಇವೆ.

ಜೀವರ ದೇಹದಲ್ಲಿ ಯಾವ ಮೂಲಾಧಾರ ಮೊದಲುಗೊಂಡು ಆರು ಆಧಾರಕಮಲ (ಚಕ್ರ) ಗಳ ವರ್ಣನೆಯು ಬರುತ್ತದೆಯೋ, ಅವಾದರೂ ವಾಸ್ತವವಾಗಿ ಯೋನಿಯ ಈ ಭೇದಮಾತ್ರಗಳೇ ಆಗಿವೆ. ಎಲ್ಲಾಕಡೆಯಲ್ಲಿಯೂ ಲಿಂಗವು ಬಿಂದುರೂಪದಿಂದ ಸೇರಿಕೊಂಡಿದೆ. ಇದರ ಅತೀತ ಅವಸ್ಥೆಯಲ್ಲಿ ಬಿಂದುವು ಆಧಾರ ಶೂನ್ಯವಾಗಿ ಅವ್ಯಕ್ತವಾಗುತ್ತದೆ, ಎಂದರೆ ಲಿಂಗವು ಅಲಿಂಗದಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ಹೀಗೆ ದ್ವೈತಭಾವವು ಶಾಂತವಾಗಿ, ಅದ್ವೈತಭಾವವು ಪ್ರಕಟವಾಗುತ್ತದೆ. ಆ ಸಮಯದಲ್ಲಿ ಲಿಂಗ ಮತ್ತು ಯೋನಿಯಲ್ಲಿ ಯಾವರೀತಿಯಿಂದಲೂ ಪ್ರತ್ಯೇಕನಾದ ಅನುಭವ ಮಾಡಲಿಕ್ಕೆ ಶಕ್ಯವಿಲ್ಲ. ಇದೇ ನಿರಾಲಂಬ ಅಥವಾ ನಿರ್ವಿಕಾರದ ಅವಸ್ಥೆಯು.

ವೇದಾಂತ ಸೂತ್ರಕಾರರು "ಯೋನೇಃ ಶರೀರಂ" ಎಂದು ಹೇಳಿರುವದು ಬಹು ಸತ್ಯವಾದದ್ದಿವೆ. ಯಾಕೆಂದರೆ ಲಿಂಗಜ್ಯೋತಿಯು ಯೋನಿಯಲ್ಲಿ ಪ್ರವೇಶಿಸಿ ಪುನಃ ಏಳದಿದ್ದರೆ ಯಾನರೀತಿಯಿಂದಲೂ ದೇಹ ನಿರ್ಮಾಣದ ಕಾರ್ಯವು ಸಿದ್ಧವಾಗುವದಿಲ್ಲ. ನಾವು ಭಿನ್ನ ಭಿನ್ನ ಇಂದ್ರಿಯಗಳ ಸಹಯೋಗದಿಂದ ನೋಡುವ, ಕೇಳುವ, ಮೊದಲಾದ ಭಿನ್ನ ಭಿನ್ನ ಕಾರ್ಯಗಳನ್ನು ಮಾಡುತ್ತೇವೆ. ಇದಾದರೂ ಸೃಷ್ಟಿಕಾರ್ಯದ ಒಂದು ಅಂಗವಿದೆ. ಆದ್ದರಿಂದ ಇದರ ಮೂಲದಲ್ಲಿಯೂ ಸಹ ಲಿಂಗಯೋನಿಯ ಸಂಬಂಧವು ಇದ್ದೇ ಇದೆ, ಇದರಲ್ಲಿ ಏನೂಸಂದೇಹವಿಲ್ಲ.

ಆದ್ದರಿಂದ ಜಗತ್ತಿನ ಸ್ವರೂಪದ ಮುಖ್ಯವಿಷಯವನ್ನು ಚನ್ನಾಗಿ ಶೋಧವಮಾಡುತ್ತಾಹೋದರೆ, ಈ ಲಿಂಗ ಮತ್ತು ಯೋನಿತತ್ವವು, ಅತಿಕ್ಷುದ್ರ ಪರಮಾಣುವಿನ ಸಂಘಟನದಿಂದ ಹಿಡಿದು, ಅತಿ ದೊಡ್ಡ ಬ್ರಹ್ಮಾಂಡದವರೆಗೂ ಗೋಚರವಾಗುತ್ತದೆ. ಪಶ್ಯಂತೀ, ಮಧ್ಯಮಾ, ವೈಖರೀ, ಎಂಬ ಈ ಮೂರು ಪ್ರಕಾರದ ಶಬ್ದವೇ ತ್ರಿಕೋಣದ ಮೂರು ಸರಳರೇಖೆಗಳ ರೂಪದಲ್ಲಿ ಕಲ್ಪಿತವಾಗಿದೆ. ಇವುಗಳ ಎರಡನೆಯಹೆಸರು ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂಬದಾಗಿದೆ, ಅಥವಾ ಕೆಳಪಹರೆಯಲ್ಲಿ ಸತ್ವ, ರಜ, ತಮ, ಎಂಬದಾಗಿದೆ. ಮಧ್ಯದಲ್ಲಿರುವ ಬಿಂದುವು ಪರಾವಾಕ್ ಅಥವಾ ಶಬ್ದದ ನಾಲ್ಕನೇ ಅವಸ್ಥೆಯನ್ನು ತೋರಿಸುವದಾಗಿದೆ. ಆದ್ದರಿಂದ ಮಧ್ಯ ಬಿಂದು ಯುಕ್ತ ತ್ರಿಕೋಣ, ಮಾಯಾಸಹಿತ ಈಶ್ವರ, ಇವು ಶಕ್ತಿಯುಕ್ತ ಶಿವನ ನಾಮಾಂತರಗಳೇ ಇವೆ. ಇದೇಜೋಡನೆಯ ರೂಪದಿಂದ ನಾಲ್ಕುವಿಧ ವಾಕ್ ತತ್ವದ ಸಮಷ್ಟಿ ಇದೆ, ಅರ್ಥಾತ್ ಶಬ್ದ ಬ್ರಹ್ಮಸ್ವರೂಪವಿದೆ. ಇದರಲ್ಲಿ ಯಥಾರ್ಥವಾದ ಅಧಿಕಾರವು ಉಂಟಾದದ್ದಾದರೆ, ಶಬ್ದಕ್ಕತೀತವಾದ, ವೇದಕ್ಕೆ ಅಗೋಚರವಾದ ಅಪ್ರಮೇಯ, ನಿಷ್ಕಲ, ಮತ್ತು ನಿರಂಜನ, ಸತ್ತೆಯು ಸಾಕ್ಷಾತ್ಕಾರವಾಗುತ್ತದೆ. ಯಾವದು ಓಂಕಾರ ಅಥವಾ ಪ್ರಣವವೆಂದು ಹೇಳಲ್ಪಡುತ್ತದೆಯೋ, ಅದು ಅರ್ಧಮಾತ್ರೆಯಿಂದ ಕೂಡಿದ್ದಾಗಿ ಈ ತ್ರಿಕೋಣದ ನಾಮಾಂತರವೇ ಆಗಿದೆ.

ಇದೇ ಯೋಗಶಾಸ್ತ್ರದ ಕುಂಡಲಿನೀ ಅಥವಾ ಶಬ್ದಮಾತೃಕೆಇದೆ. ಈ ತ್ರಿಕೋಣಾತ್ಮಕ ಯೋನಿಯ ಮೂರು ಸರಳರೇಖೆಗಳು ಯಾವಾಗ ಒಂದು ಸರಳ ರೇಖೆಯಲ್ಲಿ ಪರಿಣತವಾಗುವವೋ, ಯಾವಾಗ ಆ ಸರಳರೇಖೆಯು ಅರ್ಧಮಾತ್ರೆಯಲ್ಲಿ ಪರ್ಯವಸಾನವನ್ನು ಹೊಂದುವದೋ, ಮತ್ತು ಯಾವಾಗ ಅರ್ಧಮಾತ್ರೆಯು ಬಿಂದುವಿನಲ್ಲಿಅಡಗಿ, ಅವ್ಯಕ್ತಸ್ಥಿತಿಯನ್ನು ಹೊಂದುವದೋ ಆವಾಗ ಮಧ್ಯಬಿಂದುವು ಆವರಣದಿಂದ ಬಿಡಲ್ಪಟ್ಟ

ಪ್ಪಾಗಿ, ಬಿಂದುಭಾವದಿಂದ ಮೀರಿದ ಸರ್ವವಿಕಲ್ಪದಿಂದ ರಹಿತವಾದ ಅದ್ವೈತ ಸತ್ತೆಯಲ್ಲಿ ಅಡಗಿಹೋಗುವದು.

ಲಿಂಗರಹಸ್ಯದ ವಿಷಯದಲ್ಲಿ ನಾನು ಈಗ ಸಂಕ್ಷೇಪವಾಗಿ ನಿನಗೆ ನಾಲ್ಕುಮಾತುಗಳನ್ನು ಹೇಳಿದ್ದೇನೆ. ಈ ಸಮಯದಲ್ಲಿ ಇದರ ವಿಸ್ತಾರವಾದ ಆಲೋಚನೆಯು ಸಂಭವವಿಲ್ಲ. ಆದರೆ ನೀನು ಗೌರೀಪೀಠದಮೇಲಿನ ಶಿವಲಿಂಗದ ಉಪಾಸನೆಯಲ್ಲಿ ಹೇಯಭಾವವು ಸ್ವಲ್ಪವೂ ಇಲ್ಲವೆಂದು ನಿಶ್ಚಯವಾಗಿ ತಿಳಿ. ಇವರ ಮೂಲ (ಯಥಾರ್ಥ) ತತ್ವವನ್ನು ತಿಳಿಯದಿದ್ದ ಜನರು ಈ ರೀತಿಯಾಗಿ ಹೇಯವಾದದ್ದೆಂದು ಕಲ್ಪಿಸಿ, ಅಪಹಾಸ್ಯ ಮಾಡುತ್ತಾರೆ.

ನಾನು ಏನು ಹೇಳಿದ್ದೇನೋ ಅದರಿಂದ ಲಿಂಗತತ್ವದ ವಿಚಾರವು ಬಹುಮಟ್ಟಿಗೆ ಆಗಿರುತ್ತದೆ. ಈ ಲಿಂಗೋಪಾಸನೆಯು ಸ್ಥೂಲವಾದ ಈ ಜಗತ್ತಿನಲ್ಲಿ (ಭೂಮಿಯಲ್ಲಿ) ಯಾವ ರೀತಿಯಿಂದ ಯಾವ ಯಾವ ಪ್ರಾಕೃತಿಕ ನಿಯಮಗಳಿಂದ ನಡೆದಿದೆಯೋ ಆ ವಿಷಯದ ಆಲೋಚನೆಯು ಇಲ್ಲಿ ಮಾಡಲ್ಪಟ್ಟಿರುವದಿಲ್ಲ. ಮಣ್ಣು, ಬಂಗಾರ, ಬೆಳ್ಳಿ, ಧಾತು ಮೊದಲಾದವುಗಳಿಂದ ಮಾಡಿದ ಲಿಂಗವನ್ನು ಉಪಾಸನೆ ಮಾಡುವಲ್ಲಿ ಏನು ರಹಸ್ಯವಿದೆ? ಮತ್ತು ಇದರಲ್ಲಿ ಬೇರೆ ಬೇರೆ ತರಹದ ಕ್ರಿಯೆಗಳಲ್ಲಿ ಏನು ರಹಸ್ಯವಿದೆ? ಇದರಂತೆಯೇ, ದೈವಜಗತ್ತಿನಲ್ಲಿ ವಿಷ್ಣು ಮುಂತಾದ ದೇವತೆಗಳಿಗಿಂತಲೂ ಶಿವತತ್ವಕ್ಕೆನೇ ಈ ಲಿಂಗೋಪಾಸನೆಯ ಸಂಬಂಧವು ಬಹಳ ಘನತರವಾಗಿ ಯಾಕೆ ಉಂಟಾಗಿದೆ? ಈ ಎಲ್ಲಾ ಮಾತುಗಳು ಈ ಲೇಖದಲ್ಲಿ ತೆಗೆದುಕೊಳ್ಳಲ್ಪಟ್ಟಿರುವದಿಲ್ಲ.

ಲಿಂಗರಹಸ್ಯವು ಯಥಾರ್ಥವಾಗಿ ಬುದ್ಧಿಗೆ ಗೋಚರವಾದ ಮೇಲೆ ಇತರ ಎಲ್ಲಾ ಸ್ಥೂಲ ವಿಷಯಗಳೂ ಸಹಜವಾಗಿಯೇ ತಿಳಿವಳಿಕೆಗೆ ಬರುವವು. ಇದರಲ್ಲೇನೂ ಸಂದೇಹವಿಲ್ಲ.

---

## ವಿಮರ್ಶೆ.

ಕಾಶಿಯಲ್ಲಿ ಇರುವ ಸರಕಾರದ ಸಂಸ್ಕೃತ ಪ್ರೌಢ ವಿದ್ಯಾಲಯದ ಅಧ್ಯಕ್ಷರಾದ ಪಂಡಿತ ಶ್ರೀ ಗೋಪೀನಾಥಜೀ ಕವಿರಾಜ ಎಮ್, ಎ. ಇವರು ಬರೆದ ಈ 'ಲಿಂಗರಹಸ್ಯ' ಎಂಬ ವಿಷಯವು ವೀರಶೈವರಿಗೆ ಬಹಳ ಮಹತ್ವವುಳ್ಳದಾಗಿದೆ.

ಸ್ಥಾವರಲಿಂಗದ ವಿಷಯದಲ್ಲಿ ಇವರು ಈ ವಿಷಯವನ್ನು ಬರೆದಿರುವರು. ಶಕ್ತಿಯ ಉಪಾಸನೆಯನ್ನೇ ಮುಖ್ಯವಾಗಿ ಇಟ್ಟುಕೊಂಡು ಇರುವ ಬಂಗಾಳದೇಶವು ಲಿಂಗದ ಪೀಠದಲ್ಲಿ ಇರುವ ಮಧ್ಯ ಬಿಂದುವೇ

ಲಿಂಗವೆಂದು ತಿಳಿದಿರುವುದು ಅಲ್ಲಿಗೆ ಹೆಚ್ಚಿನ ವಿಷಯವಾಗಿದೆ. ಆ ಮಧ್ಯ ಬಿಂದುವಿನಿಂದಲೇ ಲಿಂಗದ ಉದಯವಾಗಿ (ಪ್ರಕಟವಾಗಿ) ಇರುವುದೆಂದು ವೀರಶೈವರು ತಿಳಿದಿರುವರೆಂಬುದಕ್ಕೆ ಒಂದು ದೊಡ್ಡ ನಿದರ್ಶನವಿದೆ. ಈ ಲೇಖನದಲ್ಲಿ ಕೊಡಲ್ಪಟ್ಟಿರುವ ಯಾವ ಷಟ್ಕೋಣವಿದೆಯೋ ಅದೇ ಷಟ್ಕೋಣವನ್ನೇ ವೀರಶೈವರು ಲಿಂಗಪೂಜಾಕಾಲದಲ್ಲಿ ತಮ್ಮ ಹಸ್ತದ ಮೇಲೆ ಬರೆದು ಅದರ ನಡುವೆ ಲಿಂಗವನ್ನು ಇಟ್ಟು ಪೂಜಿಸುತ್ತಾರೆ. ಹೀಗೆ ದಕ್ಷಿಣ ಹಿಂದುಸ್ಥಾನವಾದರೇನು, ಉತ್ತರ ಹಿಂದುಸ್ಥಾನವಾದರೇನು, ಹಿಂದೂಗಳ ತತ್ವಗಳು ಒಂದೇ ಗುರಿಯನ್ನೇ ಇಟ್ಟುಕೊಂಡಿವೆ. ಲಿಂಗವು ಅದ್ವೈತದ ಸಾಧನೆಗೆ ಮುಖ್ಯವೆಂಬುದನ್ನು ಇವರು ಚನ್ನಾಗಿ ತೋರಿಸಿ ಇದ್ದಾರೆ. ಒಬ್ಬನೇ ಆದ ನಿರಾಕಾರ ವಸ್ತುವೇ ಲಿಂಗದ ಸ್ವರೂಪವೆಂದು ವೀರಶೈವರೂ ಹೇಳುತ್ತಿದ್ದಾರೆ.

ಈ ಪಂಡಿತರು ಉಪಯೋಗಿಸಿ ಇರುವ ನಿರಂಜನ ನಿಷ್ಕಲ ಪದಗಳು ವೀರಶೈವರಲ್ಲಿ ಜಂಗಮ, ಲಿಂಗ ಇವರಿಗೆ ಸಾಂಕೇತಿಕ ಪದಗಳಾಗಿ ಇವೆ. ನಿಷ್ಕಲತತ್ವವೇ ಶಿವತತ್ವವೆಂದೂ ಅದರಿಂದ ಉಂಟಾದ ಸದಾಶಿವ ತತ್ವವೇ ಲಿಂಗದರೂಪವೆಂದೂ ವಾತುಲಾಗಮದ ೧ನೆಯ ಪಟಲದಲ್ಲಿ ಹೇಳಿ ಇರುತ್ತದೆ. ಇವರಾದರೂ ಲಿಂಗದ ಸ್ಥಿತಿಗಿಂತ ಮೊದಲು ನಿಷ್ಕಲವೆಂದೂ ಅದೇ ಅಲಿಂಗದ ಸ್ಥಿತಿ ಎಂದೂ ಹೇಳಿ ಇರುತ್ತಾರೆ. ಈ ಅಲಿಂಗವನ್ನೇ ಅವ್ಯಕ್ತಲಿಂಗ ಎಂದು ಕೆಲವು ಉಪನಿಷತ್ಕಾರರು ಕರೆದಿರುತ್ತಾರೆ. ಈ ಅವ್ಯಕ್ತಲಿಂಗ ಎಂಬ ಸಾಂಕೇತಿಕ ಪದವು ಶೂನ್ಯ ಸಂಪಾದನೆಯಲ್ಲಿಯೂ ಉಪಯೋಗಿಸಲ್ಪಟ್ಟು ಇರುತ್ತದೆ. ಅಲಿಂಗಾವಸ್ಥೆಯನ್ನೇ ಅವ್ಯಕ್ತಾವಸ್ಥೆ ಎಂದು ಇವರೂ ಹೇಳಿರುತ್ತಾರೆ ಹೀಗೆ ಪರಸ್ಪರ ಹೊಂದಿಕೆಯಾದ ಅಂಶಗಳನ್ನು ಎಲ್ಲಾಭಾಗದ ಹಿಂದೂಗಳೂ ಒಟ್ಟಿಗೆ ಕೂಡಿ ಹಿಂದೂ ತತ್ವದ ಮುಖ್ಯ ಬೋಧೆ ಏನೆಂಬದನ್ನು ಸಂಗ್ರಹವಾಗಿ ಆರಿಸಿ. ಇಡೀ ಹಿಂದೂದೇಶದ ಜನಗಳ ಮುಂದೆ ಇಡುವುದು ಅತ್ಯಂತ ಮುಖ್ಯವಾದ ಕೆಲಸವಾಗಿದೆ.

ಇದೂವರೆವಿಗೆ ಹಿಂದೂಗಳು ಬೇರೆ ಬೇರೆಯಾಗಿ ತಮ್ಮ ತಮ್ಮ ಧರ್ಮವೇ ಮುಖ್ಯ ಅದೇ ಹೆಚ್ಚಿನದು ಎಂದು ತಿಳಿಯುತ್ತಾ ಒಬ್ಬರಿಗೊಬ್ಬರು ಸೇರದೆ ಅನೈಕಮತ್ಯಸ್ಥಿತಿಯನ್ನು ಹೊಂದುತ್ತಾ ಬಂದಿದ್ದಾರೆ.

ಇನ್ನು ಮೇಲಾದರೂ ನಿಷ್ಪಕ್ಷಪಾತದಿಂದ ಒಳಭೇದಗಳ ಮುಖ್ಯ ತತ್ವಗಳನ್ನು ತಿಳಿದು ಹಿಂದೂದೇಶದ ಜನರನ್ನು ಏಕಮುಖವಾಗಿ ಒಂದು ಗುರಿಯುಳ್ಳವರಾಗಿ ನಡೆಯುವಂತೆ ಮಾಡುವುದೇ ಧಾರ್ಮಿಕ ಸುಧಾರಣೆಯ ಮುಖ್ಯ ಕಾರ್ಯವಾಗಿ ಇರುತ್ತದೆ. ಹಿಂದೂಧರ್ಮವೂ ಸಹಾ ಭಿನ್ನ ಭಿನ್ನ ಯೋಗ್ಯತೆಯುಳ್ಳವರಿಗಾಗಿ ಭಿನ್ನ ಭಿನ್ನ ಸಾಧನ ಕರ್ಮ

ಗಳನ್ನು ಹೇಳಿದಾಗ್ಯೂ ಕಡೆಯಲ್ಲಿ ಒಂದೇ ಗುರಿಯುಳ್ಳದ್ದಾಗಿ ಇದೆ, ಎಂದು ತಿಳಿವುದಕ್ಕೆ ಯಾವ ಅಡ್ಡಿಯೂ ಇಲ್ಲ.

ಬಿಂದುವು ಊರ್ಧ್ವ ಲಿಂಗಾವಸ್ಥೆ ( ಮೇಲು ಮುಖಶಕ್ತಿ ) ಯನ್ನು ಯಾವಾಗ ಹೊಂದುವುದೋ ಆವಾಗ ಅಪ್ರಾಕೃತಿಕ ಅಥವಾ ದಿವ್ಯ ಪ್ರಪಂಚವು ಪ್ರಕಟವಾಗುವುದೆಂದು ಇದರಲ್ಲಿ ಹೇಳಲ್ಪಟ್ಟದೆ. ವೀರಶೈವರ ಲಿಂಗಪೂಜೆಯೂ ಇಂತಹ ಊರ್ಧ್ವಗಮನದ ಸ್ಥಿತಿಯದೇ ಆಗಿರುತ್ತದೆ. ಮನಸ್ಸನ್ನು ಲಿಂಗದಲ್ಲಿ ನೆಲೆಗೊಳಿಸುವುದೇ ಪ್ರಾಪಂಚಿಕದ ಕಡೆಗೆ ಇರತಕ್ಕ ಮನಸ್ಸನ್ನು ಹಿಂತಿರುಗಿಸುವ ಸ್ಥಿತಿಯು. ಲಿಂಗವನ್ನು ನೋಡುತ್ತಾ ನೋಡುತ್ತಾ ತಾನು ಲಿಂಗಸ್ವರೂಪನಾದೆನೆಂದು ತಿಳಿವುದೇ ಮನಸ್ಸಿನ ನಿವೃತ್ತಿ ಮಾರ್ಗವು. ಹೀಗೆ ತಿಳಿವುದರಿಂದಲೇ ಇವರು ಅಪ್ರಾಕೃತಿಕರು ಎಂದು ಕರೆಯಲ್ಪಡುತ್ತಾರೆ.

ಮಣ್ಣು ಬಂಗಾರ ಬೆಳ್ಳಿ ಮುಂತಾದವುಗಳಿಂದ ಮಾಡಲ್ಪಟ್ಟ ಲಿಂಗದ ವಿಷಯದಲ್ಲಿ ತಿಳಿದುಕೊಳ್ಳಬೇಕಾದ ರಹಸ್ಯದ ಅಂಶಗಳು ಇನ್ನೂ ಇರುವುದಾಗಿ ಈ ಲೇಖನದಲ್ಲಿ ಪ್ರಕಟವಾಗಿದೆ. ಆದರೆ ಶ್ರೀ ಶೈಲ ಶಿಲೆಯಿಂದ ಮಾಡಲ್ಪಟ್ಟ ಕಂಥೆಯನ್ನು ಹೊದಿಸಿದ ವೀರಶೈವರ ಇಷ್ಟಲಿಂಗದ ವಿಷಯವು ಇದರಲ್ಲಿ ಪ್ರಸ್ತಾಪಿಸಲ್ಪಟ್ಟಿಲ್ಲ. ಉಳಿದ ಎಲ್ಲಾ ವಿಧವಾದ ಲಿಂಗಗಳಿಗಿಂತ ಇದರಲ್ಲಿ ಹೆಚ್ಚಿನ ರಹಸ್ಯವೂ ಫಲವೂ ಉಂಟೆಂದು ಶಿವಾಗಮಗಳು ಹೇಳುತ್ತಾ ಇರುವುದರಿಂದ ಇಂತಹ ಇಷ್ಟಲಿಂಗವನ್ನು ಧಾರಣಮಾಡಿದ ವೀರಶೈವರು ತಮ್ಮ ಲಿಂಗದ ವಿಷಯವನ್ನು ಚನ್ನಾಗಿ ಮನನ ಮಾಡಿಕೊಂಡು ಇರುವುದು ಅತ್ಯವಶ್ಯಕವೆಂಬುದನ್ನು ಇಲ್ಲಿ ಒತ್ತಿ ಹೇಳಲೇ ಬೇಕಾಗಿದೆ.

ಇದರಲ್ಲಿ ಹೇಳಲ್ಪಟ್ಟಂತೆ ಲಿಂಗವೇ ಪ್ರಣವ, ಲಿಂಗವೇ ಚತುರ್ವಿಧವಾಕ್ಕು, ಲಿಂಗವೇ ಶಿವಶಕ್ತಿ, ಮುಂತಾದ ವಿಷಯುಗಳು ವೀರಶೈವರು ಒಪ್ಪಿ ಆಚರಣೆಗೆ ತಂದವುಗಳೇ ಆಗಿವೆ. ಅಂತೂ ವೀರಶೈವರ ತಾತ್ವಿಕಸಂಗತಿಗಳು ಇದರಲ್ಲಿ ಬಹಳವಾಗಿ ಅಡಕವಾಗಿವೆ.

ಇದನ್ನು ಹಿಂದೀಭಾಷೆಯಿಂದ ಕನ್ನಡಕ್ಕೆ ತಂದ ಒಡಕುಹೊಳೆಯತಡಕೋಡ ಯರಗಂಬಳಿಮಠದ ಶಿವಬಸವದೇವರು ಕನ್ನಡಿಗರಿಗೆ ಉಪಕಾರವನ್ನು ಮಾಡಿದವರಾಗಿರುತ್ತಾರೆ. ಧರ್ಮಸಂಬಂಧವಲ್ಲಿ ಶ್ರೇಷ್ಠತತ್ತ್ವವುಳ್ಳ ಹಿಂದೀಭಾಷೆಯ ಲೇಖನಗಳನ್ನು ಕನ್ನಡಿಸಿ ಯಾರಾದರೂ ಕಳುಹಿಸುವುದಾದರೆ ಅವುಗಳನ್ನು ಬಹಳ ಆದರದಿಂದ ಪ್ರಕಟಿಸವೆನು.

ಪ್ರಕಾಶಕ

ಸದ್ಧರ್ಮದೀಪಿಕೆ.

# ಕರ್ಣಾಟಕ ಸಾಹಿತ್ಯ ಪರಿಷತ್ತು

## ೨೧ ನೆಯ ಕನ್ನಡ ಸಾಹಿತ್ಯ ಸಮ್ಮೇಳನ.

ಅಧ್ಯಕ್ಷರು ಶ್ರೀಮಾನ್ ಎನ್. ಎಸ್. ಸುಬ್ಬರಾಯರವರು.

ಬರುವ ಡಿಸೆಂಬರ್ ತಿಂಗಳಲ್ಲಿ (೨೬–೨೭–೨೮ ನೆಯ ತಾರೀಖುಗಳಲ್ಲಿ ಎಂದರೆ ಪುಷ್ಯಶುದ್ಧ ೩ ಗುರುವಾರದಿಂದ ಶುಕ್ರವಾರ ಶನಿವಾರಗಳಲ್ಲಿ) ಬೊಂಬಾಯಿ ಪಟ್ಟಣದಲ್ಲಿ ನಡೆಯಲಿರುವ ೨೧ ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಬೇಕೆಂದು ಅಲ್ಲಿಯ ಸ್ವಾಗತ ಮಂಡಲಿಯೂ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯೂ ಬೇಡಿಕೊಂಡ ಮೇರೆಗೆ, ಮೈಸೂರು ಸಂಸ್ಥಾನದ ವಿದ್ಯಾ ಪ್ರಚಾರದ ಇಲಾಖೆಯ ಡೈರೆಕ್ಟರವರಾದ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ. ಎ. (ಕ್ಯಾಂಟಬ್), ಬಾರ್–ಆಟ್–ಲಾ ಅವರು ಅನುಗ್ರಹಮಾಡಿ ಒಪ್ಪಿರುತ್ತಾರೆ. ಘನವಿದ್ವಾಂಸರೂ ವಿದ್ಯಾಸೇವಾದಕ್ಷರೂ ಆಗಿ, ಸಕಲ ಭಾರತದ ವಿದ್ವನ್ಮಂಡಲಿಯಲ್ಲಿ ಮನ್ನಣೆ ಪಡೆದಿರುವ ಈ ಮಹನೀಯರು ಮುಂದಿನ ಸಮ್ಮೇಳನದ ಅಧ್ಯಕ್ಷಸ್ಥಾನವನ್ನು ವಹಿಸಲು ಒಪ್ಪಿರುವುದು ಎಲ್ಲ ಕರ್ನಾಟಕಕ್ಕೂ ಸಂತೋಷಪ್ರದವಾಗಿರುವುದು.

ಸಾಹಿತ್ಯ ಸಮ್ಮೇಳನದ ಜೊತೆಗೆ ಕಲಾಪ್ರದರ್ಶನ ಮೊದಲಾದ ಅನೇಕ ಆಕರ್ಷಕವಾದ ಉತ್ಸವಗಳನ್ನು ಏರ್ಪಡಿಸಬೇಕೆಂದು ಬೊಂಬಾಯಿ ಸ್ವಾಗತ ಮಂಡಲಿಯವರು ಪ್ರಯತ್ನ ಪಡುತ್ತಿದ್ದಾರೆ. ಎಲ್ಲ ಕನ್ನಡಿಗರೂ ಅಲ್ಲಿಗೆ ದಯಮಾಡಿ ಉತ್ಸವವನ್ನು ಯಶಸ್ವಿಯನ್ನಾಗಿಸಬೇಕೆಂದು ಪರಿಷತ್ತು ಬೇಡುತ್ತದೆ.

ಬೆಂಗಳೂರು ಸಿಟಿ
ತಾ॥ ೧೨–೯–೧೯೩೫

ಸಿ. ಕೆ. ವೆಂಕಟರಾಮಯ್ಯ.
ಗೌರವ ಕಾರ್ಯದರ್ಶಿ.

---

### ಆಭಾರ ಮನ್ನಣೆ.

ಪ್ರಾಕ್ತನ ವಿಮರ್ಶವಿಚಕ್ಷಣ ರಾವ್‌ಬಹದ್ದೂರ್ ಮಹಾಮಹೋಪಾಧ್ಯಾಯ ಮೊದಲಾದ ಬಿರುದುಗಳನ್ನು ಪಡೆದಿರುವ ಆ. ನರಸಿಂಹಾಚಾರ್ಯರವರು ತಮ್ಮ ವೃದ್ಧಾಪ್ಯದೆಸೆಯಲ್ಲಿ ವಿಶ್ರಾಂತಿಯನ್ನು ಪಡೆಯುವ

ಕಾಲವಾಗಿದ್ದಾಗ್ಯೂ ಕನ್ನಡ ಭಾಷೆಯ ಅಭಿವೃದ್ಧಿಯ ಕಡೆಗೆ ಗಮನ ಕೊಡುತ್ತಾ ಇನ್ನೂ ಗ್ರಂಥಗಳ ಪರಿಶೀಲನೆ ಮಾಡುತ್ತಾ ಇರುವುದು ಬಹಳ ಸ್ತುತ್ಯವಾದ ಕೆಲಸವಾಗಿದೆ. ಈ ಮಹನೀಯರು ಸದ್ಧರ್ಮದೀಪಿಕೆಗಾಗಿ ಧರ್ಮದ್ರವ್ಯ (Donation) ವನ್ನು ಕಳುಹಿಸಿ ಹೀಗೆ ಬರೆದಿರುತ್ತಾರೆ:—

ಮ॥ ರಾ॥ ಸದ್ಧರ್ಮದೀಪಿಕೆಯ ಪ್ರಕಾಶಕರು ಶ್ರೀ ಚನ್ನಮಲ್ಲಿಕಾರ್ಜನಪ್ಪನವರ ಸನ್ನಿಧಿಯಲ್ಲಿ ವಿಜ್ಞಾಪನೆಗಳು.

ನೀವು ಸದ್ಧರ್ಮದೀಪಿಕೆಯ ಸಂಚಿಕೆಗಳನ್ನು ನನ್ನಲ್ಲಿ ವಿಶ್ವಾಸವಿಟ್ಟು ಕಳುಹಿಸುತ್ತಾ ಬರುವುದು ಸರಿಯಷ್ಟೆ. ನಿಮ್ಮ ಪತ್ರಿಕೆಗೋಸ್ಕರ ೧೦ ರೂಪಾಯಿಗಳನು ನನ್ನ ಡೊನೇಷನ್ನಾಗಿ ಕಳುಹಿಸಿಕೊಟ್ಟಿದ್ದೇನೆ. ಸ್ವೀಕರಿಸಬೇಕು. ಇಂತೀ ವಿಜ್ಞಾಪನೆ.

ರಾ. ನರಸಿಂಹಾಚಾರ್ಯ ಎಂತ ರುಜು ಇದೆ.

ಇದು ಇವರ ಗುಣಗ್ರಹಣದ ಆಧಿಕ್ಯವನ್ನು ತೋರಿಸುತ್ತಲಿದೆ.

ಈ ಮಹನೀಯರು ತಮ್ಮ ವಿಶ್ರಾಂತಿಯ ಈ ಕಾಲದಲ್ಲಿ ಸಂತೋಷವಾಗಿ ಕಾಲಕಳೆಯುತ್ತಾ ಚಿರಾಯುರಾರೋಗ್ಯವುಳ್ಳವರಾಗಿ ಬಾಳಲಿ ಎಂದು ಮಹಾದೇವನನ್ನು ಪ್ರಾರ್ಥಿಸುವೆನು.

ಪ್ರಕಾಶಕ



ಆರು ಲಿಂಗವಂತರು ಆರ್ಯಸಮಾಜವನ್ನು ಸೇರಿದರು.

## ಅಯ್ಯೋ ವೀರಶೈವನೇ,

### (ಒಬ್ಬ ವಿದ್ಯಾರ್ಥಿಯ ಪ್ರಲಾಪ)

ನಿನ್ನ ಧರ್ಮದಲ್ಲಿ ಜಗದ್ಗುರುಗಳೆನ್ನಿಸಿಕೊಳ್ಳಬೇಕೆಂದಿರುವವರು ಅಡ್ಡಪಲ್ಲಕ್ಕಿಗಾಗಿ ಜಗಳವಾಡುತ್ತಾ ಅಲೆದಾಡುತ್ತಾ ಇದ್ದಾರೆ. ಮಹಾ ಸಭೆಯು ನಿದ್ದೆಮಾಡುತ್ತಾ ಇದೆ. ಸ್ವಾಮಿಗಳು ತಮ್ಮ ಮಠವು ತನ್ನ ಸ್ಥಳವನ್ನು ಬಿಟ್ಟು ಎಲ್ಲಿ ಹೋಗುವುದೋ ಎಂದು ಹಗಲೆಲ್ಲಾ ಮಠವನ್ನೇ ಕಾ

ಯುತ್ತಾ ಕೂತಿದ್ದಾರೆ. ಕಾಮಿಗಳು ಅಚ್ಚುಕಟ್ಟಾಗಿ ತಮ್ಮ ಕೆಲಸವನ್ನು ಸಾಗಿಸುತ್ತಾ ಇದ್ದಾರೆ. ಶ್ರೀಮಂತರು ತಮ್ಮ ಚಲ್ಲಾಟದಲ್ಲಿ ಕಾಲವನ್ನು ಕಳೆಯುತ್ತಾ ಇದ್ದಾರೆ. ಅಧಿಕಾರಿಗಳು ತಮ್ಮ ಅಧಿಕಾರದ ಮದದಲ್ಲಿ ನಿನ್ನನ್ನೇ ಕಣ್ಣೆತ್ತಿ ನೋಡದವರಾಗಿ ಇದ್ದಾರೆ. ಪಾಮರರು ಮಾತಾಡಲಾರದವರಾಗಿದ್ದಾರೆ. ಪಂಡಿತರು ಪಂಡರಪಟ್ಟಿಯಾಗಿದ್ದಾರೆ. ಗುರುಗಳು ಹಣವನ್ನು ಸೆಳೆಯುವುದಕ್ಕೆ ಓಡಾಡುತ್ತಾರೆ. ಮರಿಗಳು ಕಲ್ಲುಸಕ್ಕರೆ ಬಾದಾಮಿಯನ್ನು ಹುಡುಕುತ್ತಾರೆ. ವರ್ತಕರು ದುಡ್ಡಿನ ಯೋಜನೆಯಲ್ಲಿ ಇದ್ದಾರೆ. ಒಕ್ಕಲಿಗರು ದರಿದ್ರರಾಗಿದ್ದಾರೆ. ನಿನ್ನನ್ನು ಕೇಳುವವರಾರು? ನೋಡುವವರಾರು?

ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಜೂನಿಯರ್ ಇಂಟರ್‌ನಲ್ಲಿ ಓದುತ್ತಿರುವ ಮಳವಳ್ಳಿ ತಾಲ್ಲೂಕು ಮಾಡರಳ್ಳಿ ಗ್ರಾಮದವರಾದ ಕೆ. ನಂಜುಂಡಯ್ಯ ಎಂಬುವವರೂ ಇವರ ಸಹೋದರರೂ ಸೇರಿ ಒಂದೇ ಮನೆಯ ಆರು ಜನ ಲಿಂಗವಂತರು ತಮ್ಮ ಲಿಂಗವನ್ನು ಕಿತ್ತೊಗೆದು ಆರ್ಯ ಸಮಾಜವನ್ನು ಸೇರಿದರು. ಇವರು ಬೇರೆ ಬೇರೆ ಹೈಸ್ಕೂಲ್ ಕಾಲೇಜುಗಳಲ್ಲಿ ಓದುತ್ತಾ ಇದ್ದು ಈಗ ಸುಮಾರು ಎರಡು ವರ್ಷಗಳಿಂದ ಒಬ್ಬೊಬ್ಬರೇ ಆರ್ಯ ಸಮಾಜಕ್ಕೆ ಸೇರುತ್ತಾ ಸೇರುತ್ತಾ ಈಗ ಆರು ಜನರೂ ಆರ್ಯ ಸಮಾಜದವರಾಗಿ ತಮ್ಮ ಮುದುಕರಾದ ತಂದೆತಾಯಿಗಳಿಗೆ ನೀವು ಲಿಂಗವನ್ನು ನೋಡುತ್ತಾ ಇರಿ ಎಂದು ಹೇಳಿ,—ತಾವು ಸೂರ್ಯನನ್ನು ನೋಡುತ್ತಾ ಇದ್ದಾರೆ. ಲಿಂಗವನ್ನು ನೋಡುತ್ತಾ ನೋಡುತ್ತಾ ತಮ್ಮ ನೇತ್ರವನ್ನು ಲಿಂಗದಲ್ಲಿ ಕೂಡಿಸಿ ತಮ್ಮ ಚಿತ್ತವನ್ನು ಸ್ಥಿರಮಾಡಿ ಸಾಧಿಸುವ ಯೋಗವನ್ನು ಮರೆತು ಸೂರ್ಯನನ್ನು ನೋಡುತ್ತಾ ಕಣ್ಣು ಕುಕ್ಕಿಸಿಕೊಳ್ಳುವ ಆಲೋಚನೆಯನ್ನು ನಡಸಿದ್ದಾರೆ. ಇದಲ್ಲದೆ ಅನೇಕರನ್ನು ಎಂದರೆ ನನ್ನನ್ನೇ ಮೊದಲಾದವರನ್ನು ಆರ್ಯ ಸಮಾಜಕ್ಕೆ ಸೇರಿರಿ, ಎಂದು ಹುರಿದುಂಬಿಸುತ್ತಾ ಇದ್ದಾರೆ. ಆರ್ಯ ಸಮಾಜದ ಪದ್ಧತಿಯಂತೆ ಜನಿವಾರವನ್ನು ಹಾಕಿಕೊಂಡು ವೀರಶೈವರು ಹೊಂದುತ್ತಿರುವ ಧಾರ್ಮಿಕಸ್ಥಿತಿಗಿಂತ ಹೆಚ್ಚಾಗಿ ಇವರು ಏನನ್ನು ಸಾಧಿಸುವರೋ ಆ ವಿಷಯವನ್ನು ಬಹಿರಂಗವಾಗಿ ಪತ್ರಿಕಾ ಮುಖಾಂತರ ವೀರಶೈವ ಸಮಾಜಕ್ಕೆ ತೋರಿಸಿಕೊಟ್ಟರೆ ಎಲ್ಲರೂ ಆಲೋಚನೆ ಮಾಡಿ ಅದರ ಉತ್ತಮತೆಯನ್ನು ಕಂಡು ಹಿಡಿದು ಸೇರಬಹುದು. ಹಾಗೆ ಮಾತ್ರ ಇವರು ಮಾಡುವುದಿಲ್ಲ. ಇವರ ತಂದೆ ತಾಯಿಗಳ ಗತಿಯಂತೂ ಆಗಿಯೇ ಹೋಯಿತು. ಅವರು

ಶಿವನ ಬಳಿಗೆ ಯಾವಾಗ ಹೋಗುವೆವೋ ಎಂದು ನಿರೀಕ್ಷಿಸಿಕೊಂಡು ಇರಬಹುದು. ಹಾ! ಹಾ!

ಹೀಗೆ ವಿದ್ಯಾಕಲಿಯುವ ವೀರಶೈವರಿಗೆ 'ಕಲ್ಲನ್ನು ಕಟ್ಟಿಕೊಳ್ಳಬೇಡಿರಿ' ಎಂದು ಹೇಳುವ ಆರ್ಯ ಸಮಾಜದ ಕಾಟ, ತಿಳಿಗೇಡಿಗಳಾದ ಜಿಹ್ವಾ ಗುಹ್ಯ ಲಂಪಟರಾದವರಿಗೆ ಮುಸಲ್ಮಾನರ ಕಾಟ, ಸಿದ್ದಿಕ್ ಚನ್ನಬಸಪ್ಪನ ಬೋಧೆಯ ಕಾಟ, ತಿರುವಾಂಕೂರಿನಲ್ಲಿ ಸಾವಿರಾರು ಜನರಿಗೆ ಕ್ರೈಸ್ತ ಪಾದ್ರಿ (Father) ಗಳ ಕಾಟ, ಉಳಿದಕಡೆಗಳಲ್ಲಿ ಹೆಣ್ಣುಗಳನ್ನು ಕೊಟ್ಟು ತಮ್ಮ ಧರ್ಮಕ್ಕೆ ಸೆಳೆಯುವ ಕ್ರೈಸ್ತರ ಕಾಟ, ದೇಶಾಂತರಕ್ಕೆ ಹೋಗಿ ಅಲ್ಲಿನ ಜನಾಂಗವೇ ಆಗುವ ದೇಶಾಂತರದ ಕಾಟ, 'ಎಲೋ ಶಿಷ್ಯನೇ ನೀನು ಶೂದ್ರ' ಎನ್ನುವ ಗುರುಗಳಕಾಟ, 'ಒಳ್ಳೆಯ ದೋಸೆ, ರುಚಿರುಚಿಯಾದ ಕಲಸನ್ನ, ಕರಂ ಕುರುಂ ಚಕ್ಕಲಿ, ಬೇರೆಕಡೆ ನೀವು ತಿನ್ನಲಾರಿರಿ ಬನ್ನಿರಿ' ಎಂದು ಕರೆಯುವ ವಿಧರ್ಮಿಗಳ ಹೋಟಲಿನ ಕಾಟ, ಒಳಗಿನ ಕಾಟ, ಹೊರಗಿನ ಕಾಟ, ನೂರಾರುಕಾಟ, ಈ ಕಾಟಗಳಲ್ಲಿ ಅಯ್ಯೋ ವೀರಶೈವವೇ, ನೀನು ಉಳಿಯುವುದು ಹೇಗೆ?

ಅಯ್ಯೋ ವೀರಶೈವವೇ! ಬಸವೇಶ್ವರನ ಕಾಲದಲ್ಲಿ ನಿನ್ನ ಮಕ್ಕಳು ವೀರಶೈವ ಎಂಬ ನಿನ್ನ ಹೆಸರಿನ ಮೊದಲಿನ ಪದಕ್ಕೆ ಸರಿಯಾಗಿ ಸಹ ಧರ್ಮಿಗಳನ್ನು ಹೆಚ್ಚಿಸುತ್ತಾ ನಿನಗೆ ವೀರ ಪದವನ್ನು ಸಾರ್ಥಕ ಮಾಡಿದ್ದರು. ಈಗಿನ ನಿನ್ನ ಮಕ್ಕಳು ಹೇಡಿಗಳಾಗಿ ಸಹ ಧರ್ಮಿಗಳನ್ನು ಹೊರಗೆ ದಬ್ಬುತ್ತಾ ಹೇಡಿ ಶೈವರಾಗಿದ್ದಾರೆ. ಈಗ ನೀನು ವೀರಪದವನ್ನು ಕಿತ್ತು ಹಾಕಬೇಕು, ಈಗ ನೀನು ಹೇಡಿಶೈವ ಅಲ್ಲವೇನು? ಅಲ್ಲವಾದರೆ ತೋರಿಸು. ಹೀಗೆ ಇನ್ನೂ ಕೆಲವು ಕಾಲ ನೀನು ಈ ಹೇಡಿ ರೋಗದಲ್ಲಿ ಇದ್ದರೆ ಸಾಯುವೆ.

ಅಯ್ಯೋ ವೀರಶೈವವೇ! ಬೇಬಿಟ್ಟಯ ವೀರಶೈವವೇ! ಗತಿಗೆಟ್ಟ ವೀರಶೈವವೇ! ನೀನು ಉದ್ಧಾರವಾಗುವುದು ಎಂದಿಗೆ?

ಒಬ್ಬ ಬಡ ವಿದ್ಯಾರ್ಥಿ.



ವೃದಾಗಿಯೂ ಆಗಿರುತ್ತದೆ. ಈ ಕಾರಣದಿಂದ ಅವನು ಬೇಗನೆ ಹಿಂದೂ ಧರ್ಮಶಾಸ್ತ್ರದ ಮುಖ್ಯ ಬೋಧೆಯಾದ ಮಹಾವಾಕ್ಯಗಳಲ್ಲಿ ಒಂದಾದ 'ಅಹಂ ಬ್ರಹ್ಮಾಸ್ಮಿ' ಎಂಬ ತತ್ವವನ್ನು ಅನುಸರಿಸಿ ನಡೆವ ಆಚರಣೆಯನ್ನು ಕಲಿಯುವ ಸುಯೋಗವು ದೊರಕುತ್ತದೆ. ಶೈವರಿಗೆ ನೂರು ಜನ್ಮದಲ್ಲಿ ಮುಕ್ತಿ ಎಂಬ ಪ್ರಮಾಣವಾದರೂ ಅವರಿಗೆ ಲಿಂಗಪೂಜೆಯುಂಟಾದುದರಿಂದಲೇ.

ಈ ಕಾರಣಗಳಿಂದ ವೀರಶೈವ ಧರ್ಮವು ಹಿಂದೂ ಧರ್ಮದೊಳಗಿನ ಒಂದು ಭಾಗವೇ ಹೊರತು ಪ್ರತ್ಯೇಕವಲ್ಲವೆಂಬುದನ್ನು ಡಾ. ಸ್ಕೈಡರವರು ಹೇಳುವಂತೆ ವೀರಶೈವರೆಲ್ಲರೂ ತಿಳಿದಿರಬೇಕಾದುದು ಮುಖ್ಯವಾದ ಅಂಶ. (ಈ ಮಾಸಪತ್ರದಲ್ಲಿ ವೀರಶೈವರು ಹಿಂದೂ ಧರ್ಮದಲ್ಲಿ ಒಂದು ಭಾಗದವರೆಂದು ಅನೇಕಸಾರಿ ಬರೆಯಲ್ಪಟ್ಟಿದೆ.)

ಈ ಮಹನೀಯರು ಪರದೇಶೀಯರಾದಾಗ್ಯೂ ಕನ್ನಡಬಲ್ಲವರಲ್ಲವಾದಾಗ್ಯೂ ತಮಗೆ ದೊರೆದಷ್ಟು ದೇವನಾಗರಿ ಲಿಪಿಯ ಸಂಸ್ಕೃತ ಗ್ರಂಥಗಳನ್ನೋದಿ ೧೦ ವರ್ಷಗಳ ಹಿಂದೆಯೇ ವೀರಶೈವರ ತತ್ವವನ್ನು ಕಂಡು ಹಿಡಿದುಕೊಂಡಿರುವುದೂ ಅದನ್ನು ವೀರಶೈವರಿಗೇನೇ ಬೋಧೆಮಾಡುತ್ತಾ ಇರುವುದೂ ಎಷ್ಟು ಶ್ಲಾಘನೀಯವಾದ ವಿಷಯವು. ಜೈನ ಬೌದ್ಧರಂತೆ ಹಿಂದೂ ಧರ್ಮದಲ್ಲಿ ಸೇರದೆ ಇದ್ದ ಮತವು ವೀರಶೈವವೆಂದು ಹೇಳುವವರು ಈಗಲೂ ಅನೇಕರಿದ್ದಾರೆ. ಇಂಥವರಿಗೆ ತಮ್ಮ ಮತವೇ ತಮಗೆ ತಿಳಿದಿಲ್ಲವೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ.

ಈ ಪಂಡಿತ ಸ್ಕೈಡರವರ ಉದಾಹರಣೆಯಿಂದ ದೇವನಾಗರಿ ಲಿಪಿಯಲ್ಲಿ ವೀರಶೈವ ಸಂಸ್ಕೃತ ಗ್ರಂಥಗಳನ್ನು ಅಚ್ಚುಮಾಡಿ ಪ್ರಕಟಿಸಿದರೆ ಅವು ಇಡೀ ಜಗತ್ತಿಗೇನೇ ಮಾನ್ಯವಾಗುವವೆಂಬುದನ್ನು ವೀರಶೈವರು ನಿರ್ಧರವಾಗಿ ತಿಳಿಯಬೇಕಲ್ಲವೇ?

ವೀರಶೈವರು ಸತ್ತ ಕ್ಷಣವೇ ಶಿವನನ್ನು ಕೂಡುತ್ತಾರೆ, ಎಂದು ಬರೆದಿರುವ ಇವರ ಅಭಿಪ್ರಾಯವು ಮಾತ್ರ ಸರಿಯಾದುದಲ್ಲ. ದೀಕ್ಷೆಯಾದಾಗಲೇ ಲಿಂಗ (ಬ್ರಹ್ಮ) ರೂಪನಾದ ಇವನಿಗೆ ಮನುಷ್ಯತ್ವದ ಬಿಡುಗಡೆ (ಸಾವು) ಸಂಭವಿಸಿ ಇರುತ್ತದೆ. ಒಮ್ಮೆ ಸತ್ತಪನು ಮತ್ತೆ ಸಾಯುವದೆಲ್ಲಿ? ಶಿವಸ್ವರೂಪನಾಗಿ ಹುರಿದ ಬೀಜವು ಹಸಿಯಬೀಜದಂತೆ

ತೋರುವಹಾಗೆ ತಾನೂ ಲೌಕಿಕರಂತೆ ಕಾಣುತ್ತಾ ಅಮರನಾಗಿ ಲೌಕಿಕ ಯಾತ್ರೆಯನ್ನು ಲೀಲಾರೂಪವಾಗಿ ಮುಗಿಸುವನೆಂಬುದೇ ಇವರ ನಿರ್ಣಯವು.

ಕ್ರಿಶ್ಚಿಯನ್ ಧರ್ಮವು ಒಂದೇ ಜನ್ಮಕ್ಕೆ ಮೋಕ್ಷ ಎಂದು ಹೇಳುವಂತೆ ಹಿಂದೂ ಧರ್ಮದಲ್ಲಿ ವೀರಶೈವ ಮತವು ಹೇಳುವುದರಿಂದ ಇದು ಶ್ರೇಷ್ಠವೆಂದು ಅವರು ಈ ಎರಡು ಧರ್ಮಗಳನ್ನೂ ಹೋಲಿಕೆ ಮಾಡಿದ್ದಾರೆ. ಆದರೆ ವೀರಶೈವರ ದಾಸೋಹಂ ಭಾವನೆಗೂ ಕ್ರಿಶ್ಚಿಯನ್‌ರ ಮನುಷ್ಯತ್ವಕ್ಕೂ ಬಹಳ ದೂರವಿದೆ. ಆಗಲಿ, ಯಾವ ವಿಧದಲ್ಲಿಯಾದರೂ ವೀರಶೈವದ ಶ್ರೇಷ್ಠತೆಯನ್ನು ಇವರು ಕಂಡು ಹಿಡಿದಿರುವುದು ಇವರು ಗುಣೈಕ ಪಕ್ಷಪಾತಿಗಳೆಂಬುದನ್ನು ನಿರ್ವಿವಾದವಾಗಿ ತೋರಿಸುತ್ತದೆ.

ಚಲವಾದಿಗಳಂತವರು ಸಹಾ ಪುನರ್ಜನ್ಮದಿಂದ ಮುಕ್ತರಾದವರೇ ಎಂದು ಇವರು ಬರೆದಿರುತ್ತಾರೆ. ತಾನು ಚಲವಾದಿ, ಲಿಂಗವನ್ನು ಧರಿಸಿದ್ದೇನೆ ಎಂದರೆ ಅವನು ಮನುಷ್ಯರ ಸ್ಥಿತಿಯವನು. ತಾನೇ ಬ್ರಹ್ಮನೆಂದು ತಿಳಿದು ಅದರಂತೆ ನಡೆದರೆ ವರ್ಣವೆಲ್ಲಿಯದು, ಕುಲವೆಲ್ಲಿಯದು, ಎಂದು ಅನೇಕ ಉಪನಿಷತ್ತುಗಳು ಒಪ್ಪುವಂತೆ ತಾನು ಶಿವನಾದವನು ಚಲವಾದಿಯಾದರೇನು? ಹೊಲೆಯನಾದರೇನು? ಅವನ ಜಾತಿಯು ಶಿವನ ಭಕ್ತಿಗೆ ಎಂದೂ ಅಡ್ಡಿಬಾರದು. ಆದ್ದರಿಂದ ಭಿನ್ನರೂಪದ ಲಿಂಗವನ್ನು ಧರಿಸದೆ ಸ್ವ ಸ್ವರೂಪದ ಲಿಂಗವನ್ನು ಧರಿಸಿ ಅದರಂತೆ ಆಚರಿಸಿದ ಚಲವಾದಿಯೂ ಕೂಡಾ ಪುನರ್ಜನ್ಮವಿಲ್ಲದವನೆಂದು ಹೇಳುವುದಕ್ಕೆ ವೀರಶೈವ ಶಾಸ್ತ್ರವು ಎಂದೂ ಹಿಂದಕ್ಕೆ ಸರಿಯುವದಿಲ್ಲ. (ಇದಕ್ಕೆ ಪೂರ್ವಿಕ ಗ್ರಂಥದ ಪ್ರಮಾಣವು 'ಲಿಂಗ' ಉಪನಿಷತ್ ಎಂಬ ಗ್ರಂಥದ ಮುನ್ನುಡಿಯಲ್ಲಿ ಇರುತ್ತದೆ.)

ಈ ಮಹನೀಯರು ವೀರಶೈವ ಸಂಬಂಧ ಪುಸ್ತಕವನ್ನು ಯಾವಾಗ ಬರೆದು ಇಡೀ ಜಗತ್ತಿನ ಜನರಿಗೆ ವೀರಶೈವ ತತ್ವಗಳನ್ನು ಪ್ರಕಟಗೊಳಿಸುವರೋ ಆ ಕಾಲವು ಬೇಗನೆ ಬರಲಿ ಎಂದು ಶಿವನನ್ನು ಪ್ರಾರ್ಥಿಸುವೆವು. ಮತ್ತು ಆ ಕಾಲದಲ್ಲಿ ಅನುಕೂಲ ದೊರೆದರೆ ಇವರಿಗೆ ವೀರಶೈವ ಮತ ತತ್ವಗಳನ್ನು ಸಾಧ್ಯವಾದಷ್ಟು ತಿಳಿಸಬೇಕೆಂಬ ಯೋಚನೆಯನ್ನೂ ಮಾಡಿರುವೆವು.

ಸಮಾಜ ಸೇವೆಯ ಆಸಕ್ತನಾದ
ಪ್ರಕಾಶಕ.

(ಈ ವಿಷಯವನ್ನು ಮುದ್ರಿಸುವಾಗ ೭ ನೆಯ ಪುಟದಲ್ಲಿ ಅಮರತ್ವ ಎಂಬುದರ ಮುಂದೆ ( Immorality ) ಎಂತ ತಪ್ಪಾಗಿ ಬಿದ್ದಿದೆ ಇದು

(Immortality) ಎಂತ ಆಗಬೇಕು. ಈ ವಿಷಯವನ್ನು ನನಗೆ ತಿಳಿಸಿದ ಇಲ್ಲಿನ ಹೈಸ್ಕೂಲ್ ಹೆಡ್ಮಾಸ್ಟರ್ ಮ. ರಾ. R. R. ಕುಪ್ಪಸದ M. A. B. T. ಇವರಿಗೆ ಕೃತಜ್ಞನಾಗಿರುತ್ತೇನೆ-

(ಮುದ್ರಿಸಿದ ಕೂಡಲೇ ಕೆಲವು ಸಂದರ್ಭಗಳಲ್ಲಿ ಕೆಲವು ಅನನುಕೂಲಗಳಿಂದ ಮೊದಲನೆಯ ಪ್ರತಿಯನ್ನು ನೋಡದೆ ಇರುವುದರಿಂದ ಅನೇಕ ತಪ್ಪುಗಳು ಇಂಗ್ಲಿಷ್ ಪದಗಳಲ್ಲಿ ಆಗುತ್ತಾ ಇವೆ. ಈ ಬಗ್ಗೆ ಓದುಗರು ಕ್ಷಮಿಸುವರೆಂದು ನಂಬುತ್ತೇನೆ.)

ಪ್ರಕಾಶಕ.

---

## ವಿಮರ್ಶೆ.

ಬೈಲಹೊಂಗಲದ ವೀರಶೈವ ಧರ್ಮಾರ್ಥ ಸಂಸ್ಕೃತ ಪಾಠಶಾಲೆ ಮತ್ತು ಉಚಿತ ಭೋಜನಶಾಲೆಯ ೨ನೆಯ ವರ್ಷದ ವರದಿಯನ್ನು ನೋಡಲಾಯಿತು. ಈ ಶಾಲೆಯು ಚಂದ್ರಶೇಖರ ಶಾಸ್ತ್ರಿಗಳು ಹೊಸಮಠ ಸಂದಗೋಡು ಇವರ ಅಧ್ಯಾಪಕತೆಯಲ್ಲಿ ಚನ್ನಾಗಿ ನಡೆಯುತ್ತಿರುವುದು. ೧೫ ವಿದ್ಯಾರ್ಥಿಗಳಿದ್ದಾರೆ. ವೈದಿಕವನ್ನು ಅಭ್ಯಾಸ ಮಾಡುವವರೇ ಬಹಳ ಸಂಸ್ಕೃತ ಪ್ರಥಮ ಪುಸ್ತಕ ಮತ್ತು ಇಂಗ್ಲಿಷ್ ಕಲಿಯುವವರೂ ಇದರಲ್ಲಿ ಇದ್ದಾರೆ. ಇಷ್ಟು ವಿದ್ಯಾರ್ಥಿಗಳ ವರ್ಷದ ಊಟದ ಖರ್ಚು ೩೦೭-೧೦-೯ ಮಾತ್ರ ಆಗಿದೆ. ಈ ಶಾಸ್ತ್ರಿಗಳ ಪಗಾರ ಮತ್ತು ನವಕರರ ಪಗಾರಕ್ಕೆ ಈ ವರ್ಷದಲ್ಲಿ ೫೪೬-೪-೯ ರೂ. ಖರ್ಚಾಗಿರುತ್ತದೆ. ಶಿಲ್ಕು ೩೦-೫-೯ .ನಿಂತಿರುತ್ತದೆ. ಇದನ್ನು ನೋಡಿದರೆ ಮಿತವ್ಯಯದಿಂದ ಈ ಸಂಸ್ಥೆಯು ನಡೆದಿರುವುದು ಎಂದು ವ್ಯಕ್ತವಾಗುತ್ತದೆ. ಇದನ್ನು ನಡಸಿಕೊಂಡು ಹೋಗುವದರಲ್ಲಿ ಮುತವರ್ಜಿಯನ್ನು ವಹಿಸುತ್ತಿರುವ ತಿಪ್ಪೆಮಠದ ನಿ. ವ. ನೀಲಕಂಠ ಸ್ವಾಮಿಗಳ ಕಾರ್ಯವು ಸ್ತುತ್ಯವಾಗಿದೆ. ಇದಕ್ಕೆ ಒಂದು ದ್ರವ್ಯನಿಧಿ ಇರುವಂತೆ ಏರ್ಪಡಿಸುವದು ಉತ್ತಮ.

ಈ ಮಠದಲ್ಲಿ ಈ ವರ್ಷ ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನವು ನಡೆಯುತ್ತಾ ಇದ್ದು ಇದಕ್ಕೆ ಯೋಗ್ಯ' ಸಮಾರಾಧನೆ ನಡೆದಿರುವದನ್ನೂ, ಶಿವ ಶರಣರ ವಚನಗಳ ಪ್ರವಚನಕ್ಕೆ ಜನರೂ ಹೆಣ್ಣು

ಮಕ್ಕಳೂ ಆನಂದದಿಂದ ಸೇರುತ್ತ ಇರುವದನ್ನೂ ತಿಳಿದು ಸಂತೋಷವಾಗಿದೆ. ಪ್ರಕಾಶಕ.

ಹೈದರಾಬಾಡ ದೇಶದ ಕಲಬುರಿಗಿಯಲ್ಲಿ ನಿ. ವ. ಶಿವಮೂರ್ತಿ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆಯುವ ಉಚಿತ ಭೋಜನಾಲಯದ ವರದಿಯು ವಿಮರ್ಶೆ ಬಗ್ಯೆ ಬಂದಿರುತ್ತದೆ. ಇದರ ವಿಷಯವಾಗಿ ಮುಂದೆ ವಿಮರ್ಶಿಸುವೆವು. ಪ್ರಕಾಶಕ.

---

## ಸಂತೋಷ.

ರಾ. ಸಾ. ಪಿ. ಜಿ. ಹಳಕಟ್ಟಿಯವರು ವಚನ ಶಾಸ್ತ್ರವನ್ನು ಪ್ರಚುರ ಪಡಿಸಿದ ಕೃತಜ್ಞತೆಗಾಗಿ ಅವರಿಗೆ ಬಾಗಲಕೋಟೆ ವೀರಶೈವ ಸಮಾಜದವರು ೭೭೧ ರೂ. ಗಳ ನಿಧಿಯನ್ನು ಅರ್ಪಿಸಿದ ವಿಷಯವು ಸಂತೋಷದ ಸಂಗತಿಯಾಗಿದೆ.

ವೀರಶೈವರಲ್ಲಿ ಬರಹವ ಸಂಬಂಧದಲ್ಲಿ ಎಂದರೆ ಸಾಹಿತ್ಯದ ವಿಷಯದಲ್ಲಿ ಗಮನ ಕೊಡುವವರು ವಿರಳ. ಅದರಲ್ಲಿಯೂ ಧಾರ್ಮಿಕ ಗ್ರಂಥಗಳನ್ನು ಓದಬೇಕೆಂಬ ಚಟವುಳ್ಳವರು ಇನ್ನೂ ವಿರಳ. ಈ ಕೊರತೆಯಿಂದ ಧಾರ್ಮಿಕ ಗ್ರಂಥಗಳು ಪ್ರಚಾರಕ್ಕೆ ಬರುವುದೇ ಬಹಳ ಕಷ್ಟವಾಗಿದೆ.

ತಮ್ಮ ತಮ್ಮ ಧಾರ್ಮಿಕ ಗ್ರಂಥಗಳನ್ನು ಜನರು ಓದುವುದರಿಂದ ಮಹಾದೇವನನ್ನು ಹೇಗೆ ತಿಳಿಯಬೇಕೆಂಬ ವಿಷಯವು ಗೊತ್ತಾಗುವುದಲ್ಲದೆ, ಹೀಗೆ ಗೊತ್ತುಮಾಡಿಕೊಂಡ ಜ್ಞಾನದಿಂದ ಈ ಜನ್ಮದಲ್ಲಿ ತಮ್ಮ ಪ್ರಾಣ ( ಜೀವ ) ಕ್ಕೆ ಸುಧಾರಣೆಯಾಗಿ ಆ ಜೀವನು ಹೊಂದುವ ಇನ್ನೊಂದು ಜನ್ಮದಲ್ಲಿಯೂ ಸಹಾ ಅವನಿಗೆ ಸುಖವನ್ನು ಕೊಡುವುದಾಗಿ ಪರಿಣಮಿಸುತ್ತದೆ ( ಜೀವನಿಗೆ ಮರಳಿ ಜನ್ಮವುಂಟೆಂಬುದನ್ನು ಕೆಲವು ಪಾಶ್ಚಾತ್ಯರೇ ಸಿದ್ಧಮಾಡಿದ್ದಾರೆ. ) ಆದ್ದರಿಂದ ಧಾರ್ಮಿಕ ವಿದ್ಯೆಯನ್ನು ಅವಶ್ಯವಾಗಿ ಎಲ್ಲರೂ ಓದಬೇಕು. ತನ್ನ ಧರ್ಮದ ಸಂಗತಿಗಳಿಗೂ ಇತರರ ಧರ್ಮದ ಸಂಗತಿಗಳಿಗೂ ಏನು ವ್ಯತ್ಯಾಸವೆಂಬುದನ್ನು ತಿಳಿದುಕೊಳ್ಳುವುದು ಇನ್ನೂ ಉತ್ತಮ.

ಈ ಕಡೆಗೆ ಸಮಾಜದವರು ಇನ್ನೂ ಹೆಚ್ಚಾಗಿ ಗಮನ ಕೊಟ್ಟು ತಮ್ಮ ಧಾರ್ಮಿಕ ವಾಙ್ಮಯವನ್ನು ಬೆಳೆಸುವುದು ಅತ್ಯವಶ್ಯಕವೆಂದು ನಾವು ಒತ್ತಿ ಹೇಳದೆ ಬಿಡಲಾರೆವು.

ಪ್ರಕಾಶಕ.

# ಚನ್ನಬಸವೇಶ್ವರನ ಪೂರ್ವ ವೃತ್ತ.



....ನು(ಬಸವೇಶ್ವರ?) ಬಿಜ್ಜಳನ ಗದ್ದುಗೆಯಕೆಳಗೆ ೬೬ ಕೋಟಿ ದ್ರವ್ಯ ವನುಮೆಟ್ಟಿ ನೋಡಿ ತೆಗೆಯಿಸಿದನು. ತೆಗೆಸಿದಲ್ಲಿ ಬಿಜ್ಜಳ ಮುಂತಾದ ರಾಯ ರಾವುತ ಪಟುಭಟ ಮಾನ್ಯೆಯರು ಪುರಜನ ಪರಿಜನ ಸಭಾಸ್ಥಾನ ವೆಲ್ಲವೂ ಈತನೆಂತಹ ಸೋಜಿಗದ ಪುರುಷನೋ ಎಂದು ಆಶ್ಚರ್ಯಂ ಬಟ್ಟು ಆ ಬಸವರಾಜೇಂದ್ರನಿಗೆ ವಂದನಂಗೆಯ್ದು ಚಾಳೋಕ್ಯನಾಳಿಕೆಯ ಸಿದ್ಧಣ್ಣಮಂತ್ರಿಯ ಪುತ್ರಿಯಾದ ನೀಲಲೋಚನೆಯಮ್ಮನೆ ಬಿಜ್ಜಳನಿಗೆ ಅಗ್ರಜೆಯಾಗಬೇಕು. ಅದೆಂತೆಂದೊಡೆ ಆ ಚಾಳೋಕ್ಯನು ಮೃತವ ನೆಯ್ದುವಲ್ಲಿ ತನ್ನ ಪುತ್ರನಾದ ಬಿಜ್ಜಳನ ಆ ಸಿದ್ಧಣ್ಣಮಂತ್ರಿಯ ಕೈಯ ಲ್ಲಿಕೊಟ್ಟು ಮೃತವಾಗಿ ಹೋದಲ್ಲಿ ಆ ಸಿದ್ಧಣ್ಣಮಂತ್ರಿಯು ಬಿಜ್ಜಳನ ಪಟ್ಟಕಟ್ಟಿ ತಾತಾನೆ (ತಾನೇ?) ಪಟ್ಟವನಾಳುತ್ತಿರ್ದ. ಆತನಿಗೆ ಅಂತ್ಯಕಾಲ ಒದಗಿತ್ತು. ಒದಗಿದಲ್ಲಿ ಆ ಬಿಜ್ಜಳನ ಕರದವನಕೈಯಲ್ಲಿ ನೀಲಲೋಚನೆಯಮ್ಮನಕೊಟ್ಟು ನೀನೂ ಈ ಅಮ್ಮನೂ ಒಂದೇ ತಾಯಮೊಲೆಯನುಂಡು ಬೆಳೆದವರು. ಆದುಕಾರಣ ನಿನಗೆ ಅಗ್ರಜೆಯಾಗಬೇಕೆಂದು ಬಿಜ್ಜಳನಿಗೆ ಹೇಳಿ ಮೃತವನೆಯ್ದಿ ಹೋಗಲಿತ್ತ ಬಿಜ್ಜಳನು ಆ ನೀಲ ಲೋಚನೆಯಮ್ಮನ ತಮ್ಮಕ್ಕನೆಂದು ಕಂಡು ಪಾಲಿಸುತಿರಲಾ ನೀಲಲೋಚನೆಯ ಬಸವರಾಜೇಂದ್ರನಿಗೆ ಧಾರೆಯನೆರೆದುಕೊಟ್ಟು ತನ್ನ ಅರಮನೆ ಆಸ್ಥಾನ ರಾಜತೇಜ ದೇಶಕೋಶ ಬೊಕ್ಕಸ ಬಂಡಾರ ಆನೆ ಸೇನೆ ರಥ ಪರಿವಾರಕ್ಕೂ ನೀವೇ ಅಧಿಕಾರಿಗಳು ನೀವು ಕೊಟ್ಟ ಪಡಿ ಅಕ್ಕಿಯನು ಊಟಮಾಡಿಕೊಂಡು ನಾ ನೀವೆಂತಿರಿಸಿದಂತಿಹೆನು. ಆ ಮಣಿಹವ ನೀವೇ ನಡಸುವುದೆಂದು ಪದಾಕ್ರಾಂತನಾಗಿ ಕಿಂಕುರ್ವಾಣದಿಂ ಬಿನ್ನಯಿಸಲು—

ಬಸವರಾಜೇಂದ್ರನು ಎಲೆ ಬಿಜ್ಜಳರಾಯ ನಮ್ಮ ಗುರು ಲಿಂಗ ಜಂಗಮದ ಭಕ್ತಗಣಂಗಳಿಗೆ ಅಡ್ಡಲಾಗದೆ ಇರ್ದೊಡೆ ನಿನ್ನ ರಾಜತೇಜದ ಶಕೆ ನಡೆವುದು, ಅಲ್ಲದೊಡೆ ಕೆಡುವುದು ನೋಡಿಕೋ ಎಚ್ಚರವೆಂದು ಪಚಾರಿಸಲು

ಬಿಜ್ಜಳನನಿತರೊಳೊಡಂಬಟ್ಟು ತನ್ನರಮನೆಗೆ ಹೋಗಲಿತ್ತಾ ಸಭೆ ಹರಿಯಲಾ ಬಸವಕುಮಾರಕಂ

ಶಿವಾದ್ವೈತ ಭಕ್ತಿಸಮುದ್ರ ಪೌರ್ಣಚಂದ್ರೋದಯ ವಕ್ತ್ರನಾಗಿ ತನ್ನರಮನೆಗೆ ಬಂದು ನಂದೀಧ್ವಜವನೆತ್ತಿಸಿ ಪ್ರಮಥಗಣ ರುದ್ರಗಣ ವೃಷಭಗಣ ಅಮರಗಣ ಭಕ್ತಗಣ ಶಿವಗಣಂಗಳೆಂಬ ಮಹಾಮಹಿಮರ ಸುಳುಹುದೋರಿಸಿ ಸದಾಚಾರ ನಿಯತಾಚಾರ ಗಣಾಚಾರ ಸಮಯಾಚಾರ ಭೃತ್ಯಾಚಾರ ಶಿವಾಚಾರವನರುಹಿಸಿ

ಇಂತೀ ವಾಚ್ಯಶೃತಿಗಳಲ್ಲಿ ಸರ್ವ ವೇದಶಾಸ್ತ್ರ ಪುರಾಣ ಆಗಮಂಗಳಲ್ಲಿ ಪಂಚಾಶತ್‌ಕೋಟಿ ವಿಸ್ತೀರ್ಣದೊಳಗಾದ ಕವಿ ಗಮಕಿ ವಾದಿ ವಾಗ್ಮಿಗಳು ಮುಂತಾದ ಪೂರ್ವತತ್ವ ನೂತ್ನ ಪ್ರಸಂಗ ಮುಂತಾದ ಸರ್ವಯುಕ್ತ ಸ್ವಯಸುಖ ಸಂಪನ್ನರು ಷಟ್‌ಸ್ಥಲ ಬ್ರಹ್ಮ ಪಂಚವಿಂಶತಿ ಶತಏಕಸ್ಥಲ ಸರ್ವಾಚಾರ ಸಂಪನ್ನರಿಗೆಲ್ಲಕ್ಕೂ ಪ್ರಮುಖನಾಗಿ ಶರಣ ಸಮಿತಿನಿಧಿಯೋ, ಭಕ್ತಿಯ ಬೆಳೆಸಿರಿಯೋ, ಮುಕ್ತಿಯ ಮುಖ ದರ್ಪಣವೋ, ಸತ್ಯಸಾಗರವೋ, ಇದೆಂಬಂತೆ ದಿನದಿನಕ್ಕೆ ೩೬೦ ಸತ್ತ ಪ್ರಾಣವನೆತ್ತಿ ಮೆರೆವುತ್ತೆಂಬತ್ತೆಂಟು ಪವಾಡಂಗಳಂ ತೋರಿ ಮೆರೆವುತ್ತಾ ಮೂವತ್ತಾರು ಕೊಂಡೆಯರ ಪರಿಹರಿಸಿ ಪಂಚಪರುಷ ಮೂರ್ತಿಯಾಗಿ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮಕ್ಕೆ ಇಚ್ಛಾ ಪದಾರ್ಥವ ನೀಡಿ ಮರ್ತ್ಯವ ಕೈಲಾಸವಂ ಮಾಡಿಕೊಂಡಿರುತ್ತಿರಲಾ ಸಮಯದೊಳೊಹ ಕಕ್ಕಯ್ಯನೆಂಬ ಶಿವಶರಣನು ತನ್ನ ಭಕ್ತಿಗೃಹದಲ್ಲಿ ಶಿವಾದ್ವೈತಾರ್ಪಿತವ ಮಾಡಬೇಕೆಂದು ಬಸವೇಶ್ವರ ಮುಖ್ಯವಾದ ಶಿವಗಣಂಗಳಿಗೆ ವಿಭೂತಿ ವೀಳ್ಯವ ಸಂಬಂಧಿಸಲೆಂದು ಬರಲದಂ ಕೈಕೊಂಡನಿತರೊಳಾ ಬಸವರಾಜಾಧೀಶ್ವರನು ಬಿಜ್ಜಳನ ಸಭೆಗೆ ಹೋಗಲೊಂದಿನಿತು ರಾಜಕಾರ್ಯದಿಂ ತಡೆಯಲಿತ್ತಾ ಶಿವಾರ್ಪಣವಮಾಡೆ ಹೊತ್ತು ಹೋಯಿತ್ತು ಅವರು ದೊರೆಗಳು ನಾವು ಬಡವರು ನಮ್ಮ ವೇಳೆಗೆ ಬಸವರಾಜ ದೇವರೆಂತು ಬರುವರೆಂದು ಕಕ್ಕಯ್ಯಗಳು

ಎಲ್ಲ ಶಿವಗಣಂಗಳೊಡಗೊಂಡು ತಮ್ಮ ಗೃಹಕ್ಕೆ ಬಂದು ಕವಾಟವ ಬಲಿದೊಳಗೆಲ್ಲಾ ಶಿವಗಣಂಗಳಾರೋಗಿಸುತ್ತಿರಲಾ

ಬಸವದಂಡಾಧೀಶ್ವರನು ಓಲಗವನುಳಿದು ಕಕ್ಕಯ್ಯಗಳ ಗೃಹಕ್ಕೆ ಬರಲಾ ಗೃಹದ್ವಾರ ಮುದ್ರಿಸಿರಲದಂ ಕಂಡೀ ಸಮಯದೊಳೆಯ್ದಿದೆನೆನಲ್ ಸಂಚಾರವಾವಪುದೆಂದು ಬಾಗಿಲ ಕವಾಡವ ಕಾಯ್ದು ನಿಂದಿರಲೆಲ್ಲಾ ಶಿವಗಣಂಗಳು ಶಿವಾರ್ಪಣವಮಾಡಿ ತಮ್ಮ ತಮ್ಮ ಮಠಕ್ಕೆ ಹೋಗಲಿತ್ತಾ ಬಸವದಂಡಾಧೀಶ್ವರಂ ಸೂಕ್ಷ್ಮತನುವಿನಲ್ಲಿ ದ್ವಾದಶ ವ

ಱಷ ಕಾಯ್ದಿಟ್ಟ ಸ್ಫೂಲತನುವನೇ ಬಿಜ್ಜಳನ ಸಭೆ ಗುರು ಹರ ಚರ ಪರಿಚರಿಯದೊಳಿರುತ್ತಿರಲೊಂದುದಿನ

ಡೋಹರ ಕಕ್ಕಯ್ಯಗಳ ಗೃಹದೊಳಗಣ ಭಾಂಡ ಪ್ರಸಾದನ ನೊಂದಿಯಹೆ ಕಚ್ಚಿಕೊಂಡು ಬರುತ್ತಿರಲಿಕ್ಕೆ ಮಧುರ ಚೂರ್ಣವತಳೆದು ತಮ್ಮಭಾಂಡಪ್ರಸಾದವನು ಮುಂದು(ಡ)ವಾಸದ ಸೆರಗಿನಲ್ಲಿ ಕಟ್ಟಿಕೊಂಡಾ ಇರುಹೆಗೆ ರುದ್ರಲೋಕವನಿತ್ತು ತಾವು ತಮ್ಮ ಗೃಹಕ್ಕೆ ಬಂದು ಶಿವಾರ್ಚನೆಯ ಮಾಡುವ ಸಿಂಹಾಸನದೊಳಾ ಮುಂಡಾಸವನಿಟ್ಟು ಸಿಂಹಾಸನ ದೊತ್ತಿನೊಳ್ ಕುಳ್ಳಿರ್ದು ಹಸ್ತ ಪಾದವ ತೊಳೆದು ಜಿಹ್ವೆಯ ಪ್ರಕ್ಷಾಲಿಸಿ ಮುಖಮಜ್ಜನವ ಮಾಡಿ ರುದ್ರಾಭಿಷೇಕವನೆರೆದು ಭಸಿತೋದ್ಧೂಳಿತನಾಗಿ ತೆಗೆದುಕೊಂಡಿಹೆನೆಂಬನಿತರೊಳು

ಅಕ್ಕನಾಗಲಾಂಬಿಕೆಯೆ ಚಿಚ್ಛಕ್ತಿ ಬಂದು ನಿಂದು ನೋಡಿ ಇನೇನೋ ನಮ್ಮ ಬಸವಣ್ಣ ನೂತ್ನ ಮೌಕ್ತಿಕ ರತ್ನಂಗಳ ಕಟ್ಟುವಾತನಲ್ಲ, ಇದೆಂತಹ ಅಪೂರ್ವತರವಾದ ವಸ್ತುವೋ ಎಂದು ಮುಂಡವಾಸ(ಶಿರೋವಸ್ತ್ರ)ದ ಸೆರಗ ಬಿಡು(ಬಿಚ್ಚು?)ತ್ತಿರಲದಂ

ಬಸವೇಶ್ವರನು ಕಂಡು, ಅಕ್ಕ, ನಾಗಲಾಂಬಿಕೆ, ಬಿಷದಿರದು ಕಕ್ಕಯ್ಯಗಳ ಒಕ್ಕ ಪ್ರಸಾದವದಕ್ಕೆ ದ್ವಾದಶ ವರುಷ ಪರಿಯಂತರ ಹಾರೈಸಿ ಕಾಯ್ದಿದ್ದೆ ನಾನದ ಸೇವಿಸುವದಕ್ಕೆ. ಸಾಂಗೋಪಾಂಗ ಶರೀರ ಶುದ್ಧತೆಯಾಗುತಿದೇನೆ ಎನಲವಂಕೇಳ್ದಕ್ಕಟಾ, ಲಿಂಗವ ತಳೆದಂಗ ಸದಾಶುದ್ಧಿಯುಲ್ಲವೇ ಶುದ್ಧಿ ಅಶುದ್ಧಿಯುಂ ಮೆಟ್ಟಿ ಲಿಂಗವ ತಳೆದಂಗೆ ಸದಾಶುದ್ಧಿಯಲ್ಲವೇ ಬಸವೇಶ, ಎಂದು ಆ ಪ್ರಸಾದವ ನಾನು ಬಿಡುವುದಿಲ್ಲೆಂದು ಹೇಳಿ ತಮ್ಮ ಲಿಂಗಕ್ಕೆ ಕೊಟ್ಟು ತೆಗೆದುಕೊಳ್ಳಲಾ ಪ್ರಸಾದವೇ ಪರಬ್ರಹ್ಮವೇ ಪುರುಷನಾಗಿ ತಾವೇ ಸ್ತ್ರೀಯುಳಾಗಿ ತಮ್ಮ ಯುಕ್ತಿಯೇ ಷಣ್ಮುಖದೇವರಾಗಿ ತ್ರಿವಿಧೈಕ್ಯವಾಗಿ ಚಿದ್ಗರ್ಭಚಿಹ್ನಾಂಕಿತವಾಗಿಹುದೆಂಬಂತೆ

ಏಕಮೂರ್ತಿ ಸ್ತ್ರಯೋ ಭಾಗಂ ಗುರು ಲಿಂಗಂತು ಜಂಗಮಂ
ಜಂಗಮಂಚ ಗುರುರ್ಲಿಂಗಂ ತ್ರಿವಿಧಂ ಲಿಂಗ ಮುಚ್ಯತೇ

ಎಂಬ ನ್ಯಾಯಂ ತೋರುವಂತೆ ಭಕ್ತಿ ಮುಕ್ತಿ ಯುಕ್ತಿಗಳೇಕಾಕಾರವಾದ ಲಕ್ಷ್ಯವಿದೆಂಬಂತೆ ಅಕ್ಕ ನಾಗಲಾಂಬಿಕೆಯು ಬಸುರು ಭಾರಯಿಸಲು

ಜೈನ ಚಾರ್ವಾಕ ಮಾಯಾವಾದಿಗಳು ಏಟ ಜಂಗಮದೇವರ ಸಂ

ಸರ್ಗದಿಂ ಗರ್ಭವಾಗಿದಾಳೆ ಬಸವಣ್ಣನಗ್ರಜೆ, ಎಂದು ನಿಂದೆಯನಾಡಲು ದಂ ಬಿಜ್ಜಳಂ ಕೇಳ್ದು, ಬಸವೇಶ್ವರ ಸ್ವಾಮಿಗಳ ಕರಸಿ, ಎಲೆ ಬಸವಣ್ಣ, ಪುರುಷನಿಲ್ಲದ ಸ್ತ್ರೀಯಳು ಗರ್ಭಿಣಿಯಾದುದುಂಟೇ ಎಂದು ಕೇಳಲಾ ಬಸವರಾಜನು ಪುರುಷನ ಸಂಸರ್ಗದಿಂದೆ ಸ್ತ್ರೀಗರ್ಭಿಣಿಯಾಗುವಳಲ್ಲದೆ ಪುರುಷನ ಸಂಸರ್ಗವಿಲ್ಲದಿರ್ದೊಡೆತ್ತಣ ಗರ್ಭವೆನಲಾ ಬಿಜ್ಜಳನು

ನಿಮ್ಮಕ್ಕನೆಂತು ಗರ್ಭಿಣಿಯಾದಳೆನೆ:—ಎಂದಲ್ಲಿ ಬಸವಣ್ಣನು "ತಾಳೆಮರವ ಕೆಳಗೊಂದು ಹಾಲಹರವಿ ಇದ್ದರೆ ಅದ ಹಾಲ ಹರವಿ ಎನ್ನರು, ಸುರೆಯ ಹರವಿ ಎಂಬರು. ಈ ಭಾವನೆ ನಿಂದೆಯ ಪ್ರಾಣಿಸು ಕೂಡಲಸಂಗಮದೇವಾ" ಎಂದೋದಿ ಅಂತಲ್ಲ, ಎಲೆ ಬಿಜ್ಜಳರಾಯ

ಷಣ್ಮುಖಸ್ವಾಮಿಗಳೇ ಕಕ್ಕಯ್ಯಗಳ ಪ್ರಸಾದ ಸ್ವರೂಪಿಸಿಂದ ಅಕ್ಕ ನಾಗಲಾಂಬಿಕೆಯ ಚಿದ್ಗರ್ಭದೊಳ್ ಗಟ್ಟಿಗೊಂಡು ಚಿಕ್ಕದಂಡನಾಯಕರಾಗಿ ಶಿವಾನುಭಾವವ ಬೋಧಿಸಲ್ಕೆ ಬರುತ್ತೈದಾರೆನಲು

ಅದಕ್ಕೆ ಬಿಜ್ಜಳನು ದೃಷ್ಟಾಂತರವೇನೆಂದನು:—ಎನಲಾ ಬಸವೇಶ್ವರಸ್ವಾಮಿಗಳು ಅಕ್ಕ ನಾಗಲಾಂಬಿಕೆಯ ಸಭಾಸ್ಥಾನಕ್ಕೆಕರಸಿ ತೆರೆಮರೆಯ ಹಿಡಿಸಿ ಭಸಿತವೆರಸಿದ ಕರವ ಬಸುರವೇಲೆ ಇರಿಸಿ

ನೀವು ಪ್ರಪಂಚಿಗೆ ಹುಟ್ಟಿದವರಾದರೆ ಮಾತನಾಡದೆ ಸುಮ್ಮನಿರಿ, ಅಲ್ಲದೊಡೆ ಗಣಗಣನೆ ಮಾತನಾಡಿ, ಎನಲಾ ಪ್ರಸಂಗಕ್ಕೆ ಗರ್ಭದೊಳಗಣ ಶಿಸುಕುಮಾರಕನು ನಾವು ಷಣ್ಮುಖಸ್ವಾಮಿಗಳು, ಕಕ್ಕಯ್ಯಗಳಾ ಪ್ರಸಾದಸ್ವರೂಪಿನಿಂದಕ್ಕನಾಗಲಾಂಬಿಕೆಯ ಮಹತ್ವವನು ಪ್ರಕಟೀಕರಿಸಿ ಮಹಾನಭಾವವ ಬೋಧಿಸಲಿಕ್ಕೆ ಚಿಕ್ಕದಂಡನಾಯಕರಾಗಿ ಬರುತ್ತೈದೇವೆ ಎಂದು ಪ್ರಸಂಗಿಸಲಾ

ಜೈನ ಚಾರ್ವಾಕ ಮಾಯಾವಾದಿಗಳು ದಾಡಂಬರವಾಗಿ ಬಿಜ್ಜಳನ ಸಭಾಸ್ಥಾನವೆಲ್ಲವೂ ಅತ್ಯಾಶ್ಚರ್ಯಂ ಬಟ್ಟು ಇಂತಹ ಮಹಿಮಾಪುರುಷರಾರಿದ್ದಾರೆಂದು ಕೀರ್ತಿಸಿ ಪೊಡಮಟ್ಟನಿತರೊಳಾ ಸಭೆ ಹರಿಯಿತ್ತಾ

ಬಸವೇಶ್ವರಸ್ವಾಮಿಗಳು ವಾದಿಗಳ ಗೆಲಿದು ತಮ್ಮ ಅರಮನೆಗೆ ಬಂದು ಇರುತ್ತಿರಲಾ

ನಾಗಲಾಂಬಿಕೆ ಎಂಬ ಚಿಚ್ಛಕ್ತಿಯಾ ಚಿದ್ಗರ್ಭದಿಂದೆ ಭೂಮಿಯೊಳ್ ಸ್ವಯಂಭುಲಿಂಗ ಉದಯಿಪಂತೆ ಮಲಯಾಚಲದೊಳ್ ಚಂದನತರು ಹುಟ್ಟುವಂತೆ ಪ್ರಸನ್ನೋದ್ಭವರಾಗಲಾ ಶಿಸುವಿಂಗೆ ಲಿಂಗ ಸಾಹಿತ್ಯವಮಾಡಿ ಮಾದಾರ ಚನ್ನಯ್ಯಗಳ ಪೆಸರಿಡಬೇಕೆಂಬ ಪ್ರೀತಿ ಬಸವನಿ

ಗೆ ಉಂಟಾಗಿರ್ಪುದು. ಆ ಬಸವಣ್ಣನ ಹೆಸರಿಡಬೇಕೆಂಬ ಪ್ರೀತಿ ಅಕ್ಕನಾ ಗಲಾಂಬಿಕೆಗೆ ಉಂಟಾಗಿರ್ಪುದು. ಈರ್ವರ ಪ್ರೀತಿವೆರಸಿ ಚನ್ನಬಸವಣ್ಣ ನೆಂಬ ನಾಮವ ಕಲ್ಪಿಸಿ ಕರೆಯಲಾ ಶಿವಕುಮಾರನಾದ ಚನ್ನಬಸವೇಶ್ವ ರನೆಂಬ ಶಿಸು ಹುಟ್ಟುತ್ತಲೇ ಸುಗಂಧ ಬಂಧುರದಂತೆ ಸ್ವಾನುಭಾವ ಸದ್ವಾಸನೆ ದಿಗ್ದೇಶಗಳಲ್ಲಿ ಬೀರುತ್ತಾ ಭಕ್ತಿ ಜ್ಞಾನ ವೈರಾಗ್ಯ ತಮಗೆ ತಾವೇ ಕುಡಿವರಿವುತ್ತ ಬಾಲಲೀಲೆಯೊಳೇಳು ವರುಷ ಪರಿಯಂತರ ವಿರ್ದು

ಆ ಮೇಲೆ ಚನ್ನಬಸವೇಶ್ವರನು ತ್ರಿವಿಧ ಲಿಂಗಾನುಗ್ರಹವನು ಬಹಿ ರಂಗದಲ್ಲಿ ಪ್ರತ್ಯಕ್ಷವಾಗಿ ಗುರುಮುಖದಿಂ ಪಡೆಯದೊಡೆ ಪುರಾತನರ ಮತಕ್ಕೆ ಯೋಗ್ಯವಲ್ಲವೆಂಬ ಭಾವಾಂತರ ಸ್ವಾತ್ಮಜ್ಞಾನದಿಂದೆಚ್ಚತ್ತಿರಿದು ಗಣಮೇಳಾಪದೊಳೀಶ್ವರಾರ್ಚನೆಗೆಯ್ದು

ಬಸವರಾಜದೇವರು ಮೂರ್ತವ ಮಾಡಿಕೊಂಡಿದ್ದೆಡೆಗೆ ಬಂದು ನಿಂದು ಮುಂದೆಸೆಯೊಳ್ ಕುಳ್ಳಿರ್ದು ಚನ್ನಬಸವೇಶ್ವರ ದೇವರು ತಮ್ಮ ಕಂಠದೊಳಳವಡಿಸಿರ್ದ ಲಿಂಗವನ್ನು ಬಿಟ್ಟು (ಬಿಚ್ಚಿ?) ಬಸವೇಶ್ವರನೆಂಬ ಗುರುಮೂರ್ತಿಯ ಕರದಲ್ಲಿ ಕೊಟ್ಟು ಲಿಂಗದ ಲಕ್ಷಣವನೋಡಿ, ಎನಲ ದಂ ಕೇಳ್ದು

ಬಸವೇಶ್ವರನು ಶೃತಿ ತತಿಯ ಸಿರದಮೇಲೊಪ್ಪುತ್ತಿರ್ಪ ಅತ್ಯತಿ ಷ್ಟದ್ದಶಾಂಗುಲ ನಿತ್ಯನೇಕೋರುದ್ರನದ್ವಿತೀಯನಣುವಿಂಗಣು ಮಹತ್ತಿಂಗೆ ಮಹತ್ತಾದ ನಿರವಯ ಪರಬ್ರಹ್ಮವೇ ಸುಕರವಾಗಿ ಬಂದಿತ್ತೀ ಸಂಗ ಮೇಶ್ವರಲಿಂಗದಲ್ಲಿ ಲಕ್ಷಣವ ನೋಡಲಿಕ್ಕಾಗದು, ಕೊಳ್ಳಿ, ಎನಲದಂ ಕೇಳ್ದು

ಚನ್ನಬಸವೇಶ್ವರನು ಎಲೆ ಬಸವ ಗುರುವೆ, ನೀವು ಬಿಜ್ಜಳನ ಸಭೆ ಯಲ್ಲಿ ಭಸಿತವೆರಸಿದ ಕರವ ಬಸುರಮೇಲೆ ಇರಿಸಲದೇ ವೇಧಾ ದೀಕ್ಷೆ ಯಾಯಿತ್ತು, ಸುವರ್ಮನಿದಿರಿ ಮಾತನಾಡಿ ಎಂದು ಹೇಳಿ ಪ್ರಸಂಗವ ಮಾಡಿಸಲದು ಮಂತ್ರದೀಕ್ಷೆಯಾಯಿತ್ತು, ಸಂಗಮೇಶ್ವರಲಿಂಗದಲ್ಲಿ ಲಕ್ಷ ಣವ ನೋಡಲಿಕ್ಕಾದೀತೇ ಕೊಳ್ಳಿ ಎಂದುದೇ ಕ್ರಿಯಾದೀಕ್ಷೆಯಾಯಿತ್ತು, ನೀವೆನಗೆ ಗುರು, ನಾ ನಿಮಗೆ ಶಿಷ್ಯ, ಇದು ಪ್ರಸಿದ್ಧವೆಲ್ಲಗಣಂಗಳು ನೀವು ಸಾಕ್ಷಿ ಎಂದು ಕೈ ಚಪ್ಪಳೆಯನಿಕ್ಕಿ ಕರದೊಳಳವಡಿಸಿಕೊಳಲಾ, ಬಸವರಾಜದೇವರು ಭಕ್ತಿಯ ಕುಳಸ್ಥಳವನಿಂಬುಗೊಂಡು ಆಚಾರ್ಯತ್ವ ದ ಲಕ್ಷಣವಿದೆಂದು ತೋರುವಂತೆ ಭಯವಾಂತು ಗಡಗಡನೆ ನಡುಗಿ

ಈತನು ಶಿವಸುಖ ಪ್ರಸನ್ನೇತಿ ಪ್ರಸನ್ನರೂಪವಾದ ಶಿವಕುಮಾರ ಕನು, ನಾನುಭಕ್ತಿವೇಷವತೊಟ್ಟು ಶಿವಶರಣಂಗೆ ಗಂಡುದೊತ್ತಾಗಿದೇನೆ ಇದ್ದಳ (ಇದೊಳ್ಳೆಪಃ?) ಗುರು ಶಿಷ್ಯತ್ವ ಬಂದು ಸಂಬಂಧಿಸಿತ್ತಾಹ! ಇದು ಏನಾಯಿತ್ತಲಾ! ಎಂದು ಹಂವುದಂಬೋಗಿ ಚಿಂತಾಕ್ರಾಂತರಾಗಲದಂ ಕಂಡು ಚನ್ನಬಸವರಾಜದೇವರು

ಎಲೆ ಬಸವಣ್ಣಗುರುವೆ, ನೀವೆನಗಾದಿಯಲ್ಲಿಯೂ ಗುರುವು. ಅ ನಾದಿಯಲ್ಲಿಯೂ ಗುರುವು, ಅಕ್ಷಿಂದತ್ತ ನೀವು ಗುರುಸ್ವರೂಪರಾದೆವೆಂ ಬುದ ನಿಮ್ಮ ನೀವೇ ತಿಳಿದು ನೋಡಿ, ಶಂಕೆ ಏತಕ್ಕೆ? ಎಂದು ಪೂರ್ವಾ ಪರವನೆಚ್ಚರಿಸಿಕೊಡಲಾ

ಬಸವರಾಜದೇವರು ಪರಮಾನಂದವನೆಯ್ದಿ ಚನ್ನಬಸವರಾಜದೇ ವರ ಕೊಂಡಾಡಿದರದೆಂತೆನೆ:—

ಅಯ್ಯಾ ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ ನೆನನೆನದು ಸುಖಿಯಾಗಿ ಆನು ಬದುಕಿದೆನಯ್ಯ, ಅದೇನು ಕಾರಣ ತಂದೆ? ಎಂದ ಯೆನಯ್ಯ ಎನ್ನಕಾರಣತಂದೆ ಎಂದರಿದೆನಯ್ಯ. ಅರಿದರಿಂದು ನಿಮ್ಮ ಶರ ಣನು ಆಚರಿಸುವ ಆಚರಣೆಯ ಕಂಡು ಆನು ಕಣ್ದೆರೆದೆನಯ್ಯ ಕೂಡಲ ಸಂಗಮದೇವ.

ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯ. ಆ ಕೂಸುವಿಡಿಯಲ್ಲಿ ಒತ್ತೆಯಗೊಳ್ಳನಿಂದಿತ್ತಯ್ಯ. ಇದರ ಸಂಗ ಸುಖ ದನುಭಾವವನು ಕೂಡಲಸಂಗ ತಾನೇ ಬಲ್ಲನು.

ಎಂದು ಕೀರ್ತಿಸಲು ಅಲ್ಲಿ ನೆರದಿದ್ದೆಲ್ಲಾ ಶಿವಗಣಂಗಳು ಇಂತಪ್ಪ ಚಾತುರ್ಯದಿಂದುಪದೇಶವ ಪಡೆವ ಮಹಿಮರುಂಟೇ, ಎಂದಾಶ್ಚರ್ಯಂಬ ಟ್ಟಿಸುತ್ತಿರಲು

ಬಳಿಕೆಲ್ಲಾ ಅಸಂಖ್ಯಾತ ಮಹಾಗಣಂಗಳಂತರಂಗದೊಳ್ ಪುಟ್ಟಿದ ದಿವ್ಯಜ್ಞಾನಾನಂದ ಸುಧೆಯೀ ವಾಚಕದಿಂ ಪೊರಪೊಣ್ಮೆ ಅನಂತಸ್ಥಳ ಕುಳಸ್ವರೂಪ ವಚನ ಸುರಾಮೃತವಾಗಿರಲದಂ ಕಂಡು

ವಚನದ ಭಂಡಾರದ ಶಾಂತಯ್ಯಗಳು ವಚನಾಮೃತವನ ಲೇಖ ನಂಗೆಯ್ದು ಬಸವರಾಜದೇವರಿಗೆ ಕೊಡಲದನೋದಿಕೊಂಡು ಷಟ್‌ಸ್ಥಲ ಜ್ಞಾನಸಾರೋದ್ಧಾರ ಲಿಂಗೋದ್ಧರಣದಮಳ ವಿಚಕ್ಷಣರಾದ ಚನ್ನಬ ಸವೇಶ್ವರ ದೇವರು ಷಟ್‌ಸ್ಥಲ ಬ್ರಹ್ಮಿಗಳೊಡಗೊಂಡಿರುವಂಥ ಅನುಭಾ

ವಮಂಟಪಕ್ಕೆ ಬಸವರಾಜದೇವರು ಸುಪ್ರಭಾತ ಸಮಯದೊಳೀಶ್ವರಾರ್ಚನಂಗೆಯ್ದು ಅಸಂಖ್ಯಾತರೊಡಗೊಂಡು ಬಂದು ಚನ್ನಬಸವೇಶ್ವರದೇವರಿಗೆ ಅಷ್ಟಾಂಗ ಪ್ರಣುತರಾಗಿ ಪೂರ್ತವಮಾಡಿಕೊಂಡಾ ಬಸವರಾಜದೇವರೋದಿಕೊಡಲಾ ಚನ್ನಬಸವರಾಜರು ತ್ರಿವಿಧಲಿಂಗಾನುಭಾವವಂ ಮಾಡಲೆಲ್ಲಾ ಅಸಂಖ್ಯಾತ ಮಹಾಗಣಂಗಳು ಒಂದುಜಾವ ಹೊತ್ತು ಕೇಳಿ ತವಾದ್ರಿ ಮಧ್ಯಾವಸಾನವನರಿದುಕೊಂಡು ಬಳಿಕ ತಮ್ಮ ತಮ್ಮ ಗೃಹಕ್ಕೆ ಹೋಗಿ ಕಾಯಕ ವೃತ್ತಿಯಂ ಮಾಡಿ ಗುರುಭಕ್ತಿ ಲಿಂಗಪೂಜೆ ಜಂಗಮದಾಸೋಹದೊಳ್ ಪರಿಣತರಾಗಿರುತ್ತಿಲ್ಲಾ ಮಂಗಳವಾಡದೊಳಿರ್ದ ಮಹಾಗಣಂಗಳಿಗೆಲ್ಲಕ್ಕೂ ಶ್ರೇಷ್ಠಶಿಖಾಮಣಿಯಾಗಿ ಆರುಸ್ಥಲವ ನಿರ್ಣಯಿಸಿಕೊಡುವ ಮಹಾನುಭಾವ ಶಿಖಾಸೂತ್ರಧಾರಿ, ಅನಂತ ಕಲ್ಯಾಣಗುಣ ಚಲುವಿನ ಚಿಂತಾಮಣಿ ತ್ರಿಣಯನಣುಗ, ಪ್ರಣವಸ್ವರೂಪನೆಂದೂ ಕಾಳಾಮುಖರೈಶ್ವರ್ಯಾಧೀಶ್ವರ, ಸುರುಚಿರ ಸುಕರದ ಮುಖಲಿಂಗ ಮೂರ್ತಿಗಳೆಂದೂ ಜ್ಞಾನಾನುಭಾವಿ ಎಂಬ ಪಿನಾಕಿ ಎಂದೂ ಚಿಕ್ಕ ಚನ್ನಣ್ಣನೆಂದೂ ಚಿಕ್ಕ ದಂಡನಾಯಕರೆಂದೂ ಚನ್ನಬಸವೇಶ್ವರ ದೇವರೆಂದೂ ಕಕ್ಕಯ್ಯಗಳ ಒಕ್ಕಪ್ರಸಾದ ಪುತ್ರನೆಂದೂ ಮತ್ತಂ ಇನಂ ಅದೇ ಪರ್ಯಾಯನಾಮ ಸಾಮ್ಯದಿಂದೊಪ್ಪುವ ಬಸವಕುಮಾರಕ ಭಕ್ತಿಪುರಸ್ಸರ ಷಟ್‌ಸ್ಥಲ ಧೀರ ಚಿತ್‌ಸುಧಾರಸಭರಿತಾಂತರಂಗ ಸಕಲಕ್ಷ್ಣ ಸಮರ್ಪಿತಲಿಂಗ ತತ್‌ಪ್ರಸಾದ ಸುಖವಿಶೇಷ ತೃಪ್ತ ಶಿವಲಿಂಗ ಸಧ್ಯೈಕ್ಯಸಮಾಪ್ತರಾದಂಥಾ ಷಟ್‌ಸ್ಥಲಜ್ಞಾನ ತೋರಿದ ಚಕ್ರವರ್ತಿಗಳಾದ ಚನ್ನಬಸವೇಶ್ವರನೆಂಬ ಜ್ಞಾನ ಗುರುಮೂರ್ತಿಯು, ಎಂಬುದೀಗ ಚನ್ನಬಸವೇಶ್ವರ ದೇವರೆಂಬ ಶಬ್ದಕ್ಕರ್ಥ

ಮೇಲೆ ಕಂಡ ಈ ವಿಷಯವು ಬೆಳಗಾಂವ ಜಿಲ್ಲಾ ಬೈಲ ಹೊಂಗಲದ ಗಚ್ಚಿನ ಮಠದಲ್ಲಿ ಸಿಕ್ಕ ಓಲೆಗರಿಯ ಮೂರು ಹಾಳೆಗಳಲ್ಲಿ ಇದ್ದದು. ಈ ಪ್ರತಿಯನ್ನು ಬರೆದುಕೊಳ್ಳುವದಕ್ಕೆ ಬೈಲ ಹೊಂಗಲದ ಮ॥ ರಾ॥ ಭಾವೆಪ್ಪನವರು ಪೂಗಿ ಎಂಬುವವರು ಸಹಾಯ ಮಾಡಿದ್ದಲ್ಲದೆ ತಾವೂ ಒಂದು ಪ್ರತಿಯನ್ನು ಬರೆದು ಕೊಂಡರು. ಆ ಪ್ರತಿಯಲ್ಲಿ ಇದ್ದಂತೆ ಇಲ್ಲಿ ಮುದ್ರಿಸಿ ಇದೆ.

ಇದು ಇಷ್ಟೇ ಸಿಕ್ಕಿದುದು. ಇದು ಯಾವ ಗ್ರಂಥ ವೆಂಬುದು ತಿಳಿಯದು. ಚನ್ನ ಬಸವೇಶ್ವರ ಎಂಬ ಶಬ್ದಕ್ಕೆ ಅರ್ಥ ಬರೆಯಲಿಕ್ಕೆ ಹೋಗಿ ಇಷ್ಟು

ವಿಷಯವನ್ನು ಹೇಳಿರುವಂತೆ ತೋರುತ್ತದೆ. ಹಿಂದೂಗಳು ಪುರಾಣಗಳಲ್ಲಿ ಹೇಳುವಂತೆ ಅತಿವರ್ಣನೆಯು (Exaggeration) ಇದರಲ್ಲಿ ಕೆಲವು ಮಟ್ಟಿಗೆ ಇರುವುದಾದರೂ ಕೆಲವು ಚಾರಿತ್ರಿಕ ಶೋಧನೆಗಳೂ ಇದರಲ್ಲಿ ದೊರೆಯುತ್ತವೆ.

೧ ಬಿಜ್ಜಳನು ಒಬ್ಬ ಚಾಳುಕ್ಯ ರಾಜನ ಮಗನು. (ಮಗನೆಂದು ಭಾವಿಸಲ್ಪಟ್ಟವನು ಎಂದೂ ತಿಳಿಯಲಿಕ್ಕೆ ಬರುತ್ತದೆ.) ಇವನು ಮಂಗಳವಾಡದಲ್ಲಿ ಇರುತ್ತಿದ್ದನು. ಮತ್ತು ಸಿದ್ದಣ್ಣಮಂತ್ರಿಯ ಮನೆಯಲ್ಲಿ ಬಳೆದವನು.

೨ ಚನ್ನಬಸವೇಶ್ವರನು ಏಳನೆಯ ವರ್ಷದಲ್ಲಿಯೇ ಶಿವಾನುಭಾವ ಶಾಸ್ತ್ರ ಕೋವಿದನಾಗಿದ್ದನು. ಕಾಳಾಮುಖರನ್ನು ತಿದ್ದಿ ವೀರಶೈವಕ್ಕೆ ತಿರುಗಿಸುವಂತಿದ್ದನು.

೩ ಶಿವಾನುಭಾವ ಮಂಟಪದಲ್ಲಿ ಶಿವಶರಣರು ಸುಪ್ರಭಾತದಲ್ಲಿ ಕೂಡಿ ಒಂದು ಜಾವವಾದಮೇಲೆ ತಮ್ಮ ಕಾಯಕಕ್ಕೆ ಹೋಗುತ್ತಾ ಇದ್ದರು. ಆ ಹೊತ್ತಿನಲ್ಲಿ ಶಿವಶರಣರು ಬರೆದ ವಚನಗಳು ಬರೆದವರಿಂದ ಮೊದಲು ಅಲ್ಲಿ ಓದಲ್ಪಡುತ್ತಿದ್ದವು. ಬಸವೇಶ್ವರನೂ ತನ್ನ ವಚನಗಳನ್ನು ಓದುತ್ತಿದ್ದನು. ಚನ್ನಬಸವೇಶ್ವರನು ಅವಕ್ಕೆ ಅರ್ಥವನ್ನು ವಿವರಿಸುತ್ತಾ ಇದ್ದನು. ಕೊನೆಯಲ್ಲಿ ಎಲ್ಲರೂ ಒಪ್ಪಿದ ಮೇಲೆ ಆ ವಚನಗಳು ವಚನದ ಭಾಂಡಾರಿ ಶಾಂತಯ್ಯನವರು ಎಂಬುವವರಿಂದ ಬರೆದು ಇಡಲ್ಪಡುತ್ತಿದ್ದವು.

೪ ಬಸವೇಶ್ವರನು ಕಕ್ಕಯ್ಯಗಳ ಪ್ರಸಾದಕ್ಕಾಗಿ ೧೨ ವರ್ಷ ಮನಸ್ಸಿನಿಂದ ಕಾಯ್ದುಕೊಂಡು ಇದ್ದನು.

೫ ಬಸವೇಶ್ವರನು ತಾನು ಗುರುವೆಂದು ಕರೆಯಿಸಿಕೊಳ್ಳಲ್ಪಡುವುದಕ್ಕೂ ಸಹ ಒಪ್ಪುತ್ತಿರಲಿಲ್ಲ.

೬ ಬಸವೇಶ್ವರನು ಮುತ್ತು ರತ್ನಗಳನ್ನು ಕಟ್ಟಿ ಇಡುವಾತನಲ್ಲ.

---

ಇದರಿಂದ ಕೆಲವು ಹೊಸ ವಿಷಯಗಳು ಓದುಗರಿಗೆ ಸಿಕ್ಕುವುವು ಎಂಬ ಯೋಚನೆಯಿಂದ ಇಷ್ಟನ್ನೇ ಪ್ರಕಟಿಸಿ ಇದೆ.

ಪ್ರಕಾಶಕ.

# ಅಭಿನವ ಕೇಶಿರಾಜ (ವೀರಶೈವ ಕವಿ?)

'ಕವಿಜಿಹ್ವಾ ಬಂಧನ' ಎಂಬ ಗ್ರಂಥದಕರ್ತ.

ವೀರಶೈವರು ತಮ್ಮ ಗ್ರಂಥಗಳಲ್ಲಿ ಕೇಶಿರಾಜ ಎಂಬ ಕವಿಯನ್ನು ಸ್ತುತಿಸಿದ್ದಾರೆ. ಈ ಕೇಶಿರಾಜನು ಶಬ್ದಮಣಿದರ್ಪಣವನ್ನು ರಚಿಸಿದ ಕೇಶಿರಾಜನೇ ಎಂದೂ ಇವನು ವೀರಶೈವನಾಗಿರಬಹುದೆಂದೂ ಕೆಲವರು ಊಹಿಸುತ್ತಿದ್ದಾರೆ. ಕನ್ನಡದಲ್ಲಿ ಕವಿಜಿಹ್ವಾ ಬಂಧನ ಎಂಬ ಗ್ರಂಥವು ಪೂರ್ವದಲ್ಲಿ ಇದ್ದಿತೆಂಬುದು ಈಗ ಗೊತ್ತಾಗಿದೆ. ಈ ಗ್ರಂಥದ ಪ್ರಾರಂಭದಲ್ಲಿ ಕವಿಯು ತನ್ನ ಇಷ್ಟ ದೇವತಾ ಪ್ರಾರ್ಥನೆಯನ್ನು ಹೀಗೆ ಮಾಡಿರುತ್ತಾನೆ.

ಮಹಾಸ್ರಗ್ಧರಾ ವೃತ್ತ.

ಶ್ರೀಮದ್ಗಂಗಾ ತರಂಗಾಂಕಿತ ಕಪಿಲ ಜಟಾಜೂಟಭಾರಾವತಂಸಂ
ವಾಮಾಂಗಾಲಿಂಗ ಸಂಗ ಪ್ರಕರ ಗಿರಿಸುತಾಲೋಲ ಲೀಲಾ ಸು (ಸ್ವ?)ತಂತ್ರಂ
ಕಾಮಂ ನಿರ್ನಾಮಮು ಭೀಮೋಜ್ವಲಿತ ಚಟುಳ ಭಾಳ ಪ್ರತಾಪಾಗ್ನಿನೇತ್ರಂ
ಪ್ರೇಮಂ ಪರ್ವಿಕೇ 'ಮ' (ಯೆ?) ಮ್ಮೊಳುಡುಗಣಿಗೊಡೆಯಂ ಕಲ್ಲಿನಾಥಾ
ಖ್ಯ ಲಿಂಗಂ

ಹೀಗೆ ಆರಂಭಿಸಿ ಮುಂದೆ ............

ಸ್ತುತಿಸಲ್ ಕವಿವರರೆಲ್ಲರ್
ಪ್ರತಿಯಿಲ್ಲದ ತೆರದಿ ಸರ್ವಲ....(ಕ್ಷಣ?)ಮಂ ಭಾ
ರತಿ ವರದಿಂದಂ ತನ್ನಯ
ಸತಿಗುಸು'ರ್ದಂ ಈ' (ರಿದನೀ?) ಶ್ವರಾಂಕಸತ್ಕವಿರಾಯಂ ೭

ಕವಿಜಿಹ್ವಾ ಬಂಧನಮಂ
ಭುವನ ಜನಂಗಳಿಗೆ ಪೇಳ್ದ ಲಕ್ಷಣಮಂ ಸದ್
ವಿವರದಿ ಬಲ್ಲರು ಮೆಚ್ಚಲ್
ಪ್ರವರ ಗುಣಂ ರತ್ನವರದನೀಶ ಕವೀಶಂ ೮

ಲಕ್ಷಣ ಶಿಕ್ಷಾಚಾರ್ಯ ಸು
ಲಕ್ಷಣ ಕೇಶವನ ಶಬ್ದ ಮಣಿದರ್ಪಣಮಂ
ಈಕ್ಷಿಸಿ ಶಿಕ್ಷಿಸಲೀಶ್ವರ
ಸಾಕ್ಷಾದಭಿನವ ಸುಕೇಶಿರಾಜಂ ಪುಸಿಯೇ ೯

ಸಕ್ಕಜಗನ್ನಡಗವಿತೆಯು
ಸಿಕ್ಕುಗಳಂ ಬಿಡಿಸಿ ಸರ್ವ ಲಕ್ಷಣಗಳುಮಂ
ಚಕ್ಕನೆಯರಿವಂತುಸುರ್ದ ಜ
ಗಕ್ಕಭಿನವ ಕೇಶಿರಾಜ ನಾಮ ಕವೀಶಂ ೧೦

ವೃತ್ತ

ಕವಿತಾರಂ 'ಬ'(ಭ?)ಕ್ಕೆ ಬೀಜಂ ಕವಿಮುಖ ಮುಕುರಂ ಕಾವ್ಯ ಕಾಂತಾವಿಲಾಸಂ
ಕವಿತಾ ಸನ್ಮಾರ್ಗ ವರ್ಗಂ ಕವಿ ಜನ ವದನಂ ಕಾವ್ಯ ದೀಪ ಪ್ರಕಾಶಂ
ಕವಿತಾ ಯುಕ್ತ ಪ್ರಯುಕ್ತಂ ಸ್ಫುರಣ ಭರಣ ವಾಣೀ ನಟೀ ನೃತ್ಯ ರಂಗಂ
ಭುವನಕ್ಕಪ್ಪಂತುಸುರ್ದಂ ಕವಿ ವರ ನಳ ನಾಮೋಜ್ವಲಂ ಕೇಶಿರಾಜಂ ೧೧

ಸುಧೆಯುನೊಸರ್ವ ಮೋಹನದ ತಾಣಗಳಿಂಪನೊಡರ್ಚೆ ಸುಣ್ಪು ಸನ್
ವ್ಯದುರತಿ ಜಿನ್ನಣಂ ನವ ರಸಂಗಳ ಮನ್ಮಥ ತಂತ್ರ ಭಾವದೊಳ್
ಚದುರತೆಯುಜ್ಜಗನ್ನಡಗಳೊಳ್‌ನುಡಿ ತಪ್ಪದಿನಿರ್ಕಲಂಕೃತಂ
ಪದಕವಿಎಂಬರಲ್ಲದೊಡೆ ಹಾಸ್ಯ ಪದಂ ಕವಿಎಂಬರೆಲ್ಲರುಂ ೧೨

ಈ ಪದ್ಯಗಳಿರುವುವು. ಇವುಗಳನ್ನು ನೋಡಿದರೆ 'ಈ ಕವಿ ಜಿಹ್ವಾಬಂಧನ' ಎಂಬ ಛಂದಸ್ಸಿನ ಗ್ರಂಥವನ್ನು ಕನ್ನಡದಲ್ಲಿ ರಚಿಸಿದವನು ಈಶ್ವರಕವಿ ಎಂದೂ, ಇವನಿಗೆ 'ಅಭಿನವ ಕೇಶಿರಾಜ' ಎಂಬ ನಾಮವೂ ಇದ್ದಿತೆಂದೂ, 'ನಳ' ಎಂಬ ಹೆಸರೂ ಇದ್ದಿತೆಂದೂ, ತಿಳಿಯಬರುತ್ತದೆ.

ಇವನು ಉದ್ದಾಮಕವಿ ಎಂಬುದು ಮೇಲಿನ ಇವನ ಗ್ರಂಥಗಳಿಂದ ತಿಳಿಯುತ್ತದೆ. ಕಂದಪದ್ಯಗಳಿಗೆ ಆರನೆಯುಸ್ಥಲದಲ್ಲಿ ಜಗಣ ಅಥವಾ ನಗಣವನ್ನೇ ಉಪಯೋಗಿಸಿ ಇದ್ದಾನೆ.

ಇವನು 'ಪದಕವಿ' ಯ ಲಕ್ಷಣವನ್ನು ಹೇಳಿರುವುದು ಮನೋಹರವಾಗಿದೆ.

ಇವನು ಶಬ್ದಮಣಿದರ್ಪಣಕಾರನಾದ ಕೇಶಿರಾಜನ ಹೆಸರನ್ನು ಹೇಳಿರುವುದರಿಂದ ಅವನ ತರುವಾಯದವನೆಂದೂ ಉಡುಗಣಿಯ ಕಲ್ಲಿನಾಥಲಿಂಗವನ್ನು ಸ್ತುತಿಸಿ ಇರುವುದರಿಂದ ಶಿವಶರಣರ ಅಕ್ಕನಾದ ಶ್ರೀಮಹಾದೇವಿಯಕ್ಕನವರು ಇದ್ದ ಉಡುತಡಿಗ್ರಾಮ ಎಂದರೆ ಮೈಸೂರು ದೇಶದ ಶಿವಮೊಗ್ಗಾ ಡಿಸ್ಟ್ರಿಕ್ಟ್ ಶಿಕಾರಿಪುರದ ತಾಲ್ಲೂಕಿನಲ್ಲಿ ಇರುವ ಉಡುಗಣಿಗ್ರಾಮ, ಅಥವಾ ಆ ಪ್ರಾಂತದಲ್ಲಿ ಇದ್ದವನೆಂದೂ ಬಸವೇಶ್ವರನ ಕಾಲದಲ್ಲಿ

ಕ್ಕೋಡಗೂಳಿ ಕೇಶಿರಾಜಯ್ಯನು ಈ ಉಡುಗಣಿಯ ಸಮೀಪದ ಬಳ್ಳಿಗಾವೆ (ಬೆಳಗಾವಿ) ಯಲ್ಲಿ ದಂಡನಾಯಕನಾಗಿ ಆಳುತ್ತಾ ಇದ್ದುದರಿಂದ ಸುಮಾರು ಇವನ ಕಾಲದಲ್ಲಿ ಎಂದರೆ (ಸುಮಾರು ಕ್ರಿ. ಶ. ೧೧೬೫ರಲ್ಲಿ) ಇದ್ದಿರಬಹುದೆಂದೂ ತೋರುತ್ತದೆ. (ಉಡುಗಣಿಯಲ್ಲಿ ಕಲ್ಲಪ್ಪನ ಗುಡಿ ಇರುವುದೂ ನಿಶ್ಚಯ.)

ಇವನೇ ವೀರಶೈವರ ಕಾವ್ಯಗಳಲ್ಲಿ ಸ್ತುತಿಸಲ್ಪಟ್ಟ ಕೇಶಿರಾಜ, ಈಶ್ವರಕವಿ, ಅಥವಾ ನಳ ಆಗಿರಬೇಕು. ಇವನು ವೀರಶೈವನೂ ಆಗಿರಬೇಕು. ಅಲ್ಲವೇ?

ಸಾಹಿತ್ಯ ಶೋಧಕರು ಈ ವಿಷಯವನ್ನು ಪರಿಶೋಧಿಸಲಿ.

ಕೇಶಿರಾಜ ಎಂಬ ಶರಣರ ವಿಷಯದ ಭಾಮಿನಿಷಟ್ಪದಿರೂಪದ ಕಥೆಯೊಂದು ಸಿಕ್ಕಿದುತ್ತದೆ. ಅದು ಹೀಗೆ ಇದೆ:—

## ಕೇಶಿರಾಜನ ಕಥೆ.

ಭಾಮಿನಿ

ಕೇಶಿರಾಜಗಳೆಂಬ ಶರಣರು
ದೇಶ ಸೀಮೆಯನಾಳುತಿರ್ದರು
ಭಾಷೆ ಪಾಲಿಸಳಪ್ಪ ಸತಿಯಳ ಸಹಿತ ಮುದದಿಂದ ಪಲ್ಲ
ಈಶ ಗುರು ಜಂಗಮಾರ್ಚನೆಯನು
ಲೇಸುಪರಿಯಲಿ ಮಾಡಿಸೀಡುತ
ಸೂಸಲೀಯದೆ ತನುಮನಂಗಳ ಶಿವನಿಗರ್ಪಿಸುತ ೧
ಮೂರು ಲಿಂಗದ ಮಾಟಕೂಟದಿ
ನಾರಿ ಪುರುಷರು ಸುಖದೊಳಿರುತಿರೆ
ಏರಿಯಂದಣದೊಳಗೆ ನಡೆದಳು ರಾಜಬೀದಿಯಲಿ ೨
ಪೋಗುತಿರೆ ಶೃಂಗಾರ ತೋಟಕೆ
ಸಾಗಿ ಸೈವನು ಪುಷ್ಪತರುತಿರೆ
ಕೂಗಿ ಕರೆದರೆ ಬರಲು ಕೇಳ್ದಳದೇನು ವಸ್ತುಗಳು ೩
ತೂಗು ಮಂಚದ ಕೇಶಿರಾಜನ
ಭಾಗಧರೆ ಕೇಳೆನ್ನ ಜನನಿಯೆ
ಸಾಗಿ ಬಂದವು ಶಿವನ ಪೂಜೆಗೆ ಪುಷ್ಪಮಾಲೆಗಳು ೪
ಆಸೆ ಬೀಳುತ ತೆಗೆದುಕೊಂಡಳು
ಲೇಸು ಲೇಸುಗಳೆನುತ ಮನದೊಳು
ಭೂಷಣಂಗಳ ಮಾಡಿಕೊಳುತಲಿ ಮೂಸಿ ನೋಡಿದಳು ೫

ರೋಷದಲಿ ಘುಡುಘುಡಿಸಿ ಶೈವನು
ಆಶಯಂಗಳ ನಳಿದು ಮನದೊಳು
ನಾಸಿಕಂಗಳ ಕೊರೆದು ಬಿಸುಟಿದ ನಿಮಿಷಮಾತ್ರದಲಿ ೬

ಬೊಬ್ಬೆ ಡೊಂಬಿಗಳಾಗೆ ಶೈವನ
ದಬ್ಬಿ ಹೆಡಗುಡಿ ಕಟ್ಟಿ ಎನುತಲಿ
ಅಬ್ಬರಿಸಿಯರಸಿಂಗೆ ಪೇಳ್ದರು ಅವನು ಮಾಡಿದುದ ೭

ಹಿಂಡೆ ವಹಿಲದಿ ಬರುತಲಾಕ್ಷಣ
ಅಂದಣಂಗಳನಿಳಿದು ಬೇಗದಿ
ಬೆಂದು ಹೋಯಿತು ನಿನ್ನದೊರೆತನವಿವನು ಬೆದರದಲೆ ೮

ಇಂದು ನಾಸಿಕ ಕೊರೆದು ಬಿಸುಟಿದ
ಸಂದುಹೋಯಿತು ಶರಿರವೆಲ್ಲವು
ಎಂದಳಾಕ್ಷಣ ಅರಸು ಕೋಪಿಸಿ ಕರೆಸಿ ಕೊರೆದವನ ೯

ಏನುಕಾರಣ ಕೊರೆದು ಬಿಸುಟಿದೆ
ನೀನು ಬೆದರದೆ ಹೇಳು ಎನಲಿಕೆ
ಜ್ಞಾನಿ ಶ್ರೀಗುರು ಕೇಶಿರಾಜನೆ ಕೇಳಪರಾಧವ ೧೦

ಭಾನು ರವಿ ಶಶಿ ತೇಜ ಲಿಂಗಕೆ
ನಾನು ಪುಷ್ಪವ ತರುತಲಿರ್ದನು
ನೀನು ನೆಗಡಿಗಳಾಗುತಿಹ ನಾಸಿಕಕೆ ತೋರಿದಳು ೧೧

ಸಿರವು ಹೋದರೆ ಹೋಗಲೆನುತಲಿ
ಕೊರೆದು ಬಿಸುಟಿದೆ ನಾಸಿಕಂಗಳ
ಬರಿಯ ಮಾತಿನ್ನೇಕೆ ಭೂಪನೆ ಹೊಡಸು ಕಂಧರವ ೧೨

ಸರಿಸದಲಿ ಸತಿಯುಳನು ನಿಲ್ಲಿಸಿ
ಕರವು ತೆಗೆಯಿತು ಮೂಗು ಮೂಸಿತು
ಕರವ ಕೊಯ್ಯದೆ ಮೂಗ ಕೊಯ್ದುದು ಹೆಚ್ಚು ನಿನ್ನಯುದು ೧೩

ಹಸ್ತಗಳ ಕೊರೆಕೊರೆಯೊ ಎನುತಿರೆ
ಸ್ವಸ್ಥವಾಗಲು ಮೂಗು ಕರಗಳು
ಮಸ್ತಕವ ಹೊಡೆಹೊಡೆಯೊ ಎನಲಿಕೆ ಹೊಡೆವ ಸಮಯದಲಿ ೧೪

ಹಸ್ತಿ ಚರ್ಮಾಂಬರನು ಮೆಚ್ಚುತ
ಭಕ್ತಿ ಭಾವಕೆ ಬಾಳನೇತ್ರನು
ಪುಷ್ಪಕದಿ ಕೊಂಡೊಯ್ದ ಕಥೆಯನು ಕೇಳಿ ರಾಗದಲಿ ೧೫

ಈ ಕೇಶಿರಾಜರು ಕೊಂಡಗೂಳಿಯ ಕೇಶಿರಾಜರು ಆಗಿರಬಹುದೇ? ಅಲ್ಲದಿದ್ದರೆ ಇನ್ನಾರು?



ಶ್ರೀ ಚನ್ನಬಸವೇಶ್ವರ ಶಿವಯೋಗಿಗಳು ಹಿರೇಮಠ ಬೆಲವಂತರ

ಇವರ ನಿಧನ

ಮಹಾಮಹಿಮರು, ಪ್ರಮಥಗಣರು, ದಾಸೋಹ ಮೂರ್ತಿಗಳು,

ಎಂದೂ, ಮಲೆನಾಡದ ಅಪ್ಪಾ, ಸಾಧುಮಹಾರಾಜ, ಶಿವಯೋಗಿಗಳು, ಎಂದೂ, ಕರೆಯಲ್ಪಡುವ ಕಲಘಟಗಿ ತಾಲೂಕ ಬೆಲವಂತರ ಹಿರೇಮಠದ ಶ್ರೀ ಚನ್ನಬಸವೇಶ್ವರ ಶಿವಯೋಗಿಗಳು ತಾ॥ ೨೮–೬–೩೫ನೇ ಶುಕ್ರವಾರ ಬೆಳಿಗ್ಗೆ ೮–೪೫ಕ್ಕೆ ಲಿಂಗೈಕ್ಯರಾದರು. ಅವರ ವಯಸ್ಸು ೮೫ ಮಾಸ ೯೫ ಇದ್ದಿತು. ಶಿವಯೋಗಿಗಳು ಹುಟ್ಟಾ ವಿದ್ಯಕಲಿತವರಲ್ಲ ಅಂಗಿಯನ್ನು ಎಂದೂ ತೊಡಲಿಲ್ಲ ಉಡುವದು ಐದುಮೊಳದ ಧೋತರ, ತಲೆಯಮೇಲೆ ಒಂದು ಕಾವಿಯ ಪಾವಡ, ಹೊರುವದು ಒಂದು ಕಂಬಳಿ ಪಾದರಕ್ಷೆಗಳನ್ನು ಎಂದೂ ಹಾಕುತ್ತಿರಲಿಲ್ಲ. ಕಡೆಗಾಲದಲ್ಲಿ ೭ ವರ್ಷಗಳಿಂದ ಪರಾಧೀನರಾಗಿದ್ದರೂ ಒಳ್ಳೇ ಆಚಾರನಿಷ್ಠರಾಗಿದ್ದರು. ಪ್ರತಿ ದಿವಸ ತ್ರಿಕಾಲ ಸ್ನಾನ ಪೂಜಾ ನೆರವೇರಿಸದೆ ಬಿಡಲಿಲ್ಲ. ಪರಾಧೀನ ಸ್ಥಿತಿಯಲ್ಲಿಯೇ ೧॥ ವರ್ಷದ ಪೂರ್ವ ವಿಜಾಪೂರಜಿಲ್ಲಾ ತೊನಿಸಾಳ ಗ್ರಾಮದ ತಮ್ಮ ಕೇವಲ ಭಕ್ತನಾದ ಮಲ್ಲಯ್ಯನವರು ಪೂಜಾರಿ ಇವರಲ್ಲಿಗೆ ದಯಮಾಡಿಸಿ ಅವರ ಮನೋವಾಂಛೆಯನ್ನು ಸಲ್ಲಿಸಿದರು. ಇದಲ್ಲದೆ ತಾವು ಲಿಂಗೈಕ್ಯರಾಗುವದಕ್ಕಿಂತ ಮುಂಚೆ ೨ ತಿಂಗಳಾಚೆಗೆ ಶಿಗ್ಗಾಂವಿ ತಾಲೂಕ ತರ್ಲಘಟ್ಟ ಗ್ರಾಮದ ಕಜ್ಜಿ ಸಂಗನಬಸಪ್ಪ ಎಂಬವರು ಬಿನ್ನಹ ಮಾಡಿಕೊಳ್ಳದಿದ್ದಾಗ್ಯೂ ತಾವಾಗಿಯೇ ಅವರಲ್ಲಿಗೆ ದಯಮಾಡಿ ಆತನ ಬಹುದಿವಸ ಮನೋಬಯಕೆಯನ್ನು ಪೂರ್ಣಗೊಳಿಸಿದರು. ತಮಗೆ ಮಾತನಾಡುವದಕ್ಕೆ ಕಷ್ಟವಾದರೂ ದರ್ಶನಾರ್ಥವಾಗಿ ಬರುವ ಪ್ರತಿಯೊಬ್ಬರನ್ನು ಮಾತನಾಡಿಸದೆ ಬಿಡುತ್ತಿದ್ದಿಲ್ಲ. ಅವರ ಮುಖಲಾವಣ್ಯವು ತೇಜಃಪುಂಜವಾಗಿದ್ದಿತು. ಎಂದೂ ಸ್ಮೃತಿತಪ್ಪಲಿಲ್ಲ. ಸದ್ಯದ ಸೋಂಡೂರ ಮಹಾರಾಜರು ಪಟ್ಟವೇರಿದ್ದು ಶ್ರೀ ಗಳವರ ಆಶೀರ್ವಾದದಿಂದಲೇ. ಸ್ವತಃ ಮಹಾರಾಜರವರು ನಾಲ್ಕುವರ್ಷಗಳಾಚೆಗೆ ಶ್ರೀ ॥ ॥ ಗಳವರ ಸಮಾಧಿಗದ್ದುಗೆಯನ್ನು ಕಟ್ಟಿಸಿದ್ದಾರೆ. ಮಹಾರಾಜರು ಅನೇಕವೇಳೆ ಶ್ರೀ ॥ ॥ ಗಳವರಿಗೆ ಸೊಂಡೂರಿಗೆ ದಯಮಾಡಿರೆಂದು ಬಿನ್ನಹಮಾಡಿಕೊಂಡರು. ಬರುತ್ತೇನೆ, ಬರುತ್ತೇನೆ, ಎಂದು ಎನ್ನುತ್ತ ಕಡೆಗೆ ಮಹಾರಾಜರವರಿಗೆ ಜ್ಯೇಷ್ಠಪುತ್ರನು ಜನಿಸಲು ಆಗ್ಯೆ ತೊಟ್ಟಿಲದಲ್ಲಿ ಹಾಕುವ ಉತ್ಸವ ನಿಮಿತ್ಯನಾಗಿ ಸೊಂಡೂರಿಗೆ ದಯಮಾಡಿ ಒಂದುವಾರ ಇದ್ದು ಸರ್ವರಾಜಮನೆತನದವರನ್ನೂ ಧನ್ಯರನ್ನಾಗಿ ಮಾಡಿದರು. ಶ್ರೀ ಗಳವರಲ್ಲಿದ್ದ ಮಹಾರಾಜರವರ, ಸರ್ವರಾಜಮನೆತನದವರ ಭಕ್ತಿ ಶ್ರದ್ಧೆಗಳನ್ನು ವರ್ಣಿಸಲಸದಳವಾ

ದಷ್ಟು. ಮಹಾರಾಜರು 'ಇವರು ನಮಗೆ ಸಾಕ್ಷಾತ್ ರಾಮದಾಸರು' ಎಂದು ಪದೇ ಪದೇ ಎನ್ನುತ್ತಿದ್ದರು. ಮಹಾರಾಜರವರು ಶಿವಯೋಗಿಗಳವರ ಅಪ್ಪಣೆತೆಗೆದುಕೊಂಡೇ ಯುರೋಪಕ್ಕೆ ಪ್ರಯಾಣ ಬೆಳಸಿದರು.

ಶ್ರೀಗಳವರು ತಮ್ಮ ಹೊಮ್ಮಗನಾದ ಶಿವಲಿಂಗ ಶಿವಾಚಾರ್ಯರೆಂಬವರನ್ನು ಮೂರುವರ್ಷಗಳಾಚೆಗೆ ಪಟ್ಟಕ್ಕೆ ಬಿಟ್ಟಿದ್ದಾರೆ. ತಮ್ಮನಂತರ ತಮ್ಮ ಗಾದಿಗೆ ತಮ್ಮ ಸುಪುತ್ರರಾದ ಸಿದ್ಧರಾಮೇಶ್ವರ ಸ್ವಾಮಿಯವರನ್ನು ನೇಮಿಸಿದ್ದಾರೆ.

ಶ್ರೀಗಳವರು ಪರಾಧೀನರಾಗಲು ಇವರು ತಮ್ಮ ಶಿಕ್ಷಣದಕಡೆಗೆ ಲಕ್ಷ್ಯಕೊಡದೆ ಪಿತೃಸೇವೆಯೇ ಪ್ರಾಧಾನ್ಯವೆಂದು ಭಾವಿಸಿ ಪಿತೃಗಳ ಸೇವೆಯನ್ನು ಮನಸಾ ಅಂತ್ಯದವರೆಗೂ ಮಾಡಿದರು. ಆ ಸೇವೆಯ ಪ್ರತಿಫಲವೇ ಸಿದ್ಧರಾಮೇಶ್ವರಸ್ವಾಮಿಯವರಿಗೆ ದೊರಕಿತು. ಗೃಹಸ್ಥಾಶ್ರಮಿಗಳಾಗಿದ್ದುಕೊಂಡು ಲೌಕಿಕ ಪರಮಾರ್ಥವೆರಡನ್ನು ಸರಿಯಾಗಿ ನಡಸಿಕೊಂಡು ಶರಣಮಾರ್ಗವೇ ಶ್ರೇಷ್ಠವೆಂದು ಜಯಭೇರಿಯನ್ನು ಹೊಡಸಿದ ಗುರುಸ್ಥಲಮೂರ್ತಿಗಳಾದ ಈ ಶಿವಯೋಗಿಗಳಂಥವರು ದೊರೆಯುವದು ಅಪರೂಪ. ಈ ಜಗತ್ತಿನಲ್ಲಿ ಅವತರಿಸಿ 'ಧನ್ಯೋ ಗೃಹಸ್ಥಾಶ್ರಮಃ' ಎಂಬದನ್ನು ಶ್ರೀ ಗಳವರು ಸಾರ್ಥಕಗೊಳಿಸಿದರು. ಶ್ರೀ ಗಳವರ ಮಹಿಮಾಪ್ರಭಾವವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ! ರಾಮೇಶ್ವರ, ಮದ್ರಾಸ, ಬೆಂಗಳೂರ, ಕಲಕತ್ತಾ, ಮುಂಬೈ, ಹೈದರಾಬಾದ, ಬಡೋದಾ, ಕಾಗಲ, ಹಾವೇರಿ, ಬ್ಯಾಡಗಿ, ಹುಬ್ಬಳ್ಳಿ, ಧಾರವಾಡ, ವಿಜಾಪೂರ, ಬೆಳಗಾಂವ, ಮೊದಲಾದ ಅನೇಕ ಪಟ್ಟಣಗಳಿಂದ ಭಕ್ತರು ಬರುತ್ತಿದ್ದರು. ಶ್ರೀ ಗಳವರು ಬಹು ಅಂತಃಕರುಣಿಗಳು. ಶ್ರೀ ಗಳವರಲ್ಲಿ ಪ್ರತಿಯೊಂದು ಧರ್ಮದಜನರು ಅದರಲ್ಲೂ ನಮ್ಮ ಬ್ರಾಹ್ಮಣಬಂಧುಗಳು, ಜೈನಬಂಧುಗಳು ಒಳ್ಳೇ ಶ್ರದ್ಧೆಯುಳ್ಳವರಾಗಿದ್ದರು. ಶ್ರೀ ಗಳವರಲ್ಲಿ ಉಚ್ಚ ನೀಚವೆಂಬ ಭೇದವಿದ್ದಿಲ್ಲ. ಶ್ರೀ ಗಳವರು ಮಾಡಿದ ಮಹತ್ತುಗಳು ಅಗಣಿತವಿರುವವು. ಶಿವಯೋಗಿಗಳವರ ಆಯುಷ್ಯವು ಕೇವಲ ಗುರುಲಿಂಗ ಜಂಗಮ ದಾಸೋಹದಲ್ಲಿಯೂ, ಧಾರ್ಮಿಕಕಾರ್ಯಗಳಲ್ಲಿಯೇ ವ್ಯಯವಾಯಿತು. ಶ್ರೀ ಗಳವರು ತಮ್ಮ ಜೀವಿತದಲ್ಲಿ ಮಂಟಪಪೂಜೆ ಮೊದಲಾದ ಅನೇಕ ದೊಡ್ಡ ಉತ್ಸವಗಳನ್ನು ನೆರವೇರಿಸಿದರು. ಲಿಂಗೈಕ್ಯ ಶ್ರೀ ಅಥಣಿ ಮುರುಘೇಂ

ದ್ರ ಶಿವಯೋಗಿಗಳವರು ಶ್ರೀ ಗಳವರಲ್ಲಿ ಒಳ್ಳೇ ಪೂಜ್ಯಭಾವನೆಯುಳ್ಳ ವರಾಗಿದ್ದರು. ಒಮ್ಮೆ ಶ್ರೀ ಗಳವರು ವಿಜಾಪೂರದಿಂದ ಅಥಣಿಗೆ ದಯಮಾಡಿದಾಗ್ಯೆ ಮುರುಘೇಂದ್ರಶಿವಯೋಗಿಗಳು—ಚನಬಸಪ್ಪಾ, ನೀನು ದೊಡ್ಡವನಪಾ, ನಮ್ಮದೇನು' ಎಂದು ಅಂದದ್ದು ತೊನಿಸಾಳಗ್ರಾಮದ ಭಕ್ತಜನರಿಗೆ ಗೊತ್ತಿದೆ. ಹಾವೇರಿ ಶ್ರೀಮನ್ನಿರಂಜನ ಶಿವಬಸವಸ್ವಾಮಿಗಳೂ ವ ಲಿಂಗೈಕ್ಯ ಶ್ರೀಮನ್ನಿರಂಜನ ಹಾನಗಲ್ಲ ಕುಮಾರಸ್ವಾಮಿಗಳೂ ಶ್ರೀ ಗಳವರ ಮೇಲೆ ಒಳ್ಳೇ ಪ್ರೇಮವುಳ್ಳವರಾಗಿದ್ದರು. ಶ್ರೀ ಗಳವರು ಇದ್ದದ್ದು ಒಂದು ಸಣ್ಣ ಹಳ್ಳಿ. ಆತನ ನಿಮಿತ್ಯವಾಗಿ ಎಲ್ಲಿಲ್ಲಿಯ ಮಹಾಮಹಿಮರು, ಸ್ವಾಮಿಗಳು, ಸಂಸ್ಥಾನಿಕರು, ಆಫೀಸರರು ಬರಬೇಕು? ಧನ್ಯ ಧನ್ಯ, ಶಿವಯೋಗಿಯೇ, ನೀನು ಜನಿಸಿರುವ ಹಳ್ಳಿಯು ಪುನೀತವಾಯಿತು! ಶಿವಯೋಗಿಗಳವರ ಅಂತ್ಯವಿಧಿಗೆ ಹುಬ್ಬಳ್ಳಿ ಎರಡೆತ್ತಿನ ಮಠದ ಶ್ರೀ ಗಳವರು ವ ಹುಕ್ಕೇರಿಮಠದ ಶ್ರೀಗಳವರು ರಾಮೇಶ್ವರದ ಗುರುಸಿದ್ಧಸ್ವಾಮಿಗಳವರು ದಯಮಾಡಿಸಿದ್ದರು.

ಇದಲ್ಲದೆ ಹುಬ್ಬಳ್ಳಿ, ಧಾರವಾಡ, ಹಾವೇರಿ, ಬ್ಯಾಡಗಿ, ವಿಜಾಪೂರ, ತೊನಿಸಾಳ, ಹಾನಗಲ್ಲ, ಕರ್ಜಗಿ, ತರ್ಲಘಟ್ಟ, ತಡಸ, ಕಲಘಟಗಿ, ವ ಸುತ್ತುಮುತ್ತಲಿನ ಜನರು ಆಗಮಿಸಿದ್ದರು. ಒಟ್ಟು ೪-೫ ಸಾವಿರ ಜನರು ಕೂಡಿದ್ದರು.

ಶ್ರೀಗಳವರ ಪರವಾಗಿ ಜೆಲವಂತರದಲ್ಲಿಯೇ ಸಿದ್ಧರಾಮೇಶ್ವರಸ್ವಾಮಿಯವರ ನೇತೃತ್ವದಲ್ಲಿ ನಡೆಯುವ ಚನ್ನಬಸವೇಶ್ವರ ಗ್ರಂಥಮಾಲೆಯ ವತಿಯಿಂದ 'ಮಂಗಲಸ್ತೋತ್ರಾವಳಿ' ಎಂಬ ಗ್ರಂಥವು ಪ್ರಕಟವಾಗಿ ೧॥ ವರ್ಷವಾಯಿತು. ಇವರು ಶ್ರೀ ಗಳವರ ಪುರಾಣವನ್ನು ಬರೆಯಿಸತಕ್ಕವರಿದ್ದಾರೆ. ಭಕ್ತಜನಗಳು ಸಹಾಯಮಾಡಿದಲ್ಲಿ ತೀವ್ರವೇ ಹೊರಡುವದು. ಯಾವ ಶಿವಯೋಗಿಗಳು ಜಗದುದ್ಧಾರಮಾಡಿ ಪ್ರಮಥಗಣಪುಂಗವರೆಂದು ಕರೆಯಲ್ಪಟ್ಟರೋ ಅದರಂತೆಯೇ ಈಗಿನ ಶ್ರೀ ಸಿದ್ಧರಾಮೇಶ್ವರ ಸ್ವಾಮಿಯವರು ನಡೆಯುವಂತೆ ಪ್ರೇರಣೆಯನ್ನುಂಟುಮಾಡಲೆಂದು ಶ್ರೀಚನ್ನಬಸವೇಶ್ವರ ಶಿವಯೋಗಿವರ್ಯರನ್ನು ಪ್ರಾರ್ಥಿಸುವ.

ಓರ್ವ ಶ್ರೀಗಳವರ ಸೇವಕ.

(ಇವರ ಅಂತ್ಯದ ಧರ್ಮಕಾರ್ಯದಲ್ಲಿ ಸದ್ಧರ್ಮದೀಪಿಕೆಯು ಸಹಾಯಕ್ಕಾಗಿ ಕಳುಹಿಸಲ್ಪಟ್ಟ ಎರಡು ರೂಪಾಯಿಗಳು ಸಂದಿರುತ್ತವೆ. ಪ್ರಕಾಶಕ)

## ತಪ್ಪು ತಿದ್ದುವಿಕೆ ಮೊದಲಾದವುಗಳು.

ಕಳೆದ ಸಂಚಿಕೆಯಲ್ಲಿ "ಆರುಜನ ಲಿಂಗವಂತರು ಆರ್ಯಮತವನ್ನು ಸೇರಿದರು" ಎಂಬ ಶಿರೋಲೇಖದಿಂದ ಒಂದು ಲೇಖನವು ಪ್ರಕಟವಾಗಿದ್ದಿತಷ್ಟೆ, ಅದು ಸುಳ್ಳೆಂಬುದಾಗಿ ಈಗ ಗೊತ್ತಾಗಿದೆ ...

ಇದಕ್ಕೆ ಸಂಬಂಧಪಟ್ಟ ಆರುಜನರಲ್ಲಿ ಹಿರಿಯರಾದ ರಾ॥ ಶಿವಾನಂದ ಶರ್ಮಾ ಎಂಬವರು ಒಂದುಪತ್ರವನ್ನು ಬರೆದಿರುತ್ತಾರೆ. ಇದರಲ್ಲಿ ಇವರ ಸಹೋದರರಾದ ನಂಜುಂಡಯ್ಯನವರೇ ಮೊದಲಾದವರು ವಿದ್ಯಾಭ್ಯಾಸಂಗದಲ್ಲಿ ಇರುವುದಾಗಿಯೂ ಆರ್ಯಸಮಾಜಕ್ಕೆ ಸೇರಿಲ್ಲವೆಂತಲೂ ಬರೆದಿರುತ್ತಾರೆ. ಅವರ ಈ ಕೆಳಗಿನಅಭಿಪ್ರಾಯವು ಸಮಾಜದವರ ಆಕರ್ಷಣೆಗೆ ಪಾತ್ರವಾಗಿರುತ್ತದೆ

"ಆರ್ಯಸಮಾಜವು ಒಳ್ಳೆಯದಿರಬಹುದು, ಆದರೆ ಜನ್ಮತಃ ಸಂಭವಿಸಿದ ವೀರಶೈವ ಸಮಾಜದ ಗೌರವವನ್ನು ಧಿಕ್ಕರಿಸಿ ಆರ್ಯ ಸಮಾಜಕ್ಕೆ ಸೇರಬೇಕೆಂಬ ಪಕ್ಷವನ್ನು ನಾನು ವಾದಿಸುವವನೂ ಅಲ್ಲ, ಹಿಂದೆಂದೂ ವಾದಿಸಿಯೂ ಇಲ್ಲ, ನನಗೆ ವೀರಶೈವಧರ್ಮದಲ್ಲಿ ಅಗಾಧವಾದ ಭಕ್ತಿ ಇದೆ. ನನ್ನ ಜನ್ಮಭೂಮಿ ಮತ್ತು ಹಡೆದತಾಯಿ ಇವರುಗಳಿಗೆ ಕೊಡುವಷ್ಟು ಗೌರವವನ್ನೇ ನಾನು ಜನಿಸಿದ ನನ್ನ ವೀರಶೈವಮತಕ್ಕೆ ಕೊಡುತ್ತೇನೆ. ಬಸವೇಶ್ವರನ ತತ್ತ್ವಗಳು ಆದರ್ಶವಾದವುಗಳು. ಅವುಗಳಿಂದ ಜಗತ್ತಿಗೆ ಕಲ್ಯಾಣವು ಉಂಟಾದೀತೆಂದು ನನ್ನ ನಂಬಿಕೆಇದೆ.

ನಾನೂ ನನ್ನ ಸಹೋದರರೂ ವೀರಶೈವಸಮಾಜದ ನೆರಳಿನಲ್ಲಿ ಬದುಕಿ ಬೆಳೆದು ಬಾಳಿ ಅಳಿಯಬೇಕಾಗಿದೆ''

ಇಂತಹ ಉತ್ತಮ ಅಭಿಪ್ರಾಯಗಳುಳ್ಳವರ ಮೇಲೆ ಅನ್ಯಾಯವಾದ ವರ್ತಮಾನವನ್ನು ಕೊಟ್ಟು ಪ್ರಕಟಿಸುವಂತೆ ಒಬ್ಬ ವಿದ್ಯಾರ್ಥಿಯು ಮಾಡಿದುದು ಅವನ ಶುದ್ಧ ತಪ್ಪಾಗಿದೆ. ಅವನು ತನ್ನತಪ್ಪಿಗೆ ತಕ್ಕ ಕ್ಷಮಾಪಣೆಯನ್ನು ಮಹಾದೇವನಲ್ಲಿ ಬೇಡಿಕೊಳ್ಳಲಿ. ಇಂತಹ ವಿದ್ಯಾರ್ಥಿಯನ್ನು ನಂಬಿ ಬರೆದುದಕ್ಕಾಗಿ ಬಹಳ ವಿಷಾದವಾಗಿದೆ.

ವಿದ್ಯಾರ್ಥಿ ಎಂದರೆ ಸಣ್ಣಪುಟ್ಟವನಿರಲಿಲ್ಲ. ಇಂಗ್ಲಿಷ ೫ – ೬ ನೆಯ ಫಾರಮಿನಲ್ಲಿ ಓದತಕ್ಕವನು, ಇಂತಹ ವಿದ್ಯಾರ್ಥಿಯಮಾತು ಹೀಗೆ ಪರಿಣಮಿಸುವುದೆಂದು ಮೊದಲು ಯೋಚನೆಗೆಬರಲಿಲ್ಲ. ಉಪಾಯವಿಲ್ಲ.

ಇವರ ಹೆಸರು

ಶಿವಾನಂದಶರ್ಮಾ ಎಂತ ಇರುವದನ್ನು ನೋಡಿದರೆ ಶ್ರೀ ಶ್ರದ್ಧಾನಂದ, ಶ್ರೀದಯಾನಂದ ಇವರ ಹೆಸರಿನಂತೆ ಆರ್ಯಸಮಾಜದ ಹೆಸರಾಗಿದೆ ಎಂದು ಕೆಲವರು ಓದುಗರು ಶಂಕಾಮಾಡಬಹುದು.

ಈ ಸಹೋದರರು ಆರ್ಯ ಸಮಾಜಕ್ಕೆ ಸೇರಿದವರಲ್ಲವೆಂಬ ಬಗ್ಗೆ ಬೆಂಗಳೂರಿನ ಮ. ರಾ. ಮಾ. ನಂ ಶಿವಪ್ಪಸಹೋದರರು: ವೇ. ಟಿ, ಎನ್, ಮಹಾದೇವಯ್ಯ ನವರು ಬರೆದಿರುತ್ತಾರೆ. ಈಗಿನ ಕಾಲದಲ್ಲಿ ಅಂದವಾದ ಆನಂದವಾದ ಹೆಸರುಗಳು ಇಡಲ್ಪಡುವುದರಿಂದ ಇದು ಅಂತಹ ಹೆಸರೇಹೊರತು ಈ ಶಿವಾನಂದಶರ್ಮಾ ಎಂಬುದು ಆರ್ಯ ಸಮಾಜದ ಹೆಸರಲ್ಲವೆಂಬುದನ್ನು ಸರ್ವರೂ ದೃಢವಾಗಿ ನಂಬಬೇಕು.

ಈ ಶಿವಾನಂದ ಶರ್ಮಾ ಎಂಬುವವರು "ರಾಷ್ಟ್ರಭಾಷಾ (ಹಿಂದೀ) ವಿಶಾರದ" ಎಂಬ ಪದವೀಧರರಾಗಿ ಇರುವದಲ್ಲದೆ ಬಸವೇಶ್ವರ ವಚನಗಳನ್ನು ಹಿಂದೀಭಾಷೆಗೆ ಅನುವಾದಮಾಡುತ್ತಾ ಇರುತ್ತಾರೆಂತಲೂ ಇವರ ಸಹೋದರರಲ್ಲಿ ಶಿವಣ್ಣ ಎಂಬುವವರ ಹೊರತು ಉಳಿದವರು ನಾನಾಶಾಖೆಗಳ ವಿದ್ಯಾಭ್ಯಾಸದಲ್ಲಿ ಕುಶಲರಾಗಿ ಇರುತ್ತಾರೆಂತಲೂ, ಇವರಲ್ಲಿ ಒಬ್ಬರು ಪರೀಕ್ಷೆಯಲ್ಲಿ ಪ್ರಥಮತರಗತಿಯಲ್ಲಿ ಉತ್ತೀರ್ಣರಾಗಿ ಇದ್ದಾರೆಂತಲೂ ತಿಳಿಯಬಂದಿದೆ. ವಿದ್ಯಾರ್ಥಿಯು ತಪ್ಪಾಗಿ ಬರೆದುದು ಇವರ ಇಂತಹಉತ್ತಮ ವಿಷಯಗಳನ್ನು ಪ್ರಕಟಪಡಿಸುವದಕ್ಕಾಗಿ ಅವಕಾಶಮಾಡಿದಂತೆ ಆಗಿದೆ. ಈ ವಿಷಯಗಳಿಂದ ಸಮಾಜಕ್ಕೆ ಸಂತೋಷವಾಗುವಂತೆ ಆಗಿದೆ.

ಈ ಸಹೋದರರಿಗೆ ಮಹಾದೇವನು ಶುಭವನ್ನು ಮಾಡಲಿ. ಇವರ ಹಿಂದೀಭಾಷೆಯೊಳಗಿನ ಬಸವೇಶ್ವರವಚನವು ಬೇಗನೆ ಹೊರಗೆ ಬರಲಿ ಎಂದು ಶಿವನನ್ನು ಪ್ರಾರ್ಥಿಸುವೆನು.

ಪ್ರಕಾಶಕ

---

## ಅಂಚೆಯ (ಟಪ್ಪಾಲಿನ) ಅನುಕೂಲಗಳು

ಮುಂಬಯಿಯಿಂದ ಪುಣೆಕ್ಕೆ ಬರುವ (BOMBAY TO POONA) ಟಪ್ಪಾಲಗಾಡಿಯು ಈಗ 15-30 ಕ್ಕೆ ಹೊರಟು-19-22 ಕ್ಕೆ ಪುಣೆ (POONA) ಗೆ ತಲುಪುವಂತೆ ಏರ್ಪಡಿಸಲ್ಪಟ್ಟಿದೆ. ಆ ಮೇಲೆ ಪೂನಾ (Poona) ಮೇಲು ಹುಬ್ಬಳ್ಳಿಗೆ 21 ಕ್ಕೆ ಹೊರಡುವದು.

ಮುಂಬಯಿನ ವ್ಯಾಪಾರ ಮುಂತಾದ ಸುದ್ದಿಗಳೂ ರಿಪೋರ್ಟುಗಳೂ ಸಾಯಂಕಾಲ 6 ಗಂಟೆಗೆ ಹೊರ

ಬೀಳುತ್ತವೆ. ಒಂದುದಿನ ೧೮ ಗಂಟೆಗೆ ಟಪ್ಪಾಲಿಗೆ ಹಾಕಿದ ಈ ಸುದ್ದಿಗಳೂ ರಿಪೋರ್ಟುಗಳೂ ಮಾರನೆಯದಿವಸಮಧ್ಯಾಹ್ನಾನಂತರ 15–30 ಗಂಟೆಗೆ ಮುಂಬಯಿಯಿಂದ ಹೊರಡುತ್ತವೆ. ಹೀಗೆ ಒಂದು ದಿವಸದ ಸುಸ್ತಿಯಿಂದ ಆಗುವ ಅನನುಕೂಲವು ಪೂನಾ ಗಾಡಿ ಹುಬ್ಬಳ್ಳಿಗೆ ಹೋಗುವವರೆವಿಗೆ ಮತ್ತು ಅಲ್ಲಿಯ ಮೇಲ್ಗಾಡಿ ಬೆಂಗಳೂರಿಗೆ ಹೋಗುವವರೆವಿಗೆ ಮಧ್ಯದ ಊರುಗಳಿಗೆಲ್ಲಾ ವ್ಯಾಪಿಸುತ್ತದೆ ಇದರಿಂದ ವ್ಯಾಪಾರ ಮೊದಲಾದ ಕೆಲಸಗಳಿಗೆಲ್ಲಾ ಬಹಳ ತೊಂದರೆಯಾಗುತ್ತದೆ.

ಮುಂಬಯಿಯಿಂದ ಮೇಲುಗಾಡಿಯು (No. 3 Down Poona mail) ಈಗ 15–30 ಕ್ಕೆ ಹೊರಟು 19–20 ಕ್ಕೆ ಪುಣೆಗೆ ತಲಪುತ್ತದೆ. ಇದು ಪುಣೆಯಲ್ಲಿಯೇ ನಿಲ್ಲುತ್ತದೆ, ಮುಂದೆ ಹೋಗುವುದಿಲ್ಲ. ಇದರಂತೆ ಇನ್ನೊಂದು ಗಾಡಿಯು [No 47 Deccan Queen] ಮುಂಬಯಿಯಿಂದ 17–15ಕ್ಕೆ ಹೊರಟು 20 ಕ್ಕೆ ಪುಣೆಗೆ ತಲಪುತ್ತದೆ, ಇದೂ ಮುಂದೆ ಹೋಗುವುದಿಲ್ಲ. ಈಗ ಮೇಲುಗಾಡಿ ಹೊರಡುವ ಹೊತ್ತಿಗೆ ಈ ನಂ 47 ಡೆಕ್ಕನ್ ಕ್ವೀನ್ ಗಾಡಿಯನ್ನು ಹೊರಡಿಸುವಂತೆ ಏರ್ಪಡಿಸಿ ಮೇಲುಗಾಡಿಯನ್ನು 18–30 ಕ್ಕೆ ಹೊರಡಿಸುವಂತೆ ಏರ್ಪಡಿಸಿದರೆ ಸಾಮಾನ್ಯವಾಗಿ 21-30 ಕ್ಕೆ ಅಥವಾ 22 ಕ್ಕೆ ಪುಣೆಗೆ ತಲಪಬಹುದು. ಅಲ್ಲಿಂದ 22–30 ಕ್ಕೆ ಪೂನಾ ಹುಬ್ಬಳ್ಳಿ (Poona-Hubli) ಮೇಲುಗಾಡಿಯನ್ನು ಹೊರಡಿಸಬೇಕಾಗುತ್ತದೆ. ಈಗ 21 ಕ್ಕೆ ಹೊರಡುವ ಈ ಗಾಡಿಯನ್ನು ಹೀಗೆ 22–30 ಕ್ಕೆ ಹೊರಡಿಸುವುದರಿಂದ ಆಗುವ ಒಂದೂವರೆಗಂಟೆಯ ಸಾವಕಾಶವನ್ನು ಹುಬ್ಬಳ್ಳಿಯಲ್ಲಿ ಈ ಗಾಡಿ 13–10 ಕ್ಕೆ ತಲುಪಿ 17–10ಕ್ಕೆ ಮುಂದೆ ಹೊರಡುವುದರಿಂದ ಎಂದರೆ 4 ಗಂಟೆ ಹೊತ್ತು ನಿಲ್ಲುವುದರಿಂದ ಅಲ್ಲಿ ಸರಿಪಡಿಸಿಕೊಳ್ಳಬಹುದು, ಎಂದರೆ 2½ ಗಂಟೆ ಮಾತ್ರ ಅಲ್ಲಿ ನಿಲ್ಲುವಂತೆ ಏರ್ಪಡಿಸಬಹುದು ಇದರಿಂದ ಹುಬ್ಬಳ್ಳಿಯಿಂದ ಮುಂದೆ ಹೋಗುವ ಹುಬ್ಬಳ್ಳಿ—ಬೆಂಗಳೂರು (Hubli–Bangalore) ಮೇಲುಗಾಡಿಯ ಕಾಲವನ್ನೇನೂ ಬದಲಾಯಿಸಬೇಕಾದ ಪ್ರಸಕ್ತಿ ಬೀಳುವುದಿಲ್ಲ.

ಹೀಗೆ ಹೆಚ್ಚಿನ ತೊಂದರೆಯಿಲ್ಲದೆ ಮಾಡಬಹುದಾದ ಈ ಬದಲಾವಣೆಯಿಂದ ಮುಂಬಯಿಯ ಟಪ್ಪಾಲು ಒಂದು ದಿವಸ ಮುಂಚಿತವಾಗಿ ಪುಣೆಯಿಂದ ಮುಂದೆ ಬೆಂಗಳೂರು ವರೆಗೆ ಇರುವ ಊರುಗಳಿಗೆಲ್ಲಾ ಹೋಗುತ್ತದೆ.

ಆದುದರಿಂದ ಮುಂಬಯಿ ಪೋಸ್ಟ್ ಮಾಸ್ಟರ್ ಜನರಲ್ ಸಾಹೇಬರವರೂ G. I. P. ರೈಲ್ವೆ ಕಂಪನಿಯುವರೂ M. S M. ರೈಲ್ವೆ ಕಂಪನಿ ಯವರೂ ಆಲೋಚಿಸಿ ಈ ಸ್ವಲ್ಪ ಬದಲಾವಣೆಯಿಂದ ಆಗುವ ಮಹಾಫಲಗಳನ್ನು ಜನರಿಗೆ ಉಂಟು ಮಾಡಿಕೊಡುವಿಕಾಗಿ ಎಂದರೆ ಟಪ್ಪಾಲು ಒಂದು ದಿವಸ ಸಾವಕಾಶವಾಗುವುದನ್ನು ತಪ್ಪಿಸಿಕೊಡಬೇಕಾಗಿ ನಾವು ವಿನಂತಿ ಮಾಡುತ್ತೇವೆ.

ಪ್ರಕಾಶಕ.
ಸದ್ಧರ್ಮ ದೀಪಿಕೆ. ಹಾವೇರಿ

---

## ವಿಶೇಷ ವರ್ತಮಾನ.

ತಾ. 19 11-35 ನೇಯು ಮುಂಬಯಿ ಕ್ರಾನಿಕಲ್ (Bombay Chronicle.) ಎಂಬ ದಿನ ಪತ್ರಿಕೆಯಲ್ಲಿ ಮಹಾತ್ಮಾ ಗಾಂಧೀಜಿಯವರು " ಜಾತಿಯು ಹೋಗಬೇಕು. " ಎಂಬ ವಿಷಯವಾಗಿ ಒಂದು ಲೇಖನವನ್ನು ತಾ॥ 16-11-35ನೆಯ ಹರಿಜನ ಪತ್ರಿಕೆಯಲ್ಲಿ ಬರೆದಿರುವುದಾಗಿ ತಿಳಿಸಿದ್ದಾರೆ. ಅವರ ಅಭಿಪ್ರಾಯಕ್ಕೆ ಈಗ ಜಾತಿಗಳು ತಮ್ಮ ಕಾರ್ಯವನ್ನು ಸರಿಯಾಗಿ ಮಾಡುತ್ತಾ ಇಲ್ಲ, ಹಿಂದೂದೇಶದ ಪ್ರಗತಿಗೆ ಜಾತಿ ಪದ್ಧತಿಗಳು ತೊಂದರೆ ಕೊಡುತ್ತಿರುವವು, ಎಂಬುದೇ ಮುಖ್ಯಕಾರಣವಾಗಿ ಇದೆ.

ಹೀಗೆ ದೇಶದ ಮುಂದಾಳುಗಳು ಆಲೋಚಿಸುತ್ತಾ ಇರುವಾಗ ಅತಿವರ್ಣವಾಗಿದ್ದು ಶಾಂತಿಸುಖವನ್ನು ಅನುಭವಿಸುತ್ತಾ ಇರಬಹುದಾದ ವೀರಶೈವಮತದಲ್ಲಿ ವರ್ಣಭೇದಗಳು ಉಂಟೆಂದು ಹಾವೇರಿಗೆ ಆಗಮಿಸಿ ಇರುವ ಬಾಳೇಹಳ್ಳಿಯ ಶ್ರೀ ಶಿವಾನಂದ ಶಿವಾಚಾರ್ಯರವರೂ ಅವರ ಪರಿವಾರದ ಕೆಲವು ಶಾಸ್ತ್ರಿಗಳೂ ಅವರ ಅನುಯಾಯಿಗಳೂ ಬೋಧಿಸುತ್ತಿರುವುದು ಹಸ್ತ ಪತ್ರಿಕೆಗಳನ್ನು ಹಂಚುತ್ತಾ ಇರುವುದು ಬಹಳ ವಿಷಾದಕರವಾದ ಸಂಗತಿಗಳಾಗಿವೆ.

ಸಮಾಜದ ಪ್ರಗತಿಯು ಹೇಗಾಗಬೇಕೆಂಬುದನ್ನು ಯೋಚಿಸದೆ ಸಮಾಜವನ್ನು ಹಿಂದಕ್ಕೆ ಜಗ್ಗುತ್ತಾ ಕ್ರಾಂತಿಯನ್ನು ಉಂಟುಮಾಡುವವರಿಗೆ ಈಗಿನ ನಮ್ಮ ಸಮಾಜವು ತಕ್ಕ ನಿಷೇಧವನ್ನು ತೋರಿಸುವುದಕ್ಕೆ ಶಕ್ತಿ ಇಲ್ಲದುದಾಗಿ ಇರುವುದು ಇನ್ನೂ ವಿಷಾದಕರವಾದ ಸಂಗತಿ.

---

## ಆರ್ಯ ಸಮಾಜದ ಅಬ್ಬರ.

### (೧೦೦೦ ಲಿಂಗವಂತರ ಲಿಂಗವನ್ನು ತೆಗೆಯಿಸಿ ಆರ್ಯ ಸಮಾಜಕ್ಕೆ ಸೇರಿಸುವ ಪ್ರತಿಜ್ಞೆ.)

ನಿಜಾಮ ರಾಜ್ಯದಲ್ಲಿ ಆರ್ಯ ಪ್ರತಿನಿಧಿ ಸಭೆಯ ಉಪ ಪ್ರಧಾನರಾದ ಶ್ರೀ ಬನ್‌ಸೀಲಾಲ ವಕೀಲ ಎಂಬುವವರು ಇನ್ನು ಒಂದು ವರ್ಷದೊಳಗಾಗಿ ಒಂದು ಸಾವಿರ ಲಿಂಗಾಯತರಿಗೆ ಅವರ ಇಷ್ಟಲಿಂಗವನ್ನು ತೆಗೆಯಿಸಿ ಜನಿವಾರವನ್ನು ತೊಡಿಸಿ ಆರ್ಯ ಸಮಾಜದವರನ್ನಾಗಿ ಮಾಡುವ ಘೋರ ಪ್ರತಿಜ್ಞೆಯನ್ನು ಮಾಡಿರುತ್ತಾರೆ.

ಸುಮಾರು ೮ ವರ್ಷದ ಕೆಳಗೆ ಆರ್ಯ ಸಮಾಜದ ಹೆಸರು ಕೂಡಾ ನಿಜಾಮ ರಾಜ್ಯದಲ್ಲಿ ಯಾರಿಗೂ ಗೊತ್ತಿರಲಿಲ್ಲ. ಈಗ ೭-೮ ವರ್ಷಗಳಲ್ಲಿ ಹೈದರಾಬಾದ ಉದಗೀರ ಆರ್ಯ ಸಮಾಜದ ಮತ್ತು ಅದರ ಕಾರ್ಯಕಾರಿ ಮಂಡಳಿಯವರ ಪ್ರಯತ್ನಗಳ ದೆಸೆಯಿಂದ ಶ್ರೀ ಶಾಮಲಾಲ ವಕೀಲ ಬನ್‌ಸೀಲಾಲ ವಕೀಲ ಇವರ ಹೆಸರು ಎಲ್ಲಾ ನಿಜಾಮ ದೇಶದಲ್ಲಿ ಅಲ್ಲದೆ ಬ್ರಿಟಿಷ್ ಸೀಮೆಯ ಭಾಗದಲ್ಲಿ ಕೂಡಾ ವ್ಯಾಪಿಸಿ ಇರುತ್ತದೆ.

ಮೊದಲು ಉದಗಿರಿಯ ಕೆಲವು ಯುವಕರು ಒಂದು ವಾಚನಾಲಯವನ್ನು ಆರಂಭಿಸಿದರು. ಈ ವಾಚನಾಲಯದ ಮುಖಾಂತರ ವಾರದ (ಸಾಪ್ತಾಹಿಕ) ಉಪನ್ಯಾಸಗಳನ್ನು ಮಾಡಲಿಕ್ಕೆ ಹಚ್ಚಿದರು. ಆ ಮೇಲೆ ಅವರ ಮಾಸಿಕ ವಾರ್ಷಿಕ ಸಮಾರಂಭಗಳನ್ನು ಮಾಡಿದರು. ಈ ಮುಖಾಂತರವಾಗಿ ತಮ್ಮ ಸಮಾಜದಲ್ಲಿರುವ ಅನಿಷ್ಟ ಪದ್ಧತಿ ನಡತೆಗಳನ್ನು ಸುಧಾರಿಸಲಿಕ್ಕೆ ನಿಂತರು. ಇವರಲ್ಲಿ ಶಾಮಲಾಲ ಎಂಬುವವರು ನಿಜವಾದ ಸಮಾಜ ಸೇವಕರೆಂದೂ ಪ್ರಜಾಹಿತಕಾರಿಗಳೆಂದೂ ಜನರಿಗೆ ತಿಳಿದು ಬಂದುದರಿಂದ ಧನಿಕರು ಪ್ರಮುಖರು ಸಹಾ ಇವರ ಮಾತಿನಲ್ಲಿ ಬಹಳ ವಿಶ್ವಾಸವಿಟ್ಟರು. ಈ ಶಾಮಲಾಲರು ನಂತರ ಅಲ್ಲಿ ಆರ್ಯ ಸಮಾಜ ಸ್ಥಾಪನೆಯನ್ನು ಮಾಡಿದರು. ಆರ್ಯ ಸಮಾಜದ ಧರ್ಮವನ್ನು ಕೈಕೊಂಡರೆ ನಿಮ್ಮ ಉದ್ಧಾರವಾಗುವದೆಂದು ಬೋಳೆ (ಸಾಧುವಾಗಿ ಇರತಕ್ಕ) ಜನರಿಗೆ ಎಂದರೆ ಹೆಚ್ಚು ತಿಳಿಯದ ಜನರಿಗೆ ಬೋಧಿಸುತ್ತಾ ಬಂದರು.

ಇದನ್ನು ನೋಡಿ ಅನೇಕ ಲಿಂಗಾಯತರು ಮತ್ತು ಇತರ ಜಾತಿಯ ಅನೇಕ ತರುಣರು ಈ ಸಂಸ್ಥೆಯ ಭಾಗವನ್ನು ತೆಗೆದುಕೊಳ್ಳಲಿಕ್ಕೆ ಪ್ರಾರಂಭ ಮಾಡಿದರು. ಸಮಾಜವು ಬಲಿಯುತ್ತಾ ಬಂದ ಹಾಗೆಲ್ಲಾ ವಿಧರ್ಮೀಯರಲ್ಲದೆ ಹಿಂದೂ ಸಮಾಜದಲ್ಲಿನ ಜನರ ಮೇಲೇನೇ ಟೀಕಾ ಮಾಡಲಿಕ್ಕೆ ಆರಂಭಿಸಿದರು. ಇದನ್ನು ನೋಡಿ ಧರ್ಮದಲ್ಲಿ ಅಂಧ ಶ್ರ

ದ್ಧೆಯುಳ್ಳ ಜನರಿಗೆ ಆರ್ಯ ಸಮಾಜದವರು ಟೀಕಾ ಮಾಡುವುದು ಯೋಗ್ಯವೆಂದು ತೋರುತ್ತಾ ಬಂದಿತು. ಆಗ ಮತ್ತೂ ಕೆಲವರು ಸೇರಿದರು. ಹೀಗೆ ಆರ್ಯ ಸಮಾಜವು ಬಲವಾದ ಮೇಲೆ ಲಿಂಗಾಯತ ಮತದ ನಿಂದೆ ಮಾಡಲಿಕ್ಕೆ ಹಚ್ಚಿದರು. ಈ ರೀತಿಯಾಗಿ ಹಿಂದೂತ್ವ ರಕ್ಷಣದ ಬದಲಾಗಿ ಹಿಂದೂತ್ವ ಭಕ್ಷಣಮಾಡಿದರು. ಈಗಲೂ ಹದಿನೈದು ಲಿಂಗಾಯತ ತರುಣರು ಇವರ ಪ್ರೋತ್ಸಾಹದ ಬಲೆಯಲ್ಲಿ ಸಿಕ್ಕುಬಿದ್ದಿದ್ದಾರೆ ಇವರು ಒಬ್ಬ ಭೀಮಸೇನಪ್ಪ ಎಂಬ ಲಿಂಗವಂತನನ್ನು ಆರ್ಯ ಸಮಾಜಕ್ಕೆ ಸೇರಿಸಿದರು. ಆಗ ಲಿಂಗವಂತರು ವಿರೋಧವಾಗಿ ಬರಲು ಇನ್ನು ಒಂದು ವರ್ಷದಲ್ಲಿ ೧೦೦೦ ಲಿಂಗವಂತರನ್ನು ಆರ್ಯ ಸಮಾಜಕ್ಕೆ ಸೇರಿಸುತ್ತೇನೆಂದು ಶ್ರೀ ಬನ್‌ಸೀಲಾಲರು ಪ್ರತಿಜ್ಞೆ ಮಾಡಿದ್ದಾರೆ. ಎಂದು ಮುಂತಾಗಿ ಆರ್ಯ ಸಮಾಜದ ಚಳವಳಿಯು ಊರೂರಿಗೆ ಹಳ್ಳಿಹಳ್ಳಿಗೆ ವ್ಯಾಪಿಸುತ್ತಾ ಇರುವುದನ್ನು ವಿವರಿಸಿ ಇದಕ್ಕೆ ತಕ್ಕ ಪ್ರತೀಕಾರ ಮಾಡುವುದಕ್ಕೆ ಲಿಂಗಾಯತ ಸಮಾಜದವರು ಈ ಕಾಲದಲ್ಲಿ ಎಚ್ಚರ ವುಳ್ಳವರಾಗಿದ್ದು ಅವರಿಗೆ ಪ್ರತೀಕಾರ ಮಾಡಲಿಕ್ಕೆ (ಎಂದರೆ ಅವರ ಬಾಧೆಗೆ ಲಿಂಗಾಯತರು ಒಳಗಾಗದಂತೆ ನೋಡಿಕೊಳ್ಳುವುದಕ್ಕೆ) ಸಿದ್ಧರಾಗಿರಬೇಕು. ಎಂಬುದಾಗಿ ಶಿವಲಿಂಗಪ್ಪಾ ಬಕ್ಕಯಾ ನಾಗುರೆ ಎಂಬುವವರು ವೀರಶೈವರನ್ನು ಎಚ್ಚರಿಸಿ ಪತ್ರಿಕೆಯವರು ಇದನ್ನು ಪ್ರಕಟಿಸಬೇಕೆಂದು ವಿನಂತಿ ಮಾಡಿಕೊಂಡಿದ್ದಾರೆ. (ಈ ವಿಷಯವು ಸೋಲಾಪುರದಲ್ಲಿ ಹೊರಡುವ ಮರಾಠಿ ಭಾಷೆಯ ಸುದರ್ಶನ ಪತ್ರ ೭-೧೦-೩೮ರಲ್ಲಿ ಪ್ರಕಟವಾಗಿದೆ.)

ಈ ಆರ್ಯ ಸಮಾಜದವರು ಮಾಡುತ್ತಿರುವ ಹಾವಳಿಯನ್ನು ಕುರಿತು ಈ ಹಿಂದೆ ಎರಡು ಸಂದರ್ಭಗಳಲ್ಲಿ ಈ ಪತ್ರಿಕೆಯಲ್ಲಿ ಸೂಚಿಸಿ ಇರುತ್ತದೆ. ಆರ್ಯ ಸಮಾಜವೂ ವೀರಶೈವ ಮತವೂ ಎಂಬ ಶಿರೋ ಲೇಖದಿಂದ ಮುಂದೆ ಕೆಲವು ಲೇಖನಗಳನ್ನು ಕೊಡಲು ನಿಶ್ಚಯಮಾಡಿ ಇರುತ್ತದೆ. ಈ ಕಡೆಗೆ ಓದುಗರು ಗಮನ ಕೊಡಬೇಕೆಂದು ಪ್ರಾರ್ಥನೆ.

ನ ವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ (ವೀರಶೈವಕ್ಕೆ ಸಮಾನವಾದ ಮತವು ಮೂರು ಲೋಕದಲ್ಲಿ ಇಲ್ಲ) ಎಂದು ಹೇಳುವ ವೀರಶೈವರು ಜಗತ್ತ್ರಯೇ (ಮೂರು ಲೋಕದಲ್ಲಿ) ಎಂಬ ಮಾತನ್ನು ಕಿತ್ತು ಹಾಕಿ ಗೃಹತ್ರಯೇ (ಮೂರು ಮನೆಯಲ್ಲಿ ಎಂದರೆ ಗುರು ಲಿಂಗ ಜಂಗಮರ ಮಠಗಳಲ್ಲಿ) ಎಂದು ಸೇರಿಸಿಕೊಳ್ಳುವ ಕಾಲವು ಬರುವ ಸೂಚನೆಯು ತೋರಿ ಬರುವುದೋ ಎಂಬಂತೆ ಈ ವಿಷಯಗಳು ವ್ಯಸನವನ್ನು ಹುಟ್ಟಿಸುತ್ತವೆ.

ವೀರಶೈವರು ತಮ್ಮ ಶ್ರೇಷ್ಠವಾದ ಮತದ ಪ್ರಚಾರಕ್ಕೆ ಈ ಆರ್ಯ ಸಮಾಜದವರಂತೆ ನಿಲ್ಲುವುದಾದರೆ ಇಂತಹ ಭೀಕರ ಸ್ಥಿತಿಯೂ ಕೂಡಾ ಬೇಗನೆ ನಾಶವಾಗುವುದು.

ಜರ್ಮನೀ ದೇಶದ ಪ್ರಸಿದ್ಧ ಪಂಡಿತರಾದ ಡಾ. ಸ್ಕ್ರೇಡರ್ ಮುಂತಾದವರೂ ಕೂಡಾ ವೀರಶೈವ ಮತವು ಅನೇಕ ವಿಷಯಗಳಲ್ಲಿ ಉತ್ತಮವೆಂದು ಹೇಳುತ್ತಾ ಇರುವಲ್ಲಿ ಆ ಮತದಲ್ಲಿ ಇರುವ ವೀರಶೈವರು ಎಲ್ಲಾ ವಿಷಯಗಳಲ್ಲಿಯೂ ಇದು ಉತ್ತಮವೆಂಬ ಅಂಶವನ್ನು ಜಗತ್ತಿಗೆ ತೋರ್ಪಡಿಸದೆ ಇನ್ನೂ ಹಿಂದಕ್ಕೆ ಬೀಳುತ್ತಾ ಇರುವುದನ್ನು ನೋಡಿದರೆ ಸರ್ವೇದಾಶ್ಚರ್ಯವಾಗುತ್ತದೆ.

ವೀರಶೈವ ಶ್ರೀಮಂತರು ಮೊದಲಾದವರು ಈ ಕಾಲದಲ್ಲಿ ಮುಂದಾಳುಗಳಾಗಿ ನಿಂತುಕೊಂಡು ಈ ಧರ್ಮದ ತತ್ವಗಳು ಜನರಲ್ಲೆಲ್ಲಾ ಪ್ರಚಾರವಾಗುವಂತೆ ಸಂಸ್ಕೃತ, ಹಿಂದಿ, ಮರಾಠಿ, ತೆಲುಗು, ಕನ್ನಡ, ಇಂಗ್ಲಿಷ್ ಮುಂತಾದ ಭಾಷೆಗಳಲ್ಲಿ ಪುಸ್ತಕಗಳನ್ನು ಬರೆಯಿಸಿ ಪ್ರಚಾರಕ ಸಂಘಗಳನ್ನು ಇಡೀ ಹಿಂದುಸ್ಥಾನದಲ್ಲಿ ಸಾಧ್ಯವಾದರೆ ಪ್ರಪಂಚದ ಎಲ್ಲಾ ಭಾಗಗಳಲ್ಲಿ ಏರ್ಪಡಿಸಿ ಇದರ ಬೆಳವಣಿಗೆಯನ್ನು ಕಂಡು ಹರುಷ ಪಡುವವರಾಗಬೇಕು. ಆಗ ತಮ್ಮ ಕರ್ತವ್ಯವನ್ನು ತಾವು ಮಾಡಿದಂತೆ ಆಗುವುದಲ್ಲದೆ ತಾವೂ ಉದ್ಧಾರವಾಗುತ್ತಾರೆ, ಎಂಬುದರಲ್ಲಿ ಲೇಶವೂ ಸಂಶಯವಿಲ್ಲ.

ಲೋಕದಲ್ಲಿ ಹುಟ್ಟಿದುದಕ್ಕೆ ಏನು ಸಾರ್ಥಕ? ಶ್ರೇಷ್ಠವಾದ ನಿಜ ಧರ್ಮಕ್ಕೆ ಗೌರವವನ್ನು ತಂದುದೇ ಆದರೆ ಆದರಿಂದ ಲೋಕರಕ್ಷಣೆಯೂ ಗುತ್ತದೆ. ಬಸವೇಶ್ವರನನ್ನು ಈ ಕಾಲದವರೆಗೂ ಬದುಕಿಸಿ ಇರುವುದು ಆತನ ಧರ್ಮಬೋಧೆಯೇ ಅಲ್ಲವೇ? ಬಸವೇಶ್ವರನನ್ನು ಮುಂದೂ ಶಾಶ್ವತನಾಗಿ ಇರುವಂತೆ ಮಾಡಿರುವುದೂ ಆ ಧರ್ಮಬೋಧೆಯೇ ಅಲ್ಲವೇ? ನಿಷ್ಫಲವಾಗಿ ಒಂದು ನೂರು ವರುಷ ಬದುಕಿದರೆ ತಾನೇ ಏನು ಪ್ರಯೋಜನ?

ಜನರಿಗೆ ತಮ್ಮ ಕರ್ತವ್ಯ ಕಾರ್ಯಗಳು ಚನ್ನಾಗಿ ತಿಳಿದು ಅದನ್ನು ನಡಸುತ್ತಾ ಬಂದಂತೆಲ್ಲಾ ಜನಾಂಗವು ಸುಧಾರಿಸುತ್ತಾ ಬರುವುದು. ಈ ಸಂಕೇತವನು ಪ್ರತಿಯೊಬ್ಬನೂ ತಿಳಿದು ತನ್ನ ಕರ್ತವ್ಯ ಕರ್ಮ ವೇನೆಂಬುದನ್ನು ತಾನು ಯೋಚಿಸಿಕೊಂಡು ಮತ್ತು ಬಲ್ಲವರೊಡನೆ ಮಾತನಾಡಿ ಅವರ ಸಲಹೆಯನ್ನೂ ಕೇಳಿ ನಿಶ್ಚಯ ಮಾಡಿಟ್ಟುಕೊಂಡಿದ್ದು ಆ ಗುರಿಯನ್ನು ಸಾಧಿಸುವುದಕ್ಕೋಸ್ಕರವೇ ತಾನು ಯಾವಾಗಲೂ ಪ್ರಯತ್ನ ಮಾಡುತ್ತಾ

ಕೆಲಸ ಮಾಡುತ್ತಾ ಹೋಗಬೇಕು. ಇದು ಧಾರ್ಮಿಕ ರಕ್ಷಣೆಯಲ್ಲಿಯೂ ಬೀಜರೂಪವಾದ ಉಪಾಯವಾಗಿ ಇರುತ್ತದೆ. ಪ್ರಕಾಶಕ.

---

## ವಿಮರ್ಶೆ.

### ಶ್ರೀ ಮದ್ವೀರಶೈವ ಬಸವರಾಜ ಫ್ರೀ ಬೋರ್ಡಿಂಗ್ ಗದ್ದುಗೆ ಮಠ, ಗುಲಬುರ್ಗಾ (ಕಲಬುರಿಗಿ).

ಈ ಸಂಸ್ಥೆಯ ಮೊದಲನೆಯ ವರ್ಷದ ರಿಪೋರ್ಟನ್ನು ಓದಲಾಯಿತು. ಈ ಬೋರ್ಡಿಂಗಿನಲ್ಲಿ ಇಂಗ್ಲಿಷ್ ಕಲಿಯುವ ೨೬ ವಿದ್ಯಾರ್ಥಿಗಳು ಪ್ರಸಕ್ತ ವರ್ಷದಲ್ಲಿ ಇದ್ದರು. ಈ ಮಠದಲ್ಲಿ ಒಂದು ಸಂಸ್ಕೃತ ಶಾಲೆಯೂ ಇದೆ. ಇವರಲ್ಲಿ ೧೫ ವಿದ್ಯಾರ್ಥಿಗಳಿದ್ದಾರೆ. ಇದಲ್ಲದೆ 'ಚರಲಿಂಗೇಶ್ವರ ವಾಚನಾಲಯ' ಎಂಬ ಒಂದು ವಾಚನಶಾಲೆಯೂ ಇದೆ. ಇವುಗಳಲ್ಲಿ ವೂ ಯಾವುದೊಂದು ನಿಧಿಯೂ ಇಲ್ಲದೆ ಶ್ರೀ. ನಿ. ಪ. ಶಿವಮೂರ್ತಿಸ್ವಾಮಿಗಳವರ ಕೃಪಾಬಲದಿಂದ ಶ್ರೀ ಆದಿನಾಥ ದೇಶಿಕರವರು ಕೇವಲ ಭಿಕ್ಷಾಟನದಿಂದಲೇ ಇದನ್ನು ನಡೆಸುತ್ತಿರುವುದು ಬಹಳ ಸಂತೋಷದ ವಿಷಯವಾಗಿದೆ. ೧೧ ತಿಂಗಳ ಖರ್ಚು ೯೦೭-೪-೩ ಮಾತ್ರ ಆಗಿದೆ. ಇದರಲ್ಲಿ ವರ್ಗಣಿಯಿಂದ ಬಂದುದು ರು. ೧೨೩ ಮಾತ್ರ. ಮ. ರಾ. ಖೂಬಾ ಸಿದ್ದಪ್ಪನವರು ಶರಣಪ್ಪನವರು ೫೪-೧೩-೯ ಶೇಖರಿಸಿ ಕೊಟ್ಟಿರುತ್ತಾರೆ.

ಹೈದರಾಬಾದು ದೇಶದ ವೀರಶೈವರು ವಿದ್ಯೆಯಲ್ಲಿ ಬಹಳವಾಗಿ ಹಿಂದುಳಿದಿರುತ್ತಾರೆ ಇಂಗ್ಲಿಷ್ ಮತ್ತು ಮಾತೃಭಾಷೆಯ ಅಭ್ಯಾಸಕ್ಕಾಗಿ ಅಲ್ಲಿ ವಿಶೇಷ ಪ್ರಯತ್ನವು ನಡೆಯಬೇಕಾಗಿದೆ. ಸಣ್ಣದಾಗಿ ಆರಂಭಿಸಿದ ಕೆಲಸವನ್ನೇ ಬಹು ದೊಡ್ಡದಾಗಿ ಬೆಳೆಸುವ ಉತ್ತಮರಂತೆ ಈ ಸಂಸ್ಥೆಯನ್ನು ಗುಲ್ಬುರ್ಗಾ ಪ್ರಾಂತದವರು ದೊಡ್ಡದಾಗಿ ಬೆಳೆಸುವುದು ಶ್ರೇಷ್ಠವಾದ ಕೆಲಸವಾಗಿದೆ. ಇದಕ್ಕಾಗಿ ಒಂದು ದ್ರವ್ಯನಿಧಿಯನು ಏರ್ಪಡಿಸುವುದೂ ಒಳ್ಳೆಯದು.

ಈ ಸಂಸ್ಥೆಯ ಕಾರ್ಯದರ್ಶಿಗಳೇ ಮೊದಲಾದ ಕಾರ್ಯಕಾರಿಮಂಡಲವೂ ಸದಸ್ಯರೂ ಮೊದಲಾದವರು ಈಗ ಪ್ರಯತ್ನಿಸಿದಂತೆ ಮುಂದೆಯೂ ತಮ್ಮಲ್ಲಿ ಮತ್ತು ಇತರ ಗ್ರಾಮಗಳಲ್ಲಿ ವರ್ಗಣಿ ಏರ್ಪಡಿಸುವುದರ ಮೂಲಕವೂ ಮತ್ತು ಇತರ ಪ್ರಯತ್ನಗಳ ಮೂಲಕವೂ ಈ ಸಂಸ್ಥೆಯು ಚನ್ನಾಗಿ ನಡೆಯುವಂತೆ ಪ್ರಯತ್ನಿಸುವರೆಂದು ನಂಬುತ್ತೇವೆ. ಈ ಸಂಸ್ಥೆಯು ಬೇಗನೆ ಅಭಿವೃದ್ಧಿಗೆ ಬರಲಿ ಎಂದು ಮಹಾದೇವನನ್ನು ಪ್ರಾರ್ಥಿಸುವೆವು. ಪ್ರಕಾಶಕ.

# ಐದನೆಯ ಜಾರ್ಜ್ ಚಕ್ರವರ್ತಿಗಳ ನಿಧನ.

ಈ ತಿಂಗಳಲ್ಲಿ ಹಿಂದೂ ದೇಶದ ಪ್ರಜೆಗಳೆಲ್ಲರೂ ತಿಳಿದ ಅತ್ಯಂತ ವ್ಯಸನಕರವಾದ ಸುದ್ದಿಯೇ ಸಾರ್ವಭೌಮರಾದ ಐದನೆಯ ಜಾರ್ಜರು ನಮ್ಮನ್ನು ಬಿಟ್ಟು ಹೋದರೆಂಬುದು. ಇವರು ೧೯೩೬ ನೆಯ ಜನವರಿ ೨೦ನೆಯ ಸರಿರಾತ್ರಿಯ ಸುಮಾರಿನಲ್ಲಿ ಇಂಗ್ಲಂಡ್ ದೇಶದ ರಾಜಧಾನಿಯಾದ ಲಂಡನ್ ಪಟ್ಟಣದ ಸ್ಯಾಂಡ್ರಿಂಗ್ ಹಾಂ ಎಂಬ ಅರಮನೆಯಲ್ಲಿ ಗತಿಸಿದರು. ಆಗ ಇವರ ವಯಸ್ಸು ೭೦ ವರ್ಷವಾಗಿದ್ದಿತು ಇವರ ರಾಜ್ಯಭಾರದ ಇಪ್ಪತ್ತೈದನೆಯ ವರ್ಷದ ಉತ್ಸವವು ೧೯೩೫ನೆಯ ಮೇ ೬ ರಲ್ಲಿ ನಡೆದಿದ್ದಿತು ಇವರು ಶಾಂತಿಕಾರಕರೆಂಬ ಪ್ರಖ್ಯಾತಿಗೆ ಪಾತ್ರರಾದವರು. ಇಟಲಿ ಅಬಿಸಿನಿಯಾ ಯುದ್ಧದ ಆರಂಭದಲ್ಲಿ ಇಟಲಿಯು ರಾಷ್ಟ್ರಸಂಘದ ವಿರೋಧವಾಗಿ ಬಹಳ ಕೆಲಸಗಳನ್ನು ಮಾಡಿದರೂ ಅವಕ್ಕೆ ತಕ್ಕ ಪ್ರತೀಕಾರವನ್ನು ಶಾಂತಿಯ ರೂಪದಲ್ಲಿಯೇ ನಡೆಯಿಸಲು ಕಾರಣರಾಗಿದ್ದರು. ಇವರ ಕಾಲದಲ್ಲಿ ಜರ್ಮನಿಯ ಉಗ್ರತೆಯಿಂದ ಉಂಟಾದ ಯುರೋಪು ಖಂಡದ ಮಹಾಯುದ್ಧವನ್ನು ಸಾಧ್ಯವಾದಷ್ಟು ಶಾಂತರೀತಿಯಿಂದ ಕೊನೆಗಾಣಿಸಿದರು. ದುರ್ಜನನಾದ ಬಲಶಾಲಿಗೆ ತನ್ನ ಬಲದಿಂದ ಇತರರೊಡನೆ ಜಗಳವನ್ನು ತೆಗೆಯಬೇಕೆಂಬ ಬುದ್ಧಿಯು ಉಂಟಾಗುತ್ತದೆ. ಸಜ್ಜನನಾದ ಬಲಶಾಲಿಗೆ ತನ್ನ ಬಲದಿಂದ ಇನ್ನೊಬ್ಬರನ್ನು ರಕ್ಷಿಸಬೇಕೆಂಬ ಬುದ್ಧಿಯು ಉಂಟಾಗುತ್ತದೆ ಇಡೀ ಭೂಮಿಯ ಐದರಲ್ಲೊಂದು ಭಾಗದ ರಾಷ್ಟ್ರಕ್ಕೆ ತಾವು ಒಡೆಯರಾಗಿದ್ದರೂ ತಮ್ಮ ಬಲದಿಂದ ಇನ್ನೊಬ್ಬರ ರಾಜ್ಯವನ್ನು ಆಕ್ರಮಿಸಬೇಕೆಂಬ ಬುದ್ಧಿಯು ಇವರಿಗೆ ಉಂಟಾಗದೆ, ಆ ಬಲವನ್ನು ಉಳಿದ ರಾಜ್ಯಗಳ ರಕ್ಷಣೆಗಾಗಿ ಉಪಯೋಗಿಸುತ್ತಿದ್ದುದೇ ಇವರು ಸಜ್ಜನರೂ ಶಾಂತರೂ ಎಂಬುವದಕ್ಕೆ ಹೆಗ್ಗುರುತು. ಇವರ ಮೃತದೇಹವು ಪದ್ಧತಿಯ ಪ್ರಕಾರ ಸಮಾಧಿಗೊಳಿಸಲ್ಪಟ್ಟಿತು. ಇಂತಹ ಮಹನೀಯರಾದ ಚಕ್ರವರ್ತಿಗಳವರು ಈ ಭೂಮಿಯನ್ನು ಬಿಟ್ಟು ಹೋದ ಅಪಾರವಾದ ದುಃಖವು ಇವರ ಉತ್ತರಾಧಿಕಾರಿಗಳಾದ ಎಂಟನೆಯ ಎಡ್ವರ್ಡ ಪ್ರಭುಗಳವರಿಂದ ನಿವಾರಣೆಯಾಗಲಿ ಎಂದೂ ಆ ಎಡ್ವರ್ಡ ಪ್ರಭುಗಳವರಿಗೆ ಮಹಾದೇವನು ಚಿರಾಯುರಾರೋಗ್ಯವನ್ನೂ ವಿಜಯವನ್ನೂ ಉಂಟು ಮಾಡಲಿ, ಎಂದೂ ಹಿಂದೂ ದೇಶದ ಪ್ರಜೆಗಳೆಲ್ಲರೂ ಮಹಾದೇವನನ್ನು ಪ್ರಾರ್ಥಿಸಬೇಕು.

## ತರುಣಕರ್ನಾಟಕ.

ವೀರಶೈವ ಸಮಾಜದವರು ತಮ್ಮ ಅಭಿಮಾನ ಅಥವಾ ಉದಾರ ದೃಷ್ಟಿಯನ್ನು ಹೊಂದಲಿಕ್ಕೆ ಯೋಗ್ಯವಾದ ಪತ್ರಿಕೆಗಳು ಯಾವವು ಎಂದು ತಿಳಿದಿರುವರೋ ಆ ವಿಷಯವು ಇನ್ನೂ ನಿರ್ಧಾರವಾದಂತೆ ತೋರಲಿಲ್ಲ

ಮೈಸೂರು ಸ್ಟಾರ್ ಪತ್ರಿಕೆಯು ಅನೇಕ ವರ್ಷಗಳು ತನ್ನ ಸೇವೆಯನ್ನು ಮಾಡಿ ಮುಳುಗಿ ಹೋದರೂ ನಿನ್ನ ಗತಿ ಏನು? ಎಂದು ವಿಚಾರಿಸುವವರೇ ಇಲ್ಲ.

ಈಗ ಹುಬ್ಬಳ್ಳಿಯ "ತರುಣಕರ್ನಾಟಕ" ಎಂಬ ದಿನ ಪತ್ರಿಕೆಯು ಬಹಳ ಮುಂದುವರಿದು ಕೆಲಸ ಮಾಡುತ್ತಾ ಯಶಸ್ವಿಯಾಗಿ ಇರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ಪತ್ರಿಕೆಯು ಜನಸೇವೆಯ ನೆವದಲ್ಲಿ ಸಾಲಮಾಡಿಕೊಂಡಿ ುವುದಾಗಿಯೂ ಈ ಸಾಲವು ಎರಡು ಮೂರು ಸಾವಿರಗಳವರೆವಿಗೂ ಆಗಿರುವುದಾಗಿಯೂ ತಿಳಿಯಬರುತ್ತದೆ ಸಾಮಾನ್ಯವಾಗಿ ಮುಂಬಯಿ ಕ್ರಾನಿಕಲ್ ಪತ್ರದಲ್ಲಿ ಈ ದಿನಕಾಣುವ ಇಂಗ್ಲಿಷಿನ ಸುದ್ದಿಗಳನ್ನು ತರುಣಕರ್ನಾಟಕದಲ್ಲಿ ಕನ್ನಡದಲ್ಲಿ ಈದಿನ ಬೆಳಗ್ಯೆನೇ ನೋಡಬಹುದು ಹೀಗೆ ಇಂಗ್ಲಿಷ ಪತ್ರಿಕೆಗೆ ಸ್ಪರ್ಧೆಯಾಗಿ ಕನ್ನಡಿಗರಲ್ಲಿ ವಿಷಯಗಳನ್ನು ತಿಳುಹುವುದಕ್ಕೆ ಈ ಪತ್ರಿಕೆಯವರು ಏರ್ಪಡಿಸಿಕೊಂಡು ಇರುವ ಸ್ಪೇಷಲ್ ತಾರು ಮುಂತಾದ್ದರಬಗ್ಯೆ ೧೫ ದಿನಗಳಿಗೆ ೭೦ ರೂಪಾಯಿ ಗಳಿಂದ ನೂರು ರೂಪಾಯಿಗಳವರೆವಿಗೂ ಖರ್ಚು ಬೀಳುತ್ತಿರುವಂತೆ ತಿಳಿಯುತ್ತದೆ. ಇಷ್ಟೆಲ್ಲ ಖರ್ಚು ಮಾಡಿ ನಡೆಸಲ್ಪಡುತ್ತಿರುವ ದಿನ ಪತ್ರಿಕೆ ೧೨೦೦-೧೫೦೦ಮಾತ್ರ ಖರ್ಚಾಗುತ್ತಿರುತ್ತವೆ. ಇಂಗ್ಲಿಷ, ಉಳಿದಭಾಷೆಗಳ ದಿನಪತ್ರಗಳು ಉಳಿದ ಕನ್ನಡಸೈನಿಕ ಪತ್ರಿಕೆಗಳು ಎಷ್ಟು ಖರ್ಚು ಆಗುತ್ತವೆ ಎಂಬುದನ್ನು ವಿಚಾರಿಸಿದಾಗ ಮಾತ್ರ, ವೀರಶೈವರಿಗೆ ಈ ಸಂಖ್ಯೆಯು ಬಹಳ ಕಡಿಮೆ ಎಂದು ತಿಳಿಯದೆ ಇರಲಾರದು. ಹೀಗಾದರೆ ಸಂಪಾದಕರ ಖರ್ಚೇನು? ಕಂಪಾಜಿಟರ ಸಂಬಳವೇನು? ಇವೆಲ್ಲಾ ವಿಷಯಗಳನ್ನು ಸಮಾಜದವರು ಗಮನಿಸಿದಂತೆಯೇ ತೋರುವುದಿಲ್ಲ. ಹೀಗಾಗಿ ತಿಂಗಳಿಗೆ ೧೦೦-೧೫೦ ರೂಪಾಯಿಗಳು ಕೊರತೆಬಿದ್ದು ಈಗ ಪತ್ರಿಕೆಯು ಎರಡು ಮೂರು ಸಾವಿರ ರೂಪಾಯಿಗಳ ಸಾಲಕ್ಕೆ ಗುರಿಯಾಗಿದೆ.

ಸ್ಪೆಷಲ್ ತಾರುಗಳನ್ನು ತರಿಸಿ ವಿಷಯಗಳನ್ನು ಪ್ರಕಟಿಸಿದರೂ ಅದಕ್ಕೆ ತಕ್ಕಂತೆ ಸಮಾಜವು ಮಾತ್ರ ಪ್ರಗತಿಯನ್ನು ಹೊಂದಿ ಇರುವುದಿಲ್ಲ

ವರ್ತಮಾನಗಳನ್ನು ತಿಳಿಯುವ ಹಿಗ್ಗು ಒಂದುಮಾತ್ರ ಒಡಮೂಡಿ ತೋರುತ್ತಿರುವದೇ ಹೊರತು ವೀರಶೈವ ಸಮಾಜದ ಪ್ರಗತಿಯು ಕೈಗಾರಿಕೆಯಲ್ಲಿ ವ್ಯಾಪಾರದಲ್ಲಿ, ಧಾರ್ಮಿಕದಲ್ಲಿ ಮುಂದಾಗಿ ಇತರರನ್ನು ಪ್ರೋತ್ಸಾಹಿಸುವ ರೀತಿಯಲ್ಲಿ ಉತ್ತಮದೆಸೆಯು ತೋರಿಬರುವದೇ ಇಲ್ಲ. ಇನ್ನು ಪತ್ರಿಕೆಯು ಸುಖದುಃಖವನ್ನು ವಿಚಾರಿಸುವದೆಲ್ಲಿಂದ ಬಂದೀತು? ಹೀಗಾಗಿ ಈ ಪತ್ರಿಕೆಯು ಮೆಲ್ಲಗೆ ಕುಂಟುತ್ತ ನಡೆಯುವ ಪ್ರಸಂಗವು ಬಂದಿರುತ್ತದೆ. ಮುಂದೆ ಯಾವಾಗ ನಿಲ್ಲುವದೋ ಎಂಬ ಭೀತಿಯನ್ನು ಉಂಟುಮಾಡುತ್ತ ಇದೆ. ಇಂತಹ ವಿಷಮ ಸಮಯಗಳಲ್ಲಿ ವೀರಶೈವ ಸಮಾಜದವರಿಗೆ ಕೆಲವು ಮಾತುಗಳನ್ನು ಒತ್ತಾಯಮಾಡಿ ಹೇಳಬೇಕಾಗಿದೆ. ರೈಲ್ವೇ ಸ್ಟೇಶನ್ ಇದ್ದ ಊರಿನಲ್ಲಿ ಇರುವ ವೀರಶೈವರು ಏಜಂಟರುಗಳನ್ನು ಏರ್ಪಡಿಸಿಕೊಂಡು ತಮಗೆ ಪತ್ರಿಕೆಗಳು ಹೆಚ್ಚಾಗಿ ಓದಲಿಕ್ಕೆ ಸಿಕ್ಕುವಂತೆ ಮಾಡಿಕೊಳ್ಳಬೇಕು. ಮುಂಬಯಿನಿಂದ ಬೆಂಗಳೂರು ಅಲ್ಲಿಂದ ಮೈಸೂರು ವರೆವಿಗೆ ಇರುವ ಎಲ್ಲಾ ಸ್ಟೇಶನ್‌ಗಳಲ್ಲಿಯೂ ಈ ರೀತಿ ಪತ್ರಿಕೆಗಳನ್ನು ತರಿಸಿಕೊಳ್ಳಬೇಕು. ಉಳಿದ ಕಡೆಗಳಲ್ಲಿಯೂ ಚಂದಾದಾರರು ಹೆಚ್ಚಾಗಬೇಕು. ಈ ಬಗ್ಗೆ ಸಮಾಜದವರು ಅತ್ಯವಶ್ಯಕ ಗಮನ ಕೊಡುವರೆಂದು ನಂಬುತ್ತೇವೆ.

ಇಲ್ಲದೆ ಸಮಾಜವು ಜಾಗೃತ ಅವಸ್ಥೆಯಲ್ಲಿ ಇಲ್ಲದಾಗ ಅವರಿಗಾಗಿ ಅಷ್ಟೊಂದು ಉಪಕಾರವೂ ತಕ್ಕುದ್ದಲ್ಲವೆಂದೇ ಭಾವಿಸಬೇಕಾಗಿದೆ. ಸ್ಪೆಶಲ್ ವರಿಗಾಗಿ ಏರ್ಪಡಾಗುತ್ತಿರುವ ವೆಚ್ಚವನ್ನು ಸಂಪೂರ್ಣವಾಗಿ ಕಡಿಮೆಮಾಡಿ ಇಂಗ್ಲಿಷ್ ಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಗಳನ್ನೇ ಮಾರನೆಯದಿನ ಕನ್ನಡಿಗರ ಗಮನಕ್ಕೆ ತರುವಂತೆ ಈ ಪತ್ರಿಕೆಯು ಪ್ರಯತ್ನಿಸಿದರೆ ಇದರ ವೆಚ್ಚದಭಾರವು ಎಷ್ಟೋ ಕಡಿಮೆಯಾಗಬಹುದು ಮುಖ್ಯವಾಗಿ ಪತ್ರಿಕೆಯು ಸುಸೂತ್ರವಾಗಿ ನಡೆಯಲಿ ಎಂಬ ಉದ್ದೇಶದಿಂದ ಹೀಗೆ ಬರೆಯಬೇಕಾಗಿದೆ. ಪತ್ರಿಕೆಗೆ ಅನುಕೂಲವು ದೊರೆವಷ್ಟು ಚಂದಾದಾರರಿಗೆ ಅನುಕೂಲವನ್ನು ಹೆಚ್ಚು ಹೆಚ್ಚು ದೊರಕಿಸುತ್ತಾ ಹೋಗುವುದರಲ್ಲಿ ನಮಗೂ ಬಹಳ ಸಂತೋಷವಿದೆ ಉಣಲಿಕ್ಕೆ ಗಂಜಿ ಸಿಕ್ಕದೆ ಇರುವಾಗ ಹೋಳಿಗೆಯನ್ನು ಬಯಸಿದಂತೆ ಆಗಬಾರದು. ಆದ್ದರಿಂದ ಈಪತ್ರಿಕಾಕರ್ತರೂ ಆದಷ್ಟು ಮಟ್ಟಿಗೆ ಖರ್ಚನ್ನು ಕಡಿಮೆ ಮಾಡುವ ಆಲೋಚನೆ ಮಾಡಿ ತಮ್ಮ ಸಾಲವನ್ನು ತೀರಿಸಿಕೊಂಡು ತಮ್ಮ ಉಪಕಾರವನ್ನು ಜನತೆಗೆ ತೋರಿಸಿ ಸೌಖ್ಯವಾಗಿ ಇರಲೆಂಬುದೇ ನಮ್ಮ ಹಾರೈಕೆಯಾಗಿದೆ.

## The Indian P. E. N.

ಈ ಹೆಸರಿನ ಒಂದು ಇಂಗ್ಲಿಷ್ ಮಾಸಪತ್ರಿಕೆಯು ಹೊರಡುತ್ತಾ ಇದೆ. ಇದರ ಒಂದು ಮಾಸಪತ್ರದ ಬೆಲೆಯು ಎರಡಾಣೆ ವಾರ್ಷಿಕ ಚಂದಾ ಒಂದು ರೂಪಾಯಿ ಎಂಟಾಣೆ ಮಾಡಾಂ ಸೋಫಿಯಾ ವಾಡಿಯಾ ಎಂಬುವವರು ಇದರ ಲೇಖಕರು.

*P. E. N.* ಎಂದರೆ-

*Poets, Playwrights, Editors, Essayists Novelists* ಹೀಗೆ ಐದು ವಿಧವಾದ ಜನರಿಂದ ಕೂಡಿದ ಒಂದು ಜಗತ್ತಿನ ಸಂಘ ಈ ಸಂಘದ ಇಂಡಿಯಾ (ಹಿಂದೂಸ್ಥಾನ) ಶಾಖೆಯು ಕಚೇರಿಯು ೨೨, ನಾರಾಯಣ ದಾಭೋಲ್‌ಕರ್ ರಸ್ತೆ, ಮಲಬಾರ್ ಹಿಲ್ ಮುಂಬಯಿ ಇಲ್ಲಿ ಇರುತ್ತದೆ ಇಲ್ಲಿಂದಲೇ ಸದರೀ ಪತ್ರಿಕೆಯು ಉಗಮವು ಉಂಟಾಗಿದೆ.

ಹಿಂದೂದೇಶದ ಎಲ್ಲಾ ಭಾಷೆಗಳ ಉನ್ನತಿ ಮತ್ತು ಆಯಾಭಾಷಾ ಕಾರರ ಅಭಿವೃದ್ಧಿ ಮುಂತಾದ ವಿಷಯಗಳು ಇದರಲ್ಲಿ ಸೇರಿಕೊಂಡಿವೆ

ಒಂದೆರಡು ವಿಷಯಗಳನ್ನು ವಾಚಕರ ಅವಗಾಹನೆಗೆ ತರಬೇಕೆಂದರೆ

ಜಾತಿಯ ವಿಷಯದಲ್ಲಿ ಹೀಗೆ ಬರೆದಿದೆ— "ಎಲೈ ಜಾತಿಯೇ ನಿನಗೆ ನಮಸ್ಕಾರ, ನೀನು ದುಃಖದ ಎರಡು ಹೊರೆಯನ್ನು ತರುತ್ತೀಯೆ, ಒಂದನೆಯದು ಪ್ರೀತಿಪಾತ್ರರನ್ನು ಬೇರ್ಪಡಿಸುವದು, ಎರಡನೆಯದು ಪ್ರೀತಿ ಇಲ್ಲದವರನ್ನು ಕೂಡಿಸುವುದು" ಎಂಬುದಾಗಿ ಒಂದು ಇಂಗ್ಲಿಷ್ ಪದ್ಯವಿದೆ.

ಇದರ ಇನ್ನೊಂದು ಸಂಚಿಕೆಯಲ್ಲಿ ಪುರಂದರದಾಸರು ಕನ್ನಡದಲ್ಲಿ ಪದ್ಯಗಳನ್ನು ರಚಿಸಿದವರಲ್ಲಿ ಮುಖ್ಯರೆಂದು ಹೇಳಿ ಅವರ ಗೀತಪದ್ಯಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿ ಇರುತ್ತದೆ.

ಕನ್ನಡ ಭಾಷೆಯ ವಿಷಯದಲ್ಲಿ ಬರೆಯಬೇಕಾದ ಅಂಶಗಳು ಅಥವಾ ಜಗತ್ತಿನವರು ತಿಳಿದುಕೊಳ್ಳಬೇಕಾದ ವಿಷಯಗಳು ಅನೇಕವಿದ್ದರೂ ಈ ಪತ್ರಿಕೆಯು ಅಲ್ಪ ಸ್ವಲ್ಪ ಪರಿಚಿತಿಯನ್ನಾದರೂ ಉಂಟುಮಾಡಿಕೊಡುತ್ತದೆ, ಎಂಬುದಕ್ಕೆ ಅಡ್ಡಿ ಏನೂ ಇಲ್ಲ. ಆದ್ದರಿಂದ ಇಂಗ್ಲಿಷ್ ಬಲ್ಲ ಹಿಂದೂ ದೇಶೀಯರು ಇದನ್ನು ಓದುವುದು ಅವಶ್ಯಕವೆಂದು ಹೇಳಬಹುದಾಗಿದೆ.

**ಪ್ರಕಾಶಕ, ಸದ್ಧರ್ಮ, ದೀಪಿಕೆ ಹಾವೇರಿ.**

# ೧೯೩೫ನೆಯ ಡಿಸೆಂಬರಿನಲ್ಲಿ ಪೂನಾ ಪಟ್ಟಣದಲ್ಲಿ ನಡೆದ ಹಿಂದೂ ಮಹಾ ಸಭೆಗೆ ಕಳುಹಿಸಿದ ಇಂಗ್ಲಿಷ್ ಲೇಖನದ ಮೂಲವು-

ಅಧ್ಯಕ್ಷರವರೇ ಮತ್ತು ಸಭ್ಯಮಹನೀಯರೆ:—

ಹಿಂದೂಸ್ಥಾನದ ಮುಖ್ಯಧ್ಯೇಯವಾದ ಧರ್ಮದ ಪ್ರಸಾರದಲ್ಲಿ ಮುಖ್ಯವೆನಿಸಿದ ಹಿಂದೂ ಮತವನ್ನು ಪ್ರಕಾಶಗೊಳಿಸುವ ಉದ್ದೇಶವು ಈ ಹಿಂದೂಮಹಾಸಭೆಯಲ್ಲಿ ಇರುವುದೆಂಬುದನ್ನು ತಿಳಿದು ನಾನು ಬಹಳವಾಗಿ ಸಂತೋಷಿಸುತ್ತೇನೆ.

ಧರ್ಮ ಶಬ್ದಕ್ಕೆ ಅನೇಕರು ಅನೇಕಾರ್ಥಗಳನ್ನು ಮಾಡುತ್ತಿದ್ದಾಗ್ಯೂ ಪೂರ್ವ ಮೀಮಾಂಸದಲ್ಲಿ ಹೇಳಲ್ಪಟ್ಟಂತೆ ಮಹಾದೇವನನ್ನು ಅನುಸರಿಸುವ ಮಾರ್ಗವೇ ಧರ್ಮ ಎಂಬುದನ್ನು ಎಲ್ಲಾ ಹಿಂದೂಗಳೂ ಒಪ್ಪುವುದರಲ್ಲಿ ಲೇಶವೂ ಅನುಮಾನವಿಲ್ಲವೆಂದು ಭಾವಿಸುತ್ತೇನೆ.

ಮಹಾದೇವನನ್ನು ತಿಳಿವುದು ಮತ್ತು ಅವನನ್ನು ಅನುಸರಿಸಿಕೊಂಡು ಹೋಗುವುದು ಈ ಜಗತ್ತಿನಲ್ಲಿ ಎಲ್ಲಾದೇಶಗಳವರೂಅಪೇಕ್ಷಿಸುವ ಕೆಲಸವಾಗಿದೆ. ಈ ದೆಸೆಯಿಂದಲೇ ಹಿಂದೂದೇಶವು ಪ್ರಪಂಚದಲ್ಲಿ ಅತ್ಯಂತನಾಗರಿಕತೆಯುಳ್ಳುದೆಂದು ತಿಳಿಯಲ್ಪಡುವ ಕಾಲದಲ್ಲಿ ತನ್ನ ಧರ್ಮ ಜ್ಞಾನವು ಶ್ರೇಷ್ಠವೆಂಬುದನ್ನು ಇತರರಿಗೂ ತೋರಿಸಿಕೊಟ್ಟಿತ್ತೆಂಬುದನ್ನು ಬಹುಶಃ ಇಡೀ ಭೂಮಿಯೇ ಒಪ್ಪುತ್ತಾ ಇದೆ.

ಈ ಕಾಲದಲ್ಲಿ ಅಂತಹ ಜ್ಞಾನವು ಜಗತ್ತಿನಲ್ಲೆಲ್ಲಾ ಹರಡಲ್ಪಡಬೇಕಾದುದೂ ಆಚರಿಸಲ್ಪಡಬೇಕಾದುದೂ ಅತ್ಯಂತ ಅವಶ್ಯ. ಹಿಂದೂ ಧರ್ಮದ ಪದ್ಧತಿಯನ್ನು ತಿಳಿಯಲಿಕ್ಕೆ ಹೋಗುವುದಾದರೆ ಅದು ಯಾವ ತರಹದ ಮನುಷ್ಯನನ್ನಾದರೂ ತನ್ನಲ್ಲಿ ಒಳಗೊಳ್ಳುವುದಕ್ಕೆ ಸಿದ್ಧವಾಗಿ ಇದೆ.

ಒಬ್ಬನು 'ಮಹಾದೇವನೇ ಇಲ್ಲ' ಎಂಬನಾಸ್ತಿಕವಾದವನ್ನು ಹೊಂದಿದ್ದರೂ ಕೂಡಾ ಹಿಂದೂ ಧರ್ಮಕ್ಕೆ ಸಂಬಂಧಿಸಲ್ಪಟ್ಟ ಚಾರ್ವಾಕನಾಗಿ ಇರಬಹುದು. ಒಬ್ಬನು ನಾನೇ ಮಹಾದೇವ ಎಂದು ಭಾವಿಸುವುದಾದರೆ ಅವನೂ ಕೂಡಾ ಉತ್ತರಮೀಮಾಂಸ ಶಾಸ್ತ್ರದ ಅಧಿಕಾರಿಯಾಗಿ ಬ್ರಹ್ಮವಿದ್ಯೆಯನ್ನು ತಿಳಿದಾಚರಿಸುವವನಾಗಿ ಇರಬಹುದು.

ಇಂತಹ ಹಿಂದೂಮತವು ಇದೂವರೆವಿಗೆಇಡೀ ಪ್ರಪಂಚದಲ್ಲೆಲ್ಲಾ ವ್ಯಾಪಿಸಿ, ಜಗತ್ತೆಲ್ಲಾ ಹಿಂದೂಮತದಿಂದಲೇ ತುಂಬಿ ತುಳುಕ ಬಹುದಾಗಿದ್ದಿತು. ಹಿಂದೂ ಜನರ ಸಂಕುಚಿತ ದೃಷ್ಟಿಯ ವರ್ತನೆಯಿಂದ ಹಿಂದೂ ಧರ್ಮಶಾಸ್ತ್ರವು ಮೂಲೆಗೆ ಬೀಳುವಂತೆ ಆಗಿರುವುದಲ್ಲದೆ ಈಗಿನ ವಿದ್ಯಾವಂತರಾದ ಹಿಂದೀಯರು ಕೂಡಾ ಹಿಂದೂ ಧರ್ಮವು ಶ್ರೇಷ್ಠವಲ್ಲವೆಂದು ಹೇಳುವಂತೆ ಆಗಿದೆ. ಹಿಂದೂಗಳಲ್ಲಿ ಇರುವ ಶೂದ್ರನು ಬ್ರಾಹ್ಮಣನಾಗಲಿಕ್ಕೆ ಶಾಸ್ತ್ರವು ಒಪ್ಪಿಗೆಕೊಡುತ್ತಿದ್ದಾಗ್ಯೂ ಅದನ್ನು ಮೀರಿ ಶೂದ್ರನು ಬ್ರಾಹ್ಮಣನಾಗಲಿಕ್ಕೆ ಬರುವುದಿಲ್ಲ, ಎಂದು ಜಾತಿಗಳ ಕಟ್ಟುಗಳನ್ನು ಏರ್ಪಡಿಸಿಕೊಂಡುದೇ ಈ ಅನರ್ಥಕ್ಕೆ ಕಾರಣವಾಗಿದೆ ಸಾವಿರಾರುವರ್ಷಗಳ ಪೂರ್ವದಲ್ಲಿ ಹೆಚ್ಚು ಖರ್ಚುಉಳ್ಳ ರೀತಿಯಲ್ಲಿ ಯಜ್ಞ ಯಾಗಾದಿಗಳನ್ನೂ ಅನೇಕ ದೇವತೆಗಳ ಆಡಂಬರದ ಪೂಜೆಗಳನ್ನೂ ಶ್ರಾದ್ಧಾದಿಕರ್ಮನ್ನೂ ಇನ್ನೂಅನೇಕ ನಿಷ್ಪ್ರಯೋಜಕ ಕರ್ಮಗಳನ್ನೂ ಹಿಂದೂಗಳು ನಿರ್ಬಂಧವಾಗಿ ಏರ್ಪಡಿಸಿಕೊಂಡುದೇ ಬೌದ್ಧ ಜೈನಮತಗಳು ಹಿಂದೂದೇಶದಲ್ಲಿ ವ್ಯಾಪಿಸಲಿಕ್ಕೆ ಅವಕಾಶವಾಯಿತು. ಇದಲ್ಲದೆ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ಅಂಗೀಕರಿಸದೆ ಅವನ್ನು ಮೀರಿದ ಅತಿವರ್ಣವೆಂಬುದೊಂದು ಹಿಂದೂ ಮತದಲ್ಲಿಯೇ ಸೇರಿಕೊಂಡಿವೆ, ಇದರಂತೆಯೇ ಅತ್ಯಾಶ್ರಮವೆಂಬುದೂ ಒಂದಿದೆ. ಈ ಅತಿವರ್ಣಾಶ್ರಮಗಳನ್ನು ಅನುಸರಿಸುವವರಿಗೆ ಉಳಿದ ನಾಲ್ಕು ವರ್ಣಾಶ್ರಮಗಳ ತೊಂದರೆಯೇ ಇಲ್ಲ. ಇವರು ನಾರದ ಪರಿವ್ರಾಜಕ ಉಪನಿಷತ್ತು ಆರನೆಯ ಉಪದೇಶ ೧೦ ನೆಯ ಶ್ಲೋಕದಲ್ಲಿ ಹೇಳಿದಂತೆ

ವರ್ಣಾಶ್ರಮಾದಯೋ ದೇಹೇ ಮಾಯಯಾ ಪರಿಕಲ್ಪಿತಾಃ

ತಾತ್ಪರ್ಯ.

ವರ್ಣ ಆಶ್ರಮ ಮೊದಲಾದವುಗಳನ್ನು ದೇಹದಲ್ಲಿ ಮಾಯೆಯಿಂದ ಕಲ್ಪಿಸುತ್ತಾರೆ. ಎಂಬುದಾಗಿಯೂ,

ಮೈತ್ರೇಯಿ ಉಪನಿಷತ್ ೧ ನೆಯಅಧ್ಯಾಯ೧೩ ನೆಯ ಶ್ಲೋಕದಲ್ಲಿಹೇಳಿದಂತೆ

ವರ್ಣಾಶ್ರಮಾಚಾರಯುತಾ ವಿಮೂಢಾಃ ಕರ್ಮಾನುಸಾರೇಣಫಲಂ ಲಭಂತೇ
ವರ್ಣಾದಿ ಧರ್ಮಂಹಿಪರಿತ್ಯಜಂತಃ ಸ್ವಾನಂದ ತೃಪ್ತಾಃ ಪುರುಷಾಭವಂತಿ

ತಾತ್ಪರ್ಯ.

ವರ್ಣಾಶ್ರಮಾಚಾರಗಳಿಂದ ಕೂಡಿದ ಮೂಢರು ತಮ್ಮ ಕರ್ಮಕ್ಕೆಸರಿಯಾದಫಲವನ್ನು ಹೊಂದುತ್ತಾರೆ. ವರ್ಣಾಶ್ರಮಾದಿ ಧರ್ಮಗಳನ್ನು ಬಿಡುವವ

ರು ತಮ್ಮ(ಆತ್ಮನ)ಆನಂದದಲ್ಲಿ ತೃಪ್ತರಾದಪುರುಷರು ಆಗುತ್ತಾರೆ, ಎಂಬುವಾಗಿಯೂ ಒಪ್ಪತಕ್ಕವರು ಆಗಿದ್ದಾರೆ.

ಹೀಗೆ ಅತಿವರ್ಣಾಶ್ರಮಿಯಾಗಿ ಆಗುವುದಕ್ಕೆ ನಿರಾಕಾರ ವಸ್ತುವನ್ನು ಪೂಜ್ಯವನ್ನಾಗಿಯೂ ಆಸ್ವರೂಪವಾಗಿಯೂ ತಿಳಿಯುವುದೇ ಮುಖ್ಯ ಕಾರಣವಾಗಿದೆ.

ಇಂಥ ಅತಿವರ್ಣಾಶ್ರಮುವನ್ನು ಹಿಂದೂಗಳು ಪ್ರಚಾರಕ್ಕೆ ತರುವುದನ್ನು ಬಿಟ್ಟದ್ದರ ದೆಸೆಯಿಂದಲೇ ಹಿಂದೂಗಳು ಬಹಳ ಹಿಂದೆ ಬೀಳುತ್ತಾ ಇದ್ದಾರೆ ನಿರಾಕಾರನಾದ ಮಹಾದೇವನನ್ನು ನಂಬಿದವನಿಗೆ ಬ್ರಾಹ್ಮಣಾದಿ ವರ್ಣಭೇದಗಳ ಗೋಜೇ ಇಲ್ಲ. ಅತನು ಸ್ವತಂತ್ರನಾಗಿ ಇರಲಿಕ್ಕೆ ಅವಕಾಶವಿದೆ, ಈ ಅತಿವರ್ಣಾಶ್ರಮದ ಪ್ರಚಾರವು ಹೆಚ್ಚಾದ ಹಾಗೆಲ್ಲಾ ಹಿಂದೂಮತದ ಕಡೆಗೆ ಜನರ ಒಲುಮೆಯು ಹೆಚ್ಚಾಗಿ ಆಗುವುದರಲ್ಲಿ ಏನೂ ಸಂಶಯವಿಲ್ಲ.

ಈ ಅತಿವರ್ಣಾಶ್ರಮ ವು ಶ್ರೇಷ್ಠವು, ಇದು ಬ್ರಾಹ್ಮಣಾದಿ ವರ್ಣಗಳನ್ನೂ, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನೂ ಮೀರಿದುದು ಎಂಬದಕ್ಕೆ ಕೆಳಗೆ ಕಂಡ ಉದಾಹರಣೆಗಳೂ ಇವೆ.

ಯಃ ಶರೀರೇಂದ್ರಿಯಾದಿಭ್ಯೋವಿಹೀನಂಸರ್ವ ಸಾಕ್ಷಿಣಂ
ಪಾರಮಾರ್ಥಿಕವಿಜ್ಞಾನಂ ಸುಖಾತ್ಮಾನಂಸ್ವಯಂಪ್ರಭಂ
ಪರತತ್ವಂ ವಿಜಾನಾತಿ ಸೋತಿವರ್ಣಾಶ್ರಮೀ ಭವೇತ್

.........

ಇತಿಯೋವೇದ ವೇದಾಂತೈ ಸ್ಸೋತಿ ವರ್ಣಾಶ್ರಮೀಭವೇತ್|
ಯಸ್ಯ ವರ್ಣಾಶ್ರಮಾ ಚಾರೋಗಲಿತಃ ಸ್ವಾತ್ಮದರ್ಶನಾತ್
ಸವರ್ಣಾನಾಶ್ರಮಾನ್ ಸರ್ವಾನ್ಅತೀತ್ಯ ಸ್ವಾತ್ಮನಿ ಸ್ಥಿತಃ|
ಯೋತೀತ್ಯ ಸ್ವಾಶ್ರಮಾನ್ವರ್ಣಾನ್ಆತ್ಮನ್ಯೇವಸ್ಥಿತಃ ಪುಮಾನ್
ಸೋತಿ ವರ್ಣಾಶ್ರಮೀ ಪ್ರೋಕ್ತಃ ಸರ್ವ ವೇದಾರ್ಥವೇದಿಭಿಃ
ತಸ್ಮಾದನ್ಯಗತಾವರ್ಣಾ ಆಶ್ರಮಾ ಅಪಿನಾರದ
ಆತ್ಮನ್ಯಾರೋಪಿತಾಃ ಸರ್ವೇ ಭ್ರಾಂತ್ಯಾ ತೇನಾತ್ಮ ವೇದಿನಾ
ನವಿಧಿರ್ನ ನಿಷೇಧಶ್ಚ ನ ವರ್ಜ್ಯಾ ವರ್ಜ್ಯ ಕಲ್ಪನಾ
ಬ್ರಹ್ಮವಿಜ್ಞಾನಿನಾಮಸ್ತಿ ತಥಾನ್ಯಚ್ಚ ನಾರದ

ತಾತ್ಪರ್ಯ.

ಶರೀರ ಇಂದ್ರಿಯಗಳಿಲ್ಲದವನಾಗಿ, ಸರ್ವವನ್ನೂ ನೋಡತಕ್ಕವನಾ

ಇಂತಹ ಹಿಂದೂಮತವು ಇದೂವರೆವಿಗೆಇಡೀ ಪ್ರಪಂಚದಲ್ಲೆಲ್ಲಾ
ವ್ಯಾಪಿಸಿ, ಜಗತ್ತೆಲ್ಲಾ ಹಿಂದೂಮತದಿಂದಲೇ ತುಂಬಿ ತುಳುಕ ಬಹುದಾ
ಗಿದ್ದಿತು. ಹಿಂದೂ ಜನರ ಸಂಕುಚಿತ ದೃಷ್ಟಿಯ ವರ್ತನೆಯಿಂದ ಹಿಂದೂ
ಧರ್ಮಶಾಸ್ತ್ರವು ಮೂಲೆಗೆ ಬೀಳುವಂತೆ ಆಗಿರುವುದಲ್ಲದೆ ಈಗಿನ ವಿದ್ಯಾ
ವಂತರಾದ ಹಿಂದೀಯರು ಕೂಡಾ ಹಿಂದೂ ಧರ್ಮವು ಶ್ರೇಷ್ಠವಲ್ಲವೆಂದು
ಹೇಳುವಂತೆ ಆಗಿದೆ. ಹಿಂದೂಗಳಲ್ಲಿ ಇರುವ ಶೂದ್ರನು ಬ್ರಾಹ್ಮಣನಾಗಲಿ
ಕ್ಕೆ ಶಾಸ್ತ್ರವು ಒಪ್ಪಿಗೆಕೊಡುತ್ತಿದ್ದಾಗ್ಯೂ ಅದನ್ನು ಮೀರಿ ಶೂದ್ರನು
ಬ್ರಾಹ್ಮಣನಾಗಲಿಕ್ಕೆ ಬರುವುದಿಲ್ಲ, ಎಂದು ಜಾತಿಗಳ ಕಟ್ಟುಗಳನ್ನು ಏ
ರ್ಪಡಿಸಿಕೊಂಡುದೇ ಈ ಅನರ್ಥಕ್ಕೆ ಕಾರಣವಾಗಿದೆ ಸಾವಿರಾರುವರ್ಷಗ
ಳ ಪೂರ್ವದಲ್ಲಿ ಹೆಚ್ಚು ಖರ್ಚುಉಳ್ಳ ರೀತಿಯಲ್ಲಿ ಯಜ್ಞ ಯಾಗಾದಿಗಳ
ನ್ನೂ ಅನೇಕ ದೇವತೆಗಳ ಆಡಂಬರದ ಪೂಜೆಗಳನ್ನೂ ಶ್ರಾದ್ಧಾದಿಕರ್ಮ
ನ್ನೂ ಇನ್ನೂಅನೇಕ ನಿಷ್ಪ್ರಯೋಜಕ ಕರ್ಮಗಳನ್ನೂ ಹಿಂದೂಗಳು ನಿ
ರ್ಬಂಧವಾಗಿ ಏರ್ಪಡಿಸಿಕೊಂಡುದೇ ಬೌದ್ಧ ಜೈನಮತಗಳು ಹಿಂದೂದೇ
ಶದಲ್ಲಿ ವ್ಯಾಪಿಸಲಿಕ್ಕೆ ಅವಕಾಶವಾಯಿತು. ಇದಲ್ಲದೆ ಬ್ರಾಹ್ಮಣಾದಿ ನಾ
ಲ್ಕು ವರ್ಣಗಳನ್ನು ಅಂಗೀಕರಿಸದೆ ಅವನ್ನು ಮೀರಿದ ಅತಿವರ್ಣವೆಂಬು
ದೊಂದು ಹಿಂದೂ ಮತದಲ್ಲಿಯೇ ಸೇರಿಕೊಂಡಿವೆ, ಇದರಂತೆಯೇ ಅತ್ಯಾ
ಶ್ರಮವೆಂಬುದೂ ಒಂದಿದೆ. ಈ ಅತಿವರ್ಣಾಶ್ರಮಗಳನ್ನು ಅನುಸರಿಸುವ
ವರಿಗೆ ಉಳಿದ ನಾಲ್ಕು ವರ್ಣಾಶ್ರಮಗಳ ತೊಂದರೆಯೇ ಇಲ್ಲ, ಇವರು
ನಾರದ ಪರಿವ್ರಾಜಕ ಉಪನಿಷತ್ತು ಆರನೆಯ ಉಪದೇಶ ೧೦ ನೆಯ
ಶ್ಲೋಕದಲ್ಲಿ ಹೇಳಿದಂತೆ

ವರ್ಣಾಶ್ರಮಾದಯೋ ದೇಹೇ ಮಾಯಯಾ ಪರಿಕಲ್ಪಿತಾಃ

ತಾತ್ಪರ್ಯ.

ವರ್ಣ ಆಶ್ರಮ ಮೊದಲಾದವುಗಳನ್ನು ದೇಹದಲ್ಲಿ ಮಾಯೆಯಿಂದ ಕಲ್ಪಿ
ಸುತ್ತಾರೆ. ಎಂಬುದಾಗಿಯೂ,

ಮೈತ್ರೇಯಿ ಉಪನಿಷತ್ ೧ ನೆಯಅಧ್ಯಾಯ೧೩ ನೆಯ ಶ್ಲೋಕದಲ್ಲಿಹೇಳಿದಂತೆ
ವರ್ಣಾಶ್ರಮಾಚಾರಯುತಾವಿಮೂಢಾಃಕರ್ಮಾನುಸಾರೇಣಫಲಂಲಭಂತೇ
ವರ್ಣಾದಿ ಧರ್ಮಂಹಿಪರಿತ್ಯಜಂತಃ ಸ್ವಾನಂದ ತೃಪ್ತಾಃ ಪುರುಷಾಭವಂತಿ

ತಾತ್ಪರ್ಯ.

ವರ್ಣಾಶ್ರಮಾಚಾರಗಳಿಂದ ಕೂಡಿದ ಮೂಢರು ತಮ್ಮ ಕರ್ಮಕ್ಕೆಸರಿಯಾ
ದಫಲವನ್ನು ಹೊಂದುತ್ತಾರೆ. ವರ್ಣಾಶ್ರಮಾದಿ ಧರ್ಮಗಳನ್ನು ಬಿಡುವವ

ದ ತನ್ನ(ಆತ್ಮನ)ಆನಂದದಲ್ಲಿ ತೃಪ್ತರಾದ ಪುರುಷರು ಆಗುತ್ತಾರೆ,
ಎಂಬುದಾಗಿಯೂ ಒಪ್ಪತಕ್ಕವರು ಆಗಿದ್ದಾರೆ.

ಹೀಗೆ ಅತಿವರ್ಣಾಶ್ರಮಿಯಾಗಿ ಆಗುವುದಕ್ಕೆ ನಿರಾಕಾರ ವಸ್ತುವನ್ನ ಪೂಜ್ಯವನ್ನಾಗಿಯೂ ಆತ್ಮರೂಪವಾಗಿಯೂ ತಿಳಿಯುವುದೇ ಮುಖ್ಯ ಕಾರಣವಾಗಿದೆ.

ಇಂಥ ಅತಿವರ್ಣಾಶ್ರಮವನ್ನು ಹಿಂದೂಗಳು ಪ್ರಚಾರಕ್ಕೆ ತರುವುದನ್ನು ಬಿಟ್ಟದ್ದರ ದೆಸೆಯಿಂದಲೇ ಹಿಂದೂಗಳು ಬಹಳ ಹಿಂದೆ ಬೀಳುತ್ತಾ ಇದ್ದಾರೆ ನಿರಾಕಾರನಾದ ಮಹಾದೇವನನ್ನು ನಂಬಿದವನಿಗೆ ಬ್ರಾಹ್ಮಣಾದಿ ವರ್ಣಭೇದಗಳ ಗೋಜೇ ಇಲ್ಲ. ಅತನು ಸ್ವತಂತ್ರನಾಗಿ ಇರಲಿಕ್ಕೆ ಅವಕಾಶವಿದೆ, ಈ ಅತಿವರ್ಣಾಶ್ರಮದ ಪ್ರಚಾರವು ಹೆಚ್ಚಾದ ಹಾಗೆಲ್ಲಾ ಹಿಂದೂಮತದ ಕಡೆಗೆ ಜನರ ಒಲುಮೆಯು ಹೆಚ್ಚಾಗಿ ಆಗುವುದರಲ್ಲಿ ಏನೂ ಸಂಶಯವಿಲ್ಲ.

ಈ ಅತಿವರ್ಣಾಶ್ರಮವು ಶ್ರೇಷ್ಠವು, ಇದು ಬ್ರಾಹ್ಮಣಾದಿ ವರ್ಣಗಳನ್ನೂ, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನೂ ಮೀರಿದುದು ಎಂಬದಕ್ಕೆ ಕೆಳಗೆ ಕಂಡ ಉದಾಹರಣೆಗಳೂ ಇವೆ.

ಯಃ ಶರೀರೇಂದ್ರಿಯಾದಿಭ್ಯೋ ವಿಹೀನಂ ಸರ್ವ ಸಾಕ್ಷಿಣಂ
ಪಾರಮಾರ್ಥಿಕವಿಜ್ಞಾನಂ ಸುಖಾತ್ಮಾನಂ ಸ್ವಯಂಪ್ರಭಂ
ಪರತತ್ವಂ ವಿಜಾನಾತಿ ಸೋತಿವರ್ಣಾಶ್ರಮೀ ಭವೇತ್

.........

ಇತಿಯೋವೇದ ವೇದಾಂತ್ಯೈ ಸ್ಸೋತಿ ವರ್ಣಾಶ್ರಮೀಭವೇತ್|
ಯಸ್ಯ ವರ್ಣಾಶ್ರಮಾ ಚಾರೋಗಲಿತಃ ಸ್ವಾತ್ಮದರ್ಶನಾತ್
ಸವರ್ಣಾನಾಶ್ರಮಾನ್ ಸರ್ವಾನ್ ಅತೀತ್ಯ ಸ್ವಾತ್ಮನಿ ಸ್ಥಿತಃ|
ಯೋತೀತ್ಯ ಸ್ವಾಶ್ರಮಾನ್ ವರ್ಣಾನ್ ಆತ್ಮನ್ಯೇವಸ್ಥಿತಃ ಪುಮಾನ್
ಸೋತಿ ವರ್ಣಾಶ್ರಮೀ ಪ್ರೋಕ್ತಃ ಸರ್ವ ವೇದಾರ್ಥವೇದಿಭಿಃ
ತಸ್ಮಾದನ್ಯಗತಾವರ್ಣಾ ಆಶ್ರಮಾ ಅಪಿನಾರದ
ಆತ್ಮನ್ಯಾರೋಪಿತಾಃ ಸರ್ವೇ ಭ್ರಾಂತ್ಯಾ ತೇನಾತ್ಮ ವೇದಿನಾ
ನವಿಧಿರ್ನ ನಿಷೇಧಶ್ಚ ನ ವರ್ಜ್ಯಾವರ್ಜ್ಯ ಕಲ್ಪನಾ
ಬ್ರಹ್ಮವಿಜ್ಞಾನಿನಾಮಸ್ತಿ ತಥಾನ್ಯಚ್ಚ ನಾರದ

ತಾತ್ಪರ್ಯ.

ಶರೀರ ಇಂದ್ರಿಯುಗಳಿಲ್ಲದವನಾಗಿ, ಸರ್ವವನ್ನೂ ನೋಡತಕ್ಕವನಾ

ಗಿ ಪರಮಾರ್ಥದಿಂದ ತಿಳಿಯಲ್ಪಡತಕ್ಕವನಾಗಿ, ಸುಖಾತ್ಮನಾಗಿ ತಾನಾಗಿ ಬೆಳಗತಕ್ಕವನಾಗಿ ಇರುವ ಪರತತ್ವವನ್ನು ಯಾವನು ತಿಳಿಯುತ್ತಾನೆಯೋ ಅವನು ಅತಿವರ್ಣಿ, ಅತ್ಯಾಶ್ರಮಿ ಆಗಿರುತ್ತಾನೆ.

..........

ವೇದಾಂತಗಳಿಂದ ಹೀಗೆ ಯಾರು ತಿಳಿಯುತ್ತಾರೋ ಅವರು ಅತಿವರ್ಣಾಶ್ರಮಿಗಳು ಆಗಿರುತ್ತಾರೆ. ಯಾವನಿಗೆ ತನ್ನ ಆತ್ಮ (ತನ್ನಲ್ಲಿ ಶಿವರೂಪ) ದರ್ಶನದಿಂದ ವರ್ಣಾಶ್ರಮಾಚಾರಗಳು ಕಳಚಿಹೋಗಿರುತ್ತವೆಯೋ ಅವನು ಎಲ್ಲಾ ವರ್ಣಗಳನ್ನೂ ಆಶ್ರಮಗಳನ್ನೂ ಮೀರಿ ತನ್ನ ಆತ್ಮನಲ್ಲಿಯೇ (ಶಿವರೂಪದಲ್ಲಿಯೇ )ಇರತಕ್ಕವನು. ಯಾವನು ತನ್ನ ಆಶ್ರಮಗಳನ್ನೂ ವರ್ಣಗಳನ್ನೂ ಮೀರಿ ಆತ್ಮನಲ್ಲಿಯೇ (ತನ್ನಲ್ಲಿಯೇ= ಬ್ರಹ್ಮನಲ್ಲಿಯೇ= ಶಿವನಲ್ಲಿಯೇ ಕೂಡಿರುವವನಾಗಿಶ್ರೇಷ್ಠನಾಗಿರುವನೋಅವನು ಸಮಸ್ತವೇದಗಳ ಅರ್ಥವನ್ನು ತಿಳಿದವರಿಂದ ಅತಿವರ್ಣಾಶ್ರಮಿ ಎಂದು ಹೇಳಲ್ಪಡುತ್ತಾನೆ. ಆದ್ದರಿಂದ ಆತ್ಮನಿಗಿಂತ ಬೇರೆಯಾಗಿ ಇರುವ ವರ್ಣಗಳಾಗಲೀ ಆಶ್ರಮಗಳಾಗಲೀ ಆತ್ಮನಲ್ಲಿ(ಮನುಷ್ಯನಲ್ಲಿ)ಭ್ರಾಂತಿಯಿಂದ ಆರೋಪಿಸಲ್ಪಟ್ಟಿವೆ,ಎಂದು ಆತ್ಮವೇದಿಗಳು(ಸ್ವಸ್ವರೂಪಬ್ರಹ್ಮಜ್ಞಾನಿಗಳು=ಅಂಗಲಿಂಗ ಸಾಮರಸ್ಯವುಳ್ಳವರು)ತಿಳಿಯುತ್ತಾರೆ. ಇಂತಹ ಬ್ರಹ್ಮಜ್ಞಾನಿಗಳಿಗೆ ವಿಧಿ, ನಿಷೇಧ, ವರ್ಜ್ಯ (ಬಿಡಲ್ಪಡತಕ್ಕದ್ದು.) ಅವರ್ಜ್ಯ, ಇದರಂತೆ ಉಳಿದ ಯಾವುದಾದರೂ ಕಲ್ಪನೆಯು ಇರುವುದಿಲ್ಲ ನಾರದನೇ ಕೇಳು.

(ಹೀಗೆ ನಾರದ ಪರಿವ್ರಾಜಕ ಉಪನಿಷತ್ತಿನಲ್ಲಿ ಇದೆ.)

ಈ ಅತಿವರ್ಣಾಶ್ರಮವು ಶ್ರೇಷ್ಠವೆಂಬುದನ್ನೇ ಕರ್ನಾಟಕದಲ್ಲಿ ಪ್ರಸಿದ್ಧನಾದ ಬಸವೇಶ್ವರನು ೧೨ನೆಯ ಶತಮಾನದಲ್ಲಿ ಬೋಧಿಸಿದನು. ಈ ಅತಿವರ್ಣವು ಎಲ್ಲರನ್ನೂ ಸಮಾನಸ್ಥಿತಿಯಲ್ಲಿ ಇರಿಸುವುದು ಅತಿವರ್ಣವೆಂದರೆ ವರ್ಣಗಳನ್ನೊಲ್ಲದೆ ಮನಸ್ಸು ಬಂದ ಹಾಗೆ ಇರುವುದಲ್ಲ ಇದಕ್ಕೂ ಕೆಲವು ಲಕ್ಷಣಗಳಿವೆ. ಈ ಲಕ್ಷಣಗಳು ಸಂಸ್ಕಾರದಿಂದ ಆಗಬೇಕು

ಈಗ ಬ್ರಾಹ್ಮಣ ಮೊದಲಾದ ನಾಲ್ಕು ವರ್ಣಗಳನ್ನು ಬಿಟ್ಟುಬಿಡಬೇಕೆಂದು ಇವು ರಾಷ್ಟ್ರದ ಪ್ರಗತಿಗೆ ಹಾನಿಕಾರಕವೆಂದೂ ಈನಾಲ್ಕು ವರ್ಣಗಳು ಈಗ ಕ್ರಮವಾಗಿ ನಡೆಯುತ್ತಾ ಇಲ್ಲವೆಂತಲೂ ರಾಷ್ಟ್ರದ ಮುಂದಾಳುಗಳಾದ ಮೋಹನದಾಸ್ ಕರಮಚಂದ್ ಗಾಂಧೀಜಿಯವರು ೧೬--೧೧--೩೫ ನೆಯ ಹರಿಜನ ಪತ್ರಿಕೆಯಲ್ಲಿ ಬರೆದಿರುತ್ತಾರೆ. ಆದರೆ ಹೀಗೆ ವರ್ಣಗಳನ್ನು ಬಿಡುವಕಾಲದಲ್ಲಿಯಾದರೂ ಈ ಅತಿವರ್ಣ

ವನ್ನು ಜನರು ಮನಃಪೂರ್ತಿಯಾಗಿ ಆಲೋಚಿಸಿ ಹೊಂದುವುದು ಒಳ್ಳೆಯದು.

ಬಸವೇಶ್ವರನು ಬೋಧಿಸಿದ ಅತಿವರ್ಣಕ್ಕೆ 'ವೀರಶೈವ' ಎಂದು ಕರೆಯುತ್ತಾರೆ. ಇದರಲ್ಲಿ ಬ್ರಾಹ್ಮಣರು ಮೊದಲಾಗಿ ಎಲ್ಲಾ ವರ್ಣದವರೂ ಸೇರಬಹುದು. ಎಲ್ಲರೂ ಒಂದೇ ಸಮಾನರು, ಎಂಬಭಾವನೆಯಿಂದ ನಡೆದುಕೊಳ್ಳಬಹುದು. ಸೂತಕಗಳು ಶ್ರಾದ್ಧಗಳು ಇವುಗಳ ಬಾಧೆಇಲ್ಲ. ಯಜ್ಞಯಾಗಾದಿಗಳನ್ನು ಮಾಡಬೇಕಾದ.ದಿಲ್ಲ. ಶ್ರೀ ಅರವಿಂದ ಘೋಷರವರು ವಿವರಿಸಿದ ಪೂರ್ಣಯೋಗದ ಅಭಿಪ್ರಾಯವು ಇದರಲ್ಲಿ ನೆಲೆಗೊಂಡಿದೆ.

ಇದು 'ಅಹಂಬ್ರಹ್ಮಾಸ್ಮಿ' 'ಸೋಹಂ' ಶಿವೋಹಂ ಎಂಬಅಭಿಪ್ರಾಯವನ್ನುಅನುಸರಿಸಿಕೊಂಡು ನಡೆಯುವ ಪದ್ಧತಿಯುಳ್ಳದು ಮನುಷ್ಯನು ಹೀಗೆ ಹೇಳಿಕೊಂಡು ನಡೆವುದಕ್ಕೆ ಬರುತ್ತದೆ. ಹಿಂದೆ ಹೀಗೆನಡೆದಿದ್ದಾರೆ ಕನ್ನಡದಲ್ಲಿ ಇರುವ ಬಸವೇಶ್ವರ ವಚನ ಮೊದಲಾದ ಶರಣರ ವಚನಗಳನ್ನು ಓದುವುದರಿಂದ ಈ ವಿಷಯುಗಳು ಚನ್ನಾಗಿ ಮನನವಾಗುತ್ತವೆ.

ಹಿಂದೂ ಮಹಾಸಭೆಯುವರು ಈಗ ಮಾಡತಕ್ಕ ಕೆಲಸಗಳು ಬಹಳವಾಗಿ ಇವೆ. ಹಾಗೆ ಮಾಡುವುದರಿಂದ ಹಿಂದೂ ಮತವು ಜಗತ್ತಿನೊಳಗೆಲ್ಲಾ ವ್ಯಾಪಿಸಬಹುದಾಗಿದೆ.

೧ ಅತಿವರ್ಣವನ್ನು ಪ್ರಚಾರ ಮಾಡುವುದು

೨ ಹಿಂದೂ ಮತದ ಎಲ್ಲಾ ಭಾಗಗಳನ್ನು ಬೋಧಿಸತಕ್ಕ ಒಂದುಶಾಲೆಯುನ್ನು ಏರ್ಪಡಿಸುವುದು

೩ ಹಿಂದೂ ಮತವು ಪ್ರಪಂಚದ ಜನರಿಗೆಲ್ಲಾ ಆಕರ್ಷಕವಾಗುವಂತೆ ಅದರ ತತ್ವಗಳನ್ನು ಪ್ರಚಾರಪಡಿಸುವುದು.

೪ ಆರ್ಯಸಮಾಜದವರು ಏರ್ಪಡಿಸಿ ಇರುವಂತೆ ಜಗತ್ತಿನ ನಾನಾ ಕಡೆಗಳಲ್ಲಿ ಹಿಂದೂಮತದ ಶಾಖೆಗಳನ್ನು ಏರ್ಪಡಿಸುವುದು.

೫ ಮೊದಲಿನ ನಾಲ್ಕು ವರ್ಣಾಶ್ರಮಗಳ ಕಟ್ಟುಗಳನ್ನು ಸಡಿಲ ಮಾಡಿ ತಕ್ಕ ಯೋಗ್ಯತೆಯುಳ್ಳವರು ಬೇಕಾದ ವರ್ಣದಲ್ಲಿ ಇರಬಹುದೆಂದು ಗೊತ್ತುಮಾಡುವುದು. ಯಾವನೊಬ್ಬ ಮನುಷ್ಯನಿಗಾದರೂ ಇದುಮುಕ್ತದ್ವಾರ (ತೆರೆಯಲ್ಪಟ್ಟ ಬಾಗಿಲು) ಉಳ್ಳದು ಎಂಬುದನ್ನು ಪ್ರಚಾರಪಡಿಸುವುದು.

೬ ಮುಖ್ಯವಾಗಿ ದ್ವೈತ, ಅದ್ವೈತ, ಈ ಎರಡು ಸಂಗಡಗಳಲ್ಲಿ ಎ

ಲ್ಲ ಹಿಂದೂಗಳೂ ಸೇರುವಂತೆ ಏರ್ಪಡಿಸುವುದು

೭ ಮಾಂಸಾಹಾರಿಗಳು, ಶಾಕಾಹಾರಿಗಳು ಎಂಬ ಎರಡು ಭಾಗಗಳು ಇರುವಂತೆ ಏರ್ಪಡಿಸುವುದು.

೮ ಹಿಂದೂಶಾಸ್ತ್ರವು ಒಂದೇ ಗುರಿಯನ್ನು ಉಳ್ಳದ್ದಾಗಿದೆ, ಎಂಬುದನ್ನೂ ಕೊನೆಯ ಗುರಿಗೆ ಹೋಗಲಿಕ್ಕೆ ಉಳಿದವುಗಳೆಲ್ಲವೂ ಮೆಟ್ಟಲುಗಳುಎಂಬುದನ್ನೂ ತೋರಿಸಿಕೊಡುವುದು

೯ ಒಬ್ಬರಿಗೊಬ್ಬರು ಭಿನ್ನವೆಂದು ತಿಳಿಯದೆ ಎಲ್ಲರೂ ಒಂದೇದಾರಿಯಲ್ಲಿ ಒಂದು ಗುರಿಗೆ ನಡೆಯುತ್ತಾ ಇದ್ದೇವೆ ಎಂಬ ಒಮ್ಮುಖದ ಅಭಿಪ್ರಾಯವನ್ನು ಹಿಂದೂಗಳಲ್ಲಿ ಉಂಟು ಮಾಡುವುದು.

ಇವುಗಳೆಲ್ಲವನ್ನೂ ಹಿಂದೂ ಮಹಾಸಭೆಯವರು ಆಲೋಚಿಸಿ ಕಾರ್ಯ ನಡೆಸುವವರಾಗಬೇಕು.

ಈ ಅಭಿಪ್ರಾಯವನ್ನು ಮುಂದಿಟ್ಟುಕೊಂಡು ಹಿಂದೂ ಸಮಾಜ ಸಂಸ್ಕರಣವನ್ನು ಮಾಡಬೇಕೆಂದು ತಮ್ಮೆಲ್ಲರನ್ನೂ ಅತಿ ವಿನಯದಿಂದ ಬೇಡುತ್ತೇನೆ.

ತಮ್ಮೆಲ್ಲರ ವಿಧೇಯನಾದ

ಪ್ರಕಾಶಕ, ಸದ್ಧರ್ಮ ದೀಪಿಕೆ ಹಾವೇರಿ.

## ಇದರ ಮುಂದಿನ ವಿಚಾರ.

ಈ ಲೇಖನವನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿ ಹಿಂದೂ ಮಹಾಸಭಾ ಕಾರ್ಯದರ್ಶಿಯವರಲ್ಲಿಗೆ ಕಳುಹಿಸಿದುದಷ್ಟು ತಿಳಿದಿದೆಯೇ ವಿನಾ ಇದನ್ನು ಆ ಸಭೆಯಲ್ಲಿ ಓದಿದುದು ತಿಳಿದಿಲ್ಲ. ಓದಿಲ್ಲವೆಂದೇ ಭಾವಿಸಬೇಕಾಗಿದೆ. ಮ. ರಾ. ಸಿದ್ಧರಾಮಪ್ಪಾ ದುಂಡಪ್ಪಾ ಪಾವಟೆ ವಕೀಲರವರು ಹುಬ್ಬಳ್ಳಿ ಇವರು ಹಿಂದೂ ಮಹಾಸಭೆಗೆ ಒಂದು ಸಂಸ್ಕೃತ ಲೇಖನವನ್ನು ಕಳುಹಿಸಿದ್ದರೆಂತಲೂ ಅವರೂ ಮತ್ತು ಶರಣ ಸಂದೇಶಪತ್ರಕರ್ತರಾದ ಮ. ರಾ. ಹರಡೇಕರ ಮಂಜಪ್ಪನವರೂ ಹಿಂದೂ ಮಹಾಸಭೆಗೆ ಹೋಗಿದ್ದರೆಂತಲೂ ತಿಳಿಯಬರುತ್ತದೆ. ಆದರೂ ಅಲ್ಲಿ ಸಂಸ್ಕೃತ ಲೇಖನವಾಗಲಿ ವೀರಶೈವ ಮತವಿಷಯವಾಗಲೀ ಓದಲ್ಪಟ್ಟಂತೆ ಅಥವಾ ಹೇಳಲ್ಪಟ್ಟಂತೆ ತೋರಲಿಲ್ಲ.

ಹೀಗಾಗಲಿಕ್ಕೆ ಒಂದು ಕಾರಣವಿದೆ. ಹಿಂದೂಮಹಾಸಭೆಯುಎಷ್ಟು ಉದಾರವಾದುದೆಂದು ತಿಳಿದು ಈ ಲೇಖನದಲ್ಲಿ ಬರೆಯಲ್ಪಟ್ಟಿರುವದೋ ಅಷ್ಟು ಉದಾರತೆಯು ಅದರಲ್ಲಿ ಈಗ ತೋರಬರುವಂತೆ ಇಲ್ಲ. ಈಸಲದ ಹಿಂದೂ ಮಹಾಸಭೆಗೆ ಸಂಬಂಧಪಟ್ಟ ಡಿಸೆಂಬರು ೩೧ ರಲ್ಲಿ ಸೇರಿದ ವಿ

ಪಯುಸಿಯೂಪಕ ಕಮೀಟಿಯಲ್ಲಿ ಮ. ರಾ. ಎಂ. ಆರ್ ಜಯಕರರವರು ತಂದ ಜಾತಿಪದ್ಧತಿಯನ್ನೂ, ಅಸ್ಪೃಶ್ಯತೆಯನ್ನೂ, ತೆಗೆದುಹಾಕಬೇಕೆಂಬ ಪ್ರಶ್ನೆಗಳಿಗೆ ಅನೇಕರು ಅನುಕೂಲವಾಗಿ ಮಾತನಾಡಿದಾಗ್ಯೂ ಅಧ್ಯಕ್ಷರಾದ ಪಂಡಿತ ಮದನಮೋಹನ ಮಾಲ್ವಿಯವರು ಜಾತಿಗಳ ಆಂತರಿಕ ವಿವಾಹವಾಗಲೀ ಜಾತಿಗಳು ಕೂಡಿಉಣ್ಣುವುದಾಗಲೀ ಹಿಂದೂಮಹಾಸಭೆಗೆಅಧಿಕಾರವುಳ್ಳ (ಅಧಿಭಾಗವಾದ)ವಿಷಯವಲ್ಲವೆಂತ ಹೇಳಿದರೆಂದು ತಿಳಿಯಬರುತ್ತದೆ. ಹೀಗಾದರೆ ಹಿಂದೂ ಮಹಾಸಭೆಯು ಎರಡು ಮಾತನಾಡಿಹೋಗುವವಮಟ್ಟಿಗೆ ಅಧಿಕಾರವುಳ್ಳದ್ದೆಂದು ಪಂಡಿತಜಿಯವರು ತಿಳಿದಿರುವರೋ ಏನೋ? ಮ ರಾ. M. R. ಜಯಕರವರು ಕೇಳಿದಂತೆಯೇ ಹಿಂದೂ ಮಹಾಸಭೆಯು ನಡೆಯಿಸಿಕೊಡದೆ ಇದ್ದಾಗ್ಯೂ ಕಾಲಕ್ಕೆ ತಕ್ಕಂತೆ ಆ ವಿಷಯದಲ್ಲಿ ಏನು ಮಾಡಬೇಕೆಂಬುದನ್ನು ಯೋಚಿಸಿ ಕಾರ್ಯ ನಡಸಬಹುದಾಗಿದ್ದಿತು.

ಈ ಪಂಡಿತಜಿಯವರು ಹರಿಜನರ ಉದ್ಧಾರಕ್ಕಾಗಿ ಒಂದುವರ್ಷದಲ್ಲಿ ಒಂದುಕೋಟಿರೂಪಾಯಿ ಕೂಡಿಸಿಕೊಡಬೇಕೆಂದು ನಡಸಿದ ನಿರ್ಧರವು ನೀರಿನ ಮೇಲೆ ಬರೆದ ಬರೆವಣಿಗೆಯಂತೆ ಆಗಿದೆ. ಇತ್ತಕಡೆ ಜಾತಿಪದ್ಧತಿಯನ್ನು ಬಿಗಿಹಿಡಿದು ನಡಸಬೇಕೆಂಬ ಸನಾತನಿಗಳಿಗೆ ವಿರೋಧವಾಗಿ ಹರಿಜನರಿಗೆ ಕಾಶಿಯಲ್ಲಿ ಮಂತ್ರೋಪದೇಶ ಮಾಡಬೇಕೆಂದು ಇವರೂ ಡಾ. ಕುರ್ತುಕೋಟಿ ಶಂಕರಾಚಾರ್ಯರವರೂ ಪ್ರಯತ್ನಪಟ್ಟದ್ದರಿಂದ ಸನಾತನಿಗಳು ಇವರನ್ನು ನಂಬದೆ ವಿರೋಧವಾಗಿ ಇದ್ದಾರೆ. ಅತ್ತಕಡೆ ಹರಿಜನರು ತಮ್ಮ ಸಮಾನವಾಗಿ ನಮ್ಮನ್ನು ಕಾಣುವುದಿಲ್ಲವೆಂತ ಪಂಡಿತಜಿಯವರನ್ನು ನಂಬುವಂತಿಲ್ಲ ಹೀಗಾಗಿ ಇವರು "ಇತೋಭ್ರಷ್ಟ ಸ್ತತೋಭ್ರಷ್ಟ: "ಎಂಬ ಸ್ಥಿತಿಗೆ ಬಂದಿರುತ್ತಾರೆ.

ಹಿಂದೂಗಳಲ್ಲಿ ಮಾದಿಗರೇ ಮೊದಲಾದವರನ್ನು ಸಮಾನದೃಷ್ಟಿಯಿಂದ ನೋಡುವುದಕ್ಕೆ ಬಸವೇಶ್ವರನೇ ಮುಂತಾದ ದಾಕ್ಷಿಣಾತ್ಯರು ಉದ್ಯುಕ್ತರಾದಂತೆ ಉತ್ತರಹಿಂದುಸ್ಥಾನದಲ್ಲಿ ಉದ್ಯುಕ್ತರಾದವರನ್ನು ನೋಡುವಂತೆ ಇಲ್ಲ ಆದ್ದರಿಂದ ಈಗಲಾದ ಈ ಹಿಂದೂ ಧರ್ಮದಉಚ್ಛ್ರೇಯವು ಎಂದರೆ ಅತಿವರ್ಣವನ್ನು ರೂಢಿಯಲ್ಲಿ ತರುವುದೇ ಮೊದಲಾಗಿಂದು ದಕ್ಷಿಣಹಿಂದುಸ್ಥಾನದಿಂದ—ಉತ್ತರಹಿಂದುಸ್ಥಾನಕ್ಕೆ ವ್ಯಾಪಿಸಬೇಕೇವಿನಾ ಆ ಕಡೆಯಿಂದ ಈ ಕಡೆಗೆಬರುವಂತಿಲ್ಲ. ಹಿಂದೂಧರ್ಮದ ಉದ್ಧಾರ ಗ್ರಂಥಗಳು ಕೂಡಾ ಬರೆದ ಪ್ರತಿಗಳಲ್ಲಿ ದಕ್ಷಿಣ ಹಿಂದೂದೇಶದಲ್ಲಿ ಹೆ

ಚಾಗಿ ದೊರಕುವವೇ ವಿನಾ ಉತ್ತರಹಿಂದುಸ್ಥಾನದಲ್ಲಿ ದೊರಕುತ್ತಿಲ್ಲ ಈಗ ಹಿಂದೂ ಮಹಾ ಸಭಾ ಚಿರಸ್ಥಾಯಿ ಸಂಘ (Standing Committe) ಕ್ಕೆ ಅಥವಾ ಪೋಷಕ ವರ್ಗಕ್ಕೆ ದಕ್ಷಿಣದೇಶದ ಮುಖಂಡರು ಎಂದರೆ ಸತ್ಯಮೇವೋದ್ಧರಾಮ್ಯಹಂ ಎಂಬಬಿರುದುಳ್ಳ ಉನ್ನತಿವೆತ್ತ (H. H.) ಮೈಸೂರು ದೇಶದ ಮಹಾರಾಜರಾದ ಶ್ರೀ ಕೃಷ್ಣರಾಜೇಂದ್ರಒಡೆಯರ್ ಬಹದ್ದೂರವರೇ ಮುಂತಾದವರು ಸಿಲ್ಲದ ವಿನಾ ಹಿಂದೂ ಮತವು ಎಂದೂ ಅಭಿವೃದ್ಧಿಯನ್ನು ಹೊಂದಲಾರದು. ಒಟ್ಟಿನಲ್ಲಿ ಈಗ ಹಿಂದೂ ಮತವನ್ನು ಸುಧಾರಿಸದೆ ಇದ್ದರೆ ಹಿಂದೂದೇಶವು ಹಿಂದೀಯರಿಗೆ ಎಂದೂನಿಲ್ಲಲಾರದು. ಈಗಲೇ ಎಷ್ಟೋ ಹೋಗಿ ಬಿಟ್ಟದೆ. ಇಂತಹ ವಿಷಮಸ್ಥಿತಿಯನ್ನು ಪರ್ಯಾಲೋಚಿಸಿ ಹಿಂದೂಗಳು ಜಾಗ್ರತೆಎಚ್ಚತ್ತು ಕೊಳ್ಳುವರೆಂದು ನಂಬಿ ನಿರೀಕ್ಷಿಸಬೇಕಾಗಿದೆ.

ಹಿಂದೂಧರ್ಮವು ಹೀಗೆ ಸಿದ್ಧೆಮಾಡುತ್ತಿರುವಕಾಲದಲ್ಲಿ ವೀರಶೈವರು ಸುಮ್ಮನೆ ಕೂಡಬಾರದು. ತಮಗೆಬಸವೇಶ್ವರನು ಹಾಕಿಕೊಟ್ಟಮೇಲುಸಂಕ್ತಿಯನ್ನು ಅನುಸರಿಸಿ ಅತಿವರ್ಣವನ್ನು ಹೆಚ್ಚಾಗಿ ಪ್ರಸಾರ ಪಡಿಸಲಿಕ್ಕೆ ಯತ್ನಿಸಬೇಕು. ಹಿಂದೂಮಹಾಸಭೆಯಲ್ಲಿ ಪ್ರವೇಶಿಸಿ ಹಿಂದೂಗಳ ಉದಾರಧರ್ಮವು ಹೇಗಿರುವುದೆಂಬುದಕ್ಕೆತಮ್ಮ ಉದಾಹರಣೆಯನ್ನು ಇಟ್ಟುಕೊಳ್ಳುವಂತೆ ಉಳಿದ ಹಿಂದೂಗಳಿಗೆ ತೋರಿಸಿಕೊಟ್ಟು ಇಡೀ ಹಿಂದುಸ್ಥಾನದಲ್ಲೆಲ್ಲಾ ಹಿಂದೂಮತದ ಉಚ್ಚಧ್ಯೇಯವಾದಸರ್ವ ಸಮಾನತ್ವವು ನೆಲೆಗೊಳ್ಳುವಂತೆ ಮಾಡಬೇಕು, ಎಂದು ಆಗ್ರಹಪೂರ್ವಕವಾಗಿ ಪ್ರಾರ್ಥಿಸುವೆನು.

ಪ್ರಕಾಶಕ

ಸದ್ಧರ್ಮ ದೀಪಿಕೆ ಹಾವೇರಿ.

## ಅಶಾಂತಿಕಾರರಾದ ಬಾಳೇಹಳ್ಳಿಯ ಶ್ರೀ ಶಿವಾನಂದ ಶಿವಾಚಾರ್ಯರು.

ಇವರು ಬಾಳೇಹಳ್ಳಿಯ ಸಂಸ್ಥಾನದ ಪಟ್ಟಾಧಿಕಾರಕ್ಕೆ ಬರುವದಕ್ಕೆ ಮುಂಚೆ ಇವರ ಆ ಅಧಿಕಾರದ ಚುನಾವಣೆಯ ಕಾಲದಲ್ಲಿಯೇ ಮೈಸೂರು ಸರಕಾರದವರು ಏರ್ಪಡಿಸುವ ನಿಬಂಧನೆಗಳು ಒಂದೆರಡುಸಾರಿ ಬದಲಾವಣೆಯಾಗಿ ಕೊನೆಗೆ ಸುಲಭತೆಯ ಅಭಾವದಿಂದಲೇ ಇವರು ಅಧಿಕಾರಕ್ಕೆ ಬಂದರು. ಏಕೆಂದರೆ– ಇದಕ್ಕೆ ಮುಂಚೆ ಪಂಚಾಚಾರ್ಯ ಪೀಠದ ಶ್ರೀ॥ ಗಳವರು ಕಾಶಿಯಲ್ಲಿ ಕೂಡಿ ವೀರಶೈವಮತದಲ್ಲಿ ಈಗ ಇರುವ ವಿರಕ್ತರು (ಜಂಗಮರು) ತಮ್ಮ ಶಿಷ್ಯರೆಂದು ವಗೈರೆ ವೀರಶೈವರಿಗೆ ಮಾನ್ಯವಲ್ಲದ ಕೆಲವು ನಿರ್ಣಯಗಳನ್ನು ಮಾಡಿಕೊಂಡು ಇದ್ದರೆಂತಲೂ ಹೀಗೆ ನಿರ್ಣಯಮಾಡುವ ಮತ್ತು ಈ ಸಭೆ ಸೇರಿಸುವ ಕೆಲಸ ಕಾರ್ಯಗಳಲ್ಲಿ ಮೂವರು ಶಾಸ್ತ್ರಿಗಳು (ಅವರಲ್ಲಿ ಇವರೊಬ್ಬರು) ಭಾಗಿಗಳಾಗಿದ್ದರೆಂತಲೂ ಇವರು ಗಂಗಾನದಿ ಪ್ರವಾಹದಲ್ಲಿ ಆ ನದಿಯ ಸಾಕ್ಷಿಯಾಗಿ ಎಂದರೆ ಕೈಯಲ್ಲಿ ಆ ನದಿಯ ನೀರನ್ನು ಹಿಡಿದುಕೊಂಡು, ನಾವು ವಿರಕ್ತರ ಉನ್ನತಿಯನ್ನು ಮುರಿಯಬೇಕು, ಪೀಠಾಚಾರ್ಯರೇ ಹೆಚ್ಚಿನವರೆಂದು ವೀರಶೈವರಲ್ಲಿ ಪ್ರಕಟಿಸಬೇಕು, ಎಂತ ಪ್ರತಿಜ್ಞೆಯನ್ನು ಮಾಡಿಕೊಂಡಿದ್ದರೆಂತಲೂ ಪ್ರವಾದವಿದ್ದುದರಿಂದ ಇವರನ್ನು ಬಾಳೆಹಳ್ಳಿಯ ಪೀಠಕ್ಕೆ ಅಧಿಕಾರಿಗಳನ್ನಾಗಿ ನಿಯಮಿಸುವಾಗ ವೀರಶೈವರಲ್ಲಿ ಸಂಸ್ಥಾನಾಧಿಕಾರಿಗಳೆಂಬ ವೃಕ್ಷವಾಗುವ ಬೀಜವು ಎಂತಹುದೋ ಎಂಬ ಸಂಶಯವು ಸಮಾಜದಲ್ಲಿ ತಲೆದೋರಿದ್ದಿತು. ಕೊನೆಯಲ್ಲಿ ದಿವಾನ್‌ಬಹದ್ದೂರ ಕೆ. ಪಿ. ಪುಟ್ಟಣ್ಣಸೆಟ್ಟರವರ ಸಹಾಯದಿಂದ ಇವರು ಅಧಿಕಾರಕ್ಕೆ ಬಂದರೆಂದು ವೃತ್ತಪತ್ರಿಕೆಗಳು ಕೂಗಿದವು. ಅಂತೂ ಇಂತೂ ಅಧಿಕಾರಕ್ಕೆ ಬರುವಾಗ ಆವಸರ ಅವಸರದಲ್ಲಿ ಭಿನ್ನ ಶಾಖೆಯ ಪೀಠಾಧಿಕಾರಿಗಳವರಿಂದ ಇವರಿಗೆ ಅಧಿಕಾರವು ಕೊಡಲ್ಪಟ್ಟು ಇವರು ಅಧಿಕಾರಾರೂಢರಾದರು. (ಇಲ್ಲಿಗೆ ಸುಮಾರು ಹತ್ತು ವರ್ಷಗಳಾದವು)

ಮೊಟ್ಟ ಮೊದಲು ಶಿವಮೊಗ್ಗಾ ಡಿಸ್ಟ್ರಿಕ್ಟನಲ್ಲಿ ಇವರ ಸಂಚಾರವು ಹೊರಟಿತು. ಶಿವಮೊಗ್ಗೆಯಲ್ಲಿ ಪ್ರಸಿದ್ಧರೂ ಮತ್ತು ನ್ಯಾಯವಿಧಾಯಕ ಸಭೆಯ ಸದಸ್ಯರೂ ಆಗಿದ್ದ ಹನಸವಾಡಿ ಗಡಲಬಸವಪ್ಪನವರು ಇವರ ಅಧಿಕಾರವು ಸಮಾಜಕ್ಕೆ ಎಷ್ಟುಮಟ್ಟಿಗೆ ಉಪಯೋಗಕ್ಕೆ ಬೀಳುವದೋ ಎಂಬುದನ್ನು ನೋಡುವ

ಜಕ್ಕಾಗಿ ಹಾರನಹಳ್ಳಿ ಎಂಬಗ್ರಾಮದಲ್ಲಿ ಇವರಿಗೆ ಕೆಲವು ವಿಷಯುಗಳನ್ನು ಕೇಳಿದರು. ಅದಕ್ಕೆ ಅವರಿಗೆ ಸಮರ್ಪಕವಾದ ಉತ್ತರವುದೊರೆಯಲಿಲ್ಲ. ಇದರಿಂದಸಮಾಜದಲ್ಲಿ ಸ್ವಲ್ಪ ಮಟ್ಟಿಗೆ ಅಶಾಂತಿಯು ಬೆಳೆಯಲಿಕ್ಕಾರಂಭವಾಯಿತು. ಇವರು ಆ ಕಡೆಯಲ್ಲಿ ಇದ್ದಾಗಲೇ ಹೊನ್ನಾಳಿಯಲ್ಲಿ ಉಜ್ಜಯಿನಿ ಪಟ್ಟಾಧ್ಯಕ್ಷ ಶ್ರೀಯವರನ್ನು (ಇವರಿಗೆ ಅಧಿಕಾರ ಕೊಟ್ಟವರನ್ನು) ಮುಂದಿಟ್ಟು ಕೊಂಡು ಸಮಾಜದಲ್ಲಿರುವ ತೊಡಕುಗಳನ್ನು ನಿವಾರಣೆ ಮಾಡಬೇಕೆಂದು ಹಾವೇರಿಯಲ್ಲಿ ಪ್ರಸಿದ್ಧರಾದ ರಾವ್‌ಬಹದ್ದೂರ್ ದೇವೀಹೊಸೂರು ಚನ್ನಬಸವಪ್ಪ ಸೆಟ್ಟರು ಹಾವೇರಿಯ ಪ್ರಸಿದ್ಧವಕೀಲರಾದ ಶಿವಮೂರ್ತಿಸ್ವಾಮಿ ಹಿರೇಮಠ ಇವರು ಪ್ರಯತ್ನಿಸಿದರು, ಆ ಪ್ರಯತ್ನಕ್ಕೆ ಮೊದಲು ಉಜ್ಜಯಿನಿ ಶ್ರೀ ಯವರು ಒಪ್ಪಿದವರು ನಂತರ ಗೊತ್ತಾದದಿವಸಕ್ಕೆ ಗೊತ್ತಾದಸ್ಥಳದಲ್ಲಿ ಇರದಂತೆ ಬೇರೆ ಕಡೆಗೆ ಹೋಗಿ ಬಿಟ್ಟರು. ಹೀಗಾಗಿ ಆ ಪ್ರಯತ್ನವು ವ್ಯರ್ಥವಾಯಿತು.

· ಇವರು ಶಿಕಾರಿಪುರಕ್ಕೆ ಬಂದಾಗ ಅಲ್ಲಿನ ಮುಖ್ಯರಾದ ಹೊನ್ನಸೆಟ್ಟರ ಚನ್ನಪ್ಪನವರು ಇವರಿಗೆ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದು ನಿರ್ಣಯಿಸಿಕೊಂಡರು. ಇವರೂ ರೇಣುಕನು ಉತ್ತರ ಕೊಡಲಿಕ್ಕೆ ಸಮರ್ಥನಿದ್ದಾನೆ, ಎಂದು ಸಿದ್ಧರಾದರು ಆಗ ಅವರು ಅಷ್ಟಾವರಣದೊಳಗೆ ಹೇಳಲ್ಪಟ್ಟ ಜಂಗಮರು ಯಾರು? ಎಂದು ಕೇಳಿದರು. ಅದಕ್ಕೆ ೧೫ ದಿವಸ ಆಲೋಚನೆ ಮಾಡಿ ಉತ್ತರಕೊಡಬಹುದೆಂದು ಇವರು ಹೇಳಿದರು. ಅಲ್ಲಿಂದ ತಮ್ಮ ಪೀಠದಲ್ಲಿಯ ಪೂರ್ವದಲ್ಲಿ ಇದ್ದವರು ಜಂಗಮರು (ವಿರಕ್ತರು) ಪೂಜ್ಯರೆಂದು ಪಾದ ಪೂಜೆಯನ್ನು ಮಾಡುತ್ತಿದ್ದರೇ ಇಲ್ಲವೇ? ನೀವು ಮಾಡುತ್ತಾ ಇದ್ದೀರಾ? ಎಂದು ಕೇಳಿದರು. ಅದಕ್ಕೆ ಇವರಿಗೆ ಸಿಟ್ಟೇ ಬಂತು, ನಿನಗೇತಕ್ಕೋ ಇದು, ನಿನ್ನ ಪಾದಪೂಜೆಯನ್ನು ಮಾಡಬೇಕೇನು? ನನ್ನ ಅಧಿಕಾರವು ಹೋಗಲಿ ನಾನು ಒಂದು ಗುಡಿಸಲಿನಲ್ಲಿ ಇರಲಿ, ಒಂದು ಪಾವು ಅಕ್ಕಿಯನ್ನು ಬೇಯಿಸಿಕೊಂಡು ತಿನ್ನಲಿ, ವಿರಕ್ತರ ಪಾದದ ಮೇಲೆ ನನ್ನ ಕೈ ಡುವುದಿಲ್ಲ, ಎಂದು ಮೊದಲಾಗಿ ಹೇಳಿಯೇ ಬಿಟ್ಟರು.

ಸಮಾಜದವರನ್ನು ಕೇಳಬೇಕೇ? ಆಗಲೇ ಆಕಡೆ ಕೆಲವರು ಈಕಡೆ ಕೆಲವರು ಆಗಿ ಹೊಡೆದಾಡಲಿಕ್ಕೇ ಆರಂಭವಾಯಿತು. ಅದು ಹೇಗೋ ದೀರ್ಘಕ್ಕೆ ಹೋಗಲಿಲ್ಲ. ಕಡೆಗೆ ಟಪಾಲು ಮೂಲಕ ಮೊದಲು ಗೊತ್ತುಮಾಡಿದ್ದ ಒಂಬ

ಶ್ನೆ ಪ್ರಶ್ನೆಗಳನ್ನು ಕಳುಹಿಸಬೇಕೆಂದು ನಿರ್ಣಯವಾಗಿ ಹಾಗೆ ಮಾ ಡಿದಾಯಿತು. (ಅದಕ್ಕೆ ಇವರಿಂದ ಉತ್ತರವು ಈವರೆವಿಗೂ ಕೊಡಲ್ಪಟ್ಟಿಲ್ಲ) ಶಿಕಾರಿಪುರದ ಊರವರು ಕೆಲವರು ಉತ್ತರ ಕೊಟ್ಟರು. ಆ ಉತ್ತರ ಗಳೆಲ್ಲ ವೀರಶೈವರ ಶಾಸ್ತ್ರ ವಿರುದ್ಧ ವಿಷಯಗಳಾಗಿವೆ ಇದನ್ನೆಲ್ಲ ನೋಡಿ ಇವರು ಪ್ರತಿಜ್ಞೆಮಾಡಿಬಂದುದು ನಿಜವೆಂದು ಜನರು ಗೊಣಗುಟ್ಟಿಕೊಳ್ಳು ವಂತೆಯಾಯಿತು ಮತ್ತು ಆ ಪ್ರಶ್ನೆಗಳ ಬದಲಾಗಿ ಇಪ್ಪತ್ತೊಂದು ಪ್ರಶ್ನೆಗಳ ನ್ನು ಅದೇ ಶಿಕಾರಿಪುರದ ಕೆಲವರು ಹೊನ್ನಕಟ್ಟೆರಚನ್ನಪ್ಪನವರಿಗೆ ಕೇಳಿದ ರು. ಅದಕ್ಕೆ ಉತ್ತರವಾಗಿ 'ಜಂಗಮಾಧಿಕ್ಯ' ಎಂಬ ಪುಸ್ತಕವು ೧೯೩೭ ರಲ್ಲಿ ಪ್ರಕಟಿಸಲ್ಪಟ್ಟಿತು (ಇದಕ್ಕೆ ಯಾರೂ ಇದುವರೆವಿಗೂ ಉತ್ತರವನ್ನು ಕೊ ಟ್ಟಿಲ್ಲ)

ಅಂತೂ ಅಶಾಂತಿಯು ಬೆಳೆಯಿತು. ವೀರಶೈವ ಸಮಾಜವನ್ನು ಕೇಳಬೇ ಕೇ? ಇದು ಅನೈಕ್ಯದ ಗೂಡು. ತಮ್ಮತಮ್ಮೊಳಗೆ ಹೊಡೆದಾಡುವವರ (ಯಾದವೀ ಕಲಹದ) ನೆಲೆವೀಡು, ಮೇಲಾಗಿ ಸರಕಾರದ ಕೊರ್ಟುಗ ಳ ಖರ್ಚಿನ ಆಧಾರವಕಡು ಶಿಕಾರಿಪುರದಲ್ಲಿ ಎರಡು ಪಂಗಡವೇ ಆಯಿ ತು. ಅನೇಕರು ಕಾಣಿಕೆಯನ್ನೇ ಕೊಡಲಿಲ್ಲ ಇವರೂ ಅವರನ್ನು ಕೇಳಲಿ ಲ್ಲ. ಇದಲ್ಲದೆ ಸಮಾಜದವರು

"ಮಹಾಜನೋ ಯೇನ ಗತ ಸ್ಸ ಪಂಥಾಃ"

ನಮಗೇಕ ಪ್ಪ ದೊಡ್ಡವರು ಮಾಡಿದ್ದಾಗಲಿ ಎಂಬುವವರು, ಮುಂದಿನ ಊರಿಗೆ ಇವರು ಹೋದಾಗ ಹಿಂದೆ ಒಂದು ಊರಲ್ಲಿ ಆದ್ದನ್ನು ನೋಡಿ ನಾವು ಪ್ರಶ್ನೆ ಕೇಳಬೇಕು ತಾವು ಪ್ರಶ್ನೆ ಕೇಳಬೇಕು. ಎನ್ನುವವರು.

ಇವರು ಆಮೇಲೆ ಶಿ ರಾಳಕೊಪ್ಪಕ್ಕೆ ಹೋದರು. ಅಷ್ಟು ಹೊತ್ತಿಗೆ ಶಿಕಾರಿಪುರದ ಸಮೀಪದಲ್ಲಿ ಇರುವ ಕಪ್ಪನಹಳ್ಳಿಯ ಶಿವಯೋಗಾಶ್ರಮಕ್ಕೆ ಶ್ರೀ ನಿರಂಜನವರ್ಯ ಹಾನಗಲ್ ಶ್ರೀಗಳವರು ಬಂದಿದ್ದರು. ಅವರು ಈ ವಿಚಾರಕ್ಕೆ ಹೋಗದೆ ತಟಸ್ಥರಾಗಿ ಇದ್ದರು. ಶಿರಾಳಕೊಪ್ಪದವರು ಇವರಿಗೆ ಪ್ರಶ್ನೆಗಳನ್ನು ಕೇ ಳುತ್ತೇವೆ, ಎಂದರು. ಆಗ ಇವರು ಆ ಹಾನಗಲ್ ಶ್ರೀಯವರ ತಟಸ್ಥ ವೃತ್ತಿಯನ್ನು ನೋಡಿ ಬರೀ ಪ್ರಶ್ನೆ, ಕೇಳುವುದೇಕೆ? ಹಾನಗಲ್ ಶ್ರೀ ಇವರನ್ನು ಕರಕೊಂಡು ಬಂದರೆ ಇಲ್ಲಿಯೇ ಎಲ್ಲಾ ನಿರ್ಣಯವನ್ನು ಮಾಡಿಬಿಡಬಹುದು, ಎಂದರು. (ಮುಖ್ಯವಾಗಿ ಎಲ್ಲರಿಂದಲೂ ಕಾಣಿಕೆ ತೆಗೆ

ಮಕೊಳ್ಳಬೇಕೆಂಬ ಪ್ರಯತ್ನವಿದು) ತಾರೀಖು ಗೊತ್ತಾಯಿತು. ಶಿರಾಳ ಕೊಪ್ಪದವರು ಶಿವಯೋಗಾಶ್ರಮಕ್ಕೆ ಹೋಗಿ ಹಾನಗಲ್ ಶ್ರೀ ಇ ವರನ್ನು ಕರೆದುಕೊಂಡು ಬಂದರು. ಗೊತ್ತು ಮಾಡಿದ ತಾರೀಖಿಗೆ ಸರಿಯಾಗಿ ಇವರನ್ನು ಕರೆಯಲಿಕ್ಕೆ ಹೋದರು. ಇವರೆಲ್ಲಿ? ಆಗಲೇ ಒಂದು ಹಳ್ಳಿಯವರ ಬಿನ್ನಹಕ್ಕೆ ಹೊರಟಿದ್ದಾರೆ ಹೇಳುವಂತಿಲ್ಲ, ಕೇಳುವಂತಿಲ್ಲ. ೧—೨ ದಿನ ಹಾನಗಲ್ ಶ್ರೀ ಇವರು ನೋಡಿ ಬೇರೆ ಕಡೆಗೆ ಹೋದರು ಕಡೆಯಲ್ಲಿ ಶಿರಾಳಕೊಪ್ಪದಲ್ಲಿಯೂ ಎರಡು ಪಂಗಡವಾಯಿತು.

ಆ ಮೇಲೆ ಸಾಗರಕ್ಕೆ ಹೋದರು. ಅಲ್ಲಿಯೂ ಹಾಗೆಯೇ, ಹೀಗೆ ಇವರು ಕಾಲಿಟ್ಟ ಊರುಗಳಲ್ಲೆಲ್ಲಾ ೨ ಪಂಗಡ, ಇದು ಶಾಶ್ವತದ ಮಾತು, ಎಂಬಂತಾಯಿತು.

ಹೀಗೆಯೇ ಇವರು ಇತರ ಡಿಸ್ಟ್ರಿಕ್ಟುಗಳಲ್ಲಿ ಸಂಚಾರಕ್ಕೆ ಹೊರಟರು. ಆಷ, ರೊಳಗಾಗಿ ಎಲ್ಲೆಲ್ಲಿ ಸಂಚರಿಸುತ್ತಾರೋ ಅಲ್ಲಲ್ಲಿ ಹೀಗೆಯೇ ಹೇಳುವಿಕೆ. ಪಾರ್ಟಿ, ಪ ರ ಟ

ವೃತ್ತಪತ್ರಿಕೆಯವರಿಗೆ ಸುದ್ದಿಗಳನ್ನು ಕೊಡುವುದಕ್ಕೆ ಉತ್ತಮವಾಯಿತು. ಅನುಕೂಲದ ಸುದ್ದಿ, ಪ್ರತಿಕೂಲದ ಸುದ್ದಿ, ಜನರಿಗೆ ಅದೊಂದು ರುಚಿ.

ಇವರಿಗೆ ಅಧಿಕಾರವನ್ನು ಕೊಡಿಸಿದಾಗಸಮಾಜಕ್ಕೆ ಬಹಳ ಉಪಕಾರವಾಗುವುದೆಂದು ತಿಳಿದಿದ್ದ ವೀರಶೈವ ಮಹನೀಯರಿಗೆ ತಮ್ಮ ಅಪೇಕ್ಷೆಯು ಕೈಗೂಡಲಿಲ್ಲ, ಆದ್ದರಿಂದಒಮ್ಮೆ ಕಡೂರು ಡಿಸ್ಟ್ರಿಕ್ಟ್ ಕಂಸಾಗರತೋಟದಲ್ಲಿ ಚೀಫ ಜಡ್ಜ್ ಪದವಿಗೆ ಏರಿದ್ದ ಪಿ.ಮಹದೇವಯ್ಯನವರು ಹಾನಗಲ್ ಶ್ರೀ ಗಳವರ ದರ್ಶನ ತೆಗೆದುಕೊಂಡು ಬಾಳೇಹಳ್ಳಿಯ ಶ್ರೀ ಗಳವರ ಸಂಚಾರದಿಂದ ಸಮಾಜಕ್ಕೆ ಲಾಭವಿಲ್ಲ. ತಮ್ಮ ಉತ್ಪತ್ತಿಯೆಲ್ಲಾ ಖರ್ಚಿಗೇ ಸಾಲದೆಂದು ಹೇಳುತ್ತಾರೆ. ಅವರೂ ತಾವೂ ಕೂಡ ಸಂಚರಿಸಿ ಸಮಾಜದ ವಿದ್ಯಾಭಿವೃದ್ಧಿಗಾಗಿ ಧನ ಸಂಚಯ (ಕೆಲವು ಲಕ್ಷರೂಪಾಯಿ) ಮಾಡಿಕೊಡಿರಿ. ತಾವು ಹೆಚ್ಚು ಖರ್ಚಿಲ್ಲದೆ ವರ್ತಿಸುತ್ತಾ ಸಮಾಜದ ಮೇಲ್ಮೆಯನ್ನು ಮಾಡತಕ್ಕವರಾದ್ದರಿಂದ ಅವರ ಹೆಚ್ಚುಖರ್ಚನ್ನು ನಿಲ್ಲಿಸಿ ಸಮಾಜಕ್ಕೆ ಉಪಕಾರಮಾಡಿರಿ, ಎಂದು ಪ್ರಾರ್ಥಿಸಿಕೊಂಡರು. ಅದಕ್ಕೆ ಹಾನಗಲ್ ಶ್ರೀ ಗಳವರು ಆಗಲಿ, ಮೈಸೂರು ದೇಶದಲ್ಲಿಯೂ ವೀರಶೈವರ ವಿದ್ಯಾಭಿವೃದ್ಧಿಗೆ ಧನಸಂಚಯವನ್ನು ಮಾಡಿಕೊಡುವೆವು, ಆದರೆ ಬಾಳೇಹಳ್ಳಿಯವರೂ ನಾವೂ ಕೂಡುವುದು ಹೇಗೆ? ಅವರು ಶಾಸ್ತ್ರಕ್ಕೂ ಪೂರ್ವ ಸಾಂಪ್ರದಾಯಕ್ಕೂ ಸಹಾ ತಪ್ಪಿ ನಡೆಯುತ್ತಾರೆ. ವಿರಕ್ತ

ದ ಒಂದು ಹಳ್ಳಿಯ ಮಠಸ್ಥರಿಗೆ ಕೂಡ ಶಿಷ್ಯರು ಎಂದು ಸರ್ಕ್ಯುಲರ್ ಹೊರಡಿಸಿದ್ದಾರೆ, ಇದು ನಿಮಗೆ ಒಪ್ಪುತ್ತದೆಯೇ? ಎಂದು ಕೇಳಿದರು. ಅದಕ್ಕೆ ಅವರು ಇದು ಸರಿಯಲ್ಲ, ಇದು ನನಗೆ ಗೊತ್ತಿರಲಿಲ್ಲ, ಎಂದು ಹೇಳಿ ಆ ಸರ್ಕ್ಯುಲರಿನ ನಕಲನ್ನು ತರಿಸಿಕೊಂಡು ಇದು ಸರಿಯಲ್ಲವೆಂದು ಅವರಿಂದ ಬರೆಸುವ ಏರ್ಪಾಡನ್ನು ಮಾಡುತ್ತೇವೆ ಎಂದು ಹೇಳಿಹೋದರು. ಅಂತಹ ಏರ್ಪಾಡು ಏನೂ ನಡೆಯಲಿಲ್ಲ. ಕೆಲವು ದಿವಸಗಳ ಮೇಲೆ ಹಾನಗಲ್ ಶ್ರೀ ಗಳವರು ಮೈಸೂರು ದೇಶದಲ್ಲಿ ವಿದ್ಯಾಭಿವೃದ್ಧಿಯ ಕಾರ್ಯಕ್ಕೆ ಸಹಾಯಮಾಡೋಣವೆಂದು ಯೋಚಿಸಿದ್ದೆವು, ಅದು ನಡೆಯಲಿಲ್ಲವಲ್ಲಾ, ಎಂದು ಒಂದೆರಡುಸಾರಿ ಪಶ್ಚಾತ್ತಾಪಪಟ್ಟುಕೊಂಡರು. ( ಸ್ವಾಮಿಗಳಾದವರು ಒಂದು ದೇಶದಲ್ಲಿ ಸಂಚರಿಸಿ ಸಮಾಜೋನ್ನತಿಯನ್ನು ಮಾಡಬೇಕಾದರೂ ಆ ದೇಶದ ಮುಖಂಡರ ಬೆಂಬಲವು ಬೇಕಲ್ಲವೇ? )

ಹೀಗೆ ಇವರನ್ನು ಮುಂದಕ್ಕೆ ತಂದವರಿಗೇನೇ ಇವರಿಂದ ಸಮಾಜದ ಕೆಲಸಗಳೇನೂ ಆಗಲಿಲ್ಲ ವೆಂಬ ವ್ಯಥೆಯುಂಟಾದುದು ಹಾಗಿರಲಿ, ಇವರನ್ನು ಮುಂದಕ್ಕೆ ತಂದವರು ಸಮಾಜದ ಮುಖಂಡರಿಂದ ಗೌರವವನ್ನು ಸಹಾ ಕಳೆದುಕೊಳ್ಳುವಂತಾಯಿತು.

ಇವರ ಸವಾರಿಯು ಬೆಂಗಳೂರಿಗೆ ಬರಬೇಕೆಂದು ಗೊತ್ತಾದಾಗ ಅಲ್ಲಿನ ಪ್ರಮುಖರಾದ ದಿವಾನ್ ಬಹದ್ದೂರ್ ಸರ್, ಕೆ, ಪಿ, ಪುಟ್ಟಣ್ಣಸೆಟ್ಟರವರು ಇವರ ಸತ್ಕಾರಕ್ಕಾಗಿ ಊರಿನವರ ಸಹಾಯವನ್ನು ಕೇಳಿದಾಗ ಊರಿನವರು ಇವರು ಅಶಾಂತಿಕಾರರೆಂದು ಪ್ರತಿಭಟಿಸಿದರು. ಪುಟ್ಟಣ್ಣ ಸೆಟ್ಟರವರು ಇಲ್ಲಿಗೆ ಬಂದಮೇಲೆ ಅವರನ್ನು ಸರಿಪಡಿಸೋಣವೆಂದರು. ಆಗ ಊರವರು " ಗತಾನುಗತಿಕೋ ಲೋಕಃ"(ಹಿಂದಿನವರು ಹೇಗೆ ನಡೆದರೋ ಹಾಗೆ ಲೋಕವು ನಡೆವುದು)ಎಂಬಂತೆ ನಾವು ನಡೆಯಲೊಲ್ಲೆವು, ಇವರು ಈ ಹಿಂದೆ ತಿರುಗಿದ ಊರಿನಲ್ಲೆಲ್ಲಾ ಬಲೋಬರಿಎರಡು ಮಾಡುತ್ತಲೇ ಬಂದಿದ್ದಾರೆ, ನಾವುಮೂರ್ಖರೆಂಬ ಅಪಖ್ಯಾತಿಯನ್ನು ಹೊರಲೊಲ್ಲೆವು, ಇವರು ಬೆಂಗಳೂರಿಗೆ ಬರುವುದಕ್ಕೆ ಮೊದಲೇ ಸರಿಮಾಡಿ ಬಿಡಿರಿ, ಎಲ್ಲರೂ ಸತ್ಕಾರಕ್ಕೆ ಕೂಡುತ್ತೇವೆ, ಎಂದರು. ಅದು ಪುಟ್ಟಣ್ಣಸೆಟ್ಟರವರಿಂದ ಆಗಲಿಲ್ಲ. ತಾನು ಸಾಕಿದ ಟಗರು ತನ್ನನ್ನೇ ಗುದ್ದಲಿಕ್ಕೆ ಬರುವುದು ಎಂಬ ಗಾದೆಯಂತೆ ಆಯಿತು.

ಬೆಂಗಳೂರಿನ ಅನೇಕ ಮಹನೀಯರು ಇವರು ಬೆಂಗಳೂರಿಗೆ ಬರ

ಬೇಕೆಂದು ಗೊತ್ತುಮಾಡಿದ ದಿವಸ ಇವರು ಊರೊಳಗೆ ಪ್ರವೇಶಮಾಡು ವುದನ್ನು ನೋಡುವುದಕ್ಕೆ ಕೂಡಾ ಬೇಸರಪಟ್ಟ ಸ್ಪೆಷಲ್ ಟ್ರೇನ್‌ನಲ್ಲಿ ಬೇರೊಂದೂರಿಗೆ ಯಾತ್ರೆ ಹೊರಟರ. ಇದರಿಂದ ಸರ್, ಕೆ, ಪಿ, ಪುಟ್ಟಣ್ಣಸೆಟ್ಟರವರ ಮುಂದಾಳುತ್ವಕ್ಕೆ ಭಂಗಬಂದಂತಾಯಿತು. ಇಂತಹ ಸ್ಥಿತಿಗೂ ಇವರು ಯೋಚಿಸಲೇ ಇಲ್ಲ.

ಮುಂದೆ ಮೈಸೂರಿಗೆ ಹೋದಾಗಲೂ ಈ ಸ್ಥಿತಿಯೇ ಪರಿಣಮಿಸಿತು ಅಲ್ಲಿನವರು ಒಂದು ವೀರಶೈವ ಡಿಸ್ಟ್ರಿಕ್ಟ್ ಕಾನ್‌ಫರೆನ್ಸನ್ನೇ ಏರ್ಪಡಿಸಿ ಆ ಮೂಲಕ ವೀರಶೈವ ಮತದ ಅನ್ಯೈಕಮತ್ಯತೆಯನ್ನು ಹೊಗಲಾಡಿಸಬೇಕೆಂಬ ಪ್ರಯತ್ನವನ್ನು ಮಾಡಿದರು. ಚಿತ್ರದುರ್ಗ ಶ್ರೀಮನ್ ನಿರಂಜನ ಜಗದ್ಗುರು ಮುರುಗೇಂದ್ರಮಹಾಸ್ವಾಮಿಗಳವರಿಗೂ ಬಿನ್ನಹಪತ್ರವನ್ನು ಬರೆದುಕೊಂಡರು. ಆ ಮಹಾಸ್ವಾಮಿಗಳವರು ಅನ್ಯೈಕಮತ್ಯಕ್ಕೆ ಅವಕಾಶ ಕೊಡಬಾರದೆಂದು ಯೋಚಿಸಿಕೊಂಡು ಶಾಸ್ತ್ರಸಮ್ಮತಿಯಂತೆ ನಡೆವುದಕ್ಕೆ ಸರ್ವರೂ ಬದ್ಧರಾಗಿ ಇರುತ್ತಾರೆ. ನಾವೂ ಇದರಂತೆ ನಡೆಯುವೆವು ಎಂಬ ಅಭಿಪ್ರಾಯದಿಂದ ಆಶೀರ್ವಾದ ಪತ್ರವನ್ನು ಬರಸಿದರು.

ಆ ಮೇಲೆ ಬಾಳೇಹಳ್ಳಿಯ ಶ್ರೀ ಯವರನ್ನು ಅಭಿಪ್ರಾಯವನ್ನು ತಿಳಿಯುವುದಕ್ಕಾಗಿ ಅವರಿಗೆ ಒಂದು ಬಿನ್ನಹಪತ್ರವನ್ನು ಬರೆದು ಕಾನ್‌ಫರೆನ್ಸಿನ ಪರವಾಗಿ ಕೆಲವು ಜನರು ಕೂಡಿದ ಒಂದು ಸಂಘ ( Deputation. ) ಕಳುಹಿಸಿಕೊಟ್ಟರು. ಬಾಳೆಯಹಳ್ಳಿ ಶ್ರೀ ಯವರು ಈ ಸಂಘದವರನ್ನು ಕಂಡು ಮಾತನಾಡುವುದಕ್ಕೇ ಅವಕಾಶವನ್ನು ಕೊಡಲಿಲ್ಲ.

ಸಮಾಜದ ಅಭಿವೃದ್ಧಿಯ ಸ್ಥಿತಿಯನ್ನು ಆಲೋಚಿಸುವ ಇವರ ಮುಂದಾಳುತನವು ಇದರಿಂದಲೇ ಚನ್ನಾಗಿ ವ್ಯಕ್ತವಾಗುತ್ತದೆ. ಸಮಾಜವು ಹೇಗಿದ್ದರೆ ತಾನೇ ಏನು? ಅದು ಬೆಳೆದರೆ ಬೆಳೆಯಲಿ ಇಲ್ಲದಿದ್ದರೆ ಹಾಳಾಗಲಿ, ತಾವೇ ಗುರುವೆಂದೂ ತಾವೇ ವೀರಶೈವರಲ್ಲಿ ಅತ್ಯಂತ ಹೆಚ್ಚಿನವರೆಂದೂ ಯಾರು ಹೇಳುತ್ತಾರೆಯೋ ( ಅದು ಶಾಸ್ತ್ರ ಸಮ್ಮತವಿರಲಿ, ಇಲ್ಲದಿರಲಿ, ಅದರ ವಿಚಾರವನ್ನು ಮಾತ್ರ ಮಾಡುವುದಿಲ್ಲ. ) ಅವರು ಕರೆದಲ್ಲಿಗೆ ಹೋಗುವವರು.

ಈಗಿನ ಸಮಾಜದ ರೀತಿಯೂ ಹೀಗೆಯೇ ಇದೆ ಪಕ್ಷ ( Party ) ಹುಟ್ಟಿದರೆ ಸಾಕು, ಅದರಲ್ಲಿ ಕೆಲವರು ಸೇರಿ ಕೆಲವು ಕರ್ತವ್ಯಗಳನ್ನು ಮಾಡಿ ' ಅಬದ್ಧೋವಾ ಸುಬದ್ಧೋವಾ ' ಅನ್ಯಾಯವಾಗಲಿ, ನ್ಯಾಯ

ವಾಗಲಿ ಕೀರ್ತಿಯನ್ನು ಪಡೆದರೆ ಶೀರಿತೆನ್ನುವ ಸ್ಥಿತಿಯುಳ್ಳದಾಗಿದೆ.

ಮುನಿಸಿಪಲ್ ಚುನಾವಣೆ, ತಾಲ್ಲೂಕು ಲೋಕಲ್ ಬೋರ್ಡ್ ಡಿಸ್ಟ್ರಿಕ್ಟ ಬೋರ್ಡ್ ಚುನಾವಣೆ ಇವುಗಳಲ್ಲಿಯೂ ಕೂಡಾ ಸೌಮ್ಯ ಪಕ್ಷವನ್ನು ತೋರಿಸಿ ಒಬ್ಬೊಬ್ಬರು ಒಂದೊಂದು ಕಾಲದಲ್ಲಿ ಭಾಗವಹಿಸಲಿ, ಎಂಬ ತಾಳ್ಮೆ ಇಲ್ಲದೆ ನಾವೇ ಈಗಲೂ ( ಯಾವಾಗಲೂ ) ಮುಂದಕ್ಕೆ ಬರಬೇಕೆಂಬ ಪ್ರತಿಷ್ಠೆಯುಳ್ಳವರಾಗಿ ಸಾವಿರಾರು ರೂಪಾಯಿಗಳನ್ನು ಅದಕ್ಕಾಗಿ ವೆಚ್ಚ ಮಾಡುತ್ತಾ ಇರುವುದನ್ನು ನೋಡಿದರೆ ಎಷ್ಟು ವ್ಯಸನಪಟ್ಟರೂ ಶೀರದು, ಮತ್ತು ಕೋರ್ಟುಗಳಲ್ಲಿ ನ್ಯಾಯದಕಡೆಗೂ ಅನ್ಯಾಯದಕಡೆಗೂ ವ್ಯಾಜ್ಯ ಮಾಡುವುದಕ್ಕಾಗಿ ವೀರಶೈವರೇ ಬಹಳವಾಗಿ ನಿಂತಿರುವುದು ಈ ವಿಚಾರವನ್ನು ಇನ್ನೂ ಸ್ಪಷ್ಟ ಪಡಿಸುವುದು.

ಸಮಾಜದವರಾದರೂ ಇವರು ಹೇಳತಕ್ಕ ಅಂಶಗಳು ಸಮಾಜದಲ್ಲಿ ನಿರ್ಣಯವನ್ನು ಪಡೆದಿಲ್ಲ, ಇವು ನಿರ್ಣಯವಾಗುವವರೆವಿಗೂ ನಾವು ತಟಸ್ಥವೃತ್ತಿಯಲ್ಲಿ ಇರಬೇಕು, ಅಸಹಕಾರ ಮಾಡಬೇಕು, ಎಂದು ಯೋಚಿಸುವವರಲ್ಲ

ಮೈಸೂರಿನಲ್ಲಿ ಅಷ್ಟು ದೊಡ್ಡ ಕಾನ್‌ಫರೆನ್ಸ್ ಮಾಡಿ ಸಾವಿರಾರು ಜನರು ಇವರ ಈ ಔದಾಸೀನ್ಯಭಾವವನ್ನು ನೋಡಿ ಇವರ ಸತ್ಕಾರವನ್ನು ನಿಷೇಧಿಸುವ ತೀರ್ಮಾನಗಳನ್ನು ಮಾಡಿಕೊಂಡರೂ ಅಲ್ಪಸಂಖ್ಯಾಕರಾದ ಜನರು ಇವರನ್ನು ಕರೆದೇ ಬಿಟ್ಟರು. ಹೀಗೆ ಸಮಾಜದಲ್ಲಿ ವಿಚಾರಶಕ್ತಿಯೇಲೋಪವಾಗಿ ಇರುವುದರಿಂದ ಸಮಾಜದಲ್ಲಿ ಅನೈಕಮತ್ಯವು ಚನ್ನಾಗಿತೋರುವಲ್ಲಿ ಅನುಮಾನವೇನು?

ಶ್ರೀ ನಿರಂಜನ ಜಗದ್ಗುರು ಹುಬ್ಬಳ್ಳಿ ಮೂರುಸಾವಿರ ಮಠದ ಮಹಾಸ್ವಾಮಿಗಳವರು ಒಂದು ಭಾಷಣದಲ್ಲಿ ಭಕ್ತರೇ ಪಲ್ಲಕ್ಕಿಯನ್ನು ಹೊರುವವರು, ಭಕ್ತರು ಪಲ್ಲಕ್ಕಿಯನ್ನು ಹೊರುವುದು ಬಿಟ್ಟರೆ ಗುರುಗಳೂ ಪಲ್ಲಕ್ಕಿಯೂ ಅಲ್ಲಿಯೇ ನಿಲ್ಲುವುವು, ಎಂದು ಅಪ್ಪಣೆಮಾಡಿರುವುದು ವಾಸ್ತವ್ಯವಾದ ಸಂಗತಿಯಾಗಿದೆ.

ಗುರುಗಳು ಸಮಾಜದ ಹಿತಚಿಂತನೆಯನ್ನು ಮಾಡದೆ ಇರುವಕಾಲದಲ್ಲಿ ಭಕ್ತರೇ ಅದನ್ನು ಮಾಡಿಕೊಳ್ಳುವುದು ಬಹಳ ವಿಹಿತವಾದಮಾರ್ಗವಾಗಿದೆ, ಆದ್ದರಿಂದ ಭಕ್ತರೇ ಜಾಣರಾಗಬೇಕು. ಈಗ ಸಮಾಜದಲ್ಲಿ ಎದ್ದಿರುವ ಅಶಾಂತಿಯನ್ನು ತಪ್ಪಿಸುವದಕ್ಕಾಗಿ ತಾವು ತಟಸ್ಥವೃ

ತ್ತಿಯನ್ನು ವಹಿಸಿ ಈ ಅಶಾಂತಿತನವನ್ನು ತಪ್ಪಿಸುವುದಕ್ಕಾಗಿ ಗುರುಗಳು ಹೇಳತಕ್ಕ ವಿಷಯಗಳನ್ನು ವೀರಶೈವ ಮಹಾಸಭೆಯಲ್ಲಿ ಅಥವಾ ಇಡೀಭರತಖಂಡದ ವೀರಶೈವ ಸಮಾಜವು ಸೇರಿದ ಒಂದು ವಿಶೇಷ ಮಹಾಸಭೆಯಲ್ಲಿ ಇದನ್ನು ತೀರ್ಮಾನ ಮಾಡಿಕೊಳ್ಳಿರಿ. ಆವೇಳೆ ವ್ಯವಹರಿಸಲಿಕ್ಕೆ ಅಡ್ಡಿ ಇಲ್ಲ, ಎಂದು ಹೇಳುವುದು ಈಗಿನ ಕಾಲದಲ್ಲಿನ ಅಶಾಂತಿಯನ್ನು ತಪ್ಪಿಸುವ ಸುಲಭವಾದ ಉಪಾಯವಾಗಿ ಇರುತ್ತದೆ:

ಮೇಲೆ ಕಂಡಂತೆ ಡಿಸ್ಟ್ರಿಕ್ಟಿನ ಕಾನ್‌ಫರೆನ್‌ಸಿನ ಪರವಾದ ಸಂಘವನ್ನೇ ಲಕ್ಷ್ಯಮಾಡದಿರುವ ಇವರು ಹಳ್ಳಿಸಳ್ಳಿಗಳಲ್ಲಿನ ತಾಲ್ಲೂಕು ಸ್ಥಳಮೊದಲಾದವುಗಳಲ್ಲಿನಜನರನ್ನು ಲಕ್ಷ್ಯ ಮಾಡುವುದುಂಟೇ?

( ಹೀಗಾಗಿ ಇದೂವರೆವಿಗೆ ಸುಮಾರು ಹತ್ತು ವರ್ಷಗಳ ಕಾಲದಲ್ಲಿ ಸಮಾಜದ ಜನರಿಗೆ ಧಾರ್ಮಿಕ ಸಂಬಂಧದ ತಿಕ್ಕಾಟ ಮುಕ್ಕಾಟಗಳು ಬಹಳವಾಗಿ ಒದಗಿ ಇರುತ್ತವೆ. )

' ಮಹಾಗಜಾಃ ಪಲಾಯಂತೆ ಮಶಕಾನಾಂತು ಕಾ ಕಥಾ'

ದೊಡ್ಡ ಆನೆಗಳೇ ಓಡುತ್ತಿರುವಲ್ಲಿ ನೊಣಗಳ ಪಾಡೇನು? ಎಂಬ ಗಾದೆಯಂತೆ ಮುಂಬಯಿ ಪ್ರಾಂತದ ಧಾರವಾಡ ಡಿಸ್ಟ್ರಿಕ್ಟಿನ ರಾಣೇಬೆನ್ನೂರ ಮೊದಲಾದ ಸ್ಥಳಗಳಲ್ಲಿನ ಇವರ ಸಂಚಾರದ ಪರಿಣಾಮವು ಆಗಿ ಇರುತ್ತದೆ.

ಈ ಸಮಾಜದವರಾದರೋ ಬಹಳ ಮಂದಗತಿಯುಳ್ಳವರು. ಒಂದು ಊರಿನಲ್ಲಿ ಇವರು ನಡೆಸಿದ ಸಂಗತಿಗಳನ್ನು ತಿಳಿದ ಮೇಲೆ ಮುಂದಿನ ಊರಿನವರು ಹಿಂದಿನ ಊರಿನಲ್ಲಿ ನಡೆದ ಸಂಗತಿಗಳು ತಮ್ಮ ಊರಿನಲ್ಲಿ ನಡೆದಂತೆಯೇ ಭಾವಿಸಿ ಅವರ ಮುಂದಿನ ಕಾರ್ಯಗಳನ್ನು ಯೋಜನೆ ಮಾಡುವವರಲ್ಲ ನಮ್ಮ ಊರಿಗೆ ಬರಲಿ, ನಾವು ಸರಿಪಡಿಸುತ್ತೇವೆ ಎಂದು ಹೆಮ್ಮೆಪಟ್ಟುಕೊಳ್ಳುವುದು, ಇವರು ಊರುಬಿಡುವಾಗ ಆ ಹೆಮ್ಮೆಯನ್ನು ತಾವೇ ತಗ್ಗಿಸಿಕೊಂಡು ನಾಚಿಕೊಳ್ಳುವುದು, . ಇದೇ ಸ್ಥಿತಿಯಾಗಿದೆ. ಬೆಂಕಿಯು ದೂರದಲ್ಲಿ ಇರುವಾಗಲೇ ಅದನ್ನು ನಂದಿಸುವವರಲ್ಲ. ಇನ್ನೊಬ್ಬರ ಮನೆ ಈಗ ಉರಿಯುತ್ತದೆ, ಅದು ನಮ್ಮ ಮನೆಗೆ ಬಂದಾಗ ನಾವು ನೋಡಿಕೊಳ್ಳೋಣ ಎಂಬ ಸ್ಥಿತಿಯಲ್ಲಿ ಇರತಕ್ಕವರು. ರಾಣೆಬೆನ್ನೂರಲ್ಲಿಯೂ ಮುನಿಸಿಪಲ್ ಪ್ರೆಸಿಡೆಂಟರವರಾದ ರಾವಬಹದ್ದೂರ ಬಣಗಾರ ಸಿದ್ದಪ್ಪನವರು ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದು ಪ್ರಯತ್ನ

ಪಟ್ಟರು. ಅವರಿಗೂ ತೇಜೋವಧೆಯಾಯಿತು. ಅವರೂ ಅಸಹಕಾರವನ್ನು ಬಲ ಪಡಿಸಿದರು.

ಈ ಹಿಂದೆ ತುಮಕೂರು ಮೊದಲಾದ ಕಡೆಗಳಲ್ಲಿಯೂ ಸಮಾಜದ ಐಕಮತ್ಯಕ್ಕಾಗಿ ವೀರಶೈವರು ಬಹಳ ಶ್ರಮಪಟ್ಟರು. ಈಗ ಆಗಲಿ, ಆಗ ಆಗಲಿ, ಎಂದು ಹೇಳುತ್ತಾ ಅಲ್ಲಿ ತಮಗೆ ಬರುವಷ್ಟು ಹಣ ವಸೂಲ್ ಮಾಡಿಕೊಂಡು ಮುಂದಕ್ಕೆ ತೆರಳಿದರು.

ಹೀಗೆಯೇ ಇವರು ನಡೆಸುತ್ತಾ ಬಂದಿದ್ದಾರೆ. ಬಂದವನು ಬರಲಿ, ಬಾರದಿದ್ದವನು ಬಿಡಲಿ, ಎಂಬ ಗರ್ವದಿಂದಲೇ ತಮ್ಮ ಸಂಚಾರವನ್ನು ಬೆಳೆಸಿದ್ದಾರೆ.

ಇವರು ಪ್ರಾರಂಭದಲ್ಲಿ ಒಂದು ದೊಡ್ಡ ಸಂಸ್ಕೃತ ಕಾಲೇಜನ್ನು ಮಾಡುತ್ತೇವೆ, ನಾವು ಮಾಡುತ್ತಿರುವ ಕಾಣಿಕೆಯ ಹಣದ ವಸೂಲಿಯು ಅದಕ್ಕಾಗಿ ವಿನಿಯೋಗಿಸಲ್ಪಡುತ್ತದೆ, ಎಂದು ಹೇಳುತ್ತಿದ್ದರು. ಹತ್ತು ವರ್ಷಗಳಾದಾಗ್ಯೂ ಇನ್ನೂ ಕಾಲೇಜಿನ ಗಂಧವೇ ಇಲ್ಲ ಇನ್ನೆಷ್ಟು ವರ್ಷಕ್ಕೆ ಮಾಡುವರೋ ನೋಡಬೇಕು. ಆದರೂ ಈಗ ಸಂಸ್ಕೃತ ಕಾಲೇಜಿನಿಂದಪ್ರಯೋಜನವಿಲ್ಲ. ಇದ್ದ ಕಾಲೇಜುಗಳಿಗೆ ವಿದ್ಯಾರ್ಥಿಗಳಿಲ್ಲ. ಬೇರೆ ಬೇರೆ ಧಾರ್ಮಿಕಾಭಿವೃದ್ಧಿಯ ಕೆಲಸಗಳು ಆಗಬೇಕಾಗಿವೆ. ವೀರಶೈವಮತ ತತ್ವವನ್ನು ಬೋಧಿಸುವ ಸಂಸ್ಕೃತ ಗ್ರಂಥಗಳ ಮತ್ತು ಶಿವಶರಣರ ವಚನಗಳನ್ನುಳ್ಳ, ಕನ್ನಡ ಗ್ರಂಥಗಳ ಅಭ್ಯಾಸವನ್ನು ನಡೆಸತಕ್ಕ ಶಿವಾನುಭಾವ ಪಾಠಶಾಲೆಗಳು ಹೆಚ್ಚಾಗಬೇಕಾಗಿವೆ. ಇದಕ್ಕೆ ಇವರು ಹಣ ಕೊಡುವರೇನು? ಶಿವಶರಣರ ವಚನಗಳು ಇವರಿಗೆ ಸಮ್ಮತವಿಲ್ಲ, ಎಂದ ಮೇಲೆ ಇವುಗಳ ಪ್ರಚಾರಕ್ಕೆ ಅನುಕೂಲಪಡಿಸುವುದೆಂಬ ವಿಷಯವು ರಾತ್ರಿಯಲ್ಲಿ ಸೂರ್ಯನು ಉದಯಿಸುತ್ತಾನೆ ಎಂಬ ಉಪಮಾನಕ್ಕೆ ಸರಿಯಾಗಿ ಇರುತ್ತದೆ.

ಇವರಿಗೆ ಅಲ್ಪಸಂಖ್ಯಾಕರಾದ ಭಕ್ತರೇ ಹಣವನ್ನು ಒಪ್ಪಿಸುತ್ತಿದ್ದಾಗ್ಯೂ ಇವರ ಖರ್ಚು ಆನೆ, ಕುದುರೆ, ಒಂಟೆ, ಮೆರವಣಿಗೆ ಆಭರಣ ಒಡವೆ (ಉಂಗುರ ಪೌಂಚ ಮೊದಲಾದವು) ಇವೇ ಮೊದಲಾದವುಗಳಿಗೆ ಬಹಳವಾಗಿ ಆಗುತ್ತಾ ಇದ್ದಾಗ್ಯೂ ಇವರು ಒಂ‍ದು ಮಣ ಬಂಗಾರದಸಾಮಾನು(ಕಿರೀಟ ಮುಂತಾದವುಗಳ ಬಗ್ಗೆ) ಇಷ್ಟೇ ಒಂದು ಮಣ ಬೆಳ್ಳಿಯ ಸಾಮಾನು( ಪಲ್ಲಕ್ಕಿ ಆಸನ ಮುಂತಾದವುಗಳ ಬಗ್ಗೆ) ಶೇಖರ ಮಾಡಿರುವುದಾಗಿ ವರ್ತಮಾನವಿದೆ, ಸಮಾಜವು ಕೇವಲ ಅಜ್ಞಾನದ

ಅವಸ್ಥೆಯಲ್ಲಿ ಇರುವಾಗ ಅದರ ಜ್ಞಾನವನ್ನು. ಈ ಭಂಗಾರ ಬೆಳ್ಳಿಗಳು ಹೆಚ್ಚಿಸುವವೇ?

ಇದನ್ನು ನೋಡುವದರಲ್ಲಿ ವೀರಶೈವರು ದ್ರವ್ಯದ ದಾನದಲ್ಲಿ ಕಡಿಮೆಯವರಲ್ಲ ಎಂಬುದು ಪ್ರಕಟವಾಗುತ್ತದೆ. ಇವರು ಎಲ್ಲಾ ಭಕ್ತರ ಹಿತಸ್ಥರಾಗಿದ್ದು ಸಮಾಜದ ಉನ್ನತಿಯನ್ನು ಮಾಡಬೇಕೆಂದು ಬಯಸಿದ್ದಲ್ಲಿ ಈಗಿನ ನೂರುಪಾಲಷ್ಟು ದ್ರವ್ಯ ಸಂಪಾದನೆ ಮಾಡುತ್ತಿದ್ದರು. ಸಮಾಜವೂ ಯೋಗ್ಯಫಲವನ್ನು ಹೊಂದುತ್ತಿದ್ದಿತು. ಅಂಥಾ ಸುಸಂಧಿಯನ್ನು ಇವರು ಕಳೆದುಬಿಟ್ಟರು.

ಇವರು ಮಾಡಿಕೊಂಡು ಬಂದಿರುವ ಪ್ರತಿಜ್ಞೆಯಾದರೂ ಈ ಹತ್ತುವರ್ಷಗಳಲ್ಲಿ ಎಷ್ಟು ಮಟ್ಟಿಗೆ ಫಲಕಾರಿಯಾಗಿ ಇರುತ್ತದೆ? ಬಸವೇಶ್ವರನನ್ನು ಸಂಕರ ಜಾತಿಯವನೆಂದು ಇವರೆಷ್ಟು ಕಡೆಯಾಗಿ ಕಂಡರೋ ಅಷ್ಟು ಮೇಲಾಗಿ ಬಸವೇಶ್ವರನು ತಿಳಿಯಲ್ಪಡುತ್ತಿದ್ದಾನೆ. ವೀರಶೈವರು ಬಸವಜಯಂತಿಯನ್ನು ಮಾಡುವದನ್ನು ಬಿಟ್ಟರೂ ಬ್ರಾಹ್ಮಣರೇ– ಕರ್ನಾಟಕ ಸಾಹಿತ್ಯ ಪರಿಷತ್ತಿನವರೇ– ಬಸವಜಯಂತಿಯನ್ನು ಮಾಡಲಿಕ್ಕೆ ಸಿದ್ಧರಿದ್ದಾರೆ.

ಇವರು ವಿಂಕ್ತರು ಮೊದಲಿನವರಲ್ಲ ಎಂದು ಹೇಳುವುದಕ್ಕೆ ಹೊರಟರೆ ಪಂಚಾಚಾರ್ಯರೇ ಪ್ರಭು ದೇವರಗಿಂತ ಈಚಿಗಿನವರು ಎಂಬುದಕ್ಕೆ ಗ್ರಂಥಗಳು ಹೊರಡುತ್ತಾ ಇವೆ. ಜಂಗಮದ ಮೇಲಿನ ಭಕ್ತಿಯು ಜನರಿಗೆ ಕಡಿಮೆಯಾಗಿಲ್ಲ. ಮೊದಲಿನ ಒಳ್ಳೆಯ ಜೋರಿನ ಹತ್ತುವರ್ಷಗಳ ಅವಧಿಯೇ ಹೀಗಿರುವಲ್ಲಿ ಮುಂದಿನ್ನೇನು ಮಾಡುತ್ತಾರೆಂಬುದು ತ್ರೈರಾಸಿಕ ಲೆಖ್ಖಕ್ಕೆ ಸಿಕ್ಕುವಂತೆ ಇದೆ

ಇವರು ಮೈಸೂರು ದೇಶದಲ್ಲಿ ಸಂಚರಿಸುವಾಗ ಹಾಗೂ ಹೀಗೂ ದೊಡ್ಡವರ ಸಹಾಯದಿಂದ ಮೈಸೂರು ಶ್ರೀಮನ್ ಮಹಾರಾಜರವರ ಪ್ರೀತಿ ಪಾತ್ರರಾಗಿ ಕೆಲವುಕಾಲ ಮೆರೆದರು.

ಮೈಸೂರಿನಲ್ಲಿ ಇವರು ಮೆರೆದ ಸ್ಥಿತಿಯನ್ನು ಏನು ಹೇಳೋಣ! ಅಲ್ಲಿಗೆ ಹೋದ ಕೂಡಲೇ ಇವರು ತಮ್ಮ ಸ್ಥಿತಿಯನ್ನು ಬದಲಾಯಿಸಿದರು. ಬ್ರಾಹ್ಮಣ ಗುರುಗಳಂತೆ ಮುಂದೆ ದೇವರ ಪಲ್ಲಕ್ಕಿ ಎಂದರೆ ಇವರ ಮಠದ ದೇವನಾದ ವೀರಭದ್ರೇಶ್ವರನ ಪಲ್ಲಕ್ಕಿ ಹಿಂದೆ ಇವರ ಪಲ್ಲಕ್ಕಿ ಹೀಗೆ ಮೆರೆವಣಿಗೆ ನಡೆಯಿತು. ಅರಮನೆಯಲ್ಲಿ ಹೋದಾಗ ವೀರಭದ್ರೇಶ್ವರನ ಮೂರ್ತಿ ಪೂಜೆಯನ್ನು ಮಾಡಿ ಶ್ರೀಮನ್ ಮಹಾರಾಜರವರಿಗೆ ಅದರ ಮಂಗಳಾರತಿಯನ್ನು ಒಪ್ಪಿಸಿದರು. ವೀರಶೈವರಲ್ಲಿ ಸಾಧಾರಣ

ವಾಗಿ ಒಬ್ಬ ಮಠದಯ್ಯನವರು ಮೂರ್ತಿ ಪೂಜೆಯನ್ನು ಮಾಡುವುದಿಲ್ಲ. ಇವರು ಸಂಸ್ಥಾನಿಕರು, ಮೂರ್ತಿಪೂಜೆಯನ್ನು ಮಾಡಿ ಹಿರಿಯಶೈವರೆನಿಸಿಕೊಂಡಿದ್ದಾರೆ. ಹಾವೇರಿಯ ಬಸವರಾಜ ಪತ್ರಿಕೆಯಲ್ಲಿ ಇವರು ಪೂಜಾರರೆಂದು ಜರಿದರು. ಆದರೂ ತಮ್ಮ ಕೆಲಸವು ಉತ್ತಮವಾದುದೆಂಬುದನ್ನು ಇವರು ಸಿದ್ಧಮಾಡಿ ತೋರಿಸಲಿಲ್ಲ. ಷಡಧ್ವ ಶುದಿಯಿಂದ ವೀರಶೈವದೀಕ್ಷೆಯನ್ನು ಹೊಂದುವಪೂರ್ವದಲ್ಲಿ ಶುದ್ಧಶೈವ ಲಕ್ಷಣವಿರುವ ಲಿಂಗಧಾರಿಯು ಈ ಮೂರ್ತಿಪೂಜೆಯನ್ನು ಮಾಡಬೇಕೆಂದು ವಿಧಿಸಿರುವುದೇ ಹೊರತು ವೀರಶೈವನಿಗೆ ಈ ಮೂರ್ತಿ ಪೂಜೆಯೇ ಹೇಳಲ್ಪಟ್ಟಿಲ್ಲ. ಶ್ರೀ ತೋಂಟದ ಸಿದ್ಧಲಿಂಗಸ್ವಾಮಿಗಳು ಕಟ್ಟಿದ್ದಕಲ್ಲನ್ನು ಬಿಟ್ಟು ನೆಟ್ಟದ್ದ ಕಲ್ಲಿಗೆ ನಮಸ್ಕಾರ ಮಾಡುವವನು ಮರುಳನು, ಎಂಬುದಾಗಿ ಸ್ಪಷ್ಟವಾಗಿ ತಿರಸ್ಕಾರಮಾಡಿ ತೋರಿಸಿ ಇರುತ್ತಾರೆ.

ಮೈಸೂರಿನಲ್ಲಿ ಬ್ರಾಹ್ಮಣ ಗುರುಗಳಿಗೆ ಮೂರನೆಯವರ್ಗದವರಿಗೆ ಸಲ್ಲುತಿದ್ದ ಮರ್ಯಾದೆಗಳಲ್ಲಿಯೂ ಕೆಲವನ್ನು ಹೊಂದದೆ ಅರಮನೆಯಲ್ಲಿಮೂರ್ತಿ ಪೂಜೆಮಾಡಿ ಶ್ರೀ ಮನ್‌ಮಹಾರಾಜರವರ ಎದುರಿಗೆ ನಿಂತುಕೊಂಡು ಮಂಗಳಾರತಿಯನ್ನೊಪ್ಪಿಸಿ ಹಿರಿಯಪೂಜಾರರಾಗಿ ಬಂದರು.

ಇತರ ಕಡೆಗಳಲ್ಲಿ ಇಲ್ಲೆಲ್ಲಾ ಸಂಚರಿಸುವಾಗ ಆ ವೀರಭದ್ರೇಶ್ವರನ ಪಲ್ಲಕ್ಕಿ ಇರುವುದಿಲ್ಲ. ಹೀಗೆ ಕಾಲಕಾಲಕ್ಕೆ ಜನರನ್ನು ಮೆಚ್ಚಿಸಲಿಕ್ಕೆ ತಕ್ಕವೇಷಗಳನ್ನು ಇವರು ಹಾಕುತ್ತಿರುತ್ತಾರೆ.

ಬ್ರಿಟಿಷ್ ಸೀಮೆಗೆ ಪ್ರವೇಶಿಸಿದ ಕೂಡಲೆ ಇವರ ಹಿಂದಣ ಸಂಗತಿಗಳ ವಿಚಾರವು ನಡೆದು ಸರಕಾರದ ಪರವಾಗಿ ಜಗದ್ಗುರು ಎಂತ ತಿಳಿಯುವದಿಲ್ಲವೆಂತಲೂ ಬೇಕಾದವರು ಹಾಗೆ ಕರೆದುಕೊಳ್ಳಲಿ ಎಂತಲೂ ಧಾರವಾಡದ ಕಲೆಕ್ಟರವರ ನಿರ್ಣಯವಾಯಿತು. ಹೀಗಾಗಿ ಜುಲುಮೆಗೆ ಇವರನ್ನು ಜಗದ್ಗುರು ಎಂದು ಕರೆಯುವರಾರು? ಇವರ ಆಶ್ರಯಕ್ಕೆ, ಇವರ ಉಪಕಾರಕ್ಕೆ,ಅಪೇಕ್ಷೆಪಟ್ಟವರು ಮಾತ್ರ ಕರೆಯಬಹುದು.' ಸಿದ್ಧಾಂತ ಶಿಖಾಮಣಿಯಲ್ಲಿ ಗುರುಮಹತ್ವ ಜಂಗಮಮಹತ್ವ ಎಂಬ ಸ್ಥಳಗಳನ್ನು ನೋಡುವುದಾದರೆ ಗುರುಮಹತ್ವದಲ್ಲಿ ಗುರುವಿಗೆ ವಿಶ್ವಭಾಸಕ ಎಂಬ ಪದಗಳನ್ನು ಪ್ರಯೋಗಿಸದೆ ಜಂಗಮ ಮಹತ್ವ ಸ್ಥಲದಲ್ಲಿ ಜಂಗಮಕ್ಕೆ ವಿಶ್ವಭಾಸಕ ಎಂಬ ಪದವನ್ನು ಉಪಯೋಗಿಸಿ ಇರುವುದರಿಂದ ಜಂಗಮನೇ ಜಗದ್ಗುರು ಎಂದು ಬೋಧೆಯಾ

ಗುತ್ತದೆ.

ಪೀ ಶೈವರು ಪೂರ್ವದಿಂದಲೂ ಆಚರಣೆಯಲ್ಲಿ ಇಟ್ಟುಕೊಂಡಿರುವಂತೆ ಮತ್ತು ಶಾಸ್ತ್ರದಲ್ಲಿ ಹೇಳುವಂತೆ ಜಂಗಮವೇ ಜಗದ್ಗುರುವೆಂದು ಹೇಳುತ್ತಾರೆಯೇ ಹೊರತು ಬಲವಂತದಿಂದ ಇವರ ಜಗದ್ಗುರುತ್ವವನ್ನು ಸಿದ್ಧಮಾಡಲಿಕ್ಕೆ ಹೋದರೆ ಅದು ಸಿದ್ಧವಾದೀತೇ? ಇವರೇ ಒಂದು ವೀರಶೈವ ಮಹಾಸಭೆಯನ್ನು ಏರ್ಪಡಿಸಿ ಅದರಲ್ಲಿ ಜಗದ್ಗುರುತ್ವವನ್ನು ಸಿದ್ಧಪಡಿಸಿಕೊಳ್ಳಲಿ, ನೋಡೋಣ.

ಇದೂವರೆವಿಗೆ ಇವರೊಂದು ಪತ್ರಿಕೆಯನ್ನು ಹೊರಡಿಸುತ್ತಿದ್ದಾಗ್ಯೂ ತಮ್ಮ ಸಂಚಾರ ಕಾಲದಲ್ಲಿ ಬೋಧಿಸುತ್ತಿದ್ದಾಗ್ಯೂ ಸಮಾಜವನ್ನು ಒಡಂಬಡಿಸಿ ತಮ್ಮ ಕಡೆಗೆ ಎಳೆದುಕೊಳ್ಳುವ ಸ್ಥಿತಿಯು ಇನ್ನೂದರೂ ಬಂದಿಲ್ಲ. ಎಷ್ಟುದಿವಸ ಮರೆಯಲ್ಲಿ ಕೆಲಸಮಾಡುವದು? ಈಗಲಾದರೂ ಬಹಿರಂಗವಾಗಿ ಇಡೀಭಾರತದ ವೀರಶೈವರ ಮುಂದೆ ತಮ್ಮ ನೂತನ ತತ್ವಗಳನ್ನೆಲ್ಲ ಇವರು ಸಿದ್ಧಮಾಡಲಿ? ಸುಮ್ಮನೆ ಅನೈಕಮತ್ಯವನ್ನು ಬೆಳಸುವುದರಿಂದ ಪ್ರಯೋಜನವೇನು? ಭಕ್ತರ ಹಣವೇ ಹಾನಿ, ತಮಗೂ ಗೌರವಿಲ್ಲ. ಈ ವಿಭಾಗದ ದೆಸೆಯಿಂದ ಭಕ್ತರು ಲೌಕಿಕದಲ್ಲಿಯೂ ಜಗಳಮಾಡಿಕೊಂಡು ತಮ್ಮ ದ್ರವ್ಯ ನಷ್ಟಮಾಡಿಕೊಳ್ಳುತ್ತಿರುವರು. ಇಂಥಾ ಅಶಾಂತಿಗೆ ಇವರೇಕೆ ಅವಕಾಶವನ್ನು ಕೊಡಬೇಕು. ಇಂಥಾ ಅಶಾಂತಿಗೆ ಇವರೇ ಕಾರಣರಲ್ಲವೇ!

ಇವರು ಬಸವೇಶ್ವರನನ್ನು ನಿಂದಿಸುವದಿಲ್ಲ, ಎಂದು ಹೇಳುತ್ತಾರೆ. ಆದರೆ ಬಸವೇಶ್ವರನ ವಚನಗಳು ಕೆಲವು ಮಾನ್ಯವಲ್ಲ ಎಂದು ಹೇಳುತ್ತಾರೆ. 'ವೇದಕ್ಕೆ ಒರೆಯ ಕಟ್ಟುವೆ' ಎಂದು ಹೇಳಿದ ಬಸವೇಶ್ವರನ ವಚನವು ಯೋಗ್ಯವಲ್ಲವಂತೆ. ವೇದವನ್ನು ಬಸವೇಶ್ವರನು ಒಪ್ಪುವದಿಲ್ಲವಂತೆ. ಬಸವೇಶ್ವರನ ವಚನಗಳಲ್ಲಿ ಒಂದು ಅಕ್ಷರವೂ ತೆಗೆದು ಹಾಕುವಂತಹುದಲ್ಲ. ಅನೇಕ ಋಷಿಗಳು ವೇದವನ್ನು ತಿರಸ್ಕರಿಸುವುದು ಉಪನಿಷತ್ತುಗಳಲ್ಲಿ ಕಂಡು ಬರುತ್ತದೆ.

ವಿಷ್ಣುಸ್ಮೃತಿ ಅನೆಯ ಅಧ್ಯಾಯ ೩೫ನೆಯ ಶ್ಲೋಕ

ತ್ಯಕ್ತ್ವಾ ಲೋಕಾಂಶ್ಚ ವೇದಾಂಶ್ಚ ವಿಷಯಾನೀಂದ್ರಿಯಾಣಿಚ
ಆತ್ಮನ್ಯೇವ ಸ್ಥಿತೋಯಸ್ತು ಪ್ರಾಪ್ನೋತಿ ಪರಮಂ ಪದಂ

ಇದರಲ್ಲಿ ವೇದಗಳನ್ನು ಬಿಡಬೇಕೆಂದು ಹೇಳಿದೆಯಲ್ಲವೇ? ಹೀಗಿದ್ದರೂ

ಬ್ರಾಹ್ಮಣರು ಆ ಋಷಿಗಳನ್ನು ತಿರಸ್ಕರಿಸಿಲ್ಲ. ಇವರು ಮಾತ್ರ ಇಷ್ಟಕ್ಕೇನೇ ಬಸವೇಶ್ವರನನ್ನು ವೀರಶೈವಮತದಿಂದ ಹೊರಗೆ ನೂಕುತ್ತಾರೆ ಹಾಗಾದರೆ ವೇದವನ್ನೆಲ್ಲಾ ಇವರು ನಂಬುತ್ತಾರೇನು? ವೇದದಲ್ಲಿ ಬ್ರಾಹ್ಮಣ ಎಂಬ ಭಾಗದಲ್ಲಿ ಹೇಳಲ್ಪಟ್ಟ ಇಂದ್ರ, ವರುಣ, ಅಗ್ನಿ, ಮೊದಲಾದವರ ಪೂಜೆಯನ್ನೂ ಯಜ್ಞಯಾಗಾದಿಗಳನ್ನೂ ಮಾಡುತ್ತಾರೇನು? ಸಂಹಿತೆಯಲ್ಲಿ ಹೇಳಲ್ಪಟ್ಟಂತೆ ಈ ದೇವತೆಗಳ ಸ್ತೋತ್ರವನ್ನು ಇವರು ಮಾಡುತ್ತಾರೇನು? ಖಡ್ಗಕ್ಕೆ ಒರೆಯನ್ನು ಹಾಕಿ ಮುಚ್ಚಿದಂತೆ ಇಂತಹ ವೇದ ( ಮೂಗು ಎಂದರೆ ಮುಂಭಾಗ ) ಗಳಿಗೆ ಒರೆಯನ್ನು ಹಾಕಿ ( ಮುಚ್ಚಿ ) ವೇದಾಂತ, ( ಬ್ರಹ್ಮಸೂತ್ರ ) ವನ್ನು ಗ್ರಹಿಸುವೆ ಎಂಬ ಬಸವೇಶ್ವರನ ವಚನದ ಮರ್ಮವನ್ನು ಇವರೇನು ಬಲ್ಲರು? ಬಸವೇಶ್ವರನು ಜೈನ, ಬೌದ್ಧರಂತೆ ವೇದವನ್ನು ತಿರಸ್ಕರಿಸುವುದಾದರೆ ಗಾಯತ್ರಿ ಮಂತ್ರದಲ್ಲಿ ಇರುವ ' ಭರ್ಗೋದೇವಸ್ಯ ಧೀಮಹಿ ' ಎಂಬುದನ್ನು ತನ್ನ ವಚನದಲ್ಲಿ ಏಕೆ ಹೇಳುತ್ತಿದ್ದನು? ಬಸವೇಶ್ವರನು ಬ್ರಾಹ್ಮಣನಾಗಿದ್ದು ಆ ಮೇಲೆ ಲಿಂಗಧಾರಣಮಾಡಿದವನಲ್ಲವೇ? ಆದ್ದರಿಂದಲೇ ಭರ್ಗೋದೇವಸ್ಯ= ಶಿವನನ್ನು, ಧೀಮಹಿ (ಧರಾಮಹೇ),= ಧಾರಣ ಮಾಡುತ್ತೇನೆ, ಎಂಬ ಅರ್ಥದಲ್ಲಿ ಗಾಯತ್ರಿ ಮಂತ್ರವಿರುವುದರಿಂದ ಇದು ಲಿಂಗಧಾರಣ ಪರವೆಂದು ಅರ್ಥಮಾಡಿಕೊಂಡು ಇದನ್ನು ಹೇಳಿರುತ್ತಾನೆ. ( ಈ ಹಿಂದೆ ೧೧ನೆಯ ಪುಟದಲ್ಲಿ ಶ್ರೀ ನಿರಂಜನ ಜಗದ್ಗುರು ತೋಂಟದಸಿದ್ಧಲಿಂಗ ಸ್ವಾಮಿಗಳು ಅಪ್ಪಣೆಕೊಡಿಸಿದ ' ಕಟ್ಟಿದ್ದ ಕಲ್ಲನ್ನು ಬಿಟ್ಟ ' ಎಂಬಲ್ಲಿ ಇರುವ ಕಲ್ಲು ಎಂಬ ಶಬ್ದದ ಅರ್ಥವು ಮೂರ್ತಿ ಪೂಜೆಮಾಡುವ ಒಬ್ಬ ಲಿಂಗಧಾರಿಯು ತಾನು ಶಿವರೂಪನು ಎಂಬುದನ್ನು ಮರೆದು ಇನ್ನೊಬ್ಬ ದೇವನುಂಟೆಂದೂ ತಾನು ಮನುಷ್ಯನೆಂದೂ ಒಂದು ಮೂರ್ತಿಗೆ ಅಡ್ಡಬೀಳುವುದರಿಂದ ಅವನ ಲಿಂಗವು ಕಲ್ಲಿನ ರೂಪವಾಗಿ ಅವನಿಗೆ ಇದ್ದಂತಾಯಿತು, ಎಂಬ ಅರ್ಥವೇ ಹೊರತು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳ ಅನುಸಂಧಾನಮಾಡುವ ವೀರಶೈವನಿಗೆ ಈ ಅರ್ಥವು ಹೇಳಲ್ಪಟ್ಟುದಲ್ಲ. ಇಂಥವರು ಕಟ್ಟಿದುದು ನಿಜವಾದ ಲಿಂಗವು ಇಂಥಾಲಿಂಗವನ್ನೇ ಬಸವೇಶ್ವರನು ಇಲ್ಲಿ ಹೇಳಿದ್ದಾನೆ.)

ಬಸವೇಶ್ವರನು ಹೇಳಿದ್ದುದು ಯಾವುದೊಂದು ವಿಷಯವೇ ಆದರೂ ಋಷಿಗಳಿಂದ ಒಪ್ಪಲ್ಪಟ್ಟುದಲ್ಲ ಎಂಬುದನ್ನು ಇವರು ತೋರಿಸುವುದಾದರೆ ಆ ಒಂದೊಂದು ವಿಷಯಕ್ಕೂ ಖಂಡನೆಮಾಡಿ ಅದು

ಋಷಿಗಳಿಂದ ಒಪ್ಪಲ್ಪಟ್ಟದ್ದೆಂದು ತೋರಿಸಲಿಕ್ಕೆ ಬರುವಂತೆ ಇದೆ. ಇಲ್ಲಿ ಧೀಮಹಿ ಎಂಬುದಕ್ಕೆ ಧರಾಮಹೇ ಎಂಬ ಅರ್ಥವನ್ನು ಸತ್ಯಾರ್ಥ ಪ್ರಕಾಶಿಕೆಯಲ್ಲಿಯೂ ಬರೆದಿಲ್ಲವೇ?

ಇವರು ಶಿವಾದ್ವೈತಮಂಜರಿ ಎಂಬುದಕ್ಕೆ ಕನ್ನಡ ಅರ್ಥವನ್ನು ಬರೆಯಬೇಕಾದರೆ ಒಬ್ಬ ಬ್ರಾಹ್ಮಣ ಪಂಡಿತನನ್ನು ಆಶ್ರಯಿಸಬೇಕಾಯಿತು. ಇವರ ಬಳಿಯಲ್ಲಿ ಇದ್ದ ಶಾಸ್ತ್ರಿಗಳಿಗಾಗಲಿ ಇವರ ಮಾರ್ಗದರ್ಶಕರಾದ ಕಾಶೀನಾಥ ಶಾಸ್ತ್ರಿಗಳಿಗಾಗಲೀ ಈ ಕೆಲಸವು ಬಗೆಹರಿಯಲಿಲ್ಲ. ಬಸವೇಶ್ವರನು ಹೀಗೆಮಾಡಿದನೇನು? ಜನಿವಾರ ಧಾರಣೆಯನ್ನು ಏಕೆ ತಿರಸ್ಕರಿಸುವೆ, ಎಂದು ಕೇಳಲಿಕ್ಕೆ ಬಂದ ನೂರಾರು ಬ್ರಾಹ್ಮಣರಿಗೆ ತಕ್ಕಪ್ರಮಾಣಗಳನ್ನು ತೋರಿಸಿ ಅವರನ್ನು ಖಂಡಿಸಿದನು.

ತಾಯಿನುಡಿಯಲ್ಲಿ ಹೇಳಿದರೆ ಅನೇಕರಿಗೆ ತಿಳಿದು ಓದಿದವರು ಅದರ ಫಲವನ್ನು ಬೇಗನೆ ಅನುಭವಿಸುವರೆಂಬ ಉದಾರಬುದ್ಧಿಯಿಂದ ಲೋಕಹಿತದೃಷ್ಟಿಯಿಂದ ಕನ್ನಡ ವಚನಗಳನ್ನು ಹೇಳಿದನೇಹೊರತು ಬೆಂಗಳೂರಿನಲ್ಲಿ ಇವರು ನಡೆಸಿದ ಸಭೆಯಲ್ಲಿ ಸಂಸ್ಕೃತ ಪಂಡಿತರು ವಾಗ್ವಾದವನ್ನು ನಡೆಸಿದಾಗ ಇದರಲ್ಲಿ ಏನು ಅರ್ಥವಿದೆ? ಎಂದು ಮೈಸೂರು ದೇಶದ ದಿವಾನ್ ಸಾಹೇಬರವರು ಕೇಳಿದರೆ ಇದು ಸಂಸ್ಕೃತಜ್ಞರಿಗೇ ಗೊತ್ತು ತಮಗೆ ತಿಳಿಯುವಂಥಾದ್ದಲ್ಲ ಎಂಬ ಉತ್ತರವನ್ನು ಕೊಟ್ಟು ತಿಳಿಯದ ಜನರನ್ನು ಬೆರಗುಗೊಳಿಸುವ ಬಗೆಯಲ್ಲಿ ಬಸವೇಶ್ವರನು ಸಂಸ್ಕೃತದಲ್ಲಿ ಹೇಳಲಿಕ್ಕೆ ಹೋಗಲಿಲ್ಲ.

ಆ ಬಸವೇಶ್ವರನಿಗೆ ತಿಳಿದ ಸಂಸ್ಕೃತದಲ್ಲಿ ಸಾವಿರದಲ್ಲಿ ಒಂದು ಭಾಗವನ್ನೂ ತಿಳಿಯದ ಇವರು ಆತನನ್ನು ಸಂಸ್ಕೃತ ಬಲ್ಲವನಲ್ಲವೆಂದು ಜರಿಯುವುದು ಎಷ್ಟು ಅನ್ಯಾಯದ ಕೆಲಸ? ವಚನಗಳನ್ನು ಕನ್ನಡದಲ್ಲಿ ಬರೆವವರು ಸಂಸ್ಕೃತವನ್ನು ತಪ್ಪಾಗಿ ಬರೆದರೆ ಅದು ಬಸವೇಶ್ವರನ ದೋಷವೇ? ಇದೂಹಾಗಿರಲಿ,

ಬಸವ ಎಂಬ ಶಬ್ದವನ್ನು ಯಾರಾದರೂ ಉಚ್ಚರಿಸಿದರೆ ಇವರಿಗೆ ಸಹನೆಇಲ್ಲ. ಇದಕ್ಕೆ ತಮ್ಮಲ್ಲಿ ಕೆಲಸ ಮಾಡುತ್ತಿರುವ ಬಸವಲಿಂಗ ಶಾಸ್ತ್ರಿಗಳು ಎಂದು ಪೂರ್ವದಲ್ಲಿ ಕರೆಯಲ್ಪಡುತ್ತಾ ಇದ್ದವರಿಗೆ ವೃಷಭಲಿಂಗ ಶಾಸ್ತ್ರಿ ಎಂದು ಇವರು ಕರೆಯುತ್ತಾ ಇರುವುದೇ ದೊಡ್ಡ ಸಾಕ್ಷಿ. ವೀರಶೈವರ ಹೃದಯದಂತೆ ಇರುವ ಬಸವೇಶ್ವರನಿಗೆ ಇವರಿಷ್ಟು

ತಿರಸ್ಕಾರಭಾವವನ್ನು ತೋರಿಸುವುದು ವೀರಶೈವರಿಗೆ ಹೃದಯದ ನೋವಲ್ಲವೇ! ಅವರಿಗೆ ಅಶಾಂತಿಯಾಗದೆ ಉಳಿದೀತೇ?

ಆ ಬಸವೇಶ್ವರನನ್ನು ನಿಂದಿಸಿ ಕಾಶೀನಾಥ ಶಾಸ್ತ್ರಿ ಮುಂತಾದವರು ಬರೆದರೆ ಅದು ಸರಿಯಲ್ಲವೆಂದು ಒಮ್ಮೆಯಾದರೂ ಇವರು ಖಂಡಿಸಿದವರೇ? ಇದರಿಂದ ಇವರಿಗೆ ಒಳಗೆ ಆನಂದವಿರುವುದೆಂಬದನ್ನು ಸಮಾಜದವರು ತಿಳಿಯದೆ ಇದ್ದಾರೇನು? ಈ ದೆಸೆಯಿಂದಲೇ ಇವರಿಗೆ ಸತ್ಕಾರದ ಬದಲಾಗಿ ವಷಟ್ಕಾರಗಳೇ ಜರುಗುತ್ತಿರುವುವು.

ಮತ್ತೆ ' ನಾವೇನು ನಿಂದಿಸುವೆವೇ , ಎಂದು ಹೇಳುವುದು ಒಪ್ಪಾರದ ಮಾತಲ್ಲದೆ ನಿಜವಾದುದೇನು? ನಿಂದಿಸುವುದೆಂದರೆ ಬಸವೇಶ್ವರನನ್ನು ಹುಡುಗರಂತೆ ಅಪ್ಪ ಅವ್ವ ಎಂದು ಬೈಯಬೇಕೇನು? ಇವರು ನಿಂದಿಸದಿದ್ದರೆ ಹಾಗೆ ನಿಂದಿಸಿದ ಗ್ರಂಥಗಳು ನಮ್ಮ ಒಪ್ಪಿಗೆಗೆ ಅರ್ಹವಲ್ಲ ಎಂಬುದನ್ನು ಪ್ರಕಟಿಸಲಿ, ಮತ್ತು ಬಸವೇಶ್ವರನ ಬೋಧೆಯಂತೆ ನಡೆಯಲಿ. ಬಸವೇಶ್ವರನ ಬೋಧೆಯೆಲ್ಲವೂ ವೀರಶೈವ ಮತ ತತ್ವಕ್ಕೆ ಸರಿಯಾಗಿದೆ, ಎಂಬುದನ್ನು ತೋರಿಸಲು ಯಾವ ಸಂಶಯವೂ ಇರುವುದಿಲ್ಲ. ಇಂಥಾದ್ದರಲ್ಲಿ ಆ ಮಹಾನುಭಾವಿಗೆ ತೋರಿಸುವ ಸ್ವಲ್ಪ ಅನಾದರಣೆಯೂ ಕೂಡಾ ಎಲ್ಲಾ ವೀರಶೈವರ ಅನಾದರಣೆಯೇ ಆಗಿದೆ ಬಸವೇಶ್ವರನನ್ನು ಬಿಟ್ಟು ವೀರಶೈವ ಮತವಿಲ್ಲ ವೀರಶೈವಮತವನ್ನು ಬಿಟ್ಟ ಬಸವೇಶ್ವರ ಇಲ್ಲ ಇವನನ್ನು ಅನಾದರಣೆ ಮಾಡುವವರು ಆ ಬಸವೇಶ್ವರನ ಪದ್ಧತಿಯನ್ನೇ ಅನುಸರಿಸಿ ಇರುವ ಎಲ್ಲಾ ವೀರಶೈವರಿಗೂ ಗುರುವಾಗುವುದು ಹೇಗೆ? ಹಣವನ್ನು ಸೆಳೆಯುವದಕ್ಕಾಗಿ ಮಾತ್ರ ಅಲ್ಲವೇ? ಈ ಲಕ್ಷಣವು ಸಮಾಜದಲ್ಲಿ ಅಶಾಂತಿಯನ್ನು ಉಂಟು ಮಾಡದೆ ಬಿಟ್ಟೀತೇ? ವೀರಶೈವ ತತ್ವವನ್ನು ತಿಳಿಯದವರು ಮತ್ತು ಪಕ್ಷ ( Party ) ಕಟ್ಟಬೇಕೆಂಬುವವರು ಮಾತ್ರ ಇವರಿಗೆ ಸತ್ಕಾರವನ್ನು ಮಾಡುವರೇ ಹೊರತು ತಿಳಿದವರಾಗಲೀ ಪಕ್ಷಪಾತಿಗಳಾಗಲೀ ಎಂದಿಗೂ ಮಾಡಲಾರರು. ಆದುದರಿಂದಲೇ ಸಮಾಜದಲ್ಲಿ ಅಶಾಂತಿಯು ಬಹಳವಾಗಿ ಬೆಳೆದಿದೆ. ವೀರಶೈವರು ಇವರದೆಸೆಯಿಂದ ಬಹಳವಾಗಿ ಕ್ಷೋಭೆಯನ್ನು ಹೊಂದಿ ಇರುತ್ತಾರೆ. ಪ್ರಸಿದ್ಧ ಕಳ್ಳರಿಗೆ ಕಳ್ಳತನದಲ್ಲಿ ಕೀರ್ತಿಯು ಹಬ್ಬುವಂತೆ ಇವರಿಗೆ ಈ ಅಶಾಂತಿತನದಲ್ಲಿ ಕೀರ್ತಿಯು ವೀರಶೈವ ಸಮಾಜದಲ್ಲಿ ಅಲ್ಲದೆ ಇತರ ಸಮಾಜದಲ್ಲಿಯೂ ಕೂಡಾ ಹಬ್ಬುತ್ತಲಿದೆ. ಇಂಥಾ ಅಶಾಂತಿ ಕೀರ್ತಿಯನ್ನೇ ಹೊತ್ತು ತಮ್ಮ ಜನ್ಮ ಸಾರ್ಥಕ ಮಾಡಬೇಕೆಂ

ದು ಇವರು ಯೋಚಿಸಿದರೆ ಇದು ಬಹಳ ಅನ್ಯಾಯವಲ್ಲವೇ?

ಇಂಥಾ ಅಶಾಂತಿಕಾರಣರಾದ ಈ ಶಿವಾನಂದ ಶಿವಾಚಾರ್ಯರು ಈಗ ಹಾವೇರಿಗೆ ಬಂದಿರುತ್ತಾರೆ ಈಗ ನೋಡುವಲ್ಲಿ ಹತ್ತುವರ್ಷಗಳ ಹಿಂದೆ ಇದ್ದದ್ದಕ್ಕಿಂತ ಇವರ ಚಳವಳಿಯು ( ಕ್ರಾಂತಿ ) ಯು ಇನ್ನೂ ಹೆಚ್ಚಾಗಿದೆ. ಮೊದಲು ಜಂಗಮ ಎಂದರೆ ಯಾರು ಎಂಬುದನ್ನು ಹೇಳಲಿಕ್ಕೆ ೧೫ ದಿವಸ ಸಮಯಿದೆ ಬೇಕಾಗಿತ್ತು? ವೀರಶೈವ ಮತಕ್ಕೆ ಗುರುವೇ ದೊಡ್ಡವನು ( ನಾವೇ ಹೆಚ್ಚಿನವರು ) ಎಂದು ಬೋಧೆಮಾಡಲಿಕ್ಕೆ ಈಗ ತಯಾರಾಗಿ ಇದ್ದಾರೆ ಈ ಗುರುವಿನ ಶಿಷ್ಯರು ಜಂಗಮರಂತೆ ಇದು ವೀರಶೈವ ಶಾಸ್ತ್ರವನ್ನು ತಲೆಕೆಳಗುಮಾಡುವ ಮಾತು. ಇಲ್ಲಿನ ತರುಣ ಸಂಘದವರು ಇವರನ್ನು ಕೆಲವು ವಿಷಯುಗಳನ್ನು ಸಹಜವಾಗಿ ಇವರಿಗೆ ತಿಳಿಯಬೇಕೆಂದು ಹೋದರು ಇವರೊಡನೆ ಶ್ರೀ ಗಳವರು ಮಾತನಾಡುವುದಿಲ್ಲವಂತೆ. ಹರೀಶ್ವರ ಶಾಸ್ತ್ರಿಗಳೇ ಮಾತಾಡಬೇಕೆಂತೆ. ಅವರಾದರೂ ಹೇಳುವ ಉತ್ತರವು ಇಂದಿಗೆ ಬೇಡ ಆ ದಿನಕ್ಕೆಬಾ ಎಂಬುದೇ. ಖುದ್ದು ಇವರನು ಕೇಳಬೇಕಾದರೆ ದೊಡ್ಡವರು ಯೋಗ್ಯತೆಯುಳ್ಳವರು ಬರಬೇಕಂತೆ ಈ ತರುಣ ಸಂಘದವರು ಅಯೋಗ್ಯರೇ? ಇವರು ಅಂಥಾ ಅಯೋಗ್ಯತನವನ್ನು ಎಲ್ಲಿ ಹೇಗೆ ತೋರಿಸಿದುವರು.? ಗುರುವು ಶಿಷ್ಯನಲ್ಲಿ ಇರುವ ಅಜ್ಞಾನವನ್ನು ಕಳೆಯುವದಕ್ಕೆ ಬದ್ಧನಾಗಿ ಇರುವಾಗ ಬಂದ ಶಿಷ್ಯನನ್ನು ಶಾಸ್ತ್ರದೃಷ್ಟಾಂತಗಳಿಂದ ಒಡಂಬಡಿಸಿ ಕಳುಹಿಸಬೇಡವೇ? ತಾವು ಹಿಂದೆ ಉತ್ತರ ಕೊಡುವುದಕ್ಕೆ ಹೋಗಿ ಪೆಚ್ಚುಬಿದ್ದಿರುವದರಿಂದ ಈಗ ಒಲ್ಲರೇನು?

ತಮ್ಮ ತತ್ವಗಳನ್ನು ಅಥವಾ ತಾವು ಬೋಧಿಸತಕ್ಕ ವಿಷಯಗಳನ್ನು ಅಥವಾ ವೀರಶೈವ ಸಂಬಂಧದಲ್ಲಿ ತಾವು ತಿಳಿದುಕೊಂಡಿರತಕ್ಕ ಸಂಗತಿಗಳನ್ನು ಕೇಳಿದವರಿಗೆ ಹೇಳುವುದಕ್ಕೆ ಅಡ್ಡಿ ಏನಿದೆ? ಪೂರ್ವಕಾಲದಂತೆ ಈಗ ಧರ್ಮ ಶ್ರದ್ಧೆಯುಳ್ಳವರು ಸಿಕ್ಕುವುದು ವಿರಳ. ಇಂಥಾ ಕಾಲದಲ್ಲಿ ಜನರನ್ನು ಕರೆಯಿಸಿ ಹೇಳುವುದಕ್ಕಿಂತಲೂ ಸಂಶಯ ನಿವಾರಣೆಗಾಗಲೀ ಯಾವುದಾದರೊಂದು ನೆವದಿಂದಾಗಲೀ ಸಮೀಪದಲ್ಲಿ ಬಂದವರಿಗೆ ಬೋಧಿಸುವುದು ಯುಕ್ತವಲ್ಲವೇ?

---

ಇದೂವರೆವಿಗೆ ಇವರ ಸಂಬಂಧದಲ್ಲಿ ಜನರು ಮಾಡುವ ಪ್ರಶ್ನೆ ಆಪಾದನೆ ಮೊದಲಾದವುಗಳಿಗೆ ಇವರು ತೋರಿಸುವ ಕ್ರಾಂತಿ (ಚಳವಳಿ) ಯನ್ನು ಸ್ವಲ್ಪಮಟ್ಟಿಗೆ ವಿವರಿಸಿದುದಾಯಿತು. ಇನ್ನು ಇವರೇ ಸ್ವತಃ ಜನರಲ್ಲಿ ನಡೆಸುವ ಕ್ರಾಂತಿ ( ಚಳವಳಿ )ಯು ಏನೆಂಬುದನ್ನು ವಿಚಾರಿಸೋಣ ( ಆದುದರಿಂದ ಇದು ಈ ಲೇಖನದ ಎರಡನೆಯಭಾಗವಾಗಿ ಇರುತ್ತದೆ. )

೧ ಇವರು ಹಾವೇರಿಗೆ ಬಂದು ಭಾಷಣಮಾಡಿದ ದಿನವೇ ವೀರಶೈವರು ೫ ಕಳಸ (ಕಲಶ) ಹೂಡಿ ದೀಕ್ಷೆಮಾಡಬೇಕು. ಆರು ಕಳಸಹೂಡಿ ದೀಕ್ಷೆ ಮಾಡಬೇಕೆಂದು ಸಿದ್ಧಮಾಡುವವರು ನಮ್ಮಲ್ಲಿಗೆ ಬರಲಿ ಎಂದು ಸಭೆಯಲ್ಲಿ ಕೂಗಿಸಿದರು.

ಈಗಿನಕಾಲವೇನು? ದೇಶವೇನು? ಜನರೇನು? ಈ ಹೊತ್ತಿನಲ್ಲಿ ಕಳಸದ ಕ್ರಾಂತಿ ಇವರಿಗೆ ಹತ್ತಿಕೊಂಡಿದೆ! ಇದೇನು ದೊಡ್ಡ ವಿಷಯ! ವಿಚಾರಮಾಡಿ ನೋಡಿದರೆ ಧಾರ್ಮಿಕರೀತಿಯಲ್ಲಿ ದೀಕ್ಷಾಕಾಲದಲ್ಲಿ ಷಡಕ್ಷರ ಮಂತ್ರಬೋಧೆಮಾಡಬೇಕಾಗಿರುವುದರಿಂದ ಒಂದೊಂದು ಅಕ್ಷರದ ಮೂಲಾಧಾರಗಳಾಗಿ ಆರು ಕಲಶಗಳು ಇರಬೇಕು. ಈಗ ಪಂಚಾಕ್ಷರೀ ಮಂತ್ರ ಎಂತ ಸಿದ್ಧಾಂತಶಿಖಾಮಣಿಯಲ್ಲಿ ಶಿರೋಲೇಖದಲ್ಲಿ ಹೇಳಿ ಒಳಗೆ ಆರು ಅಕ್ಷರಗಳನ್ನು ಹೇಗೆಹೇಳಿರುವರೋ ಹಾಗೆ ಪಂಚಕಲಶ ಎಂದು ಹೇಳುವಲ್ಲಿ ಆರು ಕಲಶಗಳು ಇದ್ದೇ ಇವೆ. ಒಂದು ಕಲಶಕ್ಕೆ ಗಾಂಗೇಯಕಲಶ ಎಂದು ಹೆಸರಿಟ್ಟು ಅದರಲ್ಲಿ ನೀರನ್ನು ತುಂಬಿ ಮೂಲಪ್ರಣವವನ್ನು ಬರೆದು ಅದರ ಉದಕವನ್ನು ಉಳಿದ ಕಲಶಗಳಿಗೆ ಹಾಕುವ ಪದ್ಧತಿಯು ಐದು ಕಲಶವೆಂದು ಹೇಳುವವರಲ್ಲಿ ರೂಢಿಯಲ್ಲಿ ಇದ್ದೇಇದೆ. ಇದನ್ನು ಬಿಟ್ಟು ಐದುಕಲಶ ಎಂದು ಅವರು ಹೇಳುತ್ತಾರೆ. ಇದನ್ನು ಕೂಡಿ ಆರುಕಲಶವೆಂದು ಷಟ್ಕಲಶದವರು ಹೇಳುತ್ತಾರೆ. ನೋಡಿದಿರಾ! ಏನುದೊಡ್ಡ ಜಗಳ! ಪಾಣಿಪಂಜೆ, ನೀರುಪಂಜೆ, ಚೊಂಬಾಪಂಚೆ, ಅವಸರದಪಂಚೆ, ಸ್ನಾನದಪಂಚೆ, ಎಂದು ಒಂದಕ್ಕೇ ಹೇಳುವಂತೆ ಈ ಕಲಶಗಳ ಜಗಳವಿದೆ. ಮುಖ್ಯ ಆಚಾರ್ಯರು ಇದನ್ನೊಂದು ದೊಡ್ಡಜಗಳವಾಗಿ ಎಬ್ಬಿಸಿರುವರು. ಹಾವೇರಿಯ ವೀರಶೈವ ತತ್ವ ಪ್ರಸಾರಕ ಸಂಘದವರು ಈ ವಿಷಯವನ್ನೇ ಒಂದುದಿನ ವಿಮರ್ಶೆಗೆ ಇಟ್ಟು ಮುನಿಸಿಪಾಲಿಟಿ ನವಕರರ ಮುಖಾಂತರ ಊರೊಳಗೆ ಡಂಗುರವನ್ನು ಸಾರಿಸಿದಾಗ್ಯೂ ಮತ್ತು ಆದಿನದ ಸಭೆಯಲ್ಲಿ ಆರು ಕಲಶಗಳನ್ನು ಹೂಡಬೇಕೆಂದು ನಿರ್ಣಯ ಮಾಡಿದಾಗ್ಯೂ ಇವರಾಗ

ಲೀ ಇವರಕಡೆಯವರಾಗಲೀ ಅಲ್ಲಿಗೆ ಬಂದು ಒಂದುಚಕಾರ ಶಬ್ದವನ್ನಾಡ ಲಿಲ್ಲ, ಏನು ಇವರ ಸಿದ್ಧತೆಯೋ ಅಸಿದ್ಧತೆಯೋ ಮಹಾದೇವನೇ ಬಲ್ಲ.

೨ ನಾವು ವೀರಶೈವ ಮತದಲ್ಲಿ ದೊಡ್ಡಗುರುಗಳು ಉಳಿವವರೆಲ್ಲರೂ ಯಾವಾಗಲೂ ನಮ್ಮ ಶಿಷ್ಯರು, ಅವರು ಎಂದಿಗೂ ನಮ್ಮ ಸಮಾನರಾಗುವುದಿಲ್ಲ, ಎಂಬುವುದೊಂದು ಇವರಿಂಧ ಹುಟ್ಟಿದ ಕ್ರಾಂತಿಗಳಲ್ಲಿ ಮುಖ್ಯವಾದುದು.

ವೀರಶೈವಮತತತ್ವವು ಶಿವಾದ್ವೈತವು. ಅದ್ವೈತವೆಂದರೆ ಒಂದು ಎಂಬುದು ಎಲ್ಲರಿಗೂ ತಿಳಿದದ್ದೇ ಆಗಿದೆ. ಈತತ್ವದ ಪ್ರಕಾರ ವೀರಶೈವರಲ್ಲಿ ತಕ್ಕ ಸಂಸ್ಕಾರದಿಂದ ಪ್ರತಿಯೊಬ್ಬನೂ ಶಿವನಾಗಬಹುದು. ಶಿವನೇ ಆಗುವಲ್ಲಿ ಶಿವನ ಸ್ವರೂಪರಾದ ಗುರು ಜಂಗಮರು ಆಗಲಿಕ್ಕೆ ಏನು ಅಭ್ಯಂತರವಿದೆ? ಭ್ರಮರವು ಕೀಡೆಯನ್ನು ಭ್ರಮರಮಾಡುವಂತೆ ಗುರುಮುಕ್ತಿಗುರುವಾಗುವನು, ಎಂಬ ಆಚರಣೆಯು ವೀರಶೈವರಲ್ಲಿ ಇದೆ. ಎಷ್ಟೋಜನ ಭಕ್ತರು ಈಗ ಗುರುಗಳಾಗಿ ಇದ್ದಾರೆ. ಜಂಗಮರಾಗಿಇದ್ದಾರೆ. ಹಿಂದಿನಕಾಲದಲ್ಲಿಯೂ ಇದ್ದರು. ಇದನ್ನು ಬುಡಮೇಲುಮಾಡುವದಕ್ಕೆ ಈಗಇವರು ಹೊರಟಿದ್ದಾರೆ. ವೀರಶೈವರೇ! ಸ್ವಾತಂತ್ರ್ಯವನ್ನನುಭವಿಸುವ ಶ್ರೇಷ್ಠವಾದಮತದಲ್ಲಿಇರುವ ನೀವು ಇನ್ನು ಮೇಲೆ ಇವರ ಗುಲಾಮರಾಗಬೇಕು. ನೋಡಿರಿ! ಇವರೇನು ದೊಡ್ಡ ಗುರುಗಳೋ! ಮತ ತತ್ವವನ್ನು ತಿಳಿಯದ ದಡ್ಡ ಗುರುಗಳೋ ಸಮಾಜವೇ ಯೋಚಿಸಲಿ. ಇವರ ಈ ಉಪದೇಶದಿಂದ ಇದು ದ್ವೈತ ( ಭಿನ್ನ ) ಮತವಾಗುತ್ತದೆ. ಶಿವಾದ್ವೈತ ಎಂಬುದನ್ನು ಹಾರಿಸಿಬಿಡಬೇಕಾಗುತ್ತದೆ.

೩ ಈಗಿನವಿರಕ್ತರು ಜಂಗಮರಲ್ಲ ಎಂಬುದು, ಇವರ ಇನ್ನೊಂದುಮಹತ್ತರವಾದಕ್ರಾಂತಿ. ಮತ್ತೆ ಕೆಲವರ ಎದುರಿಗೆ ವಿರಕ್ತರೂ ಗುರುವೂಒಂದೇ ಸಮಾನ ಎಂದು ಹೇಳುತ್ತಿದ್ದಾರೆ ಜಂಗಮರು ತಮ್ಮ ಶಿಷ್ಯರೆಂದು ಸರ್ಕ್ಯುಲರ್ ಹೊರಡಿಸಿದ್ದಾರೆ. ಒಮ್ಮೆ ಬಾಯಲ್ಲಿ ಸಮಾನರು ಎನ್ನುತ್ತಾರೆ. (ಹಂದಿಗನೂರು ದೇಸಾಯರವರು ಪೂರ್ವದಿಂದಲೂ ವಿರಕ್ತರು ಗುರುಗಳಿಂದ ಪೂಜೆಯನ್ನು ಕೈಕೊಳ್ಳುವರು ಎಂದು ಹೇಳಿದಾಗ ನಾವಿಬ್ಬರೂ ಸಮಾನರೆಂದು ಅವರ ಎದುರಿಗೆ ಹೇಳಿದಂತೆ ಅವರಿಂದ ತಿಳಿಯಿತು.) ಹೀಗೆ ಸಮಯಕ್ಕೆಸರಿಯಾಗಿ ಇವರು ತಮ್ಮ ಮಾತುಗಳನ್ನು ಬದಲಾಯಿಸುತ್ತಾರೆ.

ಇದೆಂಥಾ ಅನವಸ್ಥೆಯ ಪ್ರಸಂಗ. ಈ ಐದು ೮

ಚಾರ್ಯರೂ ನಕಾರಾದಿಯಾಗಿ ಯಕಾರದವರೆವಿಗೆ ಒಂದೊಂದು ಮಂತ್ರ ಬೀಜದ ಅಧಿಕಾರಿಗಳಾಗಿ ಇರುವವರು. ವಿರಕ್ತರು ಪ್ರಣವಸ್ವರೂಪಿಗಳೆಂದು ಕರೆಯಲ್ಪಡುವವರು. ಪೂರ್ವಾರಭ್ಯ ನಡೆದು ಬಂದ ಪ್ರಣವರೂಪಿಗಳೆಂಬ ಬಿರುದು ಉಳ್ಳವರು. ಹಿಂದೂಧರ್ಮ ಶಾಸ್ತ್ರ, ವೇದಪುರಾಣಗಳು ಆದಿಯಾಗಿ ಪ್ರ[illegible]ಲ್ಲಿ ಪಂಚಾಕ್ಷರಿ ಹುಟ್ಟಿತು, ಎಂದು ಹೇಳುವುದಾದರೆ ಇವರು ನಕಾರದಿಂದ ಪ್ರಣವ ಹುಟ್ಟಿತು, ಎಂದು ಹೇಳುತ್ತಾರೆ ನೋಡಿದಿರಾ! ಇವರ ನೂತನ ಪುರಾಣವನ್ನು— ಎಂದರೆ ಆಕಾಶ ಬಿಡ ಭೂಮಿ ಮೇಲು ಎಂಬ ಪುರಾಣವನ್ನು—ಏನು ಹೇಳುವುದು! ವೀರಶೈವ ಸಮಾಜದಲ್ಲಿ ಕೆಲವರು ಮತತತ್ವವನ್ನು ತಿಳಿದುಕೊಂಡಿಲ್ಲ. ಆದ್ದರಿಂದಲೇ ಇವರು ಹೇಳಿದ್ದಕ್ಕೆಲ್ಲಾ ಹೂ' ಎನ್ನುತ್ತಾ ನಿಜತತ್ವ ವಿಚಾರಮಾಡದೆ ಇರುತ್ತಾರೆ. ಏಕೆ? ಪಾರ್ಟಿ ಬೇಕಾಗಿದೆ! ಅಯ್ಯೋ ವೀರಶೈವ ಜನಾಂಗವೇ! ನೀನೆಂದಿಗೆ ನಿಷ್ಪಕ್ಷಪಾತ ಸ್ಥಿತಿಯನ್ನು ಹೊಂದುವೆ!

ಸಮ ಎಂದು ಹೇಳುವುದಾದರೆ ಗುರು, ಲಿಂಗ, ಜಂಗಮ ಎಂದು ಅಷ್ಟಾವರಣದಲ್ಲಿ ಮೂರನ್ನು ಏಕೆ ಸೇರಿಸಬೇಕಾಗಿದ್ದಿತು! ಗುರುವಿನಿಂದ, ಲಿಂಗದಿಂದ, ಜಂಗಮದಿಂದ ಆಗುವ ಕೆಲಸ ಬೇರೆ ಬೇರೆ ಎಂದಲ್ಲವೇ! ಜಂಗಮನೂ ನಕಾರ ಬೀಜದವನು ಮಕಾರಬೀಜದವನು ಆದರೆ ಓಂಕಾರ ಬೀಜದವರು ಯಾರು? ಇವರು ಈಗ ತೋರಿಸಲಿ. ಸುಮ್ಮನೆ ಈರೀತಿ ಕ್ರಾಂತಿಯನ್ನೇಕೆ ಎಬ್ಬಿಸುವರು ?

ಈಗ ಪ್ರಣವವು ಏಕೆಬೇಕು? 'ಶ್ರೀ'ಎಂಬ ಅಕ್ಷರ ಸಾಲದೇನು? ಎಂದು ಇವರ ಕಡೆಯವರು ಕೆಲವರು ಹೇಳುತ್ತಿದ್ದಾರೆ. ಇದನ್ನು ನೋಡಿದರೆ ಇವರು ಪ್ರಣವದ ಬದಲಾಗಿ 'ಶ್ರೀ' ಕಾರವನ್ನು ಸ್ಥಾಪನೆ ಮಾಡುವಂತೆ ತೋರುತ್ತದೆ. ವೇದಗಳೆಲ್ಲಾ ಇನ್ನು ಮೇಲೆ ಶ್ರೀ ಎಂಬ ಅಕ್ಷರದಿಂದ ಆರಂಭವಾಗಬೇಕಾಯಿತು. ಪ್ರಣವಕ್ಕೆ ಇರುವ "ವೇದಾದಿವರ್ಣಂ ಪ್ರಥಮಂ ಸ್ವರಾಣಾಂ" ಎಂಬ ಹಿಂದೂ ಶಾಸ್ತ್ರವು ತಪ್ಪಬೇಕಾಯಿತು. ಆಗಲಿ ಇನ್ನೂ ಏನೇನು ಬರುವುದೋ ನೋಡೋಣ. ಪ್ರಣವವು ವಿರಕ್ತರನ್ನು ಆಶ್ರಯಿಸಿದುದು ಅವರ ದುರದೃಷ್ಟ. ಆದ್ದರಿಂದ ಅದೂ ನಾಶವಾಗುವ ಹೊತ್ತು ಬಂದಿದೆ.

ಇವರಿಗೆ ವಿರಕ್ತರಲ್ಲಿ ಇರುವ ದ್ವೇಷವನ್ನು ಎಷ್ಟೆಂದು ಹೇಳೋಣ.

ಇವರು ತಮ್ಮಲ್ಲಿ ಕೆಲಸ ಮಾಡುವವರು ಒಬ್ಬರು ಮುಂಗಯ್ಯ ಎಂತ ಇದ್ದರೆ ಅವರ ಹೆಸರು ತಪ್ಪಿಸಿ ಪರಮೇಶ್ವರ ಶಾಸ್ತ್ರಿ ಎಂದು ಕರೆ

ಯುತ್ತಾರೆ. ಮುರಿಗಿ, ಮುರಿಗೇಂದ್ರ ಎಂಬ ಹೆಸರು ಕೂಡಾ ಇವರಿಗೆ ಅ ಸಹ್ಯವಾಗಿದೆ. ಹಿಂದೆ ಶಿವನು ಮೃಗೇಂದ್ರ ವೇಷದಿಂದ ಇರುವ ದೇವೇಂದ್ರ ನಿಗೆ ಆಗಮಗಳನ್ನು ಬೋಧಿಸಿದನೆಂದೂ ಅಂದಿನಿಂದ ಮೃಗೇಂದ್ರ ಅದ ರ ತದ್ಭವ ಮುರಿಗೇಂದ್ರ ಎಂಬ ಹೆಸರು ರೂಢಿಗೆ ಬಂತೆಂದೂ ತಿಳಿಯು ತ್ತದೆ. ಮೃಗೇಂದ್ರಾಗಮ ಎಂತ ಒಂದು ಆಗಮವೇ ಇದೆ. ಇವಕ್ಕೆ ಇವ ರು ಏನು ಹೆಸರಿಡುವರೋ ನೋಡಬೇಕು.

೪ ವೀರಶೈವರಲ್ಲಿ ವರ್ಣಾಶ್ರಮಗಳುಂಟು ಎಂಬುದೊಂದು ಕ್ರಾಂತಿ ಇದೊಂದು ಕೇವಲ ಅವಿಚಾರದ ಮಾತು.

ಜನಿವಾರ ಹಾಕಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಎನಿಸಿಕೊಂಡು ವೀರ ಶೈವರಾದವರು ಯಾರು ಯಾರುಇದ್ದಾರೆ. ಈಗ ಸ್ಪಷ್ಟಮಾಡಿ ಹೇಳಲಿ, ಕೆಲವ ರು ಆರಾಧ್ಯರು ಲಿಂಗವನ್ನು ಧರಿಸಿಕೊಂಡು ಪಂಚಾಚಾರ್ಯರ ಹೆಸರು ಹೇಳು ತ್ತಾ ನವೀನವಾಗಿ ಜನಿವಾರ ಹಾಕುತ್ತಿದ್ದಾರಂತೆ, ಇವರಾದರೂ ೧೦೦-೨೦೦ ಜನರು ಇರಬಹುದು. ಇವರ ಮೇಲೆ ಆ ಪಂಗಡದ ಪೂರ್ವಿಕರ ಜಗಳವಿದೆ. ಮೂವತ್ತುಲಕ್ಷ ವೀರಶೈವರಲ್ಲಿ ಉಳಿದವರುಯಾರು ಜನಿವಾರ ಹಾಕುತ್ತಿದ್ದಾ ರೆ? ಆರಾಧ್ಯ ಬ್ರಾಹ್ಮಣರು ನಗರ್ತರು ಮೊದಲಾದವರು ಕೆಲವರು ಲಿಂಗ ಜನಿವಾರ ಕೂಡಾ ಹಾಕುತ್ತಾರೆ. ಆದರೆ ಅವರು ವೀರಶೈವರೆಂದು ಹೇಳಿಸಿಕೊಳ್ಳುವುದಿಲ್ಲ. ಅವರ ಮಾತು ಬೇರೆ. ಇವರು ಶುದ್ಧ ಶೈವರಾಗಿದ್ದು ವೀರಶೈವರಮಾರ್ಗದಲ್ಲಿ ಇರುವವರು ಎನ್ನಿ ಸಿಕೊಂಡಿರುತ್ತಾರೆ. ಪೂರ್ವದಲ್ಲಿ ಇಂತಹ ಶೈವರು ಇನ್ನೂ ಅನೇಕ ಭೇದದವರು ಲಿಂಗಧಾರಿಗಳಾಗಿ ಇದ್ದರು.

ಇದನ್ನು ನೋಡಿದರೆ ಈಗಿನ ವೀರಶೈವರಲ್ಲಿ ಇಲ್ಲದ ಪದ್ಧತಿಯ ನ್ನು ಹಾಕಲಿಕ್ಕೆ ಇವರು ಮೊದಲಿನವರಲ್ಲವೇ? ಇವರ ಹಿಂದಿನ ಗುರುಗಳು ಯಾರು ವೀರಶೈವರಲ್ಲಿ ವರ್ಣಾಶ್ರಮಗಳುಂಟು, ಎಂದು ಹೇಳಿದ್ದಾರೆ, ತೋರಿಸಲಿ. ಇವರು ಕಾಶಿಯಲ್ಲಿ ಓದಿ ಬಂದ ಗುರುಗಳಲ್ಲವೇ! ಅದಕ್ಕಾಗಿ ಈ ಹೆಚ್ಚುಗಾರಿಕೆ. ಆಗಲಿ. ಈಗ ಹತ್ತುವರ್ಷಗಳಲ್ಲಿ ಎಷ್ಟು ಜನರಿಗೆ ಜನಿವಾರ ಹಾಕಿಸಿದ್ದಾರೆ ಲೆಕ್ಕಕೊಡಲಿ(ಅದು ಏನೂ ಇಲ್ಲವೆಂಬು ದು ಗೊತ್ತಾಗಿದೆ)ಮುಂದೆ ಎಷ್ಟುಜನರಿಗೆ ಹಾಕಿಸುತ್ತಾರೋ ನೋಡೋಣ?

ಈಗಿನ ಬ್ರಾಹ್ಮಣರು, ವೈಶ್ಯರೇ ಮೊದಲಾದವರ ಮನೆಗೆ ಹೋಗಿ ಪುರೋಹಿತರಾಗಿ ದುಡ್ಡನ್ನೂ ಕಾಳನ್ನೂ ಹೊತ್ತುಕೊಂಡು ಬರುವಂತೆ ಮುಂದೆ ಉಳಿದ ವೀರಶೈವರಿಂದ ತರಬೇಕೆಂಬುವವರು ಈ ಬ್ರಾಹ್ಮಣರು.

ಈ ಬ್ರಾಹ್ಮಣರೇ ಪಂಚಾಚಾರ್ಯರಂತೆ. ಇವರ ಸ್ವಾರ್ಥಸಾಧನೆಗಾಗಿ ಮತ ದಮೂಲತತ್ವವೇ ಹಾಳಾಗಬೇಕಾಗಿದೆ. ಇವರನ್ನು ಮನೆಯಕಟ್ಟೆಯಮೇಲೆ ಕೂಡಿಸಿ ಮದುವೆ ಮಾಡಿಸಿಕೊಂಡು ಇವರಿಗೆ ಸಾಮುಗ್ರಿಗಳನ್ನು ಕೊಟ್ಟುಕಳು ಹಿಸಬೇಕೆನ್ನುವವರು ವೈಶ್ಯರಾಗಿಯೂ ಕ್ಷತ್ರಿಯರಾಗಿಯೂ ಆಗಲಿ, ಬ್ರಾಹ್ಮ ಣರು ಬೇರೆ ಆಗುವಹಾಗಿಲ್ಲವಷ್ಟೆ! ಇವರೇ ಬ್ರಾಹ್ಮಣ ಸ್ವಾರ್ಥಿಗಳು.

ಈಗಿನ ನಾಲ್ಕುವರ್ಣಗಳ ಮುಂದಾಳುಗಳು ತಮ್ಮ ಜಾತಿಗಳು ಹೋಗಬೇಕು, ಎಂದು ಆಲೋಚಿಸುತ್ತಾ ಇರುವಾಗ ಈ ಮುಂದಾಳು ಗಳು ಜಾತಿಗಳು ಬರಬೇಕು, ಎಂದು ಹೇಳುವವರು. ಅವರಿಗೆ ಸಾಕಾ ದದ್ದು ಇವರಿಗೆ ಬೇಕಾಗಿದೆ! ಅವರಿಗೆ ಜುಟ್ಟು ಸಾಕಾಗಿದೆ, ಇವರಿಗೆ ಬೇಕಾಗಿದೆ! ಅವರಿಗೆ ವಿಧವೆಯರ ಗೋಳು ಸಾಕಾಗಿದೆ, ಇವರಿಗೆ ಬೇಕಾ ಗಿದೆ! ಇವರು ಒಂದು ಲಿಂಗಿಯಹೆಣವನ್ನು ಎಂದು ಸುಟ್ಟು ಬೂದಿಯ ನ್ನು ಹೊಳೆಯಲ್ಲಿ ಹಾಕೋಣ! ಎಂದು ಕಾದಿದ್ದಾರೆ. ಅವರಲ್ಲಿ ಬ್ರಹ್ಮ ಜ್ಞಾನಿಗಳಾದ ಸನ್ಯಾಸಿಗಳಿಗಾದವರಿಗೆ ಸಮಾಧಿಯನ್ನು ಮಾಡುತ್ತಿದ್ದಾರೆ ಲಿಂಗವೇ ದೇಹ ಸ್ವರೂಪ ಎಂಬ ಈ ಬ್ರಹ್ಮಜ್ಞಾನಿಗೆ ಎಂದು ಸುಡಬೇ ಕೆಂದು ಇವರು ಯೋಚಿಸುತ್ತಾರೆ. ಬ್ರಾಹ್ಮಣರಾದ ಇವರು ಸತ್ತಾಗ ತಮ್ಮ ದೇಹವನ್ನು ಸುಡುವುದಕ್ಕೆ ಏರ್ಪಾಡುಮಾಡಿ ಇಟ್ಟು ಅದನ್ನು ಪ್ರಕಟಿಸಿ ಆಮೇಲೆ ಉಳಿದವರಿಗೆ ನೀವೂ ಬ್ರಾಹ್ಮಣರಾಗಿರಿ ಕ್ಷತ್ರಿಯ ರಾಗಿರಿ, ಎಂದು ಬೋಧಿಸಲಿ, ಆಗ ತಿಳಿಯುವದು ನಿಃ ಸ್ವಾರ್ಥತೆ. 'ಲಿಂಗಧಾರೀ ಸದಾಶುಚಿಃ' ಎಂಬ ಮಾತನ್ನು ಇವರ ಕಾಲಕ್ಕೆ ಅಳಿ ಸಿ ಬಿಡಬೇಕಾಗಿದೆ. ಪಂಚಾಚಾರ್ಯರನ್ನು ಹೇಳುವ ಆಗಮುಗಳಲ್ಲಿ ರೇವಣಸಿದ್ಧರೇ ಮೊದಲಾದವರು ಅತಿವರ್ಣಾಶ್ರಮಿಗಳು ಎಂದು ಹೇ ಳಿರುವುದನ್ನು ಈಗ ಇವರು ಮುಚ್ಚುತ್ತಿದ್ದಾರೆ. ಇದು ಹೊಸದನ್ನು ಕಲಿ ಯುವ ಯುಗ, ಎಂದರೆ ಕಲಿಯುಗ. ಇಂಥವರಿಂದಲೇ ಅದರ ಶೋಭೆ. ಆದರೆ ವೀರಶೈವರು ಚಾತುರ್ವರ್ಣ್ಯಕ್ಕೆ ಸೇರಿದ ಕರ್ಮ ಬ್ರಾಹ್ಮಣರು ಎಂ ದೂ ಆಗುವುದಿಲ್ಲ. ಎಲ್ಲರೂ ಜ್ಞಾನ ಬ್ರಾಹ್ಮಣರೆಂಬುದಕ್ಕೆ ಬೇಕಾದಷ್ಟು ಪ್ರ ಮಾಣಗಳಿವೆ. ಇಂತಹ ಜ್ಞಾನ ಬ್ರಾಹ್ಮಣ್ಯಕ್ಕೆ ಜುಟ್ಟು ಜನಿವಾರ ಮೊದ ಲಾದವುಗಳ ಅವಶ್ಯಕತೆಯಿಲ್ಲ.

ಶ್ರೀ ರೇವಣಸಿದ್ಧರು ೧೨೦೦ ವರ್ಷಗಳಿಗಿಂತ ಪೂರ್ವದಲ್ಲಿ ಇದ್ದರು ಎಂದು ಹೇಳುವುದು ಇವರ ಇನ್ನೊಂದು ಭ್ರಾಂತಿ.

ವಿಕ್ರಮಚೋಳ ಎಂಬ ಹೆಸರಿನ ದೊರೆಯು ಚೋಳರಾಜರಲ್ಲೆಲ್ಲ

ಒಬ್ಬನೇ ಇರುತ್ತಾನೆ. ಇವನ ಮಗ ರಾಜರಾಜಚೋಳ ಅಥವಾ ರಾಜೇಂದ್ರ ಚೋಳನು ಕ್ರಿ. ಶ. ೧೧೮೪ ರಿಂದ ೧೧೬೪ಳ ನೆಯ ವರೆವಿಗಿನ ವರ್ಷಗಳಲ್ಲಿ ದೊರೆಯಾಗಿದ್ದನು.

ಈ ರಾಜೇಂದ್ರಚೋಳನ ಮಗಳನ್ನೇ ರೇವಣಸಿದ್ಧರು ಮದುವೆಯಾದರೆಂದು ಪುರಾಣಗಳು ಹೇಳುತ್ತವೆ. ಇವರು ಮದುವೆಯಾಗುವಾಗ ಎಷ್ಟು ವಯಸ್ಸಿನವರು ಇರಬಹುದು? ಸಿರಿವಾಳದ ಶಾಸನವು ಈ ರೇವಣಸಿದ್ಧರು ಮಾಡಿದ ಎಲ್ಲಾ ಕೆಲಸಗಳನ್ನೂ ಹೇಳುತ್ತದೆ. ಇದರ ಕಾಲವು ೧೧೮೪ ಆಗಿದೆ. ಹೀಗೆ ರೇವಣಸಿದ್ಧರ ಕಾಲವು ಸುಮಾರು ೧೧೦೦ ರಿಂದ ೧೧೯೦ರ ಒಳಗೆ ಆಗುತ್ತದೆ ಎಂದು ಗೊತ್ತಾಗುತ್ತದೆ, ಎಂದಮೇಲೆ ೧೨೦೦ ವರ್ಷಗಳ ಪೂರ್ವದಲ್ಲಿ ಅವರಿದ್ದರೆಂದು ಇವರು ಹೇಗೆ ತೋರಿಸುವರು! ಪಂಡಿತಾರಾಧ್ಯರು ಬಸವೇಶ್ವರನ ಸಮಕಾಲದವರೆಂದು ಎಲ್ಲರೂ ಒಪ್ಪತಕ್ಕಮಾತು. ರೇವಣಸಿದ್ಧರ ಮಗನಾದ ರುದ್ರಮುನೀಶ್ವರನು ಚನ್ನಬಸವಣ್ಣನವರ ಕಾಲದಲ್ಲಿ ಸಿದ್ಧರಾಮೇಶ್ವರರಕಾಲದಲ್ಲಿ ಇದ್ದನೆಂಬುದು ಎಲ್ಲರಿಗೂ ತಿಳಿದಮಾತು.

ಈ ರುದ್ರಮುನೀಶ್ವರನನ್ನು ಮುಖ್ಯನನ್ನು ಮಾಡಿಕೊಂಡು ಪಂಚಾಚಾರ್ಯರು ಆಗಿದ್ದಾರೆ, ಎಂದಮೇಲೆ ಪಂಚಾಚಾರ್ಯರ ಕಾಲವು ಬಸವೇಶ್ವರನ ಸಮಕಾಲ. ಹೀಗಿದ್ದೂ ಪುರಾಣದ ವರ್ಣನೆಯನ್ನು ನೋಡಿ ರಾಮಾಯಣಕ್ಕೂ ರಾಜೇಂದ್ರಚೋಳನಿಗೂ ಗಂಟುಹಾಕುವ ಇವರು ಲೌಕಿಕಜ್ಞಾನ ಶೂನ್ಯರೋ? ಅಥವಾ ನವೀನ ಚರಿತ್ರ ಸಂಶೋಧಕರೋ!

ಚಾರಿತ್ರಿಕ ದೃಷ್ಟಿಯಿಂದ ಬಸವೇಶ್ವರನಿಗಿಂತ ನೂರಾರು ವರ್ಷಗಳ ಮುಂಚೆಪಂಚಾಚಾರ್ಯರು ಇದ್ದರು ಎಂಬುದನ್ನು ತೋರಿಸಿದರೆ ಒಂದುಸಾವಿರರೂಪಾಯಿ ಬಹುಮಾನ ಕೊಡುವುದಾಗಿ ಮ. ರಾ. ದಾವಣಗೆರೆ ಬೆಳ್ಳುಡಿ ಚನ್ನವೀರಪ್ಪನವರು ಮೈಸೂರುಸ್ಟಾರಿನಲ್ಲಿ ಪ್ರಕಟಪಡಿಸಿ ೭-೮ ವರ್ಷಗಳಾದವು ಇದೂ ವರೆವಿಗೂ ಇವರೇಕೆ ಸಿದ್ಧಮಾಡಲಿಲ್ಲ? ಈಗಲಾದರೂ ಮಾಡಲಿ. ಅವರು ಕೊಡಲಿಕ್ಕೆ ಸಿದ್ಧರಿದ್ದಾರೆ, ಸುಮ್ಮನೆ ತಾವು ಸಾವಿರಾರು ವರ್ಷಗಳ ಹಿಂದಿನ ಗುರುಪೀಠದವರೆಂದು ಬಡಾಯಿ ಯಾಕೆ ಕೊಚ್ಚಬೇಕು? ಜಂಭಬಡಿಯುವದು ಯಾರ ಎದುರಿಗೆ? ದಡ್ಡರ ಮುಂದೆ ಅಲ್ಲವೇ?

೬ ಮೈಸೂರು ದೇಶದಲ್ಲಿ ಇವರ ಮೆರವಣಿಗೆ ನಡೆಯುವಾಗ ಜ

ಗದ್ಗುರು ರಂಭಾಪುರೀ ಸಂಸ್ಥಾನ ಎಂದು ಚಪ್ಪರದ ಮುಂಭಾಗದಲ್ಲಿ ಬರೆಯಿಸಲಿಕ್ಕೆ ಸಮ್ಮತಿಕೊಟ್ಟಿದ್ದರು. ರಾಣೇಬೆನ್ನೂರಲ್ಲಿ ಕಲೆಕ್ಟರವರವಿಚಾರಣೆಯಾಗಿ ಈ ಒಂದುಶಾಖೆಯ ಗುರುಗಳನ್ನು ಜಗದ್ಗುರು ಎಂದು ಕರೆಯಲಿಕ್ಕೆ ಸರಕಾರದವರು ಸಮ್ಮತಿಸದೆ ಹೋದಮೇಲೆ ಈಗ ರಂಭಾಪುರೀ ಜಗದ್ಗುರು ಎಂದು ಚಪ್ಪರಗಳ ಮುಂಭಾಗದಲ್ಲಿ ಬರೆಯಿಸುತ್ತಿದ್ದಾರೆ. ಹೀಗೆರಂಭಾಪುರೀ ಜಗದ್ಗುರು, ಪಾಲೀಕೊಪ್ಪದ ಜಗದ್ಗುರು, ಎಂಬಪದಗಳು ಇನ್ನು ಮುಂದೆ ಬಳಕೆಗೆ ಬರಬಹುದು. ಒಬ್ಬ ವೀರಶೈವನು ನನ್ನ ಮನೆಗೆ ನಾನೇ ಜಗದ್ಗುರು ಎನ್ನಬಹುದು. ಇದೆಷ್ಟು ಧರ್ಮದ ಶಿಥಿಲತೆ. ವೀರಶೈವರೆಲ್ಲಾ ಕೂಡಿ ಒಬ್ಬರನ್ನು ಜಗದ್ಗುರು ಎಂದು ಗೊತ್ತುಮಾಡಬಾರದೇ! ಅದರಂತೆ ಎಲ್ಲರೂ ಒಪ್ಪಿಕೊಳ್ಳಬಾರದೇ? ಸುಮ್ಮನೆ ಏಕೆ ಕಲಹ!

೭ ಬಸವೇಶ್ವರಿಸಿಗಿಂತ ಪೂರ್ವದಲ್ಲಿ ವೀರಶೈವವು ಬೇರೆ ವಿಧವಾಗಿ ಇದ್ದಿತು, ಎಂದು ಹೇಳುತ್ತಾರೆ

ಎಲ್ಲಿದೆ, ಇದಕ್ಕೆ ದಾಖಲೆ? ಇವರು ತೋರಿಸಲಿ. ನಿಜಗುಣರು ಬಸವೇಶ್ವರಸಿಗಿಂತ ಪೂರ್ವದವರೆಂದು ತಿಳಿದುಕೊಂಡಿರುವರೇನು? ಅಲ್ಲ. ಸ್ವಲ್ಪ ಚನ್ನಾಗಿ ವಿಚಾರಿಸಿ ನೋಡಲಿ

ಆಗಮುಗಳೇ ಮೊದಲಾದವುಗಳಲ್ಲಿ ' ಗುರೂಣಾಂ ಗುರುಃ ಜಂಗಮ: ' ಎಂಬುದೇ ಸಿದ್ಧವಾಗುತ್ತದೆ. ತೆಗೆದುನೋಡಲಿ.

ಚಾರಿತ್ರಿಕ ದೃಷ್ಟಿಯಿಂದ ಪರಿಶೋಧಿಸಿ ಬಸವೇಶ್ವರನಿಗಿಂತ ಹಿಂದಿನ ವೀರಶೈವವು ಹೇಗಿದ್ದಿತು? ಯಾರು ಯಾರು ಇದ್ದರು? ಆಗಿನ ಗುರುಗಳು ಯಾರು? ಜಂಗಮರು ಯಾರು? ಅವರ ವಂಶಪಾರಂಪರ್ಯವೇನು? ತಿಳಿಸಲಿ. ಸುಮ್ಮನೆ ಅರಿಯದ ಸಮಾಜದ ಮುಂದೆ ಬೆರಗಾಗುವ ಮಾತನ್ನು ಹೇಳಿ ಮರುಳುಗೊಳಿಸುವುದು ಏಕೆ?

೮ ಇವರು ಎರಕದಿಂದ ಹೊಯಿದ ರೇಣುಕರ ಪ್ರತಿಮೆಗಳನ್ನು ಮಾಡಿ- ಅವುಗಳನ್ನು ಪೂಜಿಸಿರಿ ಎಂದು ಭಕ್ತರಿಗೆ ಹೇಳುವುದು ಇದೊಂದ. ಕ್ರಾಂತಿ.

ಹೀಗೆ ಸ್ವತಃ ರೇವಣಸಿದ್ಧರ- ಹೇಳಲಿಲ್ಲ. ಬಸವೇಶ್ವರನು ಹೇಳಲಿಲ್ಲ. ವೀರಶೈವರಿಗೆ ಮೂರ್ತಿಪೂಜೆ ಮಾಡಲಿಕ್ಕೆ ಶಾಸ್ತ್ರ ಸಮ್ಮತಿಯಿಲ್ಲ. ದೀಕ್ಷೆಯಿಲ್ಲದಾಗ ಶುದ್ಧ ಶೈವರಾಗಿದ್ದಾಗ ಮಾಡುವಕೆಲಸವಿದು. ಈ ಪದ್ಧತಿಯನ್ನು, ಈಗ ಆದಷ್ಟು ಪ-

ಟ್ಟಿಗೆ ತಪ್ಪಿಸಿ ವೀರಶೈವ ಸ್ಥಿತಿಯನ್ನೇ ನೆಲೆಗೊಳಿಸಬೇಕಾದುದು ಈಗಿನವರಕರ್ತವ್ಯವು. ಶಿವಶರಣರು ತಿರಸ್ಕರಿಸಿದಂಥಾ ಈ ಮೂರ್ತಿಯ ಪೂಜೆಯನ್ನು ಇವರು ಸ್ಥಾಪಿಸಲಿಕ್ಕೆ ಹೋಗುವುದರಿಂದ ಇವರು ಪ್ರಮಥರನ್ನು ತಿರಸ್ಕರಿಸಿದಂತೆ ಆಗುವದಿಲ್ಲವೇ? ಈ ಮೂರ್ತಿಪೂಜೆಯಂತೆಯೇ ಇನ್ನೂ ಕೆಲವು ಶೈವಪದ್ಧತಿಗಳನ್ನು ಇವರು ಬೋಧಿಸುತ್ತಾ ಇದ್ದಾರೆಂದು ತಿಳಿಯಬರುತ್ತದೆ. ವೀರಶೈವರು ಮೂರ್ತಿ ಪೂಜಕರೆಂದು ತಿರಸ್ಕರಿಸಿ ಅನ್ಯಸಮಾಜದವರು ಇವರನ್ನು ತಮ್ಮಮತಕ್ಕೆ ಸೆಳೆಯುತ್ತಿದ್ದಾರೆ. ಈ ಕಾಲದಲ್ಲಿ ಇವರು ಹಾಕುವ ಈ ಸಲ್ಲದ ಪದ್ಧತಿಯು ವೀರಶೈವ ಜನಾಂಗಕ್ಕೆ ಹಾನಿಕರವಲ್ಲವೇ!

೯ ವೀರಶೈವರಲ್ಲಿ ಗುರು ಎಂದರೆ ಮಠದಯ್ಯ, ಗುರುವಿನ ಗುರು ಎಂದರೆ ಪಟ್ಟಚರಂತರು, ಪರಮಗುರು ಎಂದರೆ ಸಂಸ್ಥಾನಾಧಿಪತಿಗಳಾದ ನಾವು, ಎಂದು ಹೇಳುವುದು. ಇದೊಂದು ಕ್ರಾಂತಿ.

ವೀರಶೈವರೇ, ಇದಕ್ಕೆ ಪ್ರಮಾಣವೆಲ್ಲಿದೆ? ಇವರ ವಚನವೇ ಪ್ರಮಾಣ! ಇವರು ಕೆಲವರ ಎದುರಿಗೆ ಹೇಳುತ್ತಿದ್ದಾರಂತೆ, ವೀರಶೈವರಲ್ಲಿ ಶಾಸ್ತ್ರ ಬಲ್ಲವರು ಯಾರಿದ್ದಾರೆ? ನಾವು ಹೇಳಿದ್ದೇ ಶಾಸ್ತ್ರ ಎಂಬದಾಗಿ. ಕಾಶೀನಾಥಶಾಸ್ತ್ರಿಗಳೊಬ್ಬರಂತೆ, ಇವರೊಬ್ಬರಂತೆ, ಒಬ್ಬರಿಬ್ಬರು ಬ್ರಾಹ್ಮಣರು ಇದ್ದಾರಂತೆ! ಇವರ ಹೊರತಾಗಿ ಶಾಸ್ತ್ರವು ಇನ್ನೂ ಯಾರಿಗೂ ತಿಳಿಯದಂತೆ, ಆಗಲಿ. ಇವರ ಈ ಶಾಸ್ತ್ರವನ್ನು ಬಯಲಿಗೆ ತೆಗೆಯಲಿ, ನೋಡೋಣ. ಯಾವ ಆಗಮದಲ್ಲಿ, ಯಾವ ಪುರಾಣವಲ್ಲಿ, ಯಾವಗ್ರಂಥದಲ್ಲಿ ಈ ಮಾತು ಹೇಳಿದೆ, ತೋರಿಸಲಿ.

೧೦ ಲಿಂಗವನ್ನು ಶಿವನೆಂದು ಭಾವಿಸಿ–ಶಿವಾಯನಮಃ ಎಂಬ ಪಂಚಾಕ್ಷರಿ ಮಂತ್ರವನ್ನು ಶುದ್ಧಶೈವರೂ ಷಡಕ್ಷರ ಮಂತ್ರವನ್ನು ವೀರಶೈವರೂ ಜಪ ಮಾಡುವುದು ಪದ್ಧತಿ. ಆದರೆ ' ಈಗ ರೇಣುಕಾಯನಮಃ ' ಎಂಬ ಮಂತ್ರವನ್ನು ಜಪಮಾಡಬೇಕೆಂದು ಕಲಿಸಲಿಕ್ಕೆ ಆರಂಭಿಸಿದ್ದಾರೆ. ಸರ್ವಜಗತ್ಕಾರಣನಾದ ಶಿವನು ಇನ್ನು ಮೂಲೆಯಲ್ಲಿ ಕೂಡಬೇಕಾಗುತ್ತದೆ. ನಿರಾಕಾರ ಶಿವನನ್ನು ನಂಬಿ ವೀರಶೈವರು ಎನಿಸಿಕೊಂಡವರು ಇನ್ನು ಮುಂದೆ ರೇಣುಕಮತದವರಾಗಬೇಕಾಗುತ್ತದೆ. ಏಕೆಂದರೆ, ರಾಮಾನುಜ ಮತದವರು ರಾಮಾನುಜಾಯ ನಮಃ ಎಂದು ಮಂತ್ರ ಹೇಳುವಂತೆ. ಇದು ಪರಿಣಮಿಸುತ್ತದೆ.

ಹೀಗೆ ಇವರೆಬ್ಬಿಸುವ ಕ್ರಾಂತಿಯು ನಾನಾಮುಖವಾಗಿ ಇರುತ್ತದೆ. ಇವುಗಳಲ್ಲಿ ಇನ್ನೂ ಕೆಲವನ್ನು ಸಂಗ್ರಹವಾಗಿ ಇಲ್ಲಿ ಹೇಳಬಹುದಾಗಿದೆ.

(೧) ಸಾಮಾನ್ಯವಾಗಿ ಭಕ್ತಿಯಿಂದ ಇವರನ್ನು ಕರೆಯುವದು ಕಡಿಮೆಯಾದುದರಿಂದ ಇವರು ಒಂದು ಊರಿಗೆ ಹೋಗುವುದಕ್ಕೆ ಮುಂಚೆ ತಮ್ಮ ಹೊಸತತ್ತ್ವವನ್ನು ಹರಡುವುದಕ್ಕಾಗಿ ಆ ಊರಿನಲ್ಲಿ ಕೆಲವರಿಗೆ ನೂರಾರು ರೂಪಾಯಿಗಳನ್ನು ಕೊಡುತ್ತೇವೆ ಎಂದು ಹೇಳಿ ಅವರ ಮುಖಾಂತರ ಊರಲ್ಲೆಲ್ಲಾ ತಮ್ಮ ಬರುವಿಕೆಯ ಪ್ರತಿಷ್ಠೆಯನ್ನು ಹೆಚ್ಚಿಸುವಿಕೆ. ಹೀಗೆ ಕೆಲವರಿಗೆ ಕೊಟ್ಟ ಉದಾಹರಣೆಗಳು ಚನ್ನಾಗಿ ತೋರಿಬಂದಿವೆ. ಇನ್ನು ಕೆಲವರು ತಮಗೆ ತಕ್ಕಷ್ಟು ಉತ್ಪತ್ತಿ ಇಲ್ಲದಿದ್ದರೂ ಇವರಿಗಾಗಿ ನೂರಾರು ರೂಪಾಯಿ ಖರ್ಚು ಮಾಡಿದ ಉದಾಹರಣೆಗಳೂ ಇವೆ.

(೨) ತಾವು ಕಾದಿಟ್ಟುಕೊಂಡಿರುವ ಕೆಲವು ಸಂಚುಕಾರರನ್ನು ಮೊದಲು ಕಳುಹಿಸಿ ಅವರು ಊರಿನ ಜನರಿಗೆ ತಮ್ಮ ಪ್ರತಿಷ್ಠೆಯನ್ನು ಹೊಗಳುವಂತೆ ಏರ್ಪಡಿಸಿ ಆ ಮೂಲಕ ತಮ್ಮನ್ನು ಜನರು ಬಿನ್ನಹಮಾಡಿ ಕರೆದುಕೊಂಡು ಹೋಗುವಂತೆಯೂ ಹಣಕೊಡುವಂತೆಯೂ ಮಾಡುವುದು. ಧಾರವಾಡ ಡಿಸ್ಟ್ರಿಕ್ಟಿಗೆ ಬಂದಮೇಲೆ ಮಂಗಳೂರು ಸಿದ್ಧಲಿಂಗಯ್ಯನವರೇ ಮೊದಲಾದವರು ಈ ಕೆಲಸವನ್ನು ಮಾಡುತ್ತಾರೆ. ಈ ಕೆಲಸಮಾಡುವವರು ಇವರಲ್ಲಿ ಅನೇಕರಿದ್ದಾರೆ. ಇಂಥವರಿಗೆಲ್ಲ ಖರ್ಚಿಗೆ ಹಣವನ್ನು ಒದಗಿಸಬೇಕಾಗಿರುವದರಿಂದಲೇ ಜನರಿಂದ ಬಂದ ಹಣ ಇವರಲ್ಲಿ ನಿಲ್ಲುವಂತೆ ಇಲ್ಲ. ಆದರೆ ಇವರ ಪ್ರತಿಷ್ಠೆಯು ಮಾತ್ರ ಬೆಳೆಯುತ್ತದೆ ಇವರೂ ಅಷ್ಟೇ ಸಾಕೆನ್ನುತ್ತಾರೆ.

(೩) ಸ್ತ್ರೀ ಸಂಚುಕಾರರನ್ನು ಮೊದಲು ಕಳುಹಿಸಿ ಆ ಊರಿನ ಶ್ರೀಮಂತರೇ ಮೊದಲಾದವರ ಮನೆಯ ಹೆಂಗಸರಲ್ಲಿ ಇವರ ಪ್ರತಿಷ್ಠೆಯನ್ನು ಹೊಗಳಿ ಇವರಿಗೆ ಹಣಕೊಡಲಿಕ್ಕೆ ಅವರ ಗಂಡಂದಿರಿಗೆ ಅಥವಾ ಮನೆಯವರಿಗೆ ಪ್ರೋತ್ಸಾಹಿಸುವಂತೆ ಹೇಳುವುದು. ಕೆಲವರು ಸುಂದರರಾದ ಸ್ತ್ರೀಯರೂ ಇವರ ಸಂಚುಕಾರರಾಗಿ ಇದ್ದಾರೆ ಎಂದೂ ಗೊತ್ತಾಗಿದೆ. ಯಾವ ವೀರಶೈವನು ಹೆಂಡತಿಯರ ಅಥವಾ ಮನೆಯ ಹೆಂಗಸರ ಮಾತನ್ನು ಕೇಳುವನೋ ಅವನು ಇವರ ಬಲೆಗೆ ಬೀಳುವನೆಂಬುದು ಸಿದ್ಧವಾದ ಮಾತು. ಈ ಖರ್ಚಿಗಾಗಿ ಇವರ ಕೆಲವು ಹಣವು ಹೋಗುತ್ತದೆ. (ಇವರಲ್ಲಿ ಜಮಾ ಆದ ಹಣದ ವಿವರವನ್ನೂ ಖರ್ಚಿನ ಪಟ್ಟಿಯನ್ನೂ

ಇವರು ಜನರ ಮುಂದಿಡುವುದಿಲ್ಲ. ಸರಕಾರದವರೂ ಕೂಡಾ ತಮ್ಮ ಆಯವ್ಯಯದ ಪಟ್ಟಿ ( Budget ) ಯಲ್ಲಿ ತಮ್ಮಲ್ಲಿ ಇಷ್ಟು ಆಳುಗಳು ಇಷ್ಟು ನವಕರರು ಎಂತ ತೋರಿಸುವ ಲೆಖ್ಖವನ್ನು ಪ್ರಕಟಪಡಿಸುತ್ತಾ ಇರುವಲ್ಲಿ ಈ ಸಂಸ್ಥಾನದವರು ತಮ್ಮ ಲೆಖ್ಖವನ್ನು ಜನತೆಯಮುಂದೆ ಏಕೆ ಇಡಬಾರದು?

(ಳ) ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುತ್ತೇವೆ ಎಂದು ಹೇಳಿ ಇದಕ್ಕೆ ಕೆಲವು ಭಂಗಾರ ಬೆಳ್ಳಿ ಕೊಡಬೇಕೆಂದು ಹೇಳುವದು ಕೆಲವರು ಮರುಳರಾದ ವೀರಶೈವರು ಈ ಬಲೆಗೂಬಿದ್ದಿದ್ದಾರೆ ಬ್ರಾಹ್ಮಣಾದಿಗಳಿಗೆ ತಮ್ಮ ಶ್ರಾದ್ಧ ಮಾಡಲಿಕ್ಕೆ ಪಿಂಡೋದಕಗಳನ್ನು ಕೊಡಲಿಕ್ಕೆ ಮಕ್ಕಳು ಬೇಕು ಅವರಿಗೆ ಅಪುತ್ರಸ್ಯ ಗತಿರ್ನಾಸ್ತಿ ಎಂಬ ಮಾತು ಹೇಳಲ್ಪಟ್ಟದೆ ವೀರಶೈವರು ಹೀಗೆ ಬಯಸಬೇಕಾಗಿಲ್ಲ. ವೀರಶೈವರು ಶಿವಾಧೀನರಾದ ಮೇಲೆ ಉಳಿದವರು ಮಾಡುವ ಗಣಾರಾಧನೆಯೂ ಕೂಡಾ ಇವರು ಶಿವಾಧೀನರಾದ ಆನಂದದ ಸ್ಮಾರಕಕ್ಕಾಗಿಯೇ ಹೊರತು ಇವರ ಪಿಂಡದಾನವಲ್ಲ. ಇದನ್ನು ಜರ್ಮನೀದೇಶದ ಪಂಡಿತರಾದ ಸ್ಕ್ರೇಡರವರು ಕೂಡಾ ವೀರಶೈವರ ಗ್ರಂಥಗಳಿಂದ ಕಂಡುಹಿಡಿದು ಪ್ರಕಟಿಸಿರುತ್ತಾರೆ- ವೀರ ಶೈವರು ತಾವು ಶಿವರೂಪರಾಗಿ ಹೇಗೆ ಲೋಕವ್ಯವಹಾರವನ್ನು ಮಾಡಿದರೋ ಅದರಂತೆ ಲೋಕವ್ಯವಹಾರವನ್ನು ಮಾಡಲಿಕ್ಕೆ ನಮಗೆಮಕ್ಕಳಿರಲಿ ಎಂಬ ಒಂದು ಸಾಮಾನ್ಯಯೋಚನೆ ಯುಳ್ಳವರಾಗಿ ಇರಬಹುದು, ಹಾಗೆಮಕ್ಕಳಾದರೂಅವು ಶಿವನಮಕ್ಕಳೆಂಬುದೇ ಇವರ ಭಾವನೆ. ಈಮಕ್ಕಳಭ್ರಾಂತಿಗೆಅನೇಕವೀರಶೈವ ಮಠಸ್ಥರೂ ಬಿದ್ದಿದ್ದಾರೆ. ಇವರು ಒಂದಾಲೋಚನೆ ಮಾಡುವುದು ಬಹು ಯುಕ್ತವಾದುದಾಗಿದೆ ಒಬ್ಬ ಭವಿಗೆ (ತಕ್ಕಯೋಗ್ಯತೆಯುಳ್ಳವನಿಗೆ )ಲಿಂಗಧಾರಣೆ ಮಾಡಿದರೆ ಅಥವಾ ಮಾಡಿಸಿದರೆ ಒಬ್ಬ ಶಿವನಮಗನು ಹುಟ್ಟಿದನೆಂದು ಭಾವಿಸುತ್ತಾ ಬಂದರೆ ಅನೇಕಮಕ್ಕಳನ್ನು ಅವರಮಕ್ಕಳು ಮೊಮ್ಮಕ್ಕಳನ್ನೂ ಪಡೆದಂತೆ ಆಗುತ್ತದೆ. ಈಗ ಲೋಕದಲ್ಲಿ ಜನಸಂಖ್ಯೆ ಹೆಚ್ಚಾಗುತ್ತ ಬಂದಿದೆ. ಆದ್ದರಿಂದ ಯಾರಾದರೂ ಬ್ಬರಿಗೆ ತಮಗೆ ಮಕ್ಕಳಿಲ್ಲವೆಂಬ ಚಿಂತೆ ಏತಕ್ಕೆ? ಶಿವನಮಕ್ಕಳನ್ನು ಬೆಳೆಸುವ ಚಿಂತೆಯೇ ಬಹುಮುಖ್ಯವಾದುದಲ್ಲವೇ? ಹಿಂದೂದೇಶದಲ್ಲಿ ಸಂತಾನದ ಕೊರತೆಯಿಲ್ಲ ಈಗ ಹುಟ್ಟತಕ್ಕಮಕ್ಕಳ ಆರೋಗ್ಯ ದೀರ್ಘಜೀವನ ಇವಕ್ಕಾಗಿ ಹೆಚ್ಚು ಹೆಚ್ಚು ಯೋಚಿಸ ಬೇಕಾಗಿದೆ. ಇಂತಹ ಉದಾತ್ತವಾದ ಆಲೋಚನೆಯನ್ನು ಮಾಡದೆ ವೀರಶೈವರಲ್ಲಿ ಅ

ನೇಕರು ಇವರ ಬಲಿಗೆ ಬೀಳುತ್ತಾ ತಮ್ಮ ಹಣವನ್ನು ( ಬೆಳ್ಳಿ, ಭಂಗಾರವನ್ನು ) ಅನ್ಯಾಯವಾಗಿ ಖರ್ಚು ಮಾಡುತ್ತಿದ್ದಾರೆ. ಇದರಿಂದ ಕೆಲವು ಬಂಗಾರ ಬೆಳ್ಳಿಯ ಸಂಪಾದನೆ ಇವರಿಗೆ ಆಗುತ್ತಾ ಇದೆ.

(೫) ಇವರು ತಮ್ಮ ದರ್ಶನಕ್ಕೆ ಬಂದವರಲ್ಲಿ ಶ್ರೀಮಂತರಾದವರನ್ನು ಕಂಡಕೂಡಲೇ ನಮಗೆ ನಿಮ್ಮ ಮನೆಗೆ ಬರಲಿಕ್ಕೆ ಬಿನ್ನಹ ಮಾಡಿರಿ, ಎಂತ ಹೇಳುವುದು. ಅವರು ಈಗ ಸಾಧ್ಯವಿಲ್ಲವೆಂದರೆ ನಿಮ್ಮ ಮನೆಗೆ ಬರಬೇಕೆಂಬ ಇಷ್ಟವಿದೆ. ಗುರುಗಳು ಬಂದರೆ ಬೇಡವೆನ್ನುತ್ತೀರಾ ಎಂದು ಕೇಳುವುದು. (ಏತಕ್ಕೆ ಗುರುಗಳು ಬರುವುದು? ಹಣವನ್ನು ಕೂಡಿ ಹಾಕಲಿಕ್ಕೆ ) ಹೀಗೆ ಸುಗ್ಗ ಬಿನ್ನಹಗಳು ಕೆಲವು ನಡೆಯುತ್ತವೆ.

(೬) ಯಾರಾದರೂ ಇವರ ವಿಷಯದಲ್ಲಿ ಬರೆದರೆ ಅವರನ್ನು ಪಂಚಾಚಾರ್ಯರ ಪ್ರಭಾ ಮುಖಾಂತರ ಬಯ್ಯುವಂತೆ ಮಾಡುವದು ಇಂಥಾ ಬಯ್ಯುವಿಕೆಯು ನನಗೂ ಮುಂದೆ ಇದೆ ಎಂದು ತಿಳಿದುಕೊಂಡೇ ಇದ್ದೇನೆ. ನನ್ನನ್ನೇ ನಾನು ಬಯ್ದುಕೊಳ್ಳಲಿಕ್ಕೂ ಸಿದ್ಧನಿದ್ದೇನೆ. ಏಕೆಂದರೆ ದುರ್ಗುಣಗಳನ್ನು ತಿದ್ದಿಕೊಳ್ಳಲಿಕ್ಕೆ. ಹಾಗೆ ಇವರ ಪರವಾಗಿ ಬೈಯುವ ಪತ್ರಿಕೆಯಲ್ಲಿ ನನ್ನ ಗುಣಗಳ ತಿದ್ದುಪಾಡು ಇದ್ದರೆ ಆ ಮುಖಾಂತರದಿಂದ ಬಂದರೂ ಸ್ವೀಕರಿಸುವೆನು. ಇಲ್ಲದಿದ್ದರೆ ಅವು ನನಗೆ ವ್ಯರ್ಥವೆಂದೂ ಆದರೂ ಅದರಿಂದ ಅವರ ಸಂತೋಷವು ಉಂಟಾಯಿತೆಂಬುದೇ ಒಂದು ಪ್ರಯೋಜನವೆಂದೂ ತಿಳಿಯುತ್ತೇನೆ ಉದಾಹರಣೆಗಾಗಿ ನಾನು ಒಂದು ಕಣ್ಣಿನವನೆಂದು ಬಯ್ದರೆ ನಾನೇನು ಮಾಡಲಿ ಅದನ್ನು ತಿದ್ದಿಕೊಳ್ಳಬಲ್ಲೆನೇ! ಅದು ಸಾಧ್ಯವಿಲ್ಲ. ಎರಡು ಕಣ್ಣುಳ್ಳವರು ಕೂಡಾ ಎರಡರಿಂದಲೂ ಕೂಡಿ ಒಂದೇ ವಸ್ತುವನ್ನು ಒಂದು ಕಾಲದಲ್ಲಿ ನೋಡವರೋ ಹಾಗೆ ನಾನೂ ಒಂದೇ ಕಣ್ಣಿನಿಂದ ಒಂದು ವಸ್ತುವನ್ನು ನಿರ್ಣಯಿಸಬಲ್ಲೆನೆಂಬುದನ್ನಷ್ಟೇ ಹೇಳಬಹುದು. ಉಳಿದ ತಿದ್ದುಪಾಡಿನ ಸಂಭವಗಳಿದ್ದರೆ ತಿದ್ದಿಕೊಳ್ಳುವೆನು. ಇಲ್ಲದಿದ್ದರೆ ಇವರ ಬಯ್ಯುವಿಕೆಗೆ ಅಂಜದೆ ನಿಜತತ್ವವನ್ನು ಪ್ರಕಟ ಪಡಿಸಲಿಕ್ಕೆ ಪುನಃ ಬರೆಯುವೆನು. ಈ ಪ್ರಕರಣವಿಲ್ಲಿಗೆವಿರಮಿಸಲಿ )

ಹೀಗೆ ಇನ್ನೂ ಅನೇಕ ವಿಧವಾಗಿ ಇವರ ಕ್ರಾಂತಿಯು ವ್ಯಾಪಿಸುತ್ತಾ ನಡೆದಿದೆ.

ಈ ಕಾಲದಲ್ಲಿ ವೀರಶೈವ ಸಮಾಜವು ಎಚ್ಚತ್ತುಕೊಳ್ಳದೆ ಇದ್ದರೆ ವೀರಶೈವ ಸಮಾಜದ ಶ್ರೇಷ್ಠವಾದ ತತ್ತ್ವಗಳಿಗೆ ಅಥವಾ ಬಸವೇಶ್ವರನೇ

ಮೊದಲಾದ ಪ್ರಮಥರ ಬೋಧೆಗೆ ಹಾನಿ ಬರುವದು ನಿಶ್ಚಯ. ಇವರನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ಹೊರುವವರು ಅಥವಾ ಮೆರೆಯಿಸುವವರು ಬಸವೇಶ್ವರನನ್ನು ಕಾಲ ಕೆಳಗೆ ತಳ್ಳಿದಂತೆಯೇ ಸರಿ ಈ ದೆಸೆಯಿಂದಲೇ ಸಮಾಜದಲ್ಲಿ ಬಹಳವಾಗಿ ಅಶಾಂತಿಯು ಉತ್ಪನ್ನವಾಗಿದೆ. ಈ ಅಶಾಂತಿಯನ್ನು ಇವರೇನೂ ಲಕ್ಷ್ಯಕ್ಕೆ ತರುವವರಲ್ಲ ಎಂಬುದು ಈ ಮೊದಲಿನ ಸಂಗತಿಗಳಿಂದ ನಿರ್ಧರವಾಗಿರುತ್ತದೆ ವೀರಶೈವಭಕ್ತರು ಮಾನಿಸದೆ ಹೋದರೆ ನಮಗೆ ನಮ್ಮ ಆಚಾರ್ಯಪೀಠಕ್ಕೆ ಸೇರಿದ ಮಠಪಯ್ಯನವರು ೯ ಲಕ್ಷ ಇದ್ದಾರೆ. ಅವರೇ ಮಾನಿಸಿದರೆ ಸಾಕು, ಎಂದು ಹೇಳುತ್ತಾರಂತೆ. ಈ ಮಠದಯ್ಯನವರು ತಮಗೆ ಬೇಕಾಗಿದ್ದ ಭಕ್ತರಿಂದ ಇವರಿಗೆ ಹಣ ಕೊಡಿಸುತ್ತಾರೆ. ಇವರಿಗೆ ಇಷ್ಟೇ ಸಾಕು. ಶಿಷ್ಯರ ಹಣವನ್ನು ಅಪಹಾರ ಮಾಡುವ ಗುರುಗಳು ಬಹಳ, ಹೃದಯದ ತಾಪವನ್ನು ಹೋಗಲಾಡಿಸುವವರು ಕಡಿಮೆ, ಎಂಬುದು ಇಲ್ಲಿಯೇ ಸ್ಪಷ್ಟವಾಗಿ ತೋರುತ್ತದೆ.

ಇನ್ನು ಮುಂದೆ ಮಠದಯ್ಯನವರು ವೀರಶೈವ ನಿಜತತ್ವದವರು ಅಥವಾ ಬಸವೇಶ್ವರನ ಬೋಧೆಯಂತೆ ನಡೆಯುತಕ್ಕವರು ಅಲ್ಲದಿದ್ದರೆ ಅವರನ್ನು ಭಕ್ತರು ಮಾನಿಸಬಾರದು. ವಿಚಾರವಿಲ್ಲದೆ ಮಾನಿಸಿದರೆ ಅಂತಹ ಭಕ್ತರು ವೀರಶೈವ ಮತವನ್ನೇ ಹಾಳುಮಾಡಲಿಕ್ಕೆ ಪ್ರಯತ್ನಿಸಿದಂತೆ ಆಗುತ್ತದೆ.

ಒಂದು ಊರಿನಲ್ಲಿಒಬ್ಬನಾದರೂ (ದುಷ್ಟನಿರಲಿ--ಸಜ್ಜನನಿರಲಿ) ಕರೆದರೆ ಇವರು ಹೋಗಲಿಕ್ಕೆ ಸಿದ್ಧರಿದ್ದಾರೆ. ಸರಕಾರವೂ ಇವರಿಗೆ ಅಡ್ಡಪಲ್ಲಕ್ಕಿಯನ್ನು ಕೊಡಲಿಕ್ಕೆ ಸಿದ್ಧವಿದೆ. ಇವರಿಗೂ ಇಷ್ಟೇ ಬೇಕಾಗಿದೆ. ಪೂರ್ವದಲ್ಲಿ ಗುರುಗಳು ಒಂದು ಊರಿಗೆ ಹೋಗಬೇಕಾಗಿದ್ದರೆ ಊರಿನ ವೀರಶೈವರಲ್ಲಿ ಜಗಳವಿದ್ದರೆ ಅದನ್ನು ಬಹುಮುಟ್ಟಿಗೆ ಹೋಗಲಾಡಿಸಿ ಎಲ್ಲರೂ ಮಾನಿಸುವಂತೆ ಏರ್ಪಡಿಸಿಕೊಂಡು ಹೋಗುತ್ತಿದ್ದರು. ಈಗ ಒಬ್ಬನೇ ಇವರನ್ನು ಕರೆದು ಊರಲ್ಲಿ ೪-೬ ಬಣಗಳನ್ನು ಮಾಡಿದರೂ ಮಾಡಲಿ, ನಾವು ಆ ಊರಿಗೆ ಹೋಗಿಯೇ ತೀರಬೇಕೆಂಬುದು ಇವರ ಹಟ ಹೀಗಾಗಿ ಇವರ ಈ ಹಾವಳಿಯನ್ನು ತಪ್ಪಿಸುವುದಕ್ಕಾಗದೆ ಬಹಳ ಜನರು ವ್ಯಸನಪಡುತ್ತಿದ್ದಾರೆ.

ಹಾವೇರಿಯಲ್ಲಿ ಒಂದು ಹೊಸ ದೃಶ್ಯವು (ನಾಟಕದ ಅಂಕದ ತೆರೆಯು) ತೋರಿ ಬಂದಿರುತ್ತದೆ. ಹಾವೇರಿಯವರು ಬಹಳ ಜಾಣತನದಿಂದ ಈ ತೆರೆಯನ್ನು ಬಯಲಿಗೆ ತೆಗೆದಿರುತ್ತಾರೆ.

ಹಾವೇರಿಯವರು ಮೊದಲು ೮-೧೦ ದಿನಗಳು ಇವರು ಏರ್ಪಡಿಸಿದ ಸಭೆಗೆ ಹೋಗಿ ಇವರ ಬೋಧೆಯ ಅಂಶಗಳನ್ನು ತಿಳಿದುಕೊಂಡರು. ಆಮೇಲೆ ಇವರ ಸಭೆಗೆ ಹೋಗುವುದನ್ನು ಬಿಟ್ಟರು. ಆಗ ಕೇಳುವವರೇ ಇಲ್ಲ; ನಾವು ಯಾರಿಗೆ ಹೇಳುವುದೆಂದು ಇವರು ಸಭೆಯನ್ನು ಬರಖಾಸ್ತು ಮಾಡಿದರು. ಆಮೇಲೆ ಶಿವಾನಂದ ಥಿಯೇಟರಿನಲ್ಲಿ ಊರಿನವರು ನಿತ್ಯ ಸಭೆಯನ್ನು ಕೂಡಿಸಲಿಕ್ಕೆ ಹತ್ತಿದರು. ಅಲ್ಲಿ ಮತ ತತ್ವಗಳ ಬೋಧನೆಗೆ ಏರ್ಪಾಡು ಮಾಡಿದರು. ಅದು ಇವರು ಹಾವೇರಿಯನ್ನು ಬಿಟ್ಟು ಉಜ್ಜನಿಗೆ ಹೋಗುವರೆವಿಗೂ ಮತ್ತು ಆಮೇಲೂ ಅನೇಕ ದಿನಗಳು ನಡೆಯಿತು. ಬೆಂಗಳೂರಿನ ಸರ್ವಭೂಷಣ ಮಠದ ಮಹಾದೇವ ಸ್ವಾಮಿಗಳೇ ಮುಂತಾದವರು ಭಾಷಣ ಮಾಡಿದರು. ಈ ಥಿಯೇಟರಿನಲ್ಲಿ ಈ ಹಿಂದೆ ಕಂಡ ಇವರ ಕ್ರಾಂತಿ ವಿರುದ್ಧವಾದ ವಿಷಯಗಳೇ ನಡೆವವು. ಒಂದೆರಡು ಸಂಗತಿಗಳು ಇಬ್ಬರಲ್ಲಿಯೂ ನಿರಾಧಾರಕ ವಿಷಯಗಳೇ ನಡೆದುವೆಂದು ತೋರುತ್ತದೆ.

(೧) ಪ್ರಭುದೇವರಿಗೆ ರೇವಣಸಿದ್ಧರು ಲಿಂಗವನ್ನು ಕಟ್ಟಿದರೆಂದು ಇವರ ಸಭೆಯಲ್ಲಿ ಹೇಳಿಸಿದರೆ ಪ್ರಭುದೇವರು ರೇವಣಸಿದ್ಧರಿಗೆ ಲಿಂಗವನ್ನು ಕಟ್ಟಿದರೆಂದು ಅವರ ಸಭೆಯಲ್ಲಿ ಹೇಳಿಸಿದುದು.

(೨) ರೇವಣಸಿದ್ಧರಿಂದಲೇ ವೀರಶೈವಮತವು ಮೊದಲು ಸ್ಥಾಪನೆಯಾಯಿತೆಂದು ಇವರು ಹೇಳಿದರೆ ಬಸವೇಶ್ವರನಿಂದಲೇ ಮೊಟ್ಟ ಮೊದಲು ಸ್ಥಾಪನೆಯಾಯಿತೆಂದು ಅವರು ಹೇಳಿದರು. ಇವೆರಡರಲ್ಲಿ ಯಾವುದು ಸರಿ ಎಂಬುದನ್ನು ಅವರವರು ಚಾರಿತ್ರಿಕ ದೃಷ್ಟಿಯಿಂದ ಸಿದ್ಧ ಮಾಡಲಿಕ್ಕೆ ಅವರವರಿಗೇ ಬಿಟ್ಟರೂ ಮಿಕ್ಕ ವಿಷಯಗಳು ಶಿವಾನಂದ ಥಿಯೇಟರಿನಲ್ಲಿ ನಡೆದವುಗಳು ವೀರಶೈವ ತತ್ವದ ನಿಜವಾದ ಸಾರವೇ ಎಂದು ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಆದರೂ ಇವರಾಗಲೀ ಇವರ ಕಡೆಯವರಾಗಲೀ ಶಿವಾನಂದಥೇಟರಿಗೆ ಬಂದು ಏನನ್ನೂ ಹೇಳಲಿಲ್ಲ ಸಿಂಹ ವಿದ್ದ ಕಡೆಯಲ್ಲಿ ಮೃಗಗಳುಬೆದರಿ ಓಡುವಂತೆ ಇವರು ಹಾವೇರಿಯಲ್ಲಿ ಇದ್ದಾಗಲೇ ನಡೆಯುವ ಈ ಸಭೆಯಲ್ಲಿ ತಮ್ಮ ಪ್ರತಿಷ್ಠೆಯನ್ನು ತೋರಿಸುವ ಕಾರ್ಯವನ್ನು ಮಾಡಿ ತಮ್ಮ ತತ್ವಗಳು ಸರಿ ಎಂಬುದನ್ನು ಜನರಲ್ಲಿ ಬಿಂಬಿಸಿ ಈ ಸಭೆಯನ್ನು ನಿಲ್ಲಿಸಬಹುದಾಗಿದ್ದಿತು. ಇವರು ನಿಜವಾದ ಸಿಂಹನ ಸ್ವರೂಪರಾಗಲಿಲ್ಲ. ಒಂದು ದಿನ ಇವರಿದ್ದ ನಡುವಿನ ಮಠದಲ್ಲಿ ಸಭೆಯು ಕೂಡುವುದಾಗಿ ನಿಶ್ಚಿತವಾಗಿತ್ತು. ಅಲ್ಲಿನಾವೂ

ಸೇರುವೆವು. ಮಾತಾಡುವೆವೆಂದು ವೀರಶೈವತತ್ತ್ವ ಪ್ರಸಾರ ಸಂಘದವರು ಹೇಳಿದ ಕೂಡಲೆ ಆ ಸಭೆಯು ನಡೆಯಲಿಲ್ಲ. ಹೀಗಾದುದು ಇವರಿಗೆ ಕಳಂಕದ ಮಾತು. ರಾಣೇಬೆನ್ನೂರಲ್ಲಿ ಧಾರವಾಡದ ಕಲೆಕ್ಟರವರು ಇವರ ಜಗದ್ಗುರುತ್ವಕ್ಕೆ ಒಂದು ಕರೀಗೆರೆ ( Black mark )ಯನ್ನು ಎಳೆದರು. ಹಾವೇರಿಯಲ್ಲಿ ಈ ಹೊಸತೆರೆಯೊಂದು ಇವರ ಪ್ರಕಾಶವನ್ನು ಕುಗ್ಗಿಸಿತು.

ಇದನ್ನು ನೋಡಿ ಎಲ್ಲಾ ಊರವರು ಹೀಗೆಯೇ ಮಾಡಲಿಕ್ಕೆಹೋಗುವವರು, ವೀರಶೈವ ಸಮಾಜದ ಗತಿಯೇ ಹೀಗೆ ಇದೆ. ಮುಂದಿನಊರಿನವರು ಇವರು ಏರ್ಪಡಿಸಿದ ಸಭೆಯಲ್ಲಿ ತಿಳಿಯಬೇಕಾದ ಅಂಶಗಳೂ ಇವರ ತತ್ವಗಳೂ ಇಂತಹ ಕ್ರಾಂತಿಕಾರಗಳೇ ಎಂಬ ವನ್ನು ಮೊದಲೇದೃಢವಾಗಿ ತಿಳಿದು ಆ ಸಭೆಯಕಡೆಗೆ ಗಮನ ಕೊಡದೆ ಇವರನ್ನು ನಿಜತತ್ತ್ವದವರನ್ನಾಗಿ ಮಾಡುವುದಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಬೇಕು. ಅದು ಸಾಧ್ಯವಿಲ್ಲವೆಂದು ಇದೂವರೆವಿಗೂ ಸಿದ್ಧವಾಗಿದೆ. ಆದುದರಿಂದ **ಅಹಂಕಾರಕ್ಕೆ ಉದಾಸೀನವೇ ಮದ್ದು** ಎಂಬ ಗಾದೆಯಂತೆ ಇವರ ದೊಡ್ಡಸ್ತಿಕೆಗೆ ಎಲ್ಲರೂ ಸುಮ್ಮನೆ ಇರುವುದೇ ಇವರಿಗೆ ದೊಡ್ಡ ಪಾಠವನ್ನು ಕಲಿಸಿದಂತೆ ಆಗುತ್ತದೆ. "ವಿರಕ್ತರು ಹೆಚ್ಚೋ ಗುರುಗಳು ಹೆಚ್ಚೋ ಸಿದ್ಧಮಾಡಿಕೊಡುವ ಭಾರವು ತಮಗೇ ಕೂಡಿದ್ದಾಗಿದೆ. ತಮ್ಮ ದೆಸೆಯಿಂದ ನಾವು ಊರಲ್ಲಿ ಎರಡು ಬಣಗಳನ್ನು ಮಾಡಿಕೊಳ್ಳಲಾರೆವು. ಸಿದ್ಧಮಾಡಿದ ಮೇಲೆ ತಮ್ಮನ್ನು ಸತ್ಕರಿಸಿ ಕರೆಯುವೆವು." ಎಂದು ಹೇಳುವ ಊರಿನವರು ಬಹಳ ಕ್ಷೇಮಿಗಳಾಗಿ ಐಕಮತ್ಯದಲ್ಲಿಯೇ ಇರುತ್ತಾರೆ. ( ಇವರು ಕ್ರಾಂತಿಕಾರರಾದುದರಿಂದ ಹೀಗೆ ಮಾಡುವುದು ಅತ್ಯವಶ್ಯಕ ಕಾರ್ಯವಾಗಿದೆ. ಇದು ಒಂದು ಊರಿನ ಕ್ಷೇಮದ ಸುಲಭವಾದ ಉಪಾಯವಾಗಿದೆ.)

"ಲಿಂಗಪೂಜೆ ಮಾಡುವುದು ಲಿಂಗದ ಪ್ರಾಣವಾದ ಜಂಗಮವು ಮನೆಗೆ ಬರಲೆಂದು" ಎಂದು ವೀರಶೈವ ಶಾಸ್ತ್ರವು ಹೇಳುತ್ತದೆ. ಆದುದರಿಂದ ಲಿಂಗವೂ ಜಂಗಮವೂ ಒಂದಕ್ಕೊಂದು ಸಂಬಂಧವುಳ್ಳುದು ಎಂಬುವದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇವರು ಅಧಿಕಾರಕ್ಕೆ ಬಂದಲಾಗಾಯಿತು ಒಬ್ಬ ವಿರಕ್ತ [ ಜಂಗಮ ]ರನ್ನು ಪೂಜೆ ಮಾಡಿಲ್ಲ. ಆದ್ದರಿಂದ ಇವರಿಗೆ ಜಂಗಮರೇ ಇಲ್ಲವಾಗಿದೆ. ಜಂಗಮ ಇಲ್ಲದವರಿಗೆ ಲಿಂಗವೂ ಇಲ್ಲ ವೆಂಬುವದು ಸ್ವತಃ ಸಿದ್ಧವಾದ ಮಾತಾಗಿದೆ. ಹೀಗೆ ಮು

ಖ್ಯವಾದ ೮ ಆವರಣಗಳಲ್ಲಿನ ಒಂದೊಂದು ಆವರಣವನ್ನು ಇವರು ಕಳೆ ದುಕೊಳ್ಳುತ್ತವಾದರೆ ಇವರಿಗೆ ವೀರಶೈವರೆಂದು ಹೇಗೆ ಕರೆಯಬೇಕು? ಈ ವಿಧದಲ್ಲಿ ಇವರು ಶುದ್ಧ ಶೈವರೇ ಆಗಿರುತ್ತಾರೆ.

ಇಡೀ ಸಮಾಜದಲ್ಲಿ ಇವರ ಈ ಕುತಂತ್ರವನ್ನು ನಿಲ್ಲಿಸುವದಕ್ಕೆ ಇದೂ ವರೆವಿಗೆ ಏನೊಂದು ಯೋಜನೆಯೂ ಮಾಡಲ್ಪಟ್ಟಿಲ್ಲ. ಒಂದು ಊರಿನ ಮಹ ನೀಯರು ಆ ಊರಿನ ಮಠವಯ್ಯನವರ ಹಂಗಿಗೆ ಒಳಗಾಗುವುದರಿಂದ ಅವರ ಉದ್ದೇಶವು ಮುಂದುವರಿಯುತ್ತಾ ಇದೆ. ಮೊದಲು ಬರೆದಂತೆ "ನಾವು ನಿಮ್ಮನ್ನು ಪುರಸ್ಕರಿಸುವುದಿಲ್ಲ, ನೀವು ಸಭೆ ಮಾಡಿ ನಿರ್ಣಯಿಸಿರಿ," ಎಂದು ಯಾರಾದರೂ ಹೇಳಿದರೆ ಇವರಿಗೆ ಯಾವ ಚಿಂತೆಯೂ ಇಲ್ಲ ಸಭೆಯನ್ನು ಕೂಡಿಸುವುದೂ ಇಲ್ಲ. ಹಾಗೆ ಹೇಳು ತ್ತಾ ಇವರು ಒಂದೇ ಊರಿನಲ್ಲಿ ಇರಲಿ ಎಂಬಷ್ಟು ಐಕಮತ್ಯದ ದಾರ್ಢ್ಯತೆ ಯು ವೀರಶೈವ ಸಮಾಜದಲ್ಲಿಯೂ ಇಲ್ಲ.

ಆದರೆ ವೀರಶೈವ ಸಮಾಜವೇ ಒಮ್ಮುಖದಿಂದ ಪ್ರಯತ್ನಮಾಡಿದರೆ ಇಷ್ಟುಬೆಳೆದ ಇವರ ಚ ಳವಳಿಯನ್ನೂ ನಿಲ್ಲಿಸಬಹುದು. ಇದಕ್ಕಾಗಿ ಮಹಾಜನಗಳು ಒಂದು ಕಾ ರ್ಯವನ್ನು ಮಾಡುವುದು ಅತ್ಯವಶ್ಯಕವೆಂದು ತೋರುತ್ತದೆ.

ಈಗಿನ ವೀರಶೈವ ಮಹಾಸಭೆಯು ವಿವಾದ ವಿಷಯಗಳಿಗೆ ಕೈಹಾ ಕುವುದಿಲ್ಲವಾದುದರಿಂದ "ವೀರಶೈವ ಆಂತರಿಕ ವಿವಾದ ನಿರ್ಣಯ ಮ ಹಾಸಭಾ" ಎಂಬುದಾಗಿ ಪ್ರತ್ಯೇಕವಾಗಿ ಒಂದು ಮಹಾ ಸಭೆಯನ್ನು ಕೂಡಿಸಿ ಇವರು ಹೇಳುವ ವಿಷಯಗಳಿಗೂ ವೀರಶೈವರ ನಿಜವಾದ ತತ್ತ್ವಗಳಿಗೂ ಹೋಲಿಕೆ ಮತ್ತು ವಿರುದ್ಧವಾದ ಅಂ ಶಗಳನ್ನು ಕಂಡುಹಿಡಿದು ವೀರಶೈವರ ನಿಜವಾದ ತತ್ತ್ವದ ಪ್ರಕಾರ ವಿ ವಾದ ವಿಷಯಗಳ ನಿರ್ಣಯವನ್ನು ಮಾಡಿ ಪ್ರಕಟಿಸಿ ಬಿಡಬೇಕು. ಆ ಮಹಾಸಭೆಯ ಪರವಾಗಿ ಒಂದು ಕಾರ್ಯ ನಿರ್ವಾಹಕ ಮಂಡಲಿಯು ಏರ್ಪಡಾಗಿ ಅದು ವೀರಶೈವರ ಧಾರ್ಮಿಕ ಅನ್ಯಾಯವರ್ತನೆಗಳನ್ನು ಖಂಡಿಸುತ್ತಾ ಯಾವಾಗಲೂ ಕೆಲಸಮಾಡುತ್ತಿರಬೇಕು. ಅದು ಈ ವಿವಾದ ನಿರ್ಣಾಯಕ ಮಹಾಸಭೆಯ ನಿರ್ಣಯವನ್ನೇ ರೂಢಿಯಲ್ಲಿ ತರುವುದಕ್ಕೆ ಯತ್ನಿಸಬೇಕು. ಎಂತಹ ಗುರುಜಂಗಮರು ತಪ್ಪಿನಡೆದಾಗ್ಯೂ ಅವರಿಗೆ ಈ ಸಂಘವು ಎಚ್ಚರಿಸುತ್ತಿರಬೇಕು. ಒಬ್ಬ ಸೈನಿಕನನ್ನೂ ಉಂಟಾಗಿಲ್ಲದ ರಾಷ್ಟ್ರಸಂಘವು(League of Nations) ಲಕ್ಷಗಟ್ಟಲೆ ಸೇನೆಯುಳ್ಳ

ಕಾಜರಮೇಲೆಲ್ಲಾ ಹೇಗೆ ಅಧಿಕಾರವನ್ನು ನಡಸುವುದೋ ಹಾಗೆ ಈ ಮಹಾಸಭೆಯ ಮಂಡಲವು ಪೀಠಾಧಿಕಾರಿಗಳನ್ನೂ ಕೂಡಾ ನಮ್ರವಾಗುವಂತೆ ಮಾಡತಕ್ಕ ಶಕ್ತಿಯುಳ್ಳದ್ದಾಗಿ ಪರಿಣಮಿಸುತ್ತದೆ.

ಸನ್ ೧೯೨೭ ನೆಯ ಇಸವಿಯಲ್ಲಿ ಜಂಗಮಾಧಿಕ್ಯವನ್ನು ರಚಿಸುವಾಗಲೇ ಸಮಾಜದ ಐಕಮತ್ಯತೆಯನ್ನು ಕೋರಿದ ಈ ಲೇಖನಕಾರನಿಗೆ ಈ ಅಶಾಂತಿಯು ಇನ್ನೂ ಹೆಚ್ಚಾಗುತ್ತಲೇ ಇರುವುದನ್ನು ಕಂಡು ಬಹಳವ್ಯಸನವಾಗಿದೆ. ಆಗಲೇ ಸಮಾಜದವರಿಗೆ ವಿಜ್ಞಾಪಿಸಿಕೊಂಡಂತೆ ಗುರುವರ್ಗದ ಪ್ರತಿಷ್ಠೆಯು ಕಡಿಮೆಯಾಗಬೇಕೆಂಬ ಭಾವನೆಯು ಈಗಲೂ ಇಲ್ಲದಿದ್ದರೂ ಮೇರೆದಪ್ಪಿ ಹೋಗುವ ಗುರುಗಳ ಹಾವಳಿಯನ್ನು ಕಡಿಮೆ ಮಾಡಬೇಕೆಂಬ ಚಿಂತೆಯು ಬಹಳವಾಗಿ ಬೇರೂರಿ ಇರುತ್ತದೆ. ಗುಣಜ್ಞರಾದವರು ಮೇಲೆ ಬರೆದ ಅಂಶಗಳಲ್ಲಿ ಗುಣಗಳನ್ನೇ ಗ್ರಹಿಸಿಕೊಂಡು ಬೇಗನೆ ಈ ಅಶಾಂತಿಯನ್ನು ತಪ್ಪಿಸಬೇಕಾಗಿ ಪುನಃ ಬೇಡುತ್ತೇನೆ.

ಪ್ರಕಾಶಕ.
ಸದ್ಧರ್ಮ ದೀಪಿಕೆ, ಹಾವೇರಿ.



# ಸುಬ್ಬನರಸಿಂಹಶಾಸ್ತ್ರಿಗಳೇ, ಉತ್ತರವನ್ನುಕೊಡಿರಿ.

ಆರ್ಯಸಮಾಜದ ಪುರೋಹಿತರಾದ ಸುಬ್ಬನರಸಿಂಹಶಾಸ್ತ್ರಿ ಭಾಸ್ಕರಸಂತರೇ,

ನೀವು ೯–೩–೩೭ ರಲ್ಲಿ ರೇಣುಕಜಯಂತಿಯ ಸಂಬಂಧದಲ್ಲಿ ಉಪನ್ಯಾಸಮಾಡಿದಾಗ ನಿಮ್ಮ ಆರ್ಯಸಮಾಜವನ್ನು ವೀರಶೈವರಲ್ಲಿ ಬೋಧಿಸಲಿಕ್ಕೆ ಬಂದಂತೆ ತೋರುತ್ತದೆ. ನಿಮ್ಮ ಭಾಷಣದಿಂದ ಅಖಿಲಭಾರತವೀರಶೈವರ ಮನಸ್ಸನ್ನು ಬಹಳವಾಗಿ ವ್ಯಥೆಪಡುವಂತೆ ಮಾಡಿದ್ದೀರಿ' ಒಳ್ಳೆಯದು. ಈ ಕೆಳಗೆಕಂಡ ಪ್ರಶ್ನೆಗಳಿಗೆ ಸರಿಯಾದ ಸಮಾಧಾನದ ಉತ್ತರವನ್ನು ಕೊಡಿರಿ, ಇಲ್ಲದಿದ್ದರೆ ನೀವು ದಡ್ಡ ಸುಬ್ಬನರಸಿಂಹಶಾಸ್ತ್ರಿಗಳಾಗುವಿರಿ.

---

(೧) ವಿಷ್ಣುವು ಹಿರಣ್ಯಕಶಿಪು ಎಂಬ ರಾಕ್ಷಸನನ್ನುಕೊಂದು ಅವನರಕ್ತವನ್ನುಕುಡಿದುದು ವೈದಿಕವೋ ಅವೈದಿಕವೋ?

(೨) ವಿಷ್ಣುವು ವರಾಹಾವತಾರವನ್ನು ಮಾಡಿದುದು ವೈದಿಕವೊ ಅವೈದಿಕವೋ?

(೩) ಶುಕ್ರಾಚಾರ್ಯನು ಬೃಹಸ್ಪತ್ಯಾಚಾರ್ಯನ ಪುತ್ರನಾದ ಕಚನನ್ನು ರಾಕ್ಷಸರು ಕೊಂದು ತಂದ ಮಾಂಸಾದಿಗಳನ್ನು ಮದ್ಯದಲ್ಲಿ ಕುಡಿದು ಪುನ: ಅವನನ್ನು ಬದುಕಿಸಿದುದು ವೈದಿಕವೋ ಅವೈದಿಕವೋ?

(೪) ಪೆರಿಯಪುರಾಣದಲ್ಲಿ ಭೈರವ ವೇಷಧಾರಿಯಾದ ಶಿವನು ಸಿರಿಯಾಳನಮಗನ ಮಾಂಸಾದಿಗಳನ್ನು ತಿನ್ನದೆ ಪುನಃ ಆ ಮಗನನ್ನು ಬದುಕಿಸಿಕೊಟ್ಟನೆಂದು ಬರೆದಿರುವುದು ನಿಮಗೆತಿಳಿದಿದೆಯೋ ಇಲ್ಲವೋ?ಒಂದುವೇಳೆ ನಿಮಗೆ ತಿಳಿಯದಿದ್ದರೆ ಈಗಅದನ್ನುನೋಡಿ ತಿಳಿದಾದಮೇಲೆ ನಿಮ್ಮ ಮಾತು ವೈದಿಕವೋ ಅವೈದಿಕವೋ?

೫) ಬಲ್ಲಾಳರಾಯನ ವಧುವನ್ನು ಅಪೇಕ್ಷಿಸಿ ಆಕೆಯಲ್ಲಿ ಅಸುರಕನಾಗದೆ ಪುನಃ ದಯೆಯಿಂದದಂಪತಿಗಳನ್ನು ಉದ್ಧರಿಸಿದ ಪುರಾಣಕಥೆಯೂ ನಿಮಗೆ ಗೊತ್ತಿಲ್ಲವೇ? ಅದನ್ನು ಗೊತ್ತುಮಾಡದೆ ನೀವುಹೇಳ

ದದವೈದಿಕವೋ ಅವೈದಿಕವೋ?

(೭) ಬ್ರಹ್ಮೋಪನಿಷತ್ತಿನಲ್ಲಿ ಬ್ರಹ್ಮಜ್ಞಾನಿಯಾದವನು ಜನಿವಾರವ ಕಿತ್ತುಹಾಕಿ ಶಿಖೆಯನ್ನು ಬೋಳಿಸಬೇಕು, ಇದರಿಂದಬ್ರಾಹ್ಮಣ್ಯಕ್ಕೆ ಏನೂತೊಂದರೆಇಲ್ಲ. ಅವನಿಗೆ ಜ್ಞಾನಬ್ರಾಹ್ಮಣ್ಯಉಂಟೆಂದು ಬರೆದಿರುವುದು ವೈದಿಕವೋ ಅವೈದಿಕವೋ?

(೮) ವಜ್ರಸೂಚಿ ಉಪನಿಷತ್ತಿನಲ್ಲಿ ಬ್ರಾಹ್ಮಣ್ಯವು ಜನ್ಮದಿಂದಲೂ ಕರ್ಮದಿಂದಲೂ ಬರುವುದಿಲ್ಲ ಎಂದು ಹೇಳಿರುವುದು ವೈದಿಕವೋ ಅವೈದಿಕವೋ?

(೯) ನಾರದ ಪರಿವ್ರಾಜಕ ಉಪನಿಷತ್ತಿನಲ್ಲಿ ಅತಿವರ್ಣ ಎಂಬುದು ಇದೆ. ಇದು ನಾಲ್ಕುವರ್ಣಗಳಿಗಿಂತ ಶ್ರೇಷ್ಠವು, ಇದನ್ನು ಅನುಸರಿಸುವವರಿಗೆ ಕರ್ಮಬ್ರಾಹ್ಮಣರಂತೆ ಮಾಡಬೇಕಾದ ಕರ್ಮಗಳಿಲ್ಲ, ಎಂದು ಬರೆದಿರುವುದು ವೈದಿಕವೋ ಅವೈದಿಕವೋ?

(೯) ಬಸವೇಶ್ವರನಿಗಿಂತ ಹೆಚ್ಚಾಗಿ ವೇದದ ಋಕ್ಕುಗಳನ್ನು, ಓದಿದ ನೀವು ಬಸವೇಶ್ವರನ ವಚನದಲ್ಲಿ 'ಭರ್ಗೋದೇವಸ್ಯ ಧೀಮಹಿ' ಎಂಬ ವಾಕ್ಯವನ್ನು ನೋಡಿರುವಿರಾ ಇಲ್ಲವೇ? ಈ ವಾಕ್ಯವುವೇದದ ಋಕ್ಕೇ ಅಲ್ಲದಿದ್ದರೆ ಯಾತರದು? ಇಲ್ಲಿ ಧೀಮಹಿ ಎಂಬುದಕ್ಕೆ ಸತ್ಯಾರ್ಥಪ್ರಕಾಶಿಕೆಯಲ್ಲಿ ಧರಿಸುವುದು ಎಂದು ಅರ್ಥಮಾಡಿದಂತೆ ಶಿವನಧಾರಣೆ ಮಾಡದಿದ್ದನೀವು ವೈದಿಕರೋ ಅವೈದಿಕರೋ?

(೧೦)........ಸೂತ್ರದಲ್ಲಿ ಬ್ರಾಹ್ಮಣಸ್ತ್ರೀಯರಿಗೆ ಜನಿವಾರವುಂಟು ಎಂದು ಬರೆದು ಇದ್ದಮೇಲೆ ಸಾವಿರಾರುವರ್ಷಗಳಿಂದ ಅದನ್ನು ಆಚರಣೆಗೆ ತಾರದೆ ಕರ್ಮಬ್ರಾಹ್ಮಣರ ಪದ್ಧತಿಯನ್ನು ಕೆಡಿಸಿಕೊಂಡನೀವು ವೈದಿಕರೋ ಅವೈದಿಕರೋ?

(೧೧) ಬಸವೇಶ್ವರನು ಅಹಿಂಸೆಯು ಮುಖ್ಯವೆಂಬ ವಚನಗಳನ್ನು ಹೇಳಲಿಲ್ಲವೇ? ಹೇಳಿದ್ದರೂ ಅವುಗಳನ್ನೆಲ್ಲಾಬಿಟ್ಟು ಶಿವನು ಹಿಂಸೆಮಾಡಿದನೆಂದು ಬಸವೇಶ್ವರನು ವಚನವನ್ನು ಹೇಳಿದ್ದಾನೆ ಎಂದು ಅದೊಂದು ಪರೋಕ್ಷದವಚನವನ್ನು ಆಧಾರವಾಗಿ ಇಟ್ಟುಕೊಂಡು ಬಸವೇಶ್ವರನನ್ನು ನಿಂದಿಸಿದುದು ವೈದಿಕವೋ ಅವೈದಿಕವೋ ?

(೧೨) ತೇಜೋಬಿಂದೂಪನಿಷತ್ತಿನ ಆರನೆಯಅಧ್ಯಾಯದಲ್ಲಿ ಜೀವನ್

ಮುಕ್ತನು 'ನ ಮೇ ವೇದೋ' "ನನಗೆವೇದವಿಲ್ಲ" ಎಂದು ಹೇಳುವದು ವೈದಿಕವೋ ಅವೈದಿಕವೋ?

(೧೩) ಅದೇ ತೇಜೋಬಿಂದೂಪನಿಷತ್ತಿನ ೫ನೆಯ ಅಧ್ಯಾಯದಲ್ಲಿ ನಾನು ಚಿನ್ಮಾತ್ರನು (ಬ್ರಹ್ಮಸ್ವರೂಪನು) ಅನಾತ್ಮವೆಂಬುವುದಿಲ್ಲ ಎಂದೂ ನಿಶ್ಚಯಿಸು ಎಂದು ಬೋಧಿಸಿದಮೇಲೆ ಹಾಗೆ ಆದವನಿಗೆ ಜಾತಿಇಲ್ಲ ವರ್ಣವಿಲ್ಲ ವೇದಶಾಸ್ತ್ರಗಳು ಸುಳ್ಳು ಎಂದುಹೇಳುವುದು ವೈದಿಕವೋ ಅವೈದಿಕವೋ?

(೧೪) ನಿರಾಕಾರನಾದ ಶಿವನು ಸಾಕಾರನಾಗಿ ಮನುಷ್ಯನಾಗಿಬರುವುದುಂಟೇ? ಪೂರ್ವದಲ್ಲಿ ತನ್ನ ಕಷ್ಟದಸ್ಥಿತಿಯನ್ನು ಪರಿಹರಿಸುವಸಮಯಕ್ಕೆ ಬಂದು ಉದ್ಧಾರಮಾಡಿದವರನ್ನೇ 'ಶಿವ' ಎಂದು ತಿಳಿಯುವಪದ್ಧತಿಯೂ ಇತ್ತೆಂಬದನ್ನು ನೀವುಬಲ್ಲಿರಾ? ಒಬ್ಬ ಭೈರವನು ಸಿರಿಯಾಳಸೆಟ್ಟಿಯ ಎದುರಿಗೆ ಬಂದಿದ್ದರೆ ಅವನನ್ನೇ ಶಿವನೆಂದು ಸೆಟ್ಟಿಯುಕರೆದಿದ್ದರೆ (ಪುರಾಣಗಳು ಹಾಗೆಬೋಧಿಸಿದ್ದರೆ ಅವನನ್ನು ಪಾರ್ವತೀಪತಿಯಾದ ಶಿವನೆಂದು ಅಥವಾನಿರಾಕಾರನಾದ ಶಿವನೆಂದು ನೀವುತಿಳಿಯುವದು ವೈದಿಕವೋ ಅವೈದಿಕವೋ? ಪಾರ್ವತೀಪತಿಎಂದು ತಿಳಿಯುವದಾದರೆ ಬಲ್ಲಾಳರಾಯನ ಕಾಲದಲ್ಲಿ ಅವನು ಇದ್ದನೇ?

(೧೫) ತೇಜೋಬಿಂದೂಪನಿಷತ್ತನಲ್ಲಿ ಆರನೆಯ ಅಧ್ಯಾಯ೩೪ನೆಯ ಶ್ಲೋಕದಲ್ಲಿ ಸರ್ವವೂಬ್ರಹ್ಮ ಎಂದಿರುವವನಿಗೆ ಹೋಮವಿಲ್ಲ, ಕರ್ಮಗಳಿಲ್ಲ, ದುರ್ವಾಕ್ಯವಿಲ್ಲ, ಸುವಾಕ್ಯವಿಲ್ಲ, ಗಾಯತ್ರಿಇಲ್ಲ, ಸಂಧ್ಯಾವಂದನೆಇಲ್ಲ, ಎಂದು ಮುಂತಾಗಿ ಹೇಳಿರುವುದು ವೈದಿಕವೋ ಅವೈದಿಕವೋ?

(೧೬) ನೀವು ಜನಿವಾರವನ್ನು ಹಾಕಿಕೊಂಡು ಸೂರ್ಯನಮಸ್ಕಾರ ಮಾಡುವಾಗನಿಮ್ಮ ಭಾವನೆಯಲ್ಲಿ ನೀವು ಮನುಷ್ಯರೆಂದು ತಿಳಿದಿದ್ದೀರೋ ಪರಬ್ರಹ್ಮವೆಂದು ತಿಳಿದಿದ್ದೀರೋ? ಮನುಷ್ಯ ಎಂತತಿಳಿದಿದ್ದರೆ ಅಹಂಬ್ರಹ್ಮಾಸ್ಮಿ ಎಂಬುದು ನಿಮಗೆ ಸಂಬಂಧಿಸುವದಿಲ್ಲ ಆಗನಿಮಗೆ ಮರಳಿಜನ್ಮ ಉಂಟು. ಅಹಂ ಬ್ರಹ್ಮಾಸ್ಮಿ ಎಂದು ತಿಳಿದುಇದ್ದರೆ ನೀವು ಶ್ರೇಷ್ಠವಾದ ಬ್ರಹ್ಮರೂಪರಾಗಿ ಇದ್ದು ಪಂಚಭೂತಗಳಿಗೆ ಸೇರಿದ ಸೂರ್ಯನನ್ನು ಪೂಜೆಮಾಡಿ ನಮಸ್ಕರಿಸಬೇಕಾಗಿಲ್ಲ.

ಹೀಗೆ ನೋಡುವುದಾದರೆ ನಿಮ್ಮ ಆರ್ಯಸಮಾಜವು ಬಹಳ ಕಡಿಮೆತರಹದ ಆಲೋಚನೆಯುಳ್ಳದ್ದಾಗಿ ಕಾಣುತ್ತದೆ. ಆದ್ದರಿಂದ ನಿಮ್ಮದು ವೈದಿಕವೋ? ಅಹಂಬ್ರಹ್ಮಾಸ್ಮಿ ಎಂಬುದು ವೈದಿಕವೋ? ನೀವೇಹೇಳಿರಿ

(೧೭) ಸತ್ಯವನ್ನು ಹೇಳಬೇಕು ಎಂದು ವಿಧಿಸುವದೇ ವೈದಿಕಧರ್ಮ. ಬೆಂಕಿ (ಪಂಚಭೂತಗಳಲ್ಲಿ ಒಂದು) ಯಲ್ಲಿ ಹವಿಸ್ಸು ತುಪ್ಪ ಮೊದಲಾದುದು ಹಾಕಿ ಹಾಳುಮಾಡಿಕೊಳ್ಳುವದಕ್ಕಿಂತಲೂ ಎಂದರೆ ಹೋಮಮಾಡುವದಕ್ಕಿಂತಲೂ ಶಿವಸ್ವರೂಪರೆಂದು ತಿಳಿಯಲ್ಪಟ್ಟ ಪಲ್ಲಿ ಜಂಗಮರಲ್ಲಿ ಆತುಪದ ತೃಪ್ತಿಯನ್ನು ಪಡಿಸಿದರೆ ಶ್ರೇಷ್ಠವೆಂಬ ವೇದದ ತಿಳವಳಿಕೆಯು ಸತ್ಯವೇ ನಿಮ್ಮದು ಸತ್ಯವೇಹೇಳಿರಿ. ನಿಮ್ಮದು ಸಿದ್ಧವಾಗುವದಾದರೆ ಬೆಂಕಿಯಲ್ಲಿ ಹವಿಸ್ಸುಹಾಕುವಂತೆ ಭೂಮಿಎಂಬ ಭೂತಕ್ಕೂ ಏಕೆಹಾಕಬಾರದು ? ಇದರಲ್ಲಿ ಯಾವದು ವೈದಿಕವೆಂಬುವನ್ನು ಚನ್ನಾಗಿ ವಿಚಾರಮಾಡಿ ತಿಳಿಸಿರಿ.

ತನ್ನನ್ನೇ ಮಹಾದೇವನಿಗೆ ಒಪ್ಪಿಸುವ ಯಜ್ಞವು ಹೆಚ್ಚಿನದೋ? ಕೆಲವು ವಸ್ತುಗಳನ್ನು ಒಪ್ಪಿಸುವ ಯಜ್ಞವು ಹೆಚ್ಚಿನದೋ? ಇವುಗಳಲ್ಲಿ ಯಾವುದು ವೈದಿಕ?

(೧೮) ಕಾಪಾಲಿಕ, ಶಾಕ್ತೇಯರಂತೆ ಬಸವನು ಅಪೇಯಪಾನ, ಮಾಂಸಭಕ್ಷಣಮಾಡಿದ ಉದಾಹರಣೆಯನ್ನು ಚರಿತ್ರದೃಷ್ಟಿಯಿಂದ ನೀವು ತೋರಿಸುವಿರಾ? ಹಾಗಿಲ್ಲದಿದ್ದರೆ ಅವರಂತೆ ಬಸವೇಶ್ವರನು ಅವೈದಿಕನೆಂದು ನೀವು ಹೇಗೆ ಹೇಳಿದಿರಿ? ಹೀಗೆ ನೀವು ಯದ್ವಾತದ್ವಾ ಹೇಳುವುದು ವೈದಿಕವೋ ಅವೈದಿಕವೋ?

ಆರ್ಯಸಮಾಜದ ಪುರೋಹಿತರಾದ ನೀವು ಒಬ್ಬರಲ್ಲಿ ಇಲ್ಲದ ದುರ್ಗುಣವನ್ನು ಕಲ್ಪಿಸಿ ಆರೋಪಿಸಿದರೆ ನಿಮ್ಮ ಶಿಷ್ಯರು ಎಷ್ಟರಮಟ್ಟಿಗೆ ಮಾಡಬೇಕಾಯಿತು? ಹೀಗೆ ನೀವು ಮಾಡಿದುದು ವೈದಿಕವೋ ಅವೈದಿಕವೋ

ಸದ್ಯದಲ್ಲಿ ಇಷ್ಟಕ್ಕೆ ಉತ್ತರಕೊಡಿರಿ.

ಓರ್ವ ವೀರಶೈವ

## ಇದೇನು ಶಿವರಾತ್ರಿಯ ವಾದವೋ? ವಿನೋದವೋ?

ಬೆಳಗಾಂವ್ ಜಿಲ್ಹೆಯ ಕಿತ್ತೂರಿನಲ್ಲಿ ಶಿವರಾತ್ರಿಯ ಕಳೆದುಹುಪ್ರಯಾಣ ಬೆಳಸಿದುದಾಗಿತ್ತು. ಅಲ್ಲಿನವಿರಕ್ತಮಠದಲ್ಲಿ ಜನಸಂದಣಿಯು ಸೇರಿ ಮೂರುದಿನ ಮಹಾದೇವನ ವಿಚಾರಗಳನ್ನು ನಡೆಸಿದರು. ಮೊದಲನೆಯದಿನ ಶಿವಪೂಜಾಪುರಾಣ ಶ್ರವಣಮೊದಲಾದ ಕಾರ್ಯಗಳಾದವು. ಎರಡನೆಯದಿನಪುರಾಣಶ್ರವಣವಾದಮೇಲೆ ಸ್ವಲ್ಪ ಹೊತ್ತುಅದ್ವೈತ ಶಿವಾದ್ವೈತಇವುಗಳತಾರತಮ್ಯ ಇದರಲ್ಲಿ ವೀರಶೈವರ ವಿಶೇಷ ಲಕ್ಷಣ ಇವುಗಳ ವಿಷಯದ ಉಪನ್ಯಾಸವಾಯಿತು ಮೂರನೆಯದಿನ ಒಂದು ವಿಷಯವು ವಿಮರ್ಶೆಗೆ ಬಂದಿತ್ತು.

(೧) ಅದ್ವೈತ ಜ್ಞಾನವನ್ನು ಹೊಂದಿದಮೇಲೆ ಮನುಷ್ಯನು ತನ್ನ ಇಚ್ಛೆಕವಾಗಿ (ಮನಬಂದಂತೆ) ಕೆಲಸಮಾಡಿಕೊಂಡು ಇರಬಹುದು. ಅದಕ್ಕೆ ಕೆಲಸಮಾಡಬೇಕೆಂಬ ನಿರ್ಬಂಧವೇನೂ ಇಲ್ಲ. ಏಕೆಂದರೆ ಸರ್ವವೂ ಬ್ರಹ್ಮ ಎಂಬ ಜ್ಞಾನವು ಅದ್ವೈತಿಗೆ ಇರುವುದರಿಂದ ಅವನು ಬ್ರಹ್ಮಮಯನಾಗಿ ಇರುತ್ತಾನೆ. ಈ ಜ್ಞಾನವೇ ಹೆಚ್ಚಿನದು. ಇದಕ್ಕಿಂತಹೆಚ್ಚಿನದು ಯಾವುದೂ ಬೇಕಾಗಿಲ್ಲ.

(೨) ಅದ್ವೈತದಲ್ಲಿ ಸೃಷ್ಟಿದೃಷ್ಟಿವಾದ, ದೃಷ್ಟಿಸೃಷ್ಟಿವಾದ, ಅಜಾತವಾದ ಎಂದು ಮೂರುವಾದಗಳಿವೆ. ಸೃಷ್ಟಿಯು ಹೇಗೆ ಉಂಟಾಗಿದೆಯೋ ಆ ದೃಷ್ಟಿಯನಿಟ್ಟುಕೊಂಡು ಅದ್ವೈತವ ಹೇಳುವುದು ಸೃಷ್ಟಿ ದೃಷ್ಟಿವಾದ. ಕಣ್ಣಿಗೆ ಕಂಡುದನ್ನೇ ಬ್ರಹ್ಮವೆಂದು ಭಾವಿಸಿ ಅದನ್ನೇಮುಖ್ಯವಾಗಿ ಇಟ್ಟುಕೊಂಡು ಅದರಿಂದ ಸೃಷ್ಟಿಯ ನಿರ್ಣಯಿಸುವುದು ದೃಷ್ಟಿಸೃಷ್ಟಿವಾದ. ನಾನು ಹುಟ್ಟಿದವನೇಅಲ್ಲ, ಬ್ರಹ್ಮನೇಎಂಬುದು ಅಜಾತವಾದ ಇವೇ ಆಮೂರು ವಾದಗಳು. ಇದರಲ್ಲಿ ಅಜಾತವಾದವನ್ನು ತಿಳದಮೇಲೆ ಇನ್ನೇನೂ ತಿಳಿಯಬೇಕಾಗಿಲ್ಲ. ಈ ಕಾರಣಗಳಿಂದ ಅದ್ವೈತವೇ ಒಬ್ಬನು ಹೊಂದಬೇಕಾದ ಸರ್ವವೂ ಎಂಬ ವಿಷಯವು ಮೊದಲು ಒಬ್ಬರಿಂದ ಹೇಳಲ್ಪಟ್ಟಿತು. ಇದೇ ಆ ವಿಮರ್ಶೆಗೆ ಬಂದ ವಿಷಯ

ಇದಕ್ಕೆ

ಅದ್ವೈತವೆಂಬುದು ಬರಿಯಜ್ಞಾನಕ್ಕೆ, ತಾನುಬ್ರಹ್ಮವೆಂಬ ಜ್ಞಾನ

ವು ಬಂದರೆ ಅಷ್ಟರಿಂದಲೇವ್ಯವಹಾರಕ್ಕೆ ಅನುಕೂಲವಲ್ಲ. ಈ ಅದ್ವೈತವು ದೇಹಇಂದ್ರಿಯ ಮೊದಲಾದವುಗಳು ಮಿಥ್ಯೆ (ಸುಳ್ಳು), ಎಂದುತಿಳಿವುದರಿಂದ ಅವುಗಳಿಗೆಯಾವ ಸಂಸ್ಕಾರವೂ ಆಗುವುದಿಲ್ಲ. ಜೀವನಿಗೆ ತನ್ನಭಾವನೆಯಲ್ಲಿ ಬ್ರಹ್ಮಎಂಬುದು ಬಂದಮಾತ್ರಕ್ಕೆ ಕೊನೆಯ ಪರಿಣಾಮವು ಆಗುವುದಿಲ್ಲ ಅವನು ಜೀವನ್‌ಮುಕ್ತನಾಗಬಹುದೇ ಹೊರತು ವಿದೇಹಮುಕ್ತನಾಗು ವುದಿಲ್ಲ. ಅಜ್ಞಾತವಾದವಾದರೂನಾನು ಹುಟ್ಟಿದವನಲ್ಲ, ಎಂಬ ತಿಳಿವಳಿಕೆಯು ನಾನು ಬ್ರಹ್ಮ.ಎಂಬ ತಿಳಿವಳಿಕೆಯನ್ನು ದೃಢಪಡಿಸುವುದರಿಂದ ಈ ಬರಿಯ ಜ್ಞಾನವು ಸಾಲದು, ನಾನು ಬ್ರಹ್ಮ ಎಂಬ ಜ್ಞಾನಕ್ಕೆ ತಕ್ಕಂತೆ ದೇಹವಿ ರುವವರೆವಿಗೂ ಬ್ರಹ್ಮವೃತ್ತಿಯನ್ನು ಇಟ್ಟುಕೊಂಡಿರಬೇಕು ಹೀಗೆಜ್ಞಾ ನವನ್ನೂ ವೃತ್ತಿಯನ್ನೂ ಕೂಡಾ ಇಟ್ಟುಕೊಂಡಿರುವುದು ಶಿವಾದ್ವೈತವು. ಆದುದರಿಂದ ಅದ್ವೈತಜ್ಞಾನದ ಮುಂದೆ ಅದನ್ನು ಆಚರಣೆಗೆ ತರುವ ಜ್ಞಾನವನ್ನೂ ಹೊಂದುವುದು ಮತ್ತು ಆಚರಣೆಯನ್ನೂ ಮಾಡುವುದು ಈ ಎರಡೂ ಎಂದರೆ ಜ್ಞಾನ, ಕ್ರಿಯೆ, ಎರಡೂ ಅವಶ್ಯವಾಗಿಬೇಕು ಇ ದು ಲಿಂಗಾಂಗ ಸಾಮರಸ್ಯದಿಂದಲ್ಲದೆ ಸಿದ್ಧವಾಗುವದಿಲ್ಲ ಎಂಬುದಾಗಿ ಪ್ರತ್ಯುತ್ತರವು ಹೇಳಲ್ಪಟ್ಟಿತು.

ಇದಕ್ಕೆ ಪ್ರತಿಯಾಗಿ

ಆ ದಿವಸದ ರಾತ್ರಿಪುರಾಣದಲ್ಲಿ ಅದ್ವೈತಜ್ಞಾನಿಯಾ ದವನಿಗೆ ದೇಹವೇ ಇಲ್ಲ, ಎಂಬುದಕ್ಕೆ ಒಂದು ಕಥೆಯೂ ಅವನು ಯಾ ವಕೆಲಸವನ್ನೂ ಮಾಡಕೂಡದು, ಎಂಬುದಕ್ಕೆ 'ನಿಜವನರಿದ ಯೋಗಿಗೆ ಆವ ಕರ್ಮವುಇಲ್ಲ' ಎಂಬ ನಿಜಗುಣಶಿವಯೋಗಿಗಳ ಕೈವಲ್ಯಪದ್ಧತಿ ಯ ಪದ್ಯವೂ ಹೇಳಲ್ಪಟ್ಟವು.

ಆಗ ಪುನಃ

ಆ ಪದ್ಯದಅರ್ಥವು ಬೇರೆ ವಿಧವಾಗಿ ಇರುವುದೆಂ ದೂ ಆವಕರ್ಮವೂ ಇಲ್ಲ ಎಂಬ ಪಲ್ಲವಿಯೊಡನೆ ಕೂಡಿರುವ ಉಳಿದ ಪದ್ಯಗಳಲ್ಲಿ ಸಂಸಾರ, ಸುಖದುಃಖ, ಈ ಪದಗಳನ್ನು ಉಪಯೋಗಿಸಿ ಇರುವುದರಿಂದ ಲೌಕಿಕರಂತೆಮಾಡುವ ಕರ್ಮವಿಲ್ಲ ಎಂಬುದು ಅದರಲ್ಲಿನ ಅ ಭಿಪ್ರಾಯವೆಂದೂ

ಪರತರ ಶಿವಲಿಂಗವು ಒಲಿದು ನಿನಗಾಗಿ

ಕೆರ ಕಂಜದೊಳು ಕಾಣಿಸಿತು ಯೋಗಿ ಯಜಿಸು

ಎಂಬ ಸದ್ಯದಲ್ಲಿ ಸಿಜಗಣರು ಯೋಗಿಗೆ ಕೆಲಸವನ್ನು ಹೇಳಿದ್ದಾರೆ ಎಂಬೂ ಅದ್ವೈತಜ್ಞಾನಿಯಾದವನಿಗೆ ಯೋಗಿ ಎಂಬ ಪದವು ಇಲ್ಲಿ ಹೇಗೆಹೇಳಲ್ಪಟ್ಟಿದೆಯೋ ಹಾಗೆ ವೀರಶೈವರಾದರೂ ಅದ್ವೈತಜ್ಞಾನವುಳ್ಳವರೇ ಇದಕ್ಕೆ "ಶಿವೋಹಂ ಭಾವನಾಧೀರೋ ವೀರಶೈವ ಉದಾಹೃತಃ"

ಎಂಬ ಪಾರಮೇಶ್ವರಾಗಮದ ವಾಕ್ಯವಿರುತ್ತದೆ ಎಂದೂ ಶಿವಶರಣರು ಅದ್ವೈತಜ್ಞಾನವುಳ್ಳವರಾದರೂ ಶಿವಪೂಜಾದಿ ಕ್ರಿಯೆಗಳಿಂದ ಬ್ರಹ್ಮವೃತ್ತಿಯನ್ನು ಅನುಸರಿಸಿ ನಡೆವವರೆಂದೂ ಅದ್ವೈತಜ್ಞಾನದ ಪ್ರಕಾರ ಮನುಷ್ಯದೇಹವು ಇಲ್ಲವೆಂದು ಭಾವಿಸಲ್ಪಟ್ಟರೂ ನಾನು ಬ್ರಹ್ಮ ಎಂದು ಹೇಳುವುದರಿಂದ ಬ್ರಹ್ಮಕಾಯವು ಅವನಿಗೆ ಪ್ರಾಪ್ತವಾಗುವದರಿಂದ ಆ ಕಾಯದಿಂದ ಕೆಲಸಮಾಡುವ ಬ್ರಹ್ಮ ವೃತ್ತಿಯೊಂದು ಅವಶ್ಯಕವಾಗಿ ಇರಲೇಬೇಕೆಂತಲೂ ಹೇಳಲ್ಪಟ್ಟಿತು

ಆಗ ಕಿತ್ತೂರಿನ ಸಾವುಕಾರ್ರು ಮ. ರಾ. ಧರ್ಮಪ್ಪನವರು ಅದ್ವೈತಜ್ಞಾನದಿಂದ ಬ್ರಹ್ಮನಾದರೂ ತನ್ನನಡತೆ ಇರಬೇಕೆಂಬ ಅಭಿಪ್ರಾಯವು ಸರಿಯಾಗಿದೆ ಎಂದು ಈ ವಿಮರ್ಶೆನಡೆಯುವಾಗ ಆಗಾಗ್ಯೆ ಅನೇಕಸಾರಿ ಮಾತಾಡಿದರು. ರಾತ್ರಿ ಪುರಾಣವೂ ಆ ಪುರಾಣದಲ್ಲಿನಡೆದ ವಿಷಯದ ಪ್ರತ್ಯುತ್ತರವೂ ಆದಮೇಲೂ ಅವರು ಈ ವಿಷಯವಾಗಿ ಬಹಳಹೊತ್ತು ಮಾತಾಡಿ ಕೊನೆಯಲ್ಲಿ ಒಂದು ನಿರ್ಣಯವನ್ನು ಹೇಳಿದರು

ಅದ್ವೈತಿಗೆ ದೇಹವೇ ಇಲ್ಲ ಎಂಬುದನ್ನು ಸಹಜದೃಷ್ಟಾಂತರ, ಮತ್ತು ಧಾರ್ಮಿಕದೃಷ್ಟಿಯಿಂದ ತೋರಿಸಿಕೊಟ್ಟರೆ ಅವರಿಗೆ ಒಂದುನೂರೊಂದು ರೂಪಾಯಿಗಳ ಬಹುಮಾನ ಕೊಡಲ್ಪಡುವುದು ಎಂಬುದೇ ಅವರ ನಿರ್ಣಯ.

ಈ ನಿರ್ಣಯವನ್ನು ಹೇಳಿದ ಮೇಲೆ ಕಿತ್ತೂರಿನ ವೇ. ಮೂ. ರಾಚಯ್ಯನವರು ಹಿರೇಮಠ ಇವರು ಭಾಷಣಮಾಡಿದರು. ವೀರಶೈವರಲ್ಲಿ ಪಂಚಾಚಾರ್ಯರು ಜಂಗಮವರ್ಗದಲ್ಲಿ ಭಕ್ತಿ ಇಡಬೇಕು ಬಸವೇಶ್ವರನನ್ನು ಎಲ್ಲರೂ ಗೌರವಿಸಬೇಕು ಎಂಬುದೇ ಮುಂತಾಗಿ ಆ ಭಾಷಣದ ಮುಖ್ಯಸಾರಾಂಶವಾಗಿ ಇದ್ದಿತು. ನಾಲ್ಕನೆಯದಿನ ಮಧ್ಯಾಹ್ನದವರೆವಿಗೂ ಯಾವ ವಿಷಯವೂ ನಡೆಯಲಿಲ್ಲ.

ಇಷ್ಟೆಲ್ಲವೂ ಕಿತ್ತೂರಿನ ಕಲ್ಮಠದ ಶ್ರೀ ನಿ. ಪ ಗುರುಸಿದ್ಧಸ್ವಾಮಿಗಳವರು

ನಡಸಿದ ಏರ್ಪಾಡಿನಲ್ಲಿ ಯಕ್ಕುಂಡಿಮಠದ ಶ್ರೀ ನಿರಂಜನವರ್ಯ ಮುರಿಗೇಂದ್ರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಮಾಧಾನಕರವಾಗಿ ನಡೆಯಿತು

ಶ್ರೀ|| ಸ್ವಾಮಿಗಳವರು ಶಾಂತಚಿತ್ತದಿಂದ ಆಗಾಗ್ಯೆ ಅಪ್ಪಣೆಕೊಡಿಸುತ್ತಿದ್ದ ವಿಷಯಗಳು ಸಭಿಕರ ಮನಸ್ಸನ್ನು ಒಹಳವಾಗಿ ಆನಂದಗೊಳಿಸುತ್ತಾ ಇದ್ದವು

ಅದ್ವೈತಜ್ಞಾನದ ಮುಂದೆ ಯಾವುದೂ ಇಲ್ಲ ಎಂದು ಪ್ರತಿಪಾದಿಸುತ್ತಾ ಇದ್ದವರು ಮ|ರಾ| ಯಕ್ಕುಂಡಿ ಗುರುಪಾದಪ್ಪನವರು. ಅದ್ವೈತದ ಮುಂದೆ ಶಿವಾದ್ವೈತಜ್ಞಾನವೂ ಅವಶ್ಯಕತೆಯೂ ಇದೆ ಎಂದು ಪ್ರತಿಪಾದಿಸಿದವನು ಸದ್ಧರ್ಮದೀಪಿಕೆಯ ಪ್ರಕಾಶಕನು.

ಸ್ವಾಮಿ ವಿವೇಕಾನಂದರವರೂ ಕೂಡಾ ಜ್ಞಾನಮತ್ತು ಯೋಗ ಎರಡೂ ಮನುಷ್ಯನಿಗೆ ಅವಶ್ಯಕಎಂದು ಪ್ರತಿಪಾದನೆ ಮಾಡಿದ್ದಾರೆ.

ಇವೇ ಜ್ಞಾನ ಮತ್ತು ಕ್ರಿಯೆಗಳು ಶರಣನಿಗೆ ಅವಶ್ಯಕಎಂದು ಸಿದ್ಧಾಂತ ಶಿಖಾಮಣಿಯಲ್ಲಿ ೧೦೧ಸ್ಥಲಗಳಲ್ಲಿ ಅಕಾಯಸ್ಥಳದಲ್ಲಿ ವೀರಶೈವನಿಗೆ ಕಾಯವಿಲ್ಲ ಎಂಬದನ್ನು ಹೇಳಿದಾಗ ಲೌಕಿಕರಂತಹ ಕಾಯವಿಲ್ಲ ಎಂಬುದನ್ನು ಸ್ಪಷ್ಟಪಡಿಸಿ ಆಮೇಲೆ ಪರಕಾಯಸ್ಥಳದಲ್ಲಿ ಅತನಿಗೆ ಪರವಸ್ತುವಿನ ಕಾಯ ಉಂಟೆಂತಲೂ ಲಿಂಗದದೇಹ, ಲಿಂಗದ ಇಂದ್ರಿಯ ಲಿಂಗದಕರಣ ಉಂಟೆಂತಲೂ ಇವುಗಳಿಂದ ಅವನು ಸಾಕಾರಬ್ರಹ್ಮತ್ವವನ್ನು ನೀಗಿ ನಿರಾಕಾರ ಬ್ರಹ್ಮನಾಗುವದಕ್ಕೆ ಶಿವಪೂಜಾದಿಕ್ರಿಯೆಗಳನ್ನು ಮಾಡಬೇಕೆಂತಲೂ ವಿಧಿಸಲ್ಪಟ್ಟು ಇದೆ.

ಓದುಗರು ಈ ವಿಷಯಗಳನ್ನೆಲ್ಲಾ ಗ್ರಹಿಸಿ ಅದ್ವೈತ ಶಿವಾದ್ವೈತಗಳಸ್ಥಿತಿಯನ್ನು ನಿರ್ಣಯಿಸುವವರಾಗಲಿ

ಮ|ರಾ| ಯಕ್ಕುಂಡಿ ಗುರುಪಾದಪ್ಪನವರು ವಿಮರ್ಶೆಗಾಗಿ ಅದ್ವೈತಪಕ್ಷವನ್ನು ಹಿಡಿದಿದ್ದರೆ ಶಿವರಾತ್ರಿಯ ಈ ಕಾರ್ಯವು ವಿನೋದವಾಗಿ ಪರಿಣಮಿಸುತ್ತದೆ. ಹಾಗಿಲ್ಲದಿದ್ದರೆ ಅವರು ಈ ಸಂಬಂಧದಲ್ಲಿ ಲೇಖಗಳನ್ನು ಬರೆದರೆ ಅದನ್ನೂ ಅದರ ವಿಮರ್ಶೆಯನ್ನೂ ಸಹಾ ಸದ್ಧರ್ಮದೀಪಿಕೆಯಲ್ಲಿ ಕೊಡುವುದಕ್ಕೆ ಸಿದ್ಧನಾಗಬೇಕಾಗುತ್ತದೆ. ಆಗ ಇದು ಶಿವರಾತ್ರಿಯ ವಾದವಾಗಿ ಪರಿಣಮಿಸುತ್ತದೆ ಹೇಗಾಗುವದೋ ಆಗಲಿ.

ಪ್ರಕಾಶಕ, ಸದ್ಧರ್ಮ ದೀಪಿಕೆ, ಹಾವೇರಿ

